ಶ್ರೀಪಾದ ರಘುನಾಥ ಭಿಡೆ

# ಮಹಾಭಾರತದ ಶಾಪಗಳು



## ಶ್ರೀಪಾದ ರಘುನಾಥ ಭಿಡೆ
## ಅವರ ಕೃತಿಗಳು

ವಾಲ್ಮೀಕಿ ರಾಮಾಯಣ : ಶಾಪ ಆಣಿ ವರ (ಮರಾಠಿ)
ವಾಲ್ಮೀಕಿ ರಾಮಾಯಣ : ಶಾಪ ಮತ್ತು ವರ (ಕನ್ನಡ)
(ಅನುವಾದ : ಸರಸ್ವತಿ ಗಜಾನನ ರಿಸಬೂಡ
—ಉತ್ತಮ ಅನುವಾದ-ಕೃತಿಗಾಗಿ ಕೇಂದ್ರ ಸಾಹಿತ್ಯ ಅಕಾದೆಮಿ ಪ್ರಶಸ್ತಿ, ೧೯೯೨)
ವಾಲ್ಮೀಕಿ ರಾಮಾಯಣ : ಶಾಪ ಔರ್ ವರದಾನ್ (ಹಿಂದೀ)
ಮಹಾಭಾರತಾಚೇ ಶಾಪವಾಣೀ (ಮರಾಠಿ)
ಮಹಾಭಾರತದ ಶಾಪಗಳು (ಕನ್ನಡ—ಎರಡು ಸಂಪುಟಗಳಲ್ಲಿ)
(ಅನುವಾದ : ವಿರೂಪಾಕ್ಷ ಕುಲಕರ್ಣಿ)
ಮಹಾಭಾರತಾತೀಲ ಕುಮಾರಸಂಭವ (ಮರಾಠಿ)
ಮಹಾಭಾರತಾತೀಲ ಅಲಕ್ಷಿತ ಕಥಾ (ಮರಾಠಿ)
ಮಹಾಭಾರತಾತೀಲ ಕುಮಾರ ಕಥಾ (ಮರಾಠಿ)
ವಾಲ್ಮೀಕಿ ರಾಮಾಯಣ : ಶಾಪಾಲು, ವರಾಲು (ತೆಲುಗು)
ಮಹಾಭಾರತದಲ್ಲಿ ಕುಮಾರಸಂಭವ (ಕನ್ನಡ)
ಮಹಾಭಾರತಾಚೇ ವರದಾನ (ಮರಾಠಿ)
*Kumārasambhava in Mahābhārata* (ಇಂಗ್ಲಿಷ್)

## ಮಹಾಭಾರತದ

# ಶಾಪಗಳು

ಸಂಪುಟ : ಎರಡು

**ಶ್ರೀಪಾದ ರಘುನಾಥ ಭಿಡೆ**

ಅನುವಾದ

**ವಿರೂಪಾಕ್ಷ ಕುಲಕರ್ಣಿ**

ಗೀತಾ ಬುಕ್ ಹೌಸ್ : ಪ್ರಕಾಶಕರು : ಮೈಸೂರು ೫೭೦ ೦೦೧

*MAHĀBHĀRATADA SHĀPAGAḶU: Saṁpuṭa Eraḍu* [*Curses in Mahābhārata : Volume II* ] by SHREEPAD RAGHUNATH BHIDE, M. A., Reader in Marathi (Retd.), Sangana Basaveshwara Arts College, Bijapur (Karnataka)—A/2, 'Shri Laxmi Chhaya', 52, Ideal Colony, Kothrud, Pune 411 029 (Maharashtra). Translated into Kannada from the Author's Marathi Work entitled *Mahābhāratāchī Shāpavāṇī* by VIRUPAX KULKARNI, 1098/11-B, 'Shashi-Prabha', Model Colony, Pune 411 016 (Maharashtra). Published by GEETHA BOOK HOUSE, K. R. Circle, Mysore 570 001. First Published 1996.

ಪ್ರಥಮ ಮುದ್ರಣ : ೧೯೯೬



ಮುಖಚಿತ್ರ : ಚಂದ್ರನಾಥ



This Volume is published with the financial assistance of Tirumala Tirupati Devasthanams, under their Scheme of Aid to Publish Religious Books.

ಮುದ್ರಕರು : ಜಿ. ಎಚ್. ಕೃಷ್ಣಮೂರ್ತಿ, ಮೈಸೂರು ಪ್ರಿಂಟಿಂಗ್ ಪ್ರೆಸ್
೧೨೧೦, ಕಾಂತರಾಜ ಅರಸು ರಸ್ತೆ, ಕೃಷ್ಣಮೂರ್ತಿಪುರಂ, ಮೈಸೂರು ೫೭೦ ೦೦೫

# ಪ್ರಕಾಶಕರ ಬಿನ್ನಹ

ಸಮರ್ಥ ಪ್ರಾಧ್ಯಾಪಕರಾಗಿ, ಮರಾಠಿ ನಾಟಕಕಾರರಾಗಿ, ಸಂಪಾದಕರಾಗಿ ಹಾಗೂ ಸಂಶೋಧಕರಾಗಿ ಖ್ಯಾತಿಗೊಂಡಿರುವ ಶ್ರೀ ಶ್ರೀಪಾದ ರಘುನಾಥ ಭಿಡೆ ಅವರ **ಮಹಾಭಾರತದ ಶಾಪಗಳು** ಕೃತಿಯ ಎರಡನೆಯ ಸಂಪುಟವನ್ನು ಹೆಮ್ಮೆಯಿಂದ ಪ್ರಕಟಿಸುತ್ತಿದ್ದೇವೆ. ಕಳೆದ ವರ್ಷ ನಾವೇ ಪ್ರಕಾಶನ ಮಾಡಿದ ಈ ಕೃತಿಯ ಒಂದನೆಯ ಸಂಪುಟ ಮಹಾಭಾರತ ಕಾವ್ಯದ ಹಿರಿಮೆ, ಯಾತು-ಕ್ರಿಯೆ, ಯಜ್ಞ-ಕರ್ಮ, ದಾನ, ತಪಸ್ಸು, ಶಾಪಗಳು : ಪರಿಕಲ್ಪನೆ ಹಾಗೂ ಸ್ವರೂಪ, ಶಾಪಗಳಿಗೆ ಕಾರಣಗಳು, ಶಾಪಗಳ ಪರಿಣಾಮಗಳು, ಉಃಶಾಪ, ಶರತ್ತಿನ ಶಾಪಗಳು, ಮರುಶಾಪ, ಅನುಚ್ಚಾರಿತ ಶಾಪ, ಸ್ತ್ರೀಯರ ಶಾಪಗಳು, ಹಿಡಿಶಾಪ, ಬಂಧುಬಳಗದವರ ಶಾಪಗಳು, ಆಣೆ, ಪಣ, ಸತ್ಯಕ್ರಿಯೆ, ಶಾಪಗಳು ಹಾಗೂ ಹೆಣ್ಣು-ಗಂಡಿನ ನಂಟುಗಳು ಮತ್ತು ಮಹಾಭಾರತ : ಮಾನವನ ಕಥೆ—ಎಂಬೆಲ್ಲ ವಿಷಯಗಳನ್ನು ಕುರಿತ ಸವಿಸ್ತಾರ ಪ್ರಸ್ತಾವನೆಯುಳ್ಳ 'ಶಾಪಸಂಭ್ರಮ' ಶೀರ್ಷಿಕೆಯ ಬೃಹತ್ಪ್ರಬಂಧವನ್ನೂ, ಮಹಾಭಾರತದಲ್ಲಿ ಬರುವ ೧೪೭ ಶಾಪಗಳ ವಿಶ್ಲೇಷಣೆಯನ್ನೂ ಒಳಗೊಂಡಿದ್ದು, ಈ ಎರಡನೆಯ ಸಂಪುಟದಲ್ಲಿ ಗ್ರಂಥದ ಉಳಿದ ಐದು ಭಾಗಗಳು ಹಾಗೂ ಎಂಟು ಪೂರಕ ಪರಿಶಿಷ್ಟಗಳು ಸೇರಿವೆ.

ಈ ವಿದ್ವತ್ ಕೃತಿಯ ಪ್ರಕಾಶನ ಮಾಡುವ ಸದವಕಾಶವನ್ನು ನಮಗೆ ನೀಡಿದ ಗ್ರಂಥಕರ್ತೃ ಶ್ರೀ ಭಿಡೆ ಅವರಿಗೆ, ಅನುವಾದಕರಾದ ಶ್ರೀ ವಿರೂಪಾಕ್ಷ ಕುಲಕರ್ಣಿಯವರಿಗೆ, ಕರಡಚ್ಚುಗಳನ್ನು ಆಮೂಲಾಗ್ರವಾಗಿ ನೋಡಿಕೊಟ್ಟ ಶ್ರೀ ರಂಗರಾವ್ ರೋಹಿಡೇಕರ್ ಅವರಿಗೆ ಮತ್ತು ಅಚ್ಚುಕಟ್ಟಾಗಿ ಮುದ್ರಣ ಮಾಡಿರುವ ಮೈಸೂರು ಪ್ರಿಂಟಿಂಗ್ ಪ್ರೆಸ್‌ನ ಶ್ರೀ ಜಿ. ಎಚ್. ಕೃಷ್ಣಮೂರ್ತಿ ಮತ್ತು ಅವರ ಸಿಬ್ಬಂದಿವರ್ಗದವರಿಗೆ ನಮ್ಮ ಅನಂತ ಧನ್ಯವಾದಗಳು.

**ಗೀತಾ ಬುಕ್ ಹೌಸ್ : ಪ್ರಕಾಶಕರು**

ಮೈಸೂರು
ಜೂನ್ 4, 1996

# ಪರಿವಿಡಿ

ಕಾಶಿಯ ದೊರೆಯು ತನ್ನ ಹೆಣ್ಣುಮಕ್ಕಳಾದ ಅಂಬೆ, ಅಂಬಿಕೆ ಹಾಗೂ ಅಂಬಾಲಿಕೆಯರಿಗಾಗಿ ಸ್ವಯಂವರವನ್ನು ಹೂಡಿದ್ದನು. ಶಾಲ್ವ ಮೊದಲಾದ ದೊರೆಗಳು ಸ್ವಯಂವರಕ್ಕಾಗಿ ಬಂದಿದ್ದರು. ಭೀಷ್ಮನು ಅವರೆಲ್ಲರ ಕಣ್ಣೆದುರಿನಲ್ಲಿಯೇ ಈ ಮೂವರೂ ಕನ್ಯೆಯರನ್ನು ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಓಡಿಸಿಕೊಂಡು ತಂದನು. ಶಾಲ್ವ ಹಾಗೂ ಇನ್ನು ಕೆಲವರು ಅವನನ್ನೆದುರಿಸಿದರು. ಅವನು ಅವರೆಲ್ಲರನ್ನೂ ಕಾಳಗದಲ್ಲಿ ಸೋಲಿಸಿದನು. ಅವರನ್ನು ವಿಚಿತ್ರವೀರ್ಯನಿಗೆ ಕೊಟ್ಟು ಮದುವೆ ಮಾಡಲು ನಿರ್ಧರಿಸಿದನು, ಸತ್ಯವತಿಯು ತನ್ನ ಒಪ್ಪಿಗೆಯನ್ನಿತ್ತಳು. ಆಗ ಅಂಬೆಯು ತಾನು ಶಾಲ್ವನನ್ನೇ ವರಿಸಿರುವುದಾಗಿ ಹೇಳಿ ತನ್ನನ್ನು ಅವನಲ್ಲಿಗೆ ಹೋಗಲು ಬಿಡಬೇಕೆಂದು ಕೇಳಿಕೊಂಡಳು. ಭೀಷ್ಮ ಒಪ್ಪಿದನು. ಅವಳು ಶಾಲ್ವನಲ್ಲಿಗೆ ಹೋಗಿ ನಡೆದುದನ್ನೆಲ್ಲ ಅವನಿಗೆ ಹೇಳಿ ತನ್ನನ್ನು ಸ್ವೀಕರಿಸೆಂದು ಕೇಳಿದಳು. ಅವನೊಪ್ಪಲಿಲ್ಲ. 'ನಿನ್ನ ಕೈಹಿಡಿದ ಭೀಷ್ಮನನ್ನೇ ನೀನು ಮದುವೆಯಾಗು' ಎಂದನು. ಈವರೆಗೂ ತಾನು ಯಾರಿಗೂ ಮಡದಿಯಾಗಿಲ್ಲವೆಂದೂ, ತಾನು ಪರಿಶುದ್ಧಳಾಗಿಯೇ ಇರುವುದಾಗಿಯೂ ಅವಳು ಪರಿಪರಿಯಿಂದ ಅವನಿಗೆ ಹೇಳಿದಳು. ಶಾಲ್ವನ ಮನ ಕರಗಲಿಲ್ಲ. ಹೀಗಾಗಿ ಅವಳು ತನ್ನ ಏಕನಿಷ್ಠೆಯನ್ನು ಮನಗಾಣಿಸಲೆಂದು ಹೀಗೆಂದಳು—

ಯಥಾ ಶಾಲ್ವಪತೇ ನಾನ್ಯಂ ವರಂ ಧ್ಯಾಮಿ ಕಥಂಚನ ।
ತ್ವಾಮೃತೇ ಪುರುಷವ್ಯಾಘ್ರ ತಥಾ ಮೂರ್ಧಾನಮಾಲಭೇ ॥ ೧೬ ॥

ನ ಚಾನ್ಯಪೂರ್ವಾ ರಾಜೇಂದ್ರ ತ್ವಾಮಹಂ ಸಮುಪಸ್ಥಿತಾ ।
ಸತ್ಯಂ ಬ್ರವೀಮಿ ಶಾಲ್ವೈತತ್ ಸತ್ಯೇನಾತ್ಮಾನಮಾಲಭೇ ॥ ೧೭ ॥

ಭಜಸ್ವ ಮಾಂ ವಿಶಾಲಾಕ್ಷ ಸ್ವಯಂ ಕನ್ಯಾಮುಪಸ್ಥಿತಾಮ್ ।
ಅನನ್ಯಪೂರ್ವಾಂ ರಾಜೇಂದ್ರ ತ್ವತ್ಪ್ರಸಾದಾಭಿಕಾಂಕ್ಷಿಣೀಮ್ ॥ ೧೮ ॥

ಎಲೈ ಪುರುಷವ್ಯಾಘ್ರನಾದ ಶಾಲ್ವಪತಿಯೇ ! ನಿನ್ನನ್ನುಳಿದು ನಾನೆಂದಿಗೂ ಇನ್ನಾರನ್ನೂ ಬಯಸಲೇ ಇಲ್ಲ. ನನ್ನ ತಲೆ ಮುಟ್ಟಿ ಆಣೆ ಮಾಡಿ ಈ ಮಾತನ್ನು ಹೇಳುತ್ತಿದ್ದೇನೆ. ಈ ಮೊದಲು ನಾನು ಯಾವನನ್ನೋ (ಗಂಡನನ್ನಾಗಿ) ಸ್ವೀಕರಿಸಿ ಈಗ ನಿನ್ನೆಡೆಗೆ ಬಂದಿಲ್ಲ ಎನ್ನುವುದನ್ನು ಸತ್ಯವನ್ನು ಸ್ಮರಿಸಿ ನಿಜವಿದ್ದುದನ್ನೇ ಹೇಳುತ್ತಲಿದ್ದೇನೆ. ಎಲೈ ರಾಜೇಂದ್ರನೇ ! ಈ ಮೊದಲು ಯಾರನ್ನೂ ಸ್ವೀಕರಿಸದೆ (ಶುದ್ಧಳಾಗಿರುವ), ತಾನಾಗಿಯೇ ನಿನ್ನೆಡೆಗೆ ಬಂದಿರುವ ಈ ಕುಮಾರಿಯನ್ನು ಸ್ವೀಕರಿಸು.

+ ಆಣೆಯಲ್ಲಿ ಸತ್ಯ ಹಾಗೂ ತಲೆಯ ಸ್ಪರ್ಶದ ಉಲ್ಲೇಖಗಳು ಮುಖ್ಯ.

## ೨. ಅರುಂಧತಿ ಅನುಶಾಸನ/೯೩

ಗ

ಮೊದಲ ಸಂದರ್ಭ : ನೋಡಿ : ಆಣೆ—ಋಷಿಗಳ ಆಣೆಗಳು.

ನಿತ್ಯಂ ಪರಿಭವೇಚ್ಛ್ವಶ್ರೂಂ ಭರ್ತುರ್ಭವತು ದುರ್ಮನಾಃ ।
ಏಕಾ ಸ್ವಾದು ಸಮಾಶ್ನಾತು ಬಿಸಸ್ತೈನ್ಯಂ ಕರೋತಿ ಯಾ ॥ ೧೨೭ ॥

ಜ್ಞಾತೀನಾಂ ಗೃಹಮಧ್ಯಸ್ಥಾ ಸಕ್ತೂನತ್ತು ದಿನಕ್ಷಯೇ ।
ಅಭೋಗ್ಯಾ ವೀರಸೂರಸ್ತು ಬಿಸಸ್ತೈನ್ಯಂ ಕರೋತಿ ಯಾ ॥ ೧೨೮ ॥

ಮೃಣಾಲ ಚಂದ್ರನನ್ನು ಕದ್ದವಳು, ತನ್ನ ಅತ್ತೆಯನ್ನು ತಿರಸ್ಕರಿಸುವವಳು, ಗಂಡನ ಮನವನ್ನು ನೋಯಿಸುವವಳು ಹಾಗೂ ಪಕ್ವಾನ್ನಗಳನ್ನು (ಇನ್ನಾರಿಗೂ ನೀಡದೆ) ತಾನೊಬ್ಬಳೇ ತಿನ್ನುವವಳು. ತನ್ನ ಕುಟುಂಬದವರ ಮರ್ಯಾದೆಯನ್ನು ಕಳೆಯುವವಳು. ಸಂಜೆಗೆ ಒಬ್ಬಳೇ ಜವೆಗೋದಿಯನ್ನು ತಿನ್ನುವಳು. ಅವಳಿಗೆ ಗಂಡನಿಂದ ಸುಖ ದೊರಕ ಲಾರದು. ಅವಳ ಮಕ್ಕಳು ಜಗಳಗಂಟರಾಗುವರು.

ಅನುಶಾಸನ/೯೪

೨

ಮೊದಲ ಸಂದರ್ಭ : ನೋಡಿ : ಆಣೆ—ದೊರೆಗಳ ಆಣೆಗಳು.

ಶ್ವಶ್ರಾಪವಾದಂ ವದತು ಭರ್ತುರ್ಭವತು ದುರ್ಮನಾಃ ।
ಏಕಾ ಸ್ವಾದು ಸಮಶ್ನಾತು ಯಾ ತೇ ಹರತಿ ಪುಷ್ಕರಮ್ ॥ ೩೮ ॥

ಕಮಲವನ್ನು ಕದ್ದವಳು ತನ್ನ ಅತ್ತೆಯನ್ನು ಹೀಯಾಳಿಸುವಳು. ಗಂಡನೊಂದಿಗೆ ಸರಿಯಾಗಿ ಹೊಂದಿಕೊಳ್ಳಳು. ಪಕ್ವಾನ್ನಗಳ ಸವಿಯನ್ನು ತಾನೊಬ್ಬಳೇ ಉಣ್ಣುವಳು.

## ೩. ಅರ್ಜುನ ದ್ರೋಣ/೭೬

೧

ಅರ್ಜುನನು ಇಡಿಯ ಸೇನೆಯೆದುರು ಜಯದ್ರಥನ ವಧೆಗಾಗಿ ಪಣತೊಟ್ಟಿದನ್ನು ಕೇಳಿ ಜಯದ್ರಥ ಹೆದರಿ ಕಂಗಾಲಾದನು. ಅವನು ಅರ್ಜುನನ ಸಾಮರ್ಥ್ಯವನ್ನು ಸರಿಯಾಗಿ ಅರಿತವನು. ಶಿವ-ಅರ್ಜುನರ ಕಾಳಗ ಹಾಗೂ ಹಿರಣ್ಯಪುರದಲ್ಲಿ ಅರ್ಜುನನು ದಾನವರ ಸಂಹಾರವನ್ನು ಕೈಗೊಂಡ ಘಟನೆಗಳು ಅವನ ಕಣ್ಣೆದುರು ಇದ್ದವು. ಕೌರವರು ಅರ್ಜುನ ನನ್ನು ಸೋಲಿಸುವದು ಅಸಾಧ್ಯವೆನ್ನಿಸಿತ್ತು ಎಂಬುದನ್ನು ಅರಿತವನು. ದ್ರೋಣ ಹಾಗೂ ಅಶ್ವತ್ಥಾಮರ ನೆರವಿನಿಂದ ತನ್ನನ್ನು ಕಾಪಾಡಬೇಕೆಂದು ದುರ್ಯೋಧನನಿಗೆ ಗೋಗರೆ ದನು. ಅದು ಆಗದಂತಿದ್ದರೆ ಊರಿಗೆ ಮರಳಲು ಅಪ್ಪಣೆಯನ್ನಾದರೂ ನೀಡೆಂದನು. ದುರ್ಯೋಧನನು ಅವನನ್ನು ಕಾಪಾಡುವುದಾಗಿ ಭರವಸೆಯನ್ನಿತ್ತನು, ಹೊಣೆಯನ್ನು ಹೊತ್ತನು. ದುರ್ಯೋಧನನು ಜಯದ್ರಥನನ್ನು ಕಾಯಲೆಂದು ಕರ್ಣ, ಭೂರಿಶ್ರವಾ,

ಅಶ್ವತ್ಥಾಮ, ವೃಷಸೇನ, ಕೃಪ ಹಾಗೂ ಶಲ್ಯರಂತಹ ಆರು ಜನ ವೀರರನ್ನು ನಿಲ್ಲಿಸಿದನು. ಈ ವಾರ್ತೆ ಗೂಢಚಾರರ ಮೂಲಕ ಶ್ರೀಕೃಷ್ಣನನ್ನು ತಲುಪಿತು. ಅವನು ಅರ್ಜುನನಿಗೆ ಪರಿಸ್ಥಿತಿಯ ಗಾಂಭೀರ್ಯವನ್ನು ತಿಳಿಸಿದನು. ಈ ಆರು ಜನ ಕಡುಗಲಿಗಳನ್ನು ಸೋಲಿಸದೆ ಅವನ ಪಣವನ್ನು ಪೂರ್ತಿಗೊಳಿಸುವುದು ಅದೆಷ್ಟು ಕಷ್ಟದ ಸಂಗತಿ ಎಂಬುದನ್ನು ಹೇಳಿದನು. ತಾನು ತನ್ನಿಂದಾದ ಎಲ್ಲ ಬಗೆಯ ನೆರವನ್ನು ನೀಡುವುದಾಗಿ ಭರವಸೆಯನ್ನಿತ್ತನು. ಶ್ರೀಕೃಷ್ಣನ ಮಾತನ್ನು ಕೇಳಿ ಅರ್ಜುನ, 'ವಸುಗಳು, ರುದ್ರಾದಿ ದೇವತೆಗಳು, ಪೃಥ್ವಿ, ಆಕಾಶ, ಸಾಗರ, ಪರ್ವತ, ಲೋಕಪಾಲರು ಹಾಗೂ ಚರಾಚರ ನಿಸರ್ಗವೇ ಜಯದ್ರಥನ ರಕ್ಷಣೆಗಾಗಿ ಸಜ್ಜಾದರೂ,

> ತಥಾಪಿ ಬಾಣೈರ್ನಿಹತಂ ಶ್ವೋ ದ್ರಷ್ಟಾಸಿ ರಣೇ ಮಯಾ ।
> ಸತ್ಯೇನ ಚ ಶಪೇ ಕೃಷ್ಣ ತಥೈವಾಯುಧಮಾಲಭೇ ॥ ೭ ॥
>
> ಯಸ್ತು ಗೋಪ್ತಾ ಮಹೇಷ್ವಾಸಸ್ತಸ್ಯ ಪಾಪಸ್ಯ ದುರ್ಮತೇಃ ।
> ತಮೇವ ಪ್ರಥಮಂ ದ್ರೋಣಮಭಿಯಾಸ್ಯಾಮಿ ಕೇಶವ ॥ ೮ ॥

ನಾಳೆಯವರೆಗೆಂದರೆ ನಾನು ಅವನನ್ನು ನನ್ನ ಬಾಣಗಳಿಂದ ಕೊಲ್ಲುವುದನ್ನು ಕಾಣುವೆಯಂತೆ! ಎಲೈ ಕೃಷ್ಣ, ನಾನು ನಿನಗೆ ಈ ಮಾತನ್ನು ಸತ್ಯದ ಮೇಲೆ ಆಣೆಯಿಟ್ಟು, ಆಯುಧದ ಮೇಲೆ ಕೈಯಿಟ್ಟು ಹೇಳುತ್ತಲಿದ್ದೇನೆ.'

**ಕರ್ಣ/೭೧**

೨

ಕರ್ಣನು ತನ್ನ ಅತುಲನೀಯವಾದ ಪರಾಕ್ರಮದಿಂದ ಯುಧಿಷ್ಠಿರನ ಸೇನೆಗೆ ದಾರುಣವಾದ ಪರಾಭವವನ್ನು ತಂದುಕೊಟ್ಟನು. ಯುಧಿಷ್ಠಿರನಿಗೆ ಅವಮಾನದ ಮಾತುಗಳನ್ನಾಡಿದನು. ತನಗೆ ಅರ್ಜುನನಂತಹ ಸವ್ಯಸಾಚಿಯಾದ ಎಡಗೈವೀರ ತಮ್ಮನಿರುವಾಗಲೂ ತನ್ನ ಮೇಲೆ ಇಂಥ ಹೊತ್ತು ಬರುವುದು ಅವನಿಗೆ ದುಃಖವನ್ನು ತಂದೊಡ್ಡಿತು. ಅವನು ಅರ್ಜುನ, ಅವನ ಪರಾಕ್ರಮವನ್ನು ಹೀಯಾಳಿಸಿ ಅವನ ಗಾಂಡೀವ ಧನುಷ್ಯವನ್ನೂ ಧಿಕ್ಕರಿಸಿದನು. ಅರ್ಜುನನಿಗೆ ತನ್ನ ಗಾಂಡೀವ ಧನುಷ್ಯದ ಬಗೆಗೆ ಎಲ್ಲಿಲ್ಲದ ಹೆಮ್ಮೆಯಿತ್ತು, ಮಮತೆಯಿತ್ತು. ಅದನ್ನು ಹೀಗಳೆದವರನ್ನು ತಾನು ಕೊಂದುಬಿಡುವುದಾಗಿ ಪಣತೊಟ್ಟಿದ್ದನು. ಯುಧಿಷ್ಠಿರನು ಗಾಂಡೀವದ ಬಗೆಗೆ ಹೀಗಳೆದು ಆಡಿದುದನ್ನು ಕೇಳಿ ಅರ್ಜುನ ರೊಚ್ಚಿಗೆದ್ದು ಅವನನ್ನು ಕೊಲ್ಲಲೆಂದು ಕತ್ತಿಯನ್ನು ಹಿರಿದನು. ಶ್ರೀಕೃಷ್ಣನು ಅರ್ಜುನನನ್ನು ಬಗೆಬಗೆಯಾಗಿ ಉಪದೇಶಿಸಿ ಅವನು ಶಾಂತನಾಗುವಂತೆ ಮಾಡಿದನು. ಶ್ರೀಕೃಷ್ಣನು ಯುಧಿಷ್ಠಿರನ ಕೊಲೆಯಾಗದೆಯೇ ಅರ್ಜುನನ ಪಣ ಪೂರ್ತಿಗೊಳ್ಳುವಂತೆ ಒಂದು ಧರ್ಮಸಮ್ಮತ ಹಂಚಿಕೆಯನ್ನು ಹೇಳಿದನು. 'ಮನಬಂದಂತೆ ನಡೆದುಕೊಳ್ಳುವ ವ್ಯಕ್ತಿಯನ್ನು ಅವಮಾನಗೊಳಿಸುವುದೆಂದರೆ ಅದು ಅವನ ಕೊಲೆಯೇ ಸರಿ' ಎಂದು ನುಡಿದು ಅವನು ಅರ್ಜುನನಿಗೆ ಯುಧಿಷ್ಠಿರನನ್ನು ನಿಂದಿಸಲು ಹೇಳಿದನು. ಅರ್ಜುನ ಹಾಗೆಯೇ ಮಾಡಿದನು. ಆದರೆ ಆಮೇಲೆ ತನ್ನ ನಡತೆಗಾಗಿ ತಾನೇ ನಾಚಿಕೆಪಟ್ಟನು. ತನ್ನ ಹಿರಿಯಣ್ಣ

ನನ್ನು ಮೊರೆಹೊಕ್ಕನು. ಯುಧಿಷ್ಠಿರ ಉದಾರಮನದಿಂದ ಅವನನ್ನು ಕ್ಷಮಿಸಿಬಿಟ್ಟನು.

ಕರ್ಣನಿಂದ ಯುಧಿಷ್ಠಿರನಿಗಾದ ಅವಮಾನವನ್ನು ತೊಡೆದುಹಾಕಲೆಂದು ಅರ್ಜುನ ಹೀಗೆಂದನು—

ಸತ್ಯೇನ ತೇ ಶಪೇ ರಾಜನ್ ಪ್ರಸಾದೇನ ತಥೈವ ಚ ।
ಭೀಮೇನ ಚ ನರಶ್ರೇಷ್ಠ ಯಮಾಭ್ಯಾಂ ಚ ಮಹೀಪತೇ ॥ ೨೧ ॥
ಯಥಾದ್ಯ ಸಮರೇ ಕರ್ಣಂ ಹನಿಷ್ಯಾಮಿ ಹತೋಽಪಿ ವಾ ।
ಮಹೀತಲೇ ಪತಿಷ್ಯಾಮಿ ಸತ್ಯೇನಾಯುಧಮಾಲಭೇ ॥ ೨೨ ॥

ಎಲೈ ರಾಜನೇ ! ಸತ್ಯ, ನಿನ್ನ ಕೃಪಾಪ್ರಸಾದ, ಭೀಮಸೇನ ಹಾಗೂ ಅವಳಿಸೋದರರ ಮೇಲೆ ಆಣೆಯಿಟ್ಟು ನಾನು ಹೇಳುವುದೇನೆಂದರೆ ಒಂದು, ಇಂದೇ ನನ್ನ ಕೈಯಿಂದ ಕರ್ಣನ ವಧೆಯಾಗಲಿದೆ. ಇಲ್ಲ, ರಣರಂಗದಲ್ಲಿ ನನಗೆ ಸೋಲೊದಗಿ ಸಾವು ಬಂದೀತು. ನಾನು ಸತ್ಯವನ್ನು ಸ್ಮರಿಸಿಯೂ, ನನ್ನ ಬಿಲ್ಲಿಗೆ ಕೈಯಿಟ್ಟು ಈ ಮಾತನ್ನು ಹೇಳುತ್ತಲಿದ್ದೇನೆ.

+ ಆಣೆಯಲ್ಲಿಯ ಸತ್ಯ, ಪ್ರೀತಿಯ ಸೋದರರು ಹಾಗೂ ಆಯುಧ ಸ್ಪರ್ಶಗಳ ಉಲ್ಲೇಖವು ಬಲು ಮಹತ್ವದ್ದು.

## ೪. ಅಶ್ವತ್ಥಾಮ ದ್ರೋಣ/೨೦೦

೧

ಧೃಷ್ಟದ್ಯುಮ್ನನು ತನ್ನ ತಂದೆಯನ್ನು ಕೊಲೆಗೈದನೆಂದು ಅಶ್ವತ್ಥಾಮನಿಗೆ ತಿಳಿದುಬರುತ್ತಲೇ ಅವನ ಕೋಪ ಅಂಕೆಮೀರಿತು. ದ್ರೋಣನ ವಧೆಯ ಸೇಡನ್ನು ತೀರಿಸಿಕೊಳ್ಳಲೆಂದು ಅವನು ಪಾರ್ಷತನ ಮೇಲೆ ಬಾಣಗಳನ್ನು ಮಳೆಗರೆದು ಅವನ ರಥ, ಕುದುರೆಗಳು ಹಾಗೂ ಸಾರಥಿಯನ್ನು ನಾಶಪಡಿಸಿಬಿಟ್ಟನು. ಧೃಷ್ಟದ್ಯುಮ್ನನೂ ಅವನಿಗೆ ಸರಿಯಾಗಿ ಮಾರುತ್ತರವನ್ನು ನೀಡಿದನು. ಆದರೆ ಪಾಂಚಾಲನ ಸೇನೆ ಹೆದರಿ ಕಂಗಾಲಾಗಿ ಓಟಕಿತ್ತಿತು. ಆಗ ಸಾತ್ಯಕಿಯು ಅವನ ನೆರವಿಗೆ ಬಂದನು. ಅವನು ಅಶ್ವತ್ಥಾಮನ ರಥವನ್ನು ಹಾಳು ಮಾಡಿದನು. ಅವನ ಬಾಣಗಳಿಂದ ಅಶ್ವತ್ಥಾಮ ತುಂಬ ವ್ಯಥಿತನಾದನು. ಸಾತ್ಯಕಿಯು ಕೃಪ, ಕರ್ಣ, ದುಃಶಾಸನಾದಿಗಳನ್ನು ಅದೆಷ್ಟು ಹಣ್ಣುಮಾಡಿದನೆಂದರೆ ಅವರು ಹಿನ್ನುಗ್ಗಬೇಕಾಯಿತು. ಸಾತ್ಯಕಿಯು ಕೌರವರನ್ನು ದಣಿಸಿ ಕಂಗೆಡಿಸಿದ್ದನ್ನು ಕಂಡು ಅಶ್ವತ್ಥಾಮ ಕಿಡಿಕಿಡಿಯಾಗಿ ಅವನಿಗೆ ಹೀಗೆಂದನು—

ಶಪೇಽತ್ರನಾಹಂ ಶೈನೇಯ ಸತ್ಯೇನ ತಪಸಾ ತಥಾ ।
ಅಹತ್ವಾ ಸರ್ವಪಾಂಚಾಲಾನ್ ಯದಿ ಶಾಂತಿಮಹಂ ಲಭೇ ॥ ೬೪ ॥
ಯದ್ ಬಲಂ ಪಾಂಡವೇಯಾನಾಂ ವೃಷ್ಣೀನಾಮಪಿ ಯದ್ ಬಲಮ್ ।
ಕ್ರಿಯತಾಂ ಸರ್ವಮೇವೇಹ ನಿಹನಿಷ್ಯಾಮಿ ಸೋಮಕಾನ್ ॥ ೬೫ ॥

ಎಲೈ ಶೈನೇಯನೇ ! ಪಾಂಚಾಲರೆಲ್ಲರನ್ನೂ ಯಮಲೋಕಕ್ಕೆ ಕಳಿಸದ ಹೊರತು ನನಗೆ ನೆಮ್ಮದಿಯೆಂಬುದಿಲ್ಲ. ಪಾಂಡವರು ಹಾಗೂ ವೃಷ್ಣಿಗಳ ಸೇನೆಯನ್ನೆಲ್ಲ ಒಟ್ಟುಗೂಡಿಸಿ

ದರೂ ನಾನು ಅವರೊಂದಿಗೆ ಸೋಮಕರನ್ನು ಕೊಲ್ಲುವೆನು. ನಾನಿದನ್ನು ಹೇಳುತ್ತಿರುವುದು ನನ್ನ ಮೇಲೆ, ಸತ್ಯದ ಮೇಲೆ ಹಾಗೂ ತಪಾಚರಣೆಯ ಮೇಲೆ ಆಣೆಯಿಟ್ಟು.

+ ಆಣೆಯಲ್ಲಿ ಬರುವ ಸತ್ಯ ಹಾಗೂ ತಪಸ್ಸಿನ ಉಲ್ಲೇಖಗಳು ಮುಖ್ಯ.

ಶಲ್ಯ/೩೦

೨

ತನ್ನ ಬಂಧುಬಳಗದ ಸಂಹಾರ ಹಾಗೂ ಪಾಂಡವರ ಗೆಲವುಗಳಿಂದ ದುರ್ಯೋಧನನ ಸಾಹಸವೇ ಉಡುಗಿತ್ತು. ಅವನು ತೀರ ವಿಮನಸ್ಕನಾಗಿ, ವಿಷಣ್ಣನಾಗಿ ಒಂದು ಸರೋವರದಲ್ಲಿ ಅಡಗಿ ಕುಳಿತನು. ಅವನನ್ನು ಹುಡುಕುತ್ತ ಹುಡುಕುತ್ತ ಕೃತವರ್ಮ, ಕೃಪಾಚಾರ್ಯ ಹಾಗೂ ಅಶ್ವತ್ಥಾಮರು ಅದೇ ಸರೋವರದ ಬಳಿಗೆ ಬಂದರು. ಅವರು ಅವನನ್ನು ಹುರಿದುಂಬಿಸಲು ಹೆಣಗಿದರು. ಅವನನ್ನು ನೀರಿನಿಂದ ಹೊರಕ್ಕೆ ಎತ್ತಿ ತಂದು ಸಿದ್ಧನಾಗೆಂದು ಹೇಳಿದರು. ಆದರೆ ದುರ್ಯೋಧನ ಅವರ ಯತ್ನಗಳಿಗೆ ಸ್ಪಂದಿಸದಾದನು. ಒಂದು ಇರುಳಿನ ಮಟ್ಟಿಗಾದರೂ ವಿಶ್ರಾಂತಿಯನ್ನು ಹೊಂದಿದ ತರುವಾಯವೇ ಯುದ್ಧದ ಕಣಕ್ಕಿಳಿಯುವುದು ಸರಿಯಾದೀತೆಂದು ಅವನಿಗೆ ಅನ್ನಿಸುತ್ತಿತ್ತು. ಅವನು ಹಾಗೆ ಹೇಳಿದನು. ಆಗ ಅಶ್ವತ್ಥಾಮ ಅವನಿಗೆಂದನು—

ಉತ್ತಿಷ್ಠ ರಾಜನ್ ಭದ್ರಂ ತೇ ವಿಜೇಷ್ಯಾಮೋ ವಯಂ ಪರಾನ್ ॥ ೧೯ ॥

ಇಷ್ಟಾಪೂರ್ತೇನ ದಾನೇನ ಸತ್ಯೇನ ಚ ಜಪೇನ ಚ ।
ಶಪೇ ರಾಜನ್ ಯಥಾ ಹ್ಯದ್ಯ ನಿಹನಿಷ್ಯಾಮಿ ಸೋಮಕಾನ್ ॥ ೨೦ ॥

ಮಾ ಸ್ಮ ಯಜ್ಞಕೃತಾಂ ಪ್ರೀತಿಮಾಪ್ನುಯಾಂ ಸಜ್ಜನೋಚಿತಾಮ್ ।
ಯದೀಮಾಂ ರಜನೀಂ ವ್ಯುಷ್ಟಾಂ ನ ಹಿ ಹನ್ಮಿ ಪರಾನ್ ರಣೇ ॥ ೨೧ ॥

ನಾಹತ್ವಾ ಸರ್ವಪಂಚಾಲಾನ್ ವಿಮೋಕ್ಷ್ಯೇ ಕವಚಂ ವಿಭೋ ।
ಇತಿ ಸತ್ಯಂ ಬ್ರವೀಮ್ಯೇತತ್ತನ್ಮೇ ಶೃಣು ಜನಾಧಿಪ ॥ ೨೨ ॥

ಎಲೈ ರಾಜನೇ ! ಎದ್ದೇಳು. ನಿನಗೆ ಒಳ್ಳೆಯದಾಗಲಿ. ನಾವು ತಪ್ಪದೇ ಹಗೆಗಳನ್ನು ಗೆಲ್ಲುವಾ. ನಾನಿಂದು ಸೋಮಕರನ್ನು ಕೊಂದೇ ತೀರುವೆನೆಂದು ನನ್ನ ಇಷ್ಟಾಪೂರ್ತಿ, ದಾನ, ಸತ್ಯ ಹಾಗೂ ವಿಜಯಗಳ ಮೇಲೆ ಆಣೆಯಿಟ್ಟು ಹೇಳುತ್ತೇನೆ. ಇಂದಿನ ಇರುಳು ಕಳೆದು ಬೆಳಗಾಗುತ್ತಲೇ ನನ್ನ ಕೈಯಿಂದ ಹಗೆಗಳ ಸಂಹಾರ ಆಗದಿದ್ದರೆ ಸಜ್ಜನರಿಗೆ ಸರಿಯಾದ ಹಾಗೂ ಯಜ್ಞಕರ್ತರಿಗೆ ದೊರೆಕಬೇಕಿದ್ದ ಪ್ರಸನ್ನತೆ ನನಗೆ ದೊರೆಕದೇ ಹೋದೀತು. ಪಾಂಚಾಲರೆಲ್ಲರನ್ನೂ ಯಮಸದನಕ್ಕೆ ರವಾನಿಸದ ಹೊರತು ನನ್ನ ಕವಚವು ನನ್ನ ದೇಹದಿಂದ ಬೇರ್ಪಡದು—ಎಂಬ ಮಾತನ್ನು ನಿನಗೆ ಒತ್ತಿಹೇಳುತ್ತೇನೆ.

+ ಆಣೆಯಲ್ಲಿಯ ಇಷ್ಟಾಪೂರ್ತಿ, ದಾನ, ಸತ್ಯ, ವಿಜಯಗಳ ಉಲ್ಲೇಖಗಳು ಮುಖ್ಯವಾದವುಗಳೇ. ಇವಲ್ಲದೆ ಸತ್ಯಕ್ರಿಯೆಯೂ ಇದೆ.

ಶಲ್ಯ/೬೫

೩

ದುರ್ಯೋಧನನು ಸಾವಿನ ಹತ್ತಿರದಲ್ಲಿರುವಾಗ ಅಶ್ವತ್ಥಾಮನು ಬಲು ವ್ಯಾಕುಲನಾದನು. ಅವನ ದುಃಖ ಕಟ್ಟೊಡೆಯಿತು. ಅವನಲ್ಲಿ ಪಾಂಡವವೀರರ ಬಗೆಗೆ ಕೋಪ ಕುದಿದೆದ್ದಿತು. ಅವನು ದುರ್ಯೋಧನನ ಕೈಯನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ಕಣ್ಣೀರು ತುಂಬಿ ಹೀಗೆಂದನು—

ಪಿತಾ ಮೇ ನಿಹತಃ ಕ್ಷುದ್ರೈಃ ಸುನೃಶಂಸೇನ ಕರ್ಮಣಾ ॥ ೩೪ ॥
ನ ತಥಾ ತೇನ ತಪ್ಯಾಮಿ ಯಥಾ ರಾಜಂಸ್ತ್ವಯಾದ್ಯ ವೈ ।
ಶೃಣು ಚೇದಂ ವಚೋ ಮಹ್ಯಂ ಸತ್ಯೇನ ವದತಃ ಪ್ರಭೋ ॥ ೩೫ ॥
ಇಷ್ಟಾಪೂರ್ತೇನ ದಾನೇನ ಧರ್ಮೇಣ ಸುಕೃತೇನ ಚ ।
ಅದ್ಯಾಹಂ ಸರ್ವಪಂಚಾಲಾನ್ ವಾಸುದೇವಸ್ಯ ಪಶ್ಯತಃ ॥ ೩೬ ॥
ಸರ್ವೋಪಾಯೈರ್ಹಿ ನೇಷ್ಯಾಮಿ ಪ್ರೇತರಾಜನಿವೇಶನಮ್ ।
ಅನುಜ್ಞಾಂ ತು ಮಹಾರಾಜ ಭವಾನ್ ಮೇ ದಾತುಮರ್ಹತಿ ॥ ೩೭ ॥

ಕೀಳು (ಮನೋಧರ್ಮದವರಾದ) ಪಾಂಡವರು ಅನ್ಯಶಂಸ ಬಗೆಯಿಂದ ನನ್ನ ತಂದೆಯನ್ನು ಕೊಲೆಗೈದರು (ಎಂಬುದಂತೂ ನಿಜವೇ. ಆದರೂ) ಆ ದಿನ ನಾನು ಕೆರಳಿದ್ದಕ್ಕಿಂತಲೂ ಹೆಚ್ಚು ಇಂದಿನ ನಿನ್ನೀ ಅವಸ್ಥೆಯನ್ನು ಕಂಡು ಕಂಗಾಲಾದೆನು. ಇಂದು ಶ್ರೀಕೃಷ್ಣನ ಕಣ್ಣೆದುರಿನಲ್ಲಿಯೇ ಪಾಂಚಾಲರನ್ನೆಲ್ಲ ಎಲ್ಲ ಬಗೆಯ ಹುಂಚಿಕೆಗಳನ್ನು ಹೂಡಿ ಯಮಸದನಕ್ಕೆ ಅಟ್ಟುವೆನೆಂದು ಸತ್ಯವನ್ನು ಸ್ಮರಿಸಿಯೂ, ನನ್ನ ಸ್ವಂತದ ಇಷ್ಟಾಪೂರ್ತಿ ಕರ್ಮ, ದಾನ, ಧರ್ಮ ಹಾಗೂ ಉಳಿದ ಶುಭಕರ್ಮಗಳ ಮೇಲೆ ಆಣೆಯಿಟ್ಟು ಪ್ರತಿಜ್ಞಾಪೂರ್ವಕವಾಗಿ ಹೇಳುತ್ತೇನೆ. ಅದಕ್ಕಾಗಿ ನೀನು ಒಪ್ಪಿಗೆಯನ್ನಿತ್ತರೆ ಸಾಕು.

+ ಈ ಆಣೆಯಲ್ಲಿ ಸತ್ಯ, ಇಷ್ಟಾಪೂರ್ತಿ, ದಾನ, ಧರ್ಮ, ಶುಭಕರ್ಮ ಮುಂತಾದವುಗಳ ಉಲ್ಲೇಖಗಳಂತೂ ಇದ್ದೇ ಇವೆಯಲ್ಲದೆ ಪ್ರತಿಜ್ಞೆಯೂ ಇದೆ.

## ೫. ಅಷ್ಟಾವಕ್ರ

ಅನುಶಾಸನ/೧೯

ಅಷ್ಟಾವಕ್ರನು ಕಹೋಡ ಹಾಗೂ ಸುಜಾತಾರ ಮಗನು. ವದಾನ್ಯ ಋಷಿಯ ಮಗಳಾದ ಸುಪ್ರಭೆಯು ಅವನ ಕಣ್ಣಿಗೆ ಬೀಳುತ್ತಲೂ ಅವನು ಅವಳ ಅಂದಕ್ಕೆ ಮರುಳಾಗಿ ಮನಸೋತನು. ಅವನು ಅವಳ ತಂದೆಯನ್ನು ಅವಳಿಗಾಗಿ ಕೇಳಿದನು. ಋಷಿಯು ಶರತ್ತಿನೊಂದಿಗೆ ಒಪ್ಪಿಕೊಂಡನು. ಈ ಶರತ್ತಿನಂತೆ ಅಷ್ಟಾವಕ್ರನು ಹಿಮಾಲಯದ ಉತ್ತರದಲ್ಲಿರುವ ಒಬ್ಬಳು ಮುದಿ ತಪಸ್ವಿಯನ್ನು ಭೆಟ್ಟಿಯಾಗುವುದು ಅಗತ್ಯದ್ದಾಗಿತ್ತು. ಅಷ್ಟಾವಕ್ರನು ಅವಳನ್ನು ಕಾಣಲೆಂದು ಹೋದನು. ಆಗ ಆ ಮುದಿಯಳು ಯೌವನೆಯ ರೂಪವನ್ನು ಹೊತ್ತು ಹಲವು ಬಗೆಗಳಿಂದ ಅವನನ್ನು ಮರುಳುಗೊಳಿಸಲು ಯತ್ನಿಸಿದಳು. ಆದರೆ ಅವನು ಅವಳ ಬಲೆಗೆ ಬೀಳಲಿಲ್ಲ. ಬದಲು, ಅವನು ಅವಳಿಗೆ ಹೀಗೆಂದನು—

ಪರದಾರಾನಹಂ ಭದ್ರೇ ನ ಗಚ್ಛೇಯಂ ಕಥಂಚನ ॥ ೮೮ ॥
ದೂಷಿತಂ ಧರ್ಮಶಾಸ್ತ್ರಜ್ಞೈಃ ಪರದಾರಾಭಿಮರ್ಶನಮ್ ।
ಭದ್ರೇ ನಿವೇಷ್ಟುಕಾಮಂ ಮಾಂ ವಿದ್ಧಿ ಸತ್ಯೇನ ವೈ ಶಪೇ ॥ ೮೯ ॥
ವಿಷಯೇಷ್ವನಭಿಜ್ಞೋಽಹಂ ಧರ್ಮಾರ್ಥಂ ಕಿಲ ಸಂತತಿಃ ॥ ೯೦ ॥

ಯಾವುದೇ ಪರಿಸ್ಥಿತಿಯಲ್ಲೂ ನಾನು ಪರಸ್ತ್ರೀಗಮನವನ್ನು ಕೈಕೊಳ್ಳಲಾರೆನು. ಧರ್ಮಶಾಸ್ತ್ರಗಳು ಕೂಡ ಪರಸ್ತ್ರೀಗಮನವನ್ನು ನಿಂದನೀಯವೆಂದೇ ಸಾರಿವೆ. ಎಲೈ ಭದ್ರೇ! ನಾನು ಮದುವೆಗೆ ಆತುರನಾಗಿದ್ದರೂ ವಿಷಯಾಸಕ್ತನಲ್ಲ. ಕೇವಲ ಧರ್ಮಕಾರ್ಯಕ್ಕೆಂದೇ (ಗಂಡುಮಕ್ಕಳನ್ನು ಪಡೆಯುವದರಿಂದ ಅಭೀಷ್ಟಲೋಕಗಳು ಪ್ರಾಪ್ತವಾಗುವವು—ಎಂಬುದರಿಂದಾಗಿ ಮಾತ್ರ) ನಾನು ಸಂತತಿಯನ್ನು ಬಯಸುವುದು.

+ ಈ ಆಣೆಯನ್ನು ಮಾಡಿದುದು ಸತ್ಯವನ್ನು ಸ್ಮರಿಸಿ.

## ೬. ಇಂದ್ರ **ಅನುಶಾಸನ/೯೪**

ಮೊದಲ ಸಂದರ್ಭ : ನೋಡಿ : ಆಣೆ—ಋಷಿಗಳ ಆಣೆಗಳು, ರಾಜರುಗಳ ಆಣೆಗಳು.

ಋಷಿಗಳ ಹಾಗೂ ರಾಜರುಗಳ ಆಣೆಗಳನ್ನು ಕೇಳಿ ಸಂತುಷ್ಟನಾದ ಶುನಃಸಖನು ತನ್ನ ನಿಜವಾದ ಸ್ವರೂಪವನ್ನು ಪ್ರಕಟಪಡಿಸಿದನು. ಅವನೇ ಇಂದ್ರ. ದೇವರ್ಷಿಗಳು ಹಾಗೂ ರಾಜರ್ಷಿಗಳ ನಡುವೆ ಇದ್ದ ಮಹರ್ಷಿ ಅಗಸ್ತ್ಯ ದುಃಖಿತನಾದುದನ್ನು ಕಂಡು ಇಂದ್ರನು ಹೀಗೆಂದನು—ಕಮಲದ ಹೂಗಳನ್ನು ಕದ್ದವನು, ಸಾಮವೇದದ ಅಧ್ಯಯನವನ್ನು ಕೈಕೊಂಡ ಹಾಗೂ ಬ್ರಹ್ಮಚರ್ಯವ್ರತವನ್ನು (ಸರಿಯಾಗಿ) ಪಾಲಿಸಬೇಕೆಂದು ಬಯಸುವ ಅಧ್ವರ್ಯುವಿಗೆ ತನ್ನ ಕನ್ಯೆಯನ್ನು ಕೊಡುವ ಬುದ್ಧಿಯುಂಟಾಗಲಿ. ಅದೇ ರೀತಿಯಾಗಿ ಅವನು ಅಥರ್ವವೇದವನ್ನು ಅಧ್ಯಯನಮಾಡಿ ಸ್ನಾತಕನಾಗುವನು.

ಸರ್ವಾನ್ ವೇದಮಧೀಯೀತ ಪುಣ್ಯಶೀಲೋಽಸ್ತು ಧಾರ್ಮಿಕಃ ।
ಬ್ರಹ್ಮಣಃ ಸದನಂ ಯಾತು ಯಸ್ತೇ ಹರತಿ ಪುಷ್ಕರಮ್ ॥ ೪೫ ॥

ಕಮಲದ ಹೂವನ್ನು ಕದ್ದವನು ಎಲ್ಲ ವೇದಗಳನ್ನೂ ಅಧ್ಯಯನ ಮಾಡಬೇಕು. ಅವನು ಪವಿತ್ರ ಆಚರಣೆಯುಳ್ಳವನೂ, ಧಾರ್ಮಿಕ ಮನೋವೃತ್ತಿಯವನೂ ಆಗತಕ್ಕದ್ದು. ಅವನಿಗೆ ಬ್ರಹ್ಮಲೋಕ ಪ್ರಾಪ್ತವಾಗಲಿ.

ಇಂದ್ರನಿಂದ ವಿವರಣೆಯನ್ನು ಕೇಳಿ ಅಗಸ್ತ್ಯನು ಸಂತುಷ್ಟನಾದನು. ಅವನು ಹೀಗೆಂದನು—

ಆಶೀರ್ವಾದಸ್ತ್ವಯಾ ಪ್ರೋಕ್ತಃ ಶಪಥೋ ಬಲಸೂದನ ॥ ೪೬ ॥

ಎಲೈ ಬಲರಾಮನೇ! ನೀನು ಮಾಡಿದ ಆಣೆಯೆಂದರೆ ಒಂದು ಹರಕೆಯೇ ಆಗಿದೆ.

ಇಂದ್ರನು ತಾನೇ ಕಮಲದ ಹೂವನ್ನು ಕದ್ದಿದ್ದನು. ಆದರೆ ಅವನಿಗೆ ಆದರ ಆಸೆ ಇರಲಿಲ್ಲ. ಋಷಿಗಳನ್ನು ಪರೀಕ್ಷಿಸಲೆಂದು ಅವನು ಕಳವು ಮಾಡಿದ್ದನು. ಅವನು ಅದನ್ನು

ಅಗಸ್ತ್ಯನಿಗೆ ಮರಳಿ ಕೊಟ್ಟನು. ವೃಷದರ್ಭನು ಋಷಿಗಳನ್ನು ಕೊಲ್ಲಲು ಯಾತುಧಾನಿಯ ಮೂಲಕ ಯತ್ನಿಸಿದನು. ಈ ಸಂಗತಿ ಇಂದ್ರನಿಗೆ ತಿಳಿದುಬರುತ್ತಲೇ ಅವನು ಶುನಃಸಖನ ರೂಪದಿಂದ ಋಷಿಗಳಲ್ಲಿಗೆ ಬಂದು ಅವಳನ್ನು ಕೊಂದನು. ಅದರಿಂದಾಗಿ ಋಷಿಗಳು ಬದುಕಿಕೊಂಡರು.

## ೭. ಇಲಿ ಶಾಂತಿ/೧೩೮

ಯುಧಿಷ್ಠಿರ–ಭೀಷ್ಮರ ಮಾತುಕತೆ. ಒಬ್ಬ ರಾಜನನ್ನು ಒಂದೇ ಕಾಲಕ್ಕೆ ಎಲ್ಲೆಡೆಗಳಿಂದ ಹಲವು ಹಗೆಗಳು ಮುತ್ತಿಕೊಂಡು ಮೇಲೇರಿಬಂದರೆ ಅಸಹಾಯನಾದ ಆತ ಏನು ಮಾಡಬೇಕು ?—ಎಂದು ಯುಧಿಷ್ಠಿರ ಕೇಳುತ್ತಾನೆ. ಭೀಷ್ಮನು ಅವನಿಗೆ, 'ಹೊತ್ತು-ಗೊತ್ತು ನೋಡಿ ಒಮ್ಮೊಮ್ಮೆ ನಯವಿನಯದಿಂದಲೂ, ಒಮ್ಮೊಮ್ಮೆ ಯುದ್ಧವನ್ನು ಹೂಡಿಯೂ ಸಂಕಟದಿಂದ ಪಾರಾಗಬೇಕು' ಎಂದು ಹೇಳಿದನು. ತೊಂದರೆಯಲ್ಲಿ ಸಿಕ್ಕಾಗ ಹಲವು ವೇಳೆ ಒಪ್ಪಂದವನ್ನು ಮಾಡಿಕೊಳ್ಳಬೇಕಾಗುತ್ತದೆ. ಒಂದೊಂದು ಸಲವಂತೂ ಗೆಳೆಯರೊಂದಿಗೆಯೂ ಯುದ್ಧಕ್ಕೆ ಸಿದ್ಧರಾಗಬೇಕಾಗುತ್ತದೆ. ತನ್ನ ಈ ಹೇಳಿಕೆಯನ್ನು ಮನಗಾಣಿಸಲೆಂದು ಭೀಷ್ಮರು ಅವನಿಗೆ ಬೆಕ್ಕು-ಇಲಿಗಳ ಕಥೆಯನ್ನು ಹೇಳುತ್ತಾನೆ—

ಒಂದು ಕಾಡಿನಲ್ಲಿ ಒಂದು ಹಿರಿದಾದ ಆಲದ ಮರವಿತ್ತು. ಹಲವಾರು ಹಕ್ಕಿಗಳು ಅದರ ಮೇಲೆ ಮನೆ ಮಾಡಿಕೊಂಡಿದ್ದವು. ಆ ಮರದ ಬೊಡ್ಡೆಯ ಒಂದು ಪೊದರಿನಲ್ಲಿ ಪಲಿತನೆಂಬ ಜ್ಞಾನಸಂಪನ್ನವಾದ ಒಂದು ಇಲಿ ವಾಸವಾಗಿತ್ತು, ಮರದ ಒಂದು ಟೊಂಗೆಯ ಮೇಲೆ ಲೋಮಶನೆಂಬ ಒಂದು ಬೆಕ್ಕು ವಾಸವಾಗಿತ್ತು. ಮರದಿಂದ ತುಸು ಅಂತರದಲ್ಲಿ ಇರುತ್ತಿದ್ದ ಒಬ್ಬ ಬೇಡನು ದಿನಾಲು ರಾತ್ರಿ ಆ ಮರದ ಬಳಿ ಬಲೆಯನ್ನು ಇಡುತ್ತಿದ್ದನು. ಅದಕ್ಕೆ ಸಿಕ್ಕುಬಿದ್ದ ಪ್ರಾಣಿ, ಹಕ್ಕಿಗಳನ್ನು ಬೆಳಗಿನಲ್ಲಿ ಬಂದು ಒಯ್ಯುತ್ತಿದ್ದನು. ಒಂದು ಸಲ ಪಲಿತ ಇಲಿಯು ಬಲೆಯಲ್ಲಿ ಪಶುಪಕ್ಷಿಗಳಿಗೆ ಆಸೆ ತೋರಿಸಲೆಂದು ಇರಿಸಿದ್ದ ಮಾಂಸದ ತುಣುಕನ್ನು ತಿನ್ನಲೆಂದು ಏರಿಹೋಯಿತು. ಅಲ್ಲಿ ಲೋಮಶ ಬೆಕ್ಕು ಬಲೆಗೆ ಸಿಕ್ಕುಬಿದ್ದುದನ್ನು ಕಂಡಿತು. ಬೆಕ್ಕಿನ ದೈನ್ಯವನ್ನು ಕಂಡು ಇಲಿಗೆ ಸಂತೋಷ ವಾಯಿತು. ಆದರೆ ಈ ಸಂತೋಷ ಉಳಿದದ್ದು ಕ್ಷಣ ಮಾತ್ರ. ಅಷ್ಟರಲ್ಲಿಯೇ ಅಲ್ಲಿಗೊಂದು ಮುಂಗುಲಿ ಬಂದಿತು. ಅದನ್ನು ಕಂಡು ಇಲಿ ಹೆದರಿಕೊಂಡಿತು. ತನ್ನ ತಲೆಯೆತ್ತಿ ಮೇಲಕ್ಕೆ ನೋಡುತ್ತಿರಲಾಗಿ ಅಲ್ಲೊಂದು ಟೊಂಗೆಯ ಮೇಲೆ ಒಂದು ಗೂಗೆ ಕುಳಿತಿರು ವುದು ಅದಕ್ಕೆ ಕಂಡಿತು. ಬಲೆಯನ್ನು ಹೊಕ್ಕರೆ ಬೆಕ್ಕು ತನ್ನನ್ನು ತಿನ್ನುವುದು, ಕೆಳಗಿಳಿಯ ಬೇಕೆಂದರೆ ಮುಂಗುಲಿ ತನಗಾಗಿ ಹೊಂಚುಹಾಕಿ ಕುಳಿತಿದೆ, ಮೇಲಕ್ಕೆ ಹೋಗಬೇಕೆಂದರೆ ಗೂಗೆ ತನ್ನ ಮೇಲೆ ಎರಗಲು ಸಿದ್ಧವಾಗಿ ಕುಳಿತಿದೆ. ಹೀಗಾಗಿ ಇವೆಲ್ಲ ಹಗೆಗಳನ್ನು ಒಂದೇ ಕಾಲಕ್ಕೆ ಎದುರಿಸುವುದು ಹೇಗೆಂದು ಅದಕ್ಕೆ ಪೇಚಿಗಿಟ್ಟುಕೊಂಡಿತು. ಆದರೆ ಅದು ಜಾಣ ಇಲಿಯಾದುದರಿಂದ ಯಾವುದಾದರೂ ಹಂಚಿಕೆಯನ್ನು ಹೂಡಿ ಈ ಸಂಕಟವನ್ನು ಎದುರಿಸಲು ಸಾಹಸವನ್ನು ಒಂದುಗೂಡಿಸಿತು. ಹಾಗೆ, ಇಲಿ-ಬೆಕ್ಕುಗಳ ನಡುವೆ ಯಾವಾಗಲೂ ಹಗೆತನ ಇರುವಂಥದೇ. ಬೆಕ್ಕು ಸಂಕಟಕ್ಕೆ ಸಿಲುಕಿದ್ದರಿಂದ ಇಲಿಯು

ಪರಿಸ್ಥಿತಿಯು ಲಾಭವನ್ನೆತ್ತಲು ನಿರ್ಧರಿಸಿತು. ಅದು ಸವಿಯಾದ ಮಾತುಗಳಿಂದ ಬೆಕ್ಕನ್ನು ಒಲಿಸಿಕೊಂಡು ಗೆಳೆತನವನ್ನು ಬೆಳೆಯಿಸಲು ಯತ್ನಿಸಿತು. ಅವೆರಡೂ ತೊಂದರೆಯಲ್ಲಿ ಸಿಕ್ಕಿಕೊಂಡಿದ್ದವು. ಈ ಸಂಕಟದಿಂದ ಹೇಗೆ ಪಾರಾಗಲು ಸಾಧ್ಯ ಎಂಬುದನ್ನು ಇಲಿಯು ತನ್ನ ಚಾತುರ್ಯದಿಂದ ಹೇಳಿತು. ಬೆಕ್ಕು ತನ್ನನ್ನು ಉಳಿಸುವುದಾದರೆ ಅದನ್ನು ತಾನು ಬಲೆಯಿಂದ ಬಿಡಿಸುವುದಾಗಿ ಇಲಿಯು ಹೇಳಿತು. ಲೋಮಶ ಬೆಕ್ಕಿಗೆ ಇಲಿಯ ಮಾತು ಒಪ್ಪಿಗೆಯಾಯಿತು. ಬಿಡುಗಡೆಯ ಆಸೆಯಿಂದ ಗೆಳೆತನಕ್ಕೆ ಸಿದ್ಧವಾಯಿತು. ಇಲಿಯು ಬೆಕ್ಕಿನ ಸ್ನೇಹವನ್ನು ಗಳಿಸಲೆಂದು ಅದಕ್ಕೆ ಹೀಗೆಂದಿತು—

> ಅಹಂ ತ್ವಾನುಪ್ರವೇಕ್ಷ್ಯಾಮಿ ನಕುಲಾನ್ಮೇ ಮಹದ್ ಭಯಮ್ ।
> ತ್ರಾಯಸ್ವ ಭೋ ಮಾ ವಧೀಸ್ತ್ವಂ ಶಕ್ತೋಽಸ್ಮಿ ತವ ರಕ್ಷಣೇ ॥ ೭೪ ॥
> ಉಲೂಕಾಚ್ಚೈವ ಮಾಂ ರಕ್ಷ ಕ್ಷುದ್ರಃ ಪ್ರಾರ್ಥಯತೇ ಹಿ ಮಾಮ್ ।
> ಅಹಂ ಛೇತ್ಸ್ಯಾಮಿ ತೇ ಪಾಶಾನ್ ಸಖೇ ಸತ್ಯೇನ ತೇ ಶಪೇ ॥ ೭೫ ॥

'ನನಗೆ ಮುಂಗುಲಿಯನ್ನು ಕಂಡರೆ ಬಲು ಹೆದರಿಕೆ. ಹೀಗಾಗಿ ನಾನು ಬಲೆಯಲ್ಲಿ ಬರುವೆ. ನೀನು ದಯವಿಟ್ಟು ನನ್ನನ್ನು ಕೊಲ್ಲಬೇಡ. ನಾನು ಬದುಕಿ ಉಳಿದರೆ ಮಾತ್ರ ಬಲೆಯನ್ನು ಕತ್ತರಿಸಬಲ್ಲೆ (ಇಲ್ಲದಿದ್ದರೆ ಬಿಡುಗಡೆಯಿಲ್ಲ). ಅಲ್ಲದೆ ಈ ಗೂಗೆಯೂ ನನ್ನ ಜೀವ ಕಿತ್ತುಕೊಳ್ಳಲು ಹೊಂಚುಹಾಕಿದೆ. ಆದ್ದರಿಂದ ನೀನು (ಗೂಗೆಯಿಂದಲೂ) ನನ್ನನ್ನು ಕಾಪಾಡು. ಎಲೆ ಗೆಳೆಯ ! (ನೀನು ನನ್ನನ್ನು ಉಳಿಸಿದೆಯಾದರೆ ನಾನೂ ಕೂಡ ತಪ್ಪದೆ) ನಿನ್ನನ್ನು ಬಿಡುಗಡೆಗೊಳಿಸುವೆನು.'

+ ಆಣೆಯಲ್ಲಿ ಸತ್ಯವನ್ನು ಉಲ್ಲೇಖಿಸಲಾಗಿದೆ.

## ೮. ಋಷಿಗಳ ಆಣೆಗಳು ಅನುಶಾಸನ/೯೩

ಬ್ರಾಹ್ಮಣರಿಗೆ ಹಲವು ಬಗೆಯ ದಾನಗಳನ್ನು ನೀಡಲಾಗುತ್ತದೆ. ಈ ಕ್ರಿಯೆಯಲ್ಲಿ ನೀಡುವವ ಹಾಗೂ ಪಡೆಯುವವರಿಬ್ಬರಿರುತ್ತಾರೆ. ಇಬ್ಬರ ವೈಶಿಷ್ಟ್ಯಗಳೇನೆಂದು ಯುಧಿಷ್ಠಿರನು ಭೀಷ್ಮನನ್ನು ಕೇಳಿದನು. ಆಗ ಭೀಷ್ಮನು ಶಿಬಿಯ ಮಗ ವೃಷದರ್ಭನ ಕಥೆಯನ್ನು ಅವನಿಗೆ ಹೇಳಿದನು. ಈ ಕಥೆಯಲ್ಲಿ ಹಲವು ಜನ ಋಷಿಗಳು ಇಟ್ಟ ಆಣೆಯ ಬಣ್ಣನೆಗಳಿವೆ.

ವೃಷದರ್ಭನು ಋತ್ವಿಜರಾದ ಋಷಿಗಳಿಗೆ ಯಜ್ಞದ ದಕ್ಷಿಣೆಯೆಂದು ತನ್ನ ಮಗನನ್ನು ದಾನವಾಗಿ ಕೊಟ್ಟನು. ದುರ್ದೈವದಿಂದ ಆ ಮಗ ಬೇಗನೇ ಸತ್ತುಹೋದನು. ಆಗ ಭೂಮಿಯ ಮೇಲೆ ಬರ ಬಿದ್ದಿತ್ತು. ಋಷಿಗಳು ಆಹಾರವಿಲ್ಲದೆ ಹೈರಾಣರಾಗಿದ್ದರು. ಅವರು ತಮ್ಮ ಹೊಟ್ಟೆಯ ಹಸಿವನ್ನು ಹಿಂಗಿಸಲೆಂದು ಹೆಣದ ಮಾಂಸವನ್ನು ಬೇಯಿಸಿದರು. ಈ ನೋಟ ವೃಷದರ್ಭನನ್ನು ತುಂಬ ಕಲಕಿತು. ಋಷಿಗಳು ಹೀಗೆಲ್ಲ ತಪ್ಪುದಾರಿಯನ್ನು ಹಿಡಿಯದಿರಲೆಂದು ಅವನು ಅವರಿಗೆ ಹಲವು ಬಗೆಯ ದಾನ, ಆಹಾರಗಳನ್ನು ಕೊಡಮಾಡಿದನು. ಅವರಂತೂ ಅವುಗಳಿಗ ಕೈ ಹಚ್ಚಲೇಯಿಲ್ಲ. ಬದಲು

ಬೇಯಿಸಿದ ಮಾಂಸವನ್ನೂ ಅಲ್ಲಿಯೇ ಚೆಲ್ಲಿ ಅವರು ಅಲ್ಲಿಂದ ಹೊರಟುಹೋದರು. ತಮ್ಮ ದೊರೆಯ ಅಪ್ಪಣೆಯ ಮೇರೆಗೆ ಅವನ ಸೇವಕರು ಅತ್ತಿಯ ಹಣ್ಣಿನಲ್ಲಿ ಹೊನ್ನನ್ನಿಟ್ಟು ಅವರಿಗೆ ನೀಡಲೆತ್ನಿಸಿದರು. ಅವರು ಅವುಗಳನ್ನೂ ಸ್ವೀಕರಿಸಲಿಲ್ಲ. ಹೀಗಾಗಿ ವೃಷದರ್ಭ ಕೋಪದಿಂದ ಕಿಡಿಕಿಡಿಯಾದನು. ಅವನು ಬಲುಕಠೋರವಾದ ವ್ರತವನ್ನು ಕೈಕೊಂಡನು. ಅಗ್ನಿಗೆ ಹವನವನ್ನು ಮಾಡಿದನು. ಅಗ್ನಿಯಲ್ಲಿ ಆಹುತಿ ಬೀಳುತ್ತಲೇ ಭೀಷಣವಾದ ಕೃತ್ಯಗಳನ್ನೆಸಗುವವಳಾದ ಯಾತುಧಾನಿಯು ಹುಟ್ಟಿಕೊಂಡಳು. ವೃಷದರ್ಭನು ಅವಳಿಗೆ ಋಷಿಗಳನ್ನು ಕೊಲ್ಲುವಂತೆ ಹೇಳಿದನು. ಅವರ ಹೆಸರುಗಳನ್ನು ಹೇಳಿದನು. ಯಾತುಧಾನಿಯು ತನಗೊಪ್ಪಿಸಲಾದ ಈ ಹೊಣೆಯನ್ನು ಹೊತ್ತಳು. ಅವಳು ಹೋಗಿ ಕಾಡಿನಲ್ಲಿಯ ಒಂದು ಕೆರೆಯ ದಂಡೆಯಲ್ಲಿ ಕಾವಲಿಗೆ ಕುಳಿತಳು. ಆಮೇಲೆ ಹಸಿವೆಯಿಂದ ಬಳಲಿ ಕಂಗಾಲಾದ ಋಷಿಗಳು ಕಮಲತಂತುಗಳನ್ನು ಕಲೆಹಾಕಲೆಂದು ಅಲ್ಲಿಗೆ ಬಂದರು. ಯಾತುಧಾನಿಯು ಅವರಿಗೆ ತಮ್ಮ ತಮ್ಮ ಹೆಸರುಗಳನ್ನು ತನಗೆ ಹೇಳಿ, ಬೇಕಿದ್ದಷ್ಟು ಕಮಲತಂತುಗಳನ್ನು ಒಯ್ಯಬಹುದೆಂದಳು. ಈ ರೀತಿಯಾಗಿ ವಸಿಷ್ಠ, ವಿಶ್ವಾಮಿತ್ರ ಮೊದಲಾದ ಹಲವು ಜನ ಋಷಿಗಳು ಕೆರೆಗಿಳಿದು ಕಮಲತಂತುಗಳನ್ನು ತಂದರು. ಶುನಃಸಖ ಋಷಿಯು ಒಂದು ಸಲ ತನ್ನ ಹೆಸರನ್ನು ಯಾತುಧಾನಿಗೆ ಹೇಳಿಯೂ ಇನ್ನೊಂದು ಸಲ ಹೇಳುವಂತೆ ಅವನನ್ನು ಒತ್ತಾಯಿಸಿದಳು. ಅವನು ರೊಚ್ಚಿಗೆದ್ದು ತನ್ನ ಬ್ರಹ್ಮದಂಡದಿಂದ ಹೊಡೆದು ಅವಳನ್ನು ಕೊಂದುಬಿಟ್ಟನು. ಋಷಿಗಳೆಲ್ಲ ತಂದಿರಿಸಿದ ಕಮಲತಂತುಗಳನ್ನು ಯಾರೋ ಕದ್ದರು. ಅವರೆಲ್ಲರೂ ಕೂಡಿ ಕಳ್ಳನನ್ನು ಕಂಡು ಹಿಡಿಯಲೆಂದು ಪ್ರತಿಯೊಬ್ಬನೂ ತಾನು ಕದ್ದಿಲ್ಲವೆಂದು ಆಣೆಯಿಟ್ಟು ಹೇಳಬೇಕೆಂದು ಒಮ್ಮತದಿಂದ ಒಪ್ಪಿಕೊಂಡರು. ಆ ರೀತಿಯಾಗಿ ಋಷಿಗಳೆಲ್ಲ ಮುಂದಿನಂತೆ ಆಣೆಮಾಡಿ ಹೇಳಿದರು—

## ೧. ಅತ್ರಿ

ಸ ಗಾಂ ಸ್ಪೃಶತು ಪಾದೇನ ಸೂರ್ಯಂ ಚ ಪ್ರತಿಮೇಹತು ।
ಅನಧ್ಯಾಯೇಷ್ವಧೀಯೀತ ಬಿಸಸ್ತೈನ್ಯಂ ಕರೋತಿ ಯಃ ॥ ೧೧೩ ॥

ಹಸುವನ್ನು ಒದೆಯುವವನು, ಸೂರ್ಯನತ್ತ ಮೋರೆ ಮಾಡಿ ಮೂತ್ರವಿಸರ್ಜನೆಯನ್ನು ಮಾಡುವವನು, ಅನಧ್ಯಯನದ ಹೊತ್ತಿನಲ್ಲಿ ಅಧ್ಯಯನವನ್ನು ಮಾಡುವವನು ಕಮಲತಂತುಗಳನ್ನು ಕದ್ದಿರಲು ಸಾಕು.

'ನಾನು ಇಂಥದೇನನ್ನೂ ಮಾಡುವವನಲ್ಲ. ಆದ್ದರಿಂದ ನಾನು ಕಳವು ಮಾಡಲಿಲ್ಲ' ಎಂಬುದು ಮೇಲಿನ ಮಾತುಗಳ ಅರ್ಥ.

## ೨. ಗಂಡ

ಅನೃತಂ ಭಾಷತು ಸದಾ ಬಂಧುಭಿಶ್ಚ ವಿರುಧ್ಯತು ।
ದದಾತು ಕನ್ಯಾಂ ಶುಲ್ಕೇನ ಬಿಸಸ್ತೈನ್ಯಂ ಕರೋತಿ ಯಃ ॥ ೧೧೪ ॥

ಸಾಧಯಿತ್ವಾ ಸ್ವಯಂ ಪ್ರಾಶೇದ್ ದಾಸ್ಯೇ ಜೀರ್ಯತಾಂ ಚೈವ ಹ ।
ವಿಕರ್ಮಣಾ ಪ್ರಮೀಯೇತ ಬಿಸಸ್ತೈನ್ಯಂ ಕರೋತಿ ಯಾ ॥ ೧೩೦ ॥

ಕಮಲತಂತುಗಳನ್ನು ಕದ್ದಿರುವವಳು ಯಾವಾಗಲೂ ಸುಳ್ಳಾಡುವವಳಾಗುವಳು. ಬಂಧುಬಳಗದವರೊಂದಿಗೆ ಜಗಳ ಕಾಯುವವಳಾಗುವಳು. ಕನ್ಯಾಶುಲ್ಕವನ್ನು ಪಡೆದು ತನ್ನ ಮಗಳನ್ನು ಮದುವೆ ಮಾಡಿಕೊಡುವವಳಾಗುವಳು. ಬೇಯಿಸಿದ ಅನ್ನಾಹಾರವನ್ನು ತಾನೊಬ್ಬಳೇ (ಕುಳಿತು). ತಿನ್ನುವವಳಾಗುವಳು. ಕೀಳು ಕೆಲಸಗಳಲ್ಲಿ ಮೈಮರೆಯು ವವಳು ಹಾಗೂ ದಾಸಿಯಾಗಿ ಬಾಳನ್ನು ಕಳೆಯುವವಳು.

## ೩. ಪಶುಸಖ

ದಾಸ ಏವ ಪ್ರಜಾಯೇತಾಮಪ್ರಸೂತಿರಕಿಂಚನಃ ।
ದೈವತೇಷ್ವನಮಸ್ಕಾರೋ ಬಿಸಸ್ತೈನ್ಯಂ ಕರೋತಿ ಯಃ ॥ ೧೩೧ ॥

ಕಮಲತಂತುಗಳನ್ನು ಕದ್ದವನು ಮುಂದಿನ ಜನ್ಮದಲ್ಲಿ ದಾಸನಾಗುವನು. ಅವನಿಗೆ ಮಕ್ಕಳಾಗವು. ಅವನು ಹಣವಿಲ್ಲದವನಾಗುವನು. ಅಲ್ಲದೆ ದೇವರನ್ನು ನಮಸ್ಕರಿಸನು.

**ಅನುಶಾಸನ/೯೪**

(೪-೧೪ : ಹಿಂದಿನ ಸಂದರ್ಭ : ನೋಡಿ : ಆಣೆ—ರಾಜರುಗಳ ಆಣೆಗಳು)

## ೪. ಭೃಗು

ಪ್ರತ್ಯಾಕ್ರೋಶೇದಿಹಾಕ್ರುಷ್ಟಸ್ತಾಡಿತಃ ಪ್ರತಿತಾಡಯೇತ್ ।
ಖಾದೇಚ್ಚ ಪೃಷ್ಠಮಾಂಸಾನಿ ಯಸ್ತೇ ಹರತಿ ಪುಷ್ಕರಮ್ ॥ ೧೬ ॥

ನಿನ್ನ ಕಮಲಹೂವನ್ನು ಕದ್ದವನು ತನ್ನ ಬೈದವರನ್ನು ತಾನು ಬೈಯಲು ಹೋಗಿ ಹೊಡೆತಗಳನ್ನು ತಿನ್ನುವನಲ್ಲದೆ ಇನ್ನೊಬ್ಬರ ಬೆನ್ನಿನ ಮಾಂಸವನ್ನು ತಿನ್ನುವನು.

## ೫. ಅಂಗಿರ

ಅಶುಚಿರ್ಬ್ರಹ್ಮಕೂಟೋಽಸ್ತು ಶ್ವಾನಂ ಚ ಪರಿಕರ್ಷತು ।
ಬ್ರಹ್ಮಹಾನಿಕೃತಿಶ್ಚಾಸ್ತು ಯಸ್ತೇ ಹರತಿ ಪುಷ್ಕರಮ್ ॥ ೨೦ ॥

ನಿನ್ನ ಕಮಲವನ್ನು ಕದಿಯುವವನು ಅಪವಿತ್ರನಾದ ಬ್ರಹ್ಮಜ್ಞಾನಿ, ಬ್ರಹ್ಮಹತ್ಯೆ ಯನ್ನು ಮಾಡುವವನು, ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದವನು ಆಗಿರುವ ನಲ್ಲದೆ ಅವನು ತನ್ನ ಜೊತೆಗೆ ನಾಯಿಯನ್ನು ಕರೆದುಕೊಂಡು ಅಲೆದಾಡುವನು.

## ೬. ಶುಕ್ರ

ವೃಥಾಮಾಂಸಂ ಸಮಶ್ನಾತು ದಿವಾ ಗಚ್ಛತು ಮೈಥುನಮ್ ।
ಪ್ರೇಷ್ಯೋ ಭವತು ರಾಜ್ಞಶ್ಚ ಯಸ್ತೇ ಹರತಿ ಪುಷ್ಕರಮ್ ॥ ೨೪ ॥

ನಿನ್ನ ಮೃಣಾಲವನ್ನು ಕಳವು ಮಾಡಿದವನು ಅನವಶ್ಯಕವಾಗಿ ಮಾಂಸವನ್ನು ತಿನ್ನು ವವನು, ಹಗಲುಹೊತ್ತಿನಲ್ಲಿ ಸಂಭೋಗವನ್ನು ಮಾಡುವವನು ಹಾಗೂ ರಾಜನಲ್ಲಿ ಕೆಲಸಕ್ಕೆ ಸೇರಿಕೊಳ್ಳುವವನಾಗುವನು.

**೭. ನಾರದ**

ಗೃಹಜ್ಞಾನೀ ಬಹಿಃಶಾಸ್ತ್ರಂ ಪಠತಾಂ ವಿಸ್ವರಂ ಪದಮ್ ।
ಗರೀಯಸೋಽವಜಾನಾತು ಯಸ್ತೇ ಹರತಿ ಪುಷ್ಕರಮ್ ॥ ೩೦ ॥

ನಿನ್ನ ಮೃಣಾಲವನ್ನು ಕದ್ದಿರುವವನು ಮನೆಯಲ್ಲಿದ್ದೇ ಅಧ್ಯಯನವನ್ನು ಮಾಡು ವನು. ಅವನು ಶಾಸ್ತ್ರವನ್ನು ತೊರೆದು, ಸ್ವರವಿಲ್ಲದೆಯೇ ಪಠಣವನ್ನು ಮಾಡುವನಲ್ಲದೆ ಗುರುಜನರನ್ನು ಅಲಕ್ಷಿಸುವನು.

**೮. ನಾಭಾಗ**

ಅನೃತಂ ಭಾಷತು ಸದಾ ಸದ್ಭಿಶ್ಚೈವ ವಿರುಧ್ಯತು ।
ಶುಲ್ಕೇನ ತು ದದತ್ಕನ್ಯಾಂ ಯಸ್ತೇ ಹರತಿ ಪುಷ್ಕರಮ್ ॥ ೩೧ ॥

ನಿನ್ನ ಕಮಲವನ್ನು ಕದಿಯುವವನು ಯಾವಾಗಲೂ ಸುಳ್ಳು ಮಾತನಾಡುವವನು ಆಗುವನು. ಒಳ್ಳೆಯವರೊಂದಿಗೆ ಜಗಳ ಕಾಯುವನು. ಶುಲ್ಕವನ್ನು ಪಡೆದು ಮಗಳ ಮದುವೆಯನ್ನು ಮಾಡುವನು.

**೯. ಕವಿ**

ಪದ್ಭ್ಯಾಂ ಸ ಗಾಂ ತಾಡಯತು ಸೂರ್ಯಂ ಚ ಪ್ರತಿಮೇಹತು ।
ಶರಣಾಗತಂ ಸಂತ್ಯಜತು ಯಸ್ತೇ ಹರತಿ ಪುಷ್ಕರಮ್ ॥ ೩೨ ॥

ನಿನ್ನ ಕಮಲದ ಹೂಗಳನ್ನು ಕದಿಯುವವನು ಹಸುವನ್ನು ಒದೆಯುವನು, ಸೂರ್ಯ ನತ್ತ ಮೋರೆ ಮಾಡಿ ಮೂತ್ರವಿಸರ್ಜನೆಯನ್ನು ಮಾಡುವನು. ಅಲ್ಲದೆ ಶರಣುಬಂದವ ನನ್ನು ಕೂಡ ಬಿಟ್ಟುಕೊಟ್ಟಾನು.

**೧೦. ಪರ್ವತ**

ಗ್ರಾಮೇ ಚಾಧಿಕೃತಃ ಸೋಽಸ್ತು ಖರಯಾನೇನ ಗಚ್ಛತು ।
ಶುನಃ ಕರ್ಷತು ವೃತ್ತ್ಯರ್ಥೇ ಯಸ್ತೇ ಹರತಿ ಪುಷ್ಕರಮ್ ॥ ೩೪ ॥

ನಿನ್ನ ಕಮಲಗಳನ್ನು ಕದಿಯುವವನು ಗ್ರಾಮಾಧಿಕಾರಿ ಆಗುವನು. ಅವನ ಬಂಡಿಗೆ ಕತ್ತೆಗಳನ್ನು ಹೂಡಲಾಗುವುದು. ಅವನು ಹೊಟ್ಟೆ ಹೊರೆಯಲೆಂದು (ಬೇಟೆಗಾಗಿ) ನಾಯಿಗಳನ್ನು ಸಾಕುವನು.

### ೧೧. ಅಷ್ಟಕ

ಸ ರಾಜಾಸ್ತ್ವಕೃತಪ್ರಜ್ಞಃ ಕಾಮವೃತ್ತಶ್ಚ ಪಾಪಕೃತ್ ।
ಅಧರ್ಮೇಣಾಭಿಶಾಸ್ತೂರ್ವೀಂ ಯಸ್ತೇ ಹರತಿ ಪುಷ್ಕರಮ್ ॥ ೩೬ ॥

ನಿನ್ನ ಕಮಲಹೂಗಳನ್ನು ಕದಿಯುವವನು ಅಕೃತಪ್ರಜ್ಞನು, ಸ್ವೈರಾಚಾರಿ, ಪಾಪಿ ಆಗುವನು. ಅವನು ಅಧರ್ಮದಿಂದ ಪೃಥ್ವಿಯನ್ನು ಆಳುವನು.

### ೧೨. ಗಾಲವ

ಪಾಪಿಷ್ಠೇಭ್ಯೋ ಹ್ಯನರ್ಘಾರ್ಹಃ ಸ ನರೋಽಸ್ತು ಸ್ವಪಾಪಕೃತ ।
ದತ್ವಾ ದಾನಂ ಕೀರ್ತಯತು ಯಸ್ತೇ ಹರತಿ ಪುಷ್ಕರಮ್ ॥ ೩೭ ॥

ನಿನ್ನ ಕಮಲಗಳನ್ನು ಕದಿಯುವವನು ಕಳ್ಳರಲ್ಲಿಯು ಕಳ್ಳನಾಗಿರುವನು. ಅವನು ತನ್ನವರಿಗೂ ಅಹಿತವನ್ನು ಉಂಟುಮಾಡುವನು. ದಾನವನ್ನಿತ್ತು ತನ್ನ ಬಗೆಗೆ ಕೊಚ್ಚಿಕೊಂಡಾನು.

### ೧೩. ವಾಲಖಿಲ್ಯ

ಏಕಪಾದೇನ ವೃತ್ತ್ಯರ್ಥಂ ಗ್ರಾಮದ್ವಾರೇ ಸ ತಿಷ್ಠತು ।
ಧರ್ಮಜ್ಞಸ್ತ್ಯಕ್ತಧರ್ಮಾಸ್ತು ಯಸ್ತೇ ಹರತಿ ಪುಷ್ಕರಮ್ ॥ ೩೯ ॥

ನಿನ್ನ ಕಮಲಗಳನ್ನು ಕದಿಯುವಾತನು ಊರ ಅಗಸೆಯ ಹತ್ತಿರ ತನ್ನ ಹೊಟ್ಟೆಹೊರೆಯಲು ಒಂದು ಕಾಲ ಮೇಲೆ ನಿಂತುಕೊಂಡಾನು. ಅವನಿಗೆ ಧರ್ಮದ ಜ್ಞಾನವಿದ್ದೂ ಅವನು ಅದನ್ನು ಬಿಟ್ಟುಬಿಡುವನು.

### ೧೪. ಸುರಭಿ

ಬಾಲಜೇನ ನಿದಾನೇನ ಕಾಂಸ್ಯಂ ಭವತು ದೋಹನಮ್ ।
ದುಹ್ಯೇತ್ ಪರವತ್ಸೇನ ಯಾ ತೇ ಹರತಿ ಪುಷ್ಕರಮ್ ॥ ೪೧ ॥

ಯಾವಳು ನಿನ್ನ ಕಮಲಗಳನ್ನು ಕದ್ದಿರುವಳೋ ಅವಳು ಕೂದಲುಗಳ ಹಗ್ಗದಿಂದ ಹಸುವಿನ ಕಾಲುಗಳನ್ನು ಕಟ್ಟಿಟ್ಟು ಬೇರೊಂದು ಹಸುವಿನ ಕರುವಿನಿಂದ ಇದರ ಕೆಚ್ಚಲು ಬಿಡುವಂತೆ ಮಾಡಿ ಕಂಚಿನ ಪಾತ್ರೆಯಲ್ಲಿ ಹಾಲು ಕರೆದಾಳು.

## ೬. ಕರ್ಣ **ಕರ್ಣ/೬೪**

ಅಶ್ವತ್ಥಾಮ ಮತ್ತು ಅರ್ಜುನರಲ್ಲಿ ಘನಘೋರವಾದ ಕಾಳಗ ಸಾಗಿತು. ತುಂಬ ಪ್ರಾಣ ಹಾನಿಯಾಯಿತು. ಅಶ್ವತ್ಥಾಮನು ಅರ್ಜುನನ ಅಸ್ತ್ರಗಳನ್ನು ನಾಶಪಡಿಸುತ್ತಿದ್ದನು. ಅರ್ಜುನ ಅಶ್ವತ್ಥಾಮನ ಅಸ್ತ್ರಗಳಿಗೆ ಸರಿಯಾಗಿ ಎದುರುತ್ತರವನ್ನು ನೀಡುತ್ತಿದ್ದನು.

ಅಶ್ವತ್ಥಾಮನು ಅತುಲನೀಯವಾದ ಶೌರ್ಯವನ್ನು ಮೆರೆದು ಕೂಡ ಕೌರವಸೇನೆ ತುಂಬ ಹಾನಿಗೊಳಗಾಯಿತು. ಕೌರವಸೇನೆ ಪಾಂಡವಸೇನೆಯ ಹೊಡೆತವನ್ನು ತಾಳಲಾಗದೆ ಹೆದರಿ ಓಟಕಿತ್ತಿತು. ಆಗ ದುರ್ಯೋಧನನು ಕರ್ಣನಿಗೆ ಈ ನಾಶವನ್ನು ತಡೆಹಿಡಿಯಲು ಅವನಿಂದಾದುದನ್ನು ಮಾಡಲು ಹೇಳಿದನು. ಅದಕ್ಕೆ ಕರ್ಣನು, 'ಇಂದು ನೀನು ನನ್ನ ಅಸ್ತ್ರಬಲ ಹಾಗೂ ತೋಳುಬಲಗಳನ್ನು ರಣಭೂಮಿಯಲ್ಲಿ ಕಾಣುವಿಯಂತೆ. ಪಾಂಡವರೊಂದಿಗೆ ಪಾಂಚಾಲರೆಲ್ಲರನ್ನೂ ನಾನಿಂದು ಯಮಸದನಕ್ಕೆ ಅಟ್ಟಲಿರುವೆ' ಎಂದನು. ಅವನು ತನ್ನ ರಥವನ್ನು ಮುಂದಕ್ಕೆ ಒಯ್ಯಲು ಹೇಳಿ 'ವಿಜಯ' ಧನುಷ್ಯವನ್ನು ಕೈಗೆತ್ತಿಕೊಂಡನು.

> ಸಂನಿವಾರ್ಯ ಚ ಯೋಧಾನ್ ಸ ಸತ್ಯೇನ ಶಪಥೇನ ಚ ।
> ಪ್ರಾಯೋಜಯದಮೇಯಾತ್ಮಾ ಭಾರ್ಗವಾಸ್ತ್ರಂ ಮಹಾಬಲಃ ॥ ೪೭ ॥

ಅವನು (ಬಿಲ್ಲಿನ ಹೆದೆಯೇರಿಸುತ್ತ, ಮತ್ತೆ ಮತ್ತೆ ಅದನ್ನು ಕೈಗೆತ್ತಿಕೊಳ್ಳುತ್ತ) ಸತ್ಯದ ಆಣೆಯನ್ನು (ಹಾಕುತ್ತ) ಸೈನಿಕರೆಲ್ಲರನ್ನು ತಡೆಹಿಡಿದನು. ಆ ಮಹಾನ್ ವೀರನು ತನ್ನ ಆತ್ಮಸಾಮರ್ಥ್ಯದಿಂದ ಭಾರ್ಗವಾಸ್ತ್ರವನ್ನು ಬಳಸಿದನು.

## ೧೦. ಕಶ್ಯಪ

**ಅನುಶಾಸನ/೯೩**

೧

ಮೊದಲ ಸಂದರ್ಭ : ನೋಡಿ : ಆಣೆ—ಋಷಿಗಳ ಆಣೆಗಳು.

> ಸರ್ವತ್ರ ಸರ್ವಂ ಲಪತು ನ್ಯಾಸಲೋಪಂ ಕರೋತು ಚ ।
> ಕೂಟಸಾಕ್ಷಿತ್ವಮಭ್ಯೇತು ಬಿಸಸ್ತೈನ್ಯಂ ಕರೋತಿ ಯಃ ॥ ೧೧೬ ॥

> ವೃಥಾಮಾಂಸಾಶನಶ್ಚಾಸ್ತು ವೃಥಾದಾನಂ ಕರೋತು ಚ ।
> ಯಾತು ಸ್ತ್ರಿಯಂ ದಿವಾ ಚೈವ ಬಿಸಸ್ತೈನ್ಯಂ ಕರೋತಿ ಯಃ ॥ ೧೧೭ ॥

ಬಿಸತಂತುಗಳನ್ನು ಕದ್ದವನು ಮನಬಂದಂತೆ ಮಾತಾಡಿಯಾನು. (ಇನ್ನೊಬ್ಬರು ನಂಬಿಕೆಯಿಂದ ಕಾಯ್ದಿಡಲೆಂದು ಕೊಟ್ಟ) ವಸ್ತುಗಳನ್ನು ನುಂಗಿಹಾಕುವನು. ಸುಮ್ಮನೇ ಮಾಂಸವನ್ನು ತಿನ್ನುವನು. ಕಾರಣವಿಲ್ಲದೆಯೇ ದಾನಮಾಡುವನು. ತುಂಬುಹಗಲಿನಲ್ಲೂ ಸ್ತ್ರೀಗಮನವನ್ನು ಮಾಡುವನು.

**ಅನುಶಾಸನ/೯೪**

೨

ಮೊದಲ ಸಂದರ್ಭ : ನೋಡಿ : ಆಣೆ—ರಾಜರುಗಳ ಆಣೆಗಳು.

---

+ 'ನಾನು ಬಿಸತಂತುಗಳನ್ನು/ಕಮಲಪುಷ್ಪಗಳನ್ನು ಕಳವು ಮಾಡಿದ್ದರೆ'—ಎಂದು ಅಧ್ಯಾಹೃತವಾದ ವಾಕ್ಯವನ್ನು ಒಪ್ಪಿದರೆ ಅನುಶಾಸನ ಪರ್ವದಲ್ಲಿಯ ಅಧ್ಯಾಯ ೯೩ ಹಾಗೂ ೯೪ಗಳಲ್ಲಿರುವ ಋಷಿಗಳ ಮಾತುಗಳಿಗೆ ಆಣೆಗಳ ಪ್ರತಿಷ್ಠೆ ಬಂದೊದಗುತ್ತದೆ.

ಸರ್ವತ್ರ ಸರ್ವಂ ಪಣತಂ ನ್ಯಾಸೇ ಲೋಭಂ ಕರೋತು ಚ ।
ಕೂಟಸಾಕ್ಷಿತ್ವಮಭ್ಯೇತು ಯಸ್ತೇ ಹರತಿ ಪುಷ್ಕರವ್ ॥ ೧೮ ॥

ಕಮಲದ ಹೂಗಳನ್ನು ಕದ್ದವನು ಬೇಕಾದಲ್ಲಿ ಬೇಕಾದ ವಸ್ತುಗಳನ್ನು ಮಾರುವನು. (ಇನ್ನೊಬ್ಬರ) ಇಡುಗಂಟುಗಳ ಮೇಲೆ ಕಣ್ಣಿಡುವನು. ಸುಳ್ಳು ಸಾಕ್ಷಿಗಳನ್ನು ಹೇಳಿಯಾನು.

## ೧೧. ಗೌತಮ ಅನುಶಾಸನ/೯೩

೧

ಮೊದಲ ಸಂದರ್ಭ : ನೋಡಿ : ಆಣೆ—ಋಷಿಗಳ ಆಣೆಗಳು.

ಅಧೀತ್ಯ ವೇದಾಂಸ್ತ್ಯಜತು ತ್ರೀನಗ್ನೀನಪವಿಧ್ಯತು ।
ವಿಕ್ರೀಣಾತು ತಥಾ ಸೋಮಂ ಬಿಸಸ್ತೈನ್ಯಂ ಕರೋತಿ ಯಃ ॥ ೧೨೨ ॥
ಉದಪಾನಪ್ಲವೇ ಗ್ರಾಮೇ ಬ್ರಾಹ್ಮಣೋ ವೃಷಲೀಪತಿಃ ।
ತಸ್ಯ ಸಾಲೋಕ್ಯತಾಂ ಯಾತು ಬಿಸಸ್ತೈನ್ಯಂ ಕರೋತಿ ಯಃ ॥ ೧೨೩ ॥

ಬಿಸತಂತುಗಳನ್ನು ಕದಿಯುವವನು ವೇದಾಧ್ಯಯನವನ್ನು ಮಾಡಿಯೂ ಅದನ್ನು ಕೈಬಿಡುವನು. ಅವನು ಮೂರು ಅಗ್ನಿಗಳನ್ನು ಕಾಯಲಾರ. ಅವನು ಸೋಮರಸವನ್ನು ಮಾರುವನು. ಒಂದು ಬಾವಿ ಇರುವ (ಎಲ್ಲರೂ ಒಂದೆಡೆ ನೀರು ಸೇದುವ) ಊರಲ್ಲಿ ವಾಸವಾಗಿದ್ದು ಕೂಡ ಅಂಥ ಬ್ರಾಹ್ಮಣನು ಶೂದ್ರ ಹೆಣ್ಣಿನೊಂದಿಗೆ ಸಂಬಂಧವನ್ನು ಇಟ್ಟುಕೊಂಡಾನು.

ಅನುಶಾಸನ/೯೪

೨

ಮೊದಲ ಸಂದರ್ಭ : ನೋಡಿ : ಆಣೆ—ರಾಜರುಗಳ ಆಣೆಗಳು.

ಜೀವತ್ವಹಂಕೃತೋ ಬುದ್ಧ್ಯಾ ವಿಷಮೇಣಾಸಮೇನ ಸಃ ।
ಕರ್ಷಕೋ ಮತ್ಸರೀ ಚಾಸ್ತು ಯಸ್ತೇ ಹರತಿ ಪುಷ್ಕರಮ್ ॥ ೧೯ ॥

ನಿನ್ನ ಕಮಲಗಳನ್ನು ಕರಿಯುವವನು ಅಹಂಕಾರದವನು, ನಂಬಿಕೆಗೆ ಅನರ್ಹನು, ಸಮಬಲರೊಂದಿಗೆ ಸಂಗವನ್ನು ಮಾಡದೇ ಇರುವವನು, ಬೇಸಾಯಗಾರನು ಹಾಗೂ ಅಸೂಯೆಯುಳ್ಳವನು ಆಗುವನು.

## ೧೨. ಕಳ್ಳರು ಕರ್ಣ/೬೯

ಯುಧಿಷ್ಠಿರನು ಅರ್ಜುನನಿಗೆ, 'ನಿನ್ನ ಗಾಂಡೀವ ಧನುಸ್ಸನ್ನು ಇನ್ನಾರಿಗಾದರೂ ಕೊಟ್ಟುಬಿಡು' ಎಂದೆನ್ನುತ್ತಲೇ ಅವನು ಸಂತಪ್ತನಾಗಿ ಯುಧಿಷ್ಠಿರನನ್ನು ಕೊಲ್ಲಲೆಂದು ತನ್ನ ಕತ್ತಿಯನ್ನು ಹಿರಿದನು. ಗಾಂಡೀವ ಧನುಷ್ಯ ಎಂದರೆ ಎಲ್ಲಿಲ್ಲದ ಮಮತೆ, ಗೌರವ

ಹಾಗೂ ಅಭಿಮಾನ. ಹೀಗಾಗಿ ಯಾರಿಂದಲೇ ಆಗಲಿ ತಪ್ಪಿಯೂ ಆ ಬಿಲ್ಲಿಗೆ ಅಪಮರ್ಯಾದೆಯನ್ನು ತೋರಲಾದರೆ ಅವನಿಂದ ಸಹಿಸುವುದಾಗುತ್ತಿರಲಿಲ್ಲ. ಹಾಗೆ ಅವಮಾನ ಮಾಡಿದವರನ್ನು ಕೊಂದುಬಿಡುವುದಾಗಿ ಅವನ ಪ್ರತಿಜ್ಞೆಯಿತ್ತು. ಹೀಗಾಗಿ ಈಗ ಶ್ರೀಕೃಷ್ಣನು ಅವನಿಗೆ ಧರ್ಮಾಧರ್ಮಗಳ ಸೂಕ್ಷ್ಮಗಳನ್ನು ಹಾಗೂ ಸತ್ಯಾಸತ್ಯಗಳ ವಿವೇಕಗಳನ್ನು ತಿಳಿಹೇಳಿ, ಕುದಿಯುತ್ತಿದ್ದ ಅವನ ಕೋಪವನ್ನು ಶಾಂತಗೊಳಿಸಲು ಯತ್ನಿಸಿದನು. ತನ್ನ ಹೇಳಿಕೆಯ ಪುಷ್ಟಿಗಾಗಿ ಅವನು ಎರಡು ಉದಾಹರಣೆಗಳನ್ನು ನೀಡಿದನು.

ಕೌಶಿಕನೆಂಬ ಒಬ್ಬ ಬ್ರಾಹ್ಮಣನು ಸತ್ಯಪ್ರತಿಜ್ಞನಾಗಿದ್ದನು. ಅವನು ಎಂದಿಗೂ ಸುಳ್ಳಾಡುತ್ತಿರಲಿಲ್ಲ. ಒಂದು ಸಲ ಕೆಲವು ಜನರು ಕಳ್ಳರಿಂದ ತಮ್ಮನ್ನು ರಕ್ಷಿಸಿಕೊಳ್ಳಲೆಂದು ಒಂದು ಕಾಡಿನಲ್ಲಿ ಅಡಗಿ ಕುಳಿತಿದ್ದರು. ಕೌಶಿಕನು ಅವರು ಹೋಗುತ್ತಿರುವುದನ್ನು ಕಂಡಿದ್ದನು. ತುಸು ಹೊತ್ತಿನ ತರುವಾಯ ಅಲ್ಲಿಗೆ ಕಳ್ಳರು ಬಂದರು. ಅವರು ಕೌಶಿಕನನ್ನು ಕಂಡು ಹೀಗೆಂದರು—

> ಕತಮೇನ ಪಥಾ ಯಾತಾ ಭಗವನ್ ಬಹವೋ ಜನಾಃ ॥ ೪೯ ॥
> ಸತ್ಯೇನ ಪೃಷ್ಟಃ ಪ್ರಬ್ರೂಹಿ ಯದಿ ತಾನ್ ವೇತ್ಥ ಶಂಸ ನಃ ।
> ಸ ಪೃಷ್ಟಃ ಕೌಶಿಕಃ ಸತ್ಯಂ ವಚನಂ ತಾನುವಾಚಹ ॥ ೫೦ ॥

'ಎಲೈ ಭಗವಂತನೇ! ಈ ಕಡೆಯಿಂದ ಕೆಲವು ಜನ ಇದೀಗ ಹೋದರು. ಅವರು ಯಾವ ದಾರಿಯಾಗಿ ಹೋದರು? ನಾವು ನಿಮ್ಮನ್ನು ಕೇಳುತ್ತಿರುವುದು ಸತ್ಯದ ಮೇಲೆ ಆಣೆಯಿಟ್ಟು. ನಿಮಗದು ಗೊತ್ತಿದ್ದರೆ (ದಯವಿಟ್ಟು) ಹೇಳುವಂಥವರಾಗಿ.' ಅವರು ಹೀಗೆ ಕೇಳಲು ಕೌಶಿಕನು ನಿಜವನ್ನೇ ಹೇಳಿಬಿಟ್ಟನು (ಅದರಿಂದಾಗಿ ಆ ಕಳ್ಳರು ಆ ಜನರನ್ನು ಹಿಡಿದು ಕೊಂದುಬಿಟ್ಟರು).

+ ಈ ಆಣೆಯಲ್ಲಿ ಸತ್ಯದ ಉಲ್ಲೇಖವಿದೆ.

## ೧೩. ಜಮದಗ್ನಿ ಅನುಶಾಸನ/೯೩

೧

ಮೊದಲ ಸಂದರ್ಭ : ನೋಡಿ : ಆಣೆ—ಋಷಿಗಳ ಆಣೆಗಳು.

> ಪುರೀಷಮುತ್ಸೃಜತ್ವಪ್ಸು ಹಂತು ಗಾಂ ಚೈವ ದುಹ್ಯತು ।
> ಅನೃತೌ ಮೈಥುನಂ ಯಾತು ಬಿಸಸ್ತೈನ್ಯಂ ಕರೋತಿ ಯಃ ॥ ೧೨೦ ॥
> ದ್ವೇಷ್ಯೋ ಭಾರ್ಯೋಪಜೀವೀ ಸ್ಯಾದ್ ದೂರಬಂಧುಶ್ಚ ವೈರವಾನ್ ।
> ಅನ್ಯೋನ್ಯಸ್ಯಾತಿಥಿಶ್ಚಾಸ್ತು ಬಿಸಸ್ತೈನ್ಯಂ ಕರೋತಿ ಯಃ ॥ ೧೨೧ ॥

ಮೃಣಾಲತಂತುಗಳನ್ನು ಕದ್ದವನು ನೀರಲ್ಲಿ ಮಲ(ಮೂತ್ರ)ಗಳನ್ನು ವಿಸರ್ಜಿಸುವವನು. ಗೋವುಗಳನ್ನು ಕೊಲ್ಲುವವನು ಇಲ್ಲವೆ ಅವುಗಳತ್ತ ಅಲಕ್ಷ್ಯ ತೋರುವವನು. ಋತುಕಾಲ ಇಲ್ಲದಿರುವಾಗಲೂ ಸ್ತ್ರೀಗಮನವನ್ನು ಮಾಡುವವನು. ಎಲ್ಲರ ದ್ವೇಷಕ್ಕೆ ಪಾತ್ರನಾಗುವವನು,

ಮಡದಿಯು ದುಡಿಮೆಯಿಂದ ಹೊಟ್ಟೆಹೊರೆಯುವನು. ಬಂಧುಬಾಂಧವರು ಅವನನ್ನು ತ್ಯಜಿಸುವರು. ಅವನು ಬೇರೆಯವರೊಂದಿಗೆ ಹಗೆತನದಿಂದ ನಡೆದುಕೊಳ್ಳುವನು. ಅವನು ತನ್ನ ಅಥಿಗಳಿಂದಲೇ ಆತಿಥ್ಯವನ್ನು ಪಡೆಯುವನು.

**ಅನುಶಾಸನ/೯೪**

**೨**

ಮೊದಲ ಸಂದರ್ಭ : ನೋಡಿ : ಆಣೆ—ರಾಜರುಗಳ ಆಣೆಗಳು.

ಅನಧ್ಯಾಯೇಷ್ವಧೀಯೀತ ಮಿತ್ರಂ ಶ್ರಾದ್ಧೇ ಚ ಭೋಜಯೇತ್ ।
ಶ್ರಾದ್ಧೇ ಶೂದ್ರಸ್ಯ ಚಾಶ್ನೀಯಾದ್ ಯಸ್ತೇ ಹರತಿ ಪುಷ್ಕರಮ್ ॥ ೨೫ ॥

ಕಮಲದ ಹೂವನ್ನು ಕದ್ದವನು ಹೊತ್ತಿಲ್ಲದ ಹೊತ್ತಿನಲ್ಲಿ ಅಧ್ಯಯನವನ್ನು ಕೈಕೊಳ್ಳುವನು. ಶ್ರಾದ್ಧದ ಹೊತ್ತಿಗೆ ತನ್ನ ಗೆಳೆಯರಿಗೆ ಔತಣದೂಟವನ್ನು ನೀಡುವನು. ಶೂದ್ರರಲ್ಲಿಯ ಶ್ರಾದ್ಧದಲ್ಲೂ ಅನ್ನವನ್ನು ಉಣ್ಣುವನು.

## ೧೪. ದಮಯಂತಿ **ವನ/೭೬**

ಋತುಪರ್ಣ ದೊರೆಯನ್ನು ಅಯೋಧ್ಯೆಯಿಂದ ಕುಂಡಿನಪುರದಷ್ಟು ದೂರದ ಊರಿಗೆ ಅವನ ಸಾರಥಿ ಬಾಹುಕನು ಒಂದೇ ದಿನದಲ್ಲಿ ಕರೆತಂದನು. ಅವನೇ ನಲನಾಗಿರಬಹುದೆಂಬ ಅನ್ನಿಸಿಕೆ ದಮಯಂತಿಯದು. ಅವಳು ನಲನ ಅಶ್ವವಿದ್ಯೆಯಲ್ಲಿಯ ನೈಪುಣ್ಯವನ್ನು ಕೇಳಿ ತಿಳಿದಿದ್ದಳು. ಬಾಹುಕನ ರೂಪು ಮಾತ್ರ ನಲನ ಚೆಲುವಿಗಿಂತ, ಅವನ ನಿಲುವಿಗಿಂತ ಬೇರೆಯದಾಗಿ ಕಂಡರೂ ಅವನೇ ನಲನೆಂದು ಅವಳಿಗನ್ನಿಸಹತ್ತಿತ್ತು. ಹೀಗಾಗಿ ಅವಳು ಅವನನ್ನು ಹಲವು ಬಗೆಯಾಗಿ ಪರೀಕ್ಷಿಸಿದಳು. ಅವಳು ತನ್ನ ತಾಯಿತಂದೆಗಳ ಅಪ್ಪಣೆಯನ್ನು ಪಡೆದು ಅವನನ್ನು ಕಂಡಳು. ಅವಳ ಶಂಕೆ ನಿಜವಾಯಿತು. ನಲ ತನ್ನ ನಿಜವಾದ ಸ್ವರೂಪವನ್ನು ಪ್ರಕಟಗೊಳಿಸಿದನು. ಅವನು ಅವಳನ್ನು ಯಾವ ಪರಿಸ್ಥಿತಿಯಿಂದಾಗಿ ಬಿಟ್ಟು ಹೋಗಬೇಕಾಯಿತೆಂಬುವನ್ನು ಹೇಳಿದನು. ಅದೇ ರೀತಿಯಾಗಿ ದಮಯಂತಿಯೂ ಕೂಡ ನಡೆದುದನ್ನೆಲ್ಲ ಅವನಿಗೆ ಹೇಳಿ ಋತುಪರ್ಣ ರಾಜನಿಗೆ (ಎರಡನೆಯ) ಸ್ವಯಂವರದ ಕರೆಯನ್ನು ಕಳುಹಲು ಕಾರಣ ಏನೆಂಬುದನ್ನು ಅರುಹಿದಳು. ನಲನು ತನ್ನ ಶೀಲವನ್ನು ಶಂಕಿಸದಿರಲೆಂದು ದಮಯಂತಿಯು ಅವನಿಗೆ ಹೀಗೆಂದಳು—

ಸ್ಪೃಶೇಯಂ ತೇನ ಸತ್ಯೇನ ಪಾದಾವೇತೌ ಮಹೀಪತೇ ।
ಯಥಾ ನಾಸತ್ಕೃತಂ ಕಿಂಚಿನ್ಮನಸಾಪಿ ಚರಾಮ್ಯಹಮ್ ॥ ೩೧ ॥

'ನನ್ನಿಂದ ಮನದಲ್ಲೂ ಕೂಡ ಅದಾವುದೇ ಬಗೆಯ ಸುಳ್ಳು ಕೆಲಸ ನಡೆದಿಲ್ಲ—ಎಂಬುದನ್ನು ಸತ್ಯದ ಮೇಲೆ ಆಣೆಯಿಟ್ಟು, ನಿನ್ನ ಪಾದಗಳನ್ನು ಸ್ಪರ್ಶಿಸಿ ಹೇಳುತ್ತೇನೆ.'

+ ಈ ಆಣೆಯಲ್ಲಿ ಸತ್ಯ ಹಾಗೂ ಪಾದಸ್ಪರ್ಶಗಳು ಮುಖ್ಯ.

## ೧೫. ದುರ್ಯೋಧನ ಶಲ್ಯ/೧೮

ಹಿಂದಕ್ಕೆ ದುರ್ಯೋಧನನು ಮಾಡಿದ ಆಣೆಯ ಬಗೆಗೆ ಶಕುನಿಯು ಅವನಿಗೀಗ ನೆನಪು ಮಾಡಿಕೊಡುತ್ತಲಿದ್ದಾನೆ. ಶಲ್ಯನ ಕೊಲೆಯ ಬಳಿಕ ಮದ್ರಸೇನೆ ತುಂಬ ಕೆರಳಿತು. ಪಾಂಡವರು ಅಲ್ಪಾವಧಿಯಲ್ಲಿಯೇ ಆ ಸೇನೆಯನ್ನು ಸದೆಬಡಿದು ಹಲವರನ್ನು ಶಲ್ಯನ ಭೆಟ್ಟಿಗೆಂದು ಪರಲೋಕಕ್ಕೆ ಅಟ್ಟಿದರು. ಈ ಭಯಂಕರವಾದ ಸಂಹಾರವನ್ನು ಕಂಡು ಶಕುನಿಯು ದುರ್ಯೋಧನನಿಗೆ, 'ನೀನಿರುವಾಗಲೇ ಎಲ್ಲರ ಕಣ್ಣೆದುರಿನಲ್ಲಿ ನಡೆದಿರುವ ಮದ್ರಸೇನೆಯ ಈ ಸಂಹಾರ ಒಳ್ಳೆಯದಲ್ಲ' ಎಂದನು.

> ಸಹಿತೈಶ್ಚಾಪಿ ಯೋದ್ಧವ್ಯಮಿತ್ಯೇಷ ಸಮಯಃ ಕೃತಃ ॥ ೨೦ ॥
> ಅಥ ಕಸ್ಮಾತ್ ಪರಾನೇವ ಘ್ನತೋ ಮರ್ಷಯಸೇ ನೃಪ ॥ ೨೧ ॥

ನಾವೆಲ್ಲರೂ ಒಂದಾಗಿ ಹೋರಾಡುವೆವೆಂದು ನೀನು ಆಣೆಮಾಡಿ ಹೇಳಿರುವೆ. (ನೀನೀ ಮಾತನ್ನು ಮರೆತೆಯಾ ?) ಹಗೆಗಳು ನಮ್ಮ ಸೇನೆಯನ್ನು ಹೀಗೆಲ್ಲ ಸದೆಬಡಿಯುತ್ತಿರುವಾಗ ನೀನದನ್ನು ಸಹಿಸುತ್ತ ತೆಪ್ಪಗಿರುವುದೇಕೆ ?

## ೧೬. ದ್ರೋಣ ದ್ರೋಣ/೧೮೫

ಗೆಲವಿನ ಆಸೆ ಕ್ಷೀಣಿಸುತ್ತ ನಡೆದ ಹಾಗೆ ದುರ್ಯೋಧನ ದ್ರೋಣನಿಗೆ ಚುಚ್ಚುಮಾತುಗಳನ್ನಾಡಹತ್ತಿದನು. ಅವುಗಳನ್ನು ಸಹಿಸಲಾಗದೆ ದ್ರೋಣನೂ ಕೆರಳಿದ್ದನು. ಅವನು, 'ನನ್ನ ಇದ್ದಬಿದ್ದ ಸಾಮರ್ಥ್ಯದೊಂದಿಗೆ ನಾನು ಹೋರಾಡುತ್ತಲಿರುವೆ. ಏನಿದ್ದರೂ ಅರ್ಜುನನನ್ನು ಗೆಲ್ಲಲಿಕ್ಕಾಗದು' ಎಂದನು. ದ್ರೋಣ ದುರ್ಯೋಧನನಿಗಾಗಿ ಏನೆಲ್ಲವನ್ನೂ ಮಾಡಲು ಸಿದ್ಧನಿದ್ದನು. ಆದ್ದರಿಂದ ಅವನು ಹೀಗೆಂದನು—

> ನಿಹತ್ಯ ಸರ್ವಪಂಚಾಲಾನ್ ಯುದ್ಧೇ ಕೃತ್ವಾ ಪರಾಕ್ರಮಮ್ ॥ ೧೨ ॥
> ವಿಮೋಕ್ಷ್ಯೇ ಕವಚಂ ರಾಜನ್ ಸತ್ಯೇನಾಯುಧಮಾಲಭೇ ।
> ಮನ್ಯಸೇ ಯಚ್ಚ ಕೌಂತೇಯಮರ್ಜುನಂ ಶ್ರಾಂತಮಾಹವೇ ॥ ೧೩ ॥

'ಪಾಂಚಾಲರನ್ನೆಲ್ಲ ಕೊಂದು ಪರಾಕ್ರಮವನ್ನು ಮೆರೆಯದೆ ನನ್ನ ಕವಚವನ್ನು ದೇಹದಿಂದ ಬೇರ್ಪಡಿಸಲಾರೆನೆಂದು ಈ ಶಸ್ತ್ರವನ್ನು ಸ್ಪರ್ಶಿಸಿ ಆಣೆಮಾಡಿ ಹೇಳುತ್ತೇನೆ. ಅರ್ಜುನ ದಣಿದಿರುವನೆಂದು ನೀನು ಭಾವಿಸಿದುದು ಮಾತ್ರ ತಪ್ಪು.'

+ ಈ ಆಣೆಯಲ್ಲಿ ಸತ್ಯ ಹಾಗೂ ಶಸ್ತ್ರಸ್ಪರ್ಶಗಳ ಉಲ್ಲೇಖ ಮುಖ್ಯ.

## ೧೭. ನಹುಷ ಉದ್ಯೋಗ/೧೫

ನಹುಷನು ಇಂದ್ರಪದವನ್ನು ಪಡೆಯುತ್ತಲೇ ಅವನ ಕಣ್ಣು ಇಂದ್ರಾಣಿ, ಶಚಿಯತ್ತ ಹೋಯಿತು. ಅವಳು ತುಂಬ ಹೆದರಿಕೊಂಡಳು. ಅವಳು ಬೃಹಸ್ಪತಿಯನ್ನು ಮೊರೆ

ಹೊಕ್ಕಳು. ತನ್ನ ಪಾತಿವ್ರತ್ಯದ ಮೇಲೆ ಬಂದೆರಗಿದ ಈ ಸಂಕಟವನ್ನು ನಿವಾರಿಸೆಂದು ಅವನನ್ನು ಕೋರಿದಳು. ಬೃಹಸ್ಪತಿಯು ಅವಳಿಗೆ ಅಭಯವನ್ನಿತ್ತನು. ನಹುಷನಿಂದ ತುಸು ಕಾಲಾವಧಿಯನ್ನು ಪಡೆಯುವಂತೆ ಅವನಿಗೆ ಸಲಹೆಯನ್ನು ನೀಡಿದನು. ಆ ರೀತಿಯಾಗಿ ಅವಳು ನಹುಷನನ್ನು ಬೇಡಿಕೊಳ್ಳುತ್ತಲೇ ಅವನು ಸಮ್ಮತಿಸಿದನು. ಅವಳು ಆಮೇಲೆ ಬೃಹಸ್ಪತಿಯ ನೆರವಿನಿಂದ ಇಂದ್ರನನ್ನು ಕಂಡಳು. ಅವನು ಸೂಚಿಸಿದ ಹಂಚಿಕೆಯ ಮೇರೆಗೆ ಅವಳು ಹೋಗಿ ನಹುಷನನ್ನು ಕಂಡಳು. ಅವಳು ಬಂದುದರಿಂದ ನಹುಷ ಸಂತೋಷಪಟ್ಟನು. ಅವಳ ಬಯಕೆಯನ್ನು ಈಡೇರಿಸಲು ಒಪ್ಪಿಕೊಂಡನು. ಅವಳಲ್ಲಿ ನಂಬಿಕೆಯನ್ನು ಹುಟ್ಟಿಸಲೆಂದು ಅವನೆಂದನು—

ನ ಚ ವ್ರೀಡಾ ತ್ವಯಾ ಕಾರ್ಯಾ ಸುಶ್ರೋಣಿ ಮಯಿ ವಿಶ್ವಸೇಃ ।
ಸತ್ಯೇನ ವೈ ಶಪೇ ದೇವಿ ಕರಿಷ್ಯೇ ವಚನಂ ತವ ॥ ೮ ॥

'ಎಲೆ ಸುಶ್ರೋಣಿಯೇ ! ನೀನು ನಾಚಿಕೊಳ್ಳದಿರು. ನನ್ನನ್ನು ನಂಬು. ನಾನು ನಿನ್ನ ಮಾತನ್ನು ಮೀರಲಾರೆನೆಂದು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ.'

## ೧೮. ಪುರೋಹಿತ **ಅನುಶಾಸನ/೧೦**

ರಾಜನು ಮೂರು ವೇದಗಳು, ಸಾಂಖ್ಯತತ್ತ್ವಶಾಸ್ತ್ರ, ಜ್ಯೋತಿಷ, ಯಜ್ಞವಿಧಿಗಳಲ್ಲೆಲ್ಲ ಪಾರಂಗತನಾದ ಒಬ್ಬ ಬ್ರಾಹ್ಮನನ್ನು ಪುರೋಹಿತನನ್ನಾಗಿ ನೇಮಿಸಿದನು. ಧಾರ್ಮಿಕ ವಿಧಿಗಳ ಹೊತ್ತಿಗೆ ಪುಣ್ಯಾಹವಾಚನ ಮೊದಲಾದ ಪೌರೋಹಿತ್ಯವನ್ನು ಕೈಕೊಳ್ಳುವಾಗ ದೊರೆಯು ಯಾವಾಗಲೂ ನಗುತ್ತಿದ್ದನು. ಪುರೋಹಿತನು ಈ ಸಂಗತಿಯನ್ನು ಗಮನಿಸಿದ್ದನು. ಅದೆಷ್ಟೋ ಸಲ ರಾಜ ಪುರೋಹಿತನನ್ನು ಕೀಟಲೆ ಮಾಡುತ್ತಿದ್ದನು. ಹೀಗಾಗಿ ಪುರೋಹಿತನಿಗೆ ಬಲು ಕೋಪ ಬರುತ್ತಿತ್ತು. ಒಂದು ಸಲ ಆ ಪುರೋಹಿತನು ರಾಜನಿಗೆ ಹಿಡಿಸುವಂತಹ ಕಥೆಗಳನ್ನು ಹೇಳಿ ಅವನನ್ನು ಪ್ರಸನ್ನಗೊಳಿಸಿದನು. ಅವನು ಖುಶಿಯಲ್ಲಿರುವುದನ್ನು ಕಂಡು ಒಂದು ವರವನ್ನೂ ಕೇಳಿಕೊಂಡನು. ದೊರೆಯು ಒಂದೇಕೆ, ಬೇಕಿದ್ದರೆ ನೂರು ವರಗಳನ್ನು ಕೊಡುವೆನೆಂದನು. ಪುರೋಹಿತನು ರಾಜನಿಂದ ವರವನ್ನು ಪಡೆವ ಮೊದಲು ಅವನಿಂದ ನಿಜವನ್ನಷ್ಟೇ ಮಾತನಾಡುವೆನೆಂದು ಮಾತು ಪಡೆದನು. ಆಮೇಲೆ ರಾಜನಿಗೆ, 'ಎಲೈ ರಾಜೇಂದ್ರನೇ ! ನಾನು ಧರ್ಮವಿಧಿಗಳನ್ನು ಮಾಡುವಾಗ ನೀನು ಯಾವಾಗಲೂ ನನ್ನತ್ತ ನೋಡಿ ನಗುವುದೇಕೆ ?' ಎಂದನು.

ಸವ್ರೀಡಂ ವೈ ಭವತಿ ಹಿ ಮನೋ ಮೇ ಹಸತಾ ತ್ವಯಾ ।
ಕಾಮಯಾ ಶಾಪಿತೋ ರಾಜನ್ ನಾನ್ಯಥಾ ವಕ್ತುಮರ್ಹಸಿ ॥ ೫೧ ॥

ನಿನ್ನ ನಗುವಿನಿಂದಾಗಿ ನನಗೆ ನಾಚಿಕೆಯಾಗುತ್ತದೆ. ಎಲೈ ರಾಜನೇ ! ನಿನಗೆ ನನ್ನ ಬಯಕೆಯ ಆಣೆಯಿದೆ. ನಿಜವಿದ್ದುದನ್ನೇ ಹೇಳು (ಸುಳ್ಳಾಡಬೇಡ).

ನಿನ್ನ ನಗು ಅಕಾರಣವಾದುದಲ್ಲ. ಆದ್ದರಿಂದ ನಾನು ಕಾರಣವನ್ನು ತಿಳಿದುಕೊಳ್ಳ

ಬಯಸುತ್ತೇನೆ. ನಿಜವಿದ್ದುದನ್ನೇ ಹೇಳೆಂದು ಅವನು ಬೇಡಿಕೊಂಡನು.

+ ತಾನು ಆಣೆ ಮಾಡದೆ ಇನ್ನೊಬ್ಬರಿಂದ ಮಾಡಿಸಲಾಗಿದೆ.

## ೧೯. ಬಭ್ರುವಾಹನ ಅಶ್ವಮೇಧ/೮೦

ಮಣಿಪುರದ ದೊರೆ ಬಭ್ರುವಾಹನನು ಅಶ್ವಮೇಧದ ಕುದುರೆಯ ಜೊತೆಗೆ ಬಂದ ಅರ್ಜುನನನ್ನು ಎದುರುಗೊಂಡನು. ಅವನು ಶಾಂತಿಯಿಂದ ಅರ್ಜುನನೊಂದಿಗೆ ಸಹಕರಿಸಲು ಸಿದ್ಧನಿದ್ದನು. ಆದರೆ ಉಲೂಪಿಯು ಅವನನ್ನು ಯುದ್ಧಕ್ಕೆ ಹುರಿದುಂಬಿಸಿದಳು. ಬಭ್ರುವಾಹನ ಯುದ್ಧಕ್ಕೆ ಸಿದ್ಧನಾದನು. ಅರ್ಜುನ ತನ್ನ ತಂದೆಯೆಂಬುದು ಅವನಿಗೆ ಗೊತ್ತಿತ್ತು. ಆದರೆ ತನ್ನ ಶೌರ್ಯದ ಬಗೆಗೂ ಅವನಲ್ಲಿ ಹೆಮ್ಮೆಯಿತ್ತು. ಬಭ್ರುವಾಹನನ ಒಂದು ಬಲುತೀಕ್ಷ್ಣವಾದ ಬಾಣ ತಗಲಿ ಅರ್ಜುನ ಎಚ್ಚರದಪ್ಪಿದನು. ಬಭ್ರುವಾಹನನೂ ಎಚ್ಚರದಪ್ಪಿದನು. ಈ ವಾರ್ತೆಯನ್ನು ಕೇಳಿ ಚಿತ್ರಾಂಗದೆ ಬಲು ಶೋಕಾಕುಲಳಾದಳು. ಗಂಡನ ಸಾವಿನ ಊಹೆಯಿಂದ ಅವಳೂ ಎಚ್ಚರದಪ್ಪಿ ನೆಲಕ್ಕುರುಳಿದಳು. ಉಲೂಪಿ ಅಲ್ಲಿಗೆ ಬಂದಳು. ಅವಳೇ ಬಭ್ರುವಾಹನನನ್ನು ಅರ್ಜುನನೊಡನೆ ಕಾದಾಡಲು ಹಚ್ಚಿದವಳೆಂಬುದು ಚಿತ್ರಾಂಗದೆಗೆ ಗೊತ್ತಿತ್ತು. ಅವಳು ಉಲೂಪಿಗೆ, 'ನೀನು ಮಗನ ಕೈಯಿಂದ ನಮ್ಮಿಬ್ಬರ ಗಂಡಂದಿರನ್ನೂ ಕೊಲ್ಲಹಚ್ಚಿ ಸಾಧಿಸಿದ್ದೇನು ?' ಎಂದು ಕೇಳಿದಳು. ಬಭ್ರುವಾಹನ ಎಚ್ಚೆತ್ತ ಕೂಡಲೇ ತನ್ನ ತಂದೆ ಸಾವನ್ನಪ್ಪಿದುದನ್ನು ಕಂಡು ಬಲುಖಿನ್ನನಾದನು. ಅವನು ಉಲೂಪಿಗೆ, 'ನಾನು ನಿನ್ನ ಮಾತು ಕೇಳಿ ಕಾಳಗಕ್ಕಿಳಿದೆ. ತಂದೆಯನ್ನು ಕೊಂದುಬಿಟ್ಟೆ. ಇನ್ನು ಅವನಿಲ್ಲದೆ ನಾನು ಬದುಕಲಾರೆ' ಎಂದನು.

ಸೋಽಹಮದ್ಯ ಗಮಿಷ್ಯಾಮಿ ಗತಿಂ ಪಿತೃನಿಷೇವಿತಾಮ್ ।
ನ ಶಕ್ನೋಮ್ಯಾತ್ಮನಾಽಽತ್ಮಾನಮಹಂ ಧಾರಯಿತುಂ ಶುಭೇ ॥ ೩೨ ॥

ನಾನೂ ನನ್ನ ತಂದೆ ಹೋದ ದಾರಿಯಾಗಿಯೇ ಹೋಗುವೆ.

ಸಾ ತ್ವಂ ಮಯಿ ಮೃತೇ ಮಾತಸ್ತಥಾ ಗಾಂಡೀವಧನ್ವನಿ ।
ಭವ ಪ್ರೀತಿಮತೀ ದೇವಿ ಸತ್ಯೇನಾತ್ಮಾನಮಾಲಭೇ ॥ ೩೩ ॥

ನಾನು ಹಾಗೂ ಗಾಂಡೀವಧಾರಿಯಾದ ಅರ್ಜುನನ ಸಾವಿನ ತರುವಾಯ ನೀನು ಪ್ರಸನ್ನಳಾಗು. ನಾನು ಸತ್ಯವನ್ನು ಸ್ಮರಿಸಿ ಆಣೆಯಿಟ್ಟು ಹೇಳುವುದೇನೆಂದರೆ ನಾನು ತಂದೆಯಿಲ್ಲದೆ ಬದುಕಲಾರೆ. ಬಲುದುಃಖಿತನಾದ ಬಭ್ರುವಾಹನ ಆಚಮನವನ್ನು ಮಾಡಿ ಹೀಗೆಂದನು—

ಶೃಣ್ವಂತು ಸರ್ವಭೂತಾನಿ ಸ್ಥಾವರಾಣಿ ಚರಾಣಿ ಚ ।
ತ್ವಂ ಚ ಮಾತರ್ಯಥಾ ಸತ್ಯಂ ಬ್ರವೀಮಿ ಭುಜಗೋತ್ತಮೇ ॥ ೩೪ ॥

ಸಮಸ್ತ ಚರಾಚರ ಪ್ರಾಣಿಮಾತ್ರರೆಲ್ಲರೂ ಹಾಗೂ ಮಾತೆ ಉಲೂಪಿಯು ನನ್ನ ಮಾತುಗಳನ್ನು ಕೇಳುವಂಥವರಾಗಲಿ (ಎಂದು ಕೋರುವೆ). ನಾನು ನಿಜವನ್ನಷ್ಟೇ ಹೇಳುವೆನು.

ಯದಿ ನೋತ್ತಿಷ್ಠತಿ ಜಯಃ ಪಿತಾ ಮೇ ನರಸತ್ತಮಃ ।
ಅಸ್ಮಿನ್ನೇವ ರಣೋದ್ದೇಶೇ ಶೋಷಯಿಷ್ಯೇ ಕಲೇವರಮ್ ॥ ೩೬ ॥

ನರಶ್ರೇಷ್ಠನಾದ ನನ್ನ ತಂದೆ ಅರ್ಜುನ ಎಚ್ಚರ ತಳೆಯದಿದ್ದರೆ ನಾನು ಇದೇ ರಣಭೂಮಿಯಲ್ಲಿ ನನ್ನ ದೇಹ ಸೊರಗುವಂತೆ ಉಪವಾಸವನ್ನು ಕೈಕೊಳ್ಳುವೆನು.

## ೨೦. ಭರದ್ವಾಜ

ಅನುಶಾಸನ/೯೩

### ೧

ಮೊದಲ ಸಂದರ್ಭ : ನೋಡಿ : ಆಣೆ—ಋಷಿಗಳ ಆಣೆಗಳು.

ನೃಶಂಸಸ್ತ್ಯಕ್ತಧರ್ಮಾಸ್ತು ಸ್ತ್ರೀಷು ಜ್ಞಾತಿಷು ಗೋಷು ಚ ।
ಬ್ರಾಹ್ಮಣಂ ಚಾಪಿ ಜಯತಾಂ ಬಿಸಸ್ತೈನ್ಯಂ ಕರೋತಿ ಯಃ ॥ ೧೧೮ ॥

ಉಪಾಧ್ಯಾಯಮಧಃ ಕೃತ್ವಾ ಋಚೋಽಧ್ಯೇತು ಯಜೂಂಷಿ ಚ ।
ಜುಹೋತು ಚ ಸ ಕಕ್ಷಾಗ್ನೌ ಬಿಸಸ್ತೈನ್ಯಂ ಕರೋತಿ ಯಃ ॥ ೧೧೯ ॥

ಬಿಸತಂತುಗಳನ್ನು ಕದ್ದ ಕಳ್ಳನು ನೀಚನು, ಧರ್ಮವನ್ನು ತ್ಯಜಿಸುವನು. ಅವನು ಹೆಂಗಸರು, ಜ್ಞಾತಿಬಾಂಧವರು ಹಾಗೂ ಗೋವುಗಳ ಬಗೆಗಿನ ತನ್ನ ಕರ್ತವ್ಯಗಳನ್ನು ಮಾಡನು. ವಾದವಿವಾದಗಳಲ್ಲಿ ಬ್ರಾಹ್ಮಣನನ್ನೂ ಸೋಲಿಸುವನು. ಗುರುವಿನ ಅಪ್ಪಣೆಯನ್ನು ಮೀರಿ ಋಗ್ವೇದ, ಯಜುರ್ವೇದ ಮೊದಲಾದವುಗಳನ್ನು ಪಠಿಸುವನು. ಒಣ ಹುಲ್ಲಿನ ಮೇಲೆ (ಸಲ್ಲದ ಬೆಂಕಿಯಲ್ಲಿ) ಆಹುತಿಯನ್ನು ನೀಡುವನು.

ಅನುಶಾಸನ/೯೪

### ೨

ಮೊದಲ ಸಂದರ್ಭ : ನೋಡಿ : ಆಣೆ—ರಾಜರುಗಳ ಆಣೆಗಳು.

ಸರ್ವಪಾಪಸಮಾದಾನಂ ನೃಶಂಸೇ ಚಾನೃತೇ ಚ ಯತ್ ।
ತತ್ ತಸ್ಯಾಸ್ತು ಸದಾ ಪಾಪಂ ಯಸ್ತೇ ಹರತಿ ಪುಷ್ಕರಮ್ ॥ ೩೫ ॥

---

+ ಉಲೂಪಿಯು ತನ್ನ ಬಳಿಯಿದ್ದ ಒಂದು ಮಣಿಯನ್ನು ಅರ್ಜುನನ ಎದೆಯ ಮೇಲೆ ಇಡಲು ಹೇಳಿದಳು. ಅದು ಅದ್ಭುತವಾದ ಸಾಮರ್ಥ್ಯವುಳ್ಳ ಮಣಿಯಾಗಿತ್ತು. ಅದರಿಂದಲೇ, ಸತ್ತುಹೋದ ನಾಗರು ಮರುಜೀವ ಪಡೆಯುತ್ತಿದ್ದರು. ಅದನ್ನು ಎದೆಯ ಮೇಲೆ ಇರಿಸುತ್ತಲೇ ನಿದ್ದೆ ತಿಳಿದೆದ್ದವರ ಹಾಗೆ ಅರ್ಜುನ ಎದ್ದನು. ಅರ್ಜುನನು ತನ್ನ ಕಣ್ಣಿಂದಲೇ ಬಭ್ರುವಾಹನನ ಶೌರ್ಯವನ್ನು ಕಾಣಲೆಂಬುದು ಉಲೂಪಿಯ ಬಯಕೆಯಿತ್ತು. ಆದರೆ ಇದೆಲ್ಲ ಹೂಟದಲ್ಲಿ ಇದಕ್ಕೂ ಹೆಚ್ಚಿನ ಮಹತ್ವದ, ಉದಾತ್ತವಾದ ಗುರಿ ಅವಳದಾಗಿತ್ತು. ಅರ್ಜುನನು ಶಿಖಂಡಿಯ ಬೆನ್ನಹಿಂದೆ ಅಡಗಿ ಭೀಷ್ಮ-ಗುರುವನ್ನು ತನ್ನ ಬಾಣಗಳಿಂದ ಕೊಂದ ಪಾಪಕ್ಕೆ ಪ್ರಾಯಶ್ಚಿತ್ತ ಎಂದರೆ ಪ್ರಾಣತ್ಯಾಗ. ಅವನಿಗೆ ನರಕವಾಸ ತಪ್ಪಲೆಂದೇ ಅವಳು ಈ ರೀತಿ ಹೆಣಗಿದುದು. ಗಂಗೆ ಹಾಗೂ ವಸುಗಳಿಂದ, ಮಗನ ಕೈಯಿಂದಲೇ ತಂದೆ ಅರ್ಜುನನ ವಧೆಯಾದರೆ ಮಾತ್ರ ಶಾಂತಿ ದೊರಕುವುದೆಂದು ಉಲೂಪಿಗೆ ತಿಳಿದಿತ್ತು. ಹೀಗಾಗಿ ಅವಳು ಬಭ್ರುವಾಹನನನ್ನು ಯುದ್ಧಕ್ಕಾಗಿ ಹುರಿದುಂಬಿಸಿದ್ದಳು. ಉಲೂಪಿ ಇದೆಲ್ಲವನ್ನು ಅವನಿಗೆ ವಿವರಿಸಿದಳು. ಅಶ್ವಮೇಧ, ಅಧ್ಯಾಯ-೮೦ರಲ್ಲಿ ಇದೆಲ್ಲವನ್ನು ಸವಿಸ್ತರವಾಗಿ ಬಣ್ಣಿಸಲಾಗಿದೆ.

ಕಮಲದ ಹೂವನ್ನು ಕದ್ದವನಿಗೆ, ಕ್ರೂರ ಹಾಗೂ ಖೊಟ್ಟಿ ಉಪನ್ಯಾಸಗಳನ್ನು ಮಾಡುವ ವ್ಯಕ್ತಿಗಳಿಗೆ ತಗಲುವಂತಹ ಪಾಪಗಳು ತಗಲುತ್ತವೆ.

## ೨೧. ಭೀಮ

ಆದಿ/೧೫೪

೧

ಹಿಡಿಂಬ ರಾಕ್ಷಸನನ್ನು ಕೊಂದ ಬಳಿಕ ಭೀಮನು ಹಿಡಿಂಬನ ತಂಗಿ ಹಿಡಿಂಬೆಯನ್ನೂ ಕೊಲ್ಲಲು ಸಿದ್ಧನಾದನು. ಯುಧಿಷ್ಠಿರನು ಅವನನ್ನು ಈ ಸ್ತ್ರೀವಧೆಯಿಂದ ದೂರ ವಿರಿಸಿದನು. ಹಿಡಿಂಬೆಯು ಯುಧಿಷ್ಠಿರನ ಮಾತುಗಳನ್ನು ಆಲಿಸಿ ಅವನನ್ನೂ, ಕುಂತಿಯನ್ನೂ ಅಭಿವಾದಿಸಿದಳು. ಅವಳು ಬಿಚ್ಚುಮನಸ್ಸಿನಿಂದ ಭೀಮನ ಬಗೆಗೆ ಇದ್ದ ತನ್ನಲ್ಲಿಯ ಕಾಮಭಾವನೆಯನ್ನು ವ್ಯಕ್ತಪಡಿಸಿದಳು. ಅವನನ್ನು ಪಡೆಯಲೆಂದು ಅವಳು ತನ್ನ ಧರ್ಮ (ರಾಕ್ಷಸಧರ್ಮ), ನಂಟುಗಳು ಮೊದಲಾದ ಕಟ್ಟುಗಳನ್ನು ಕಿತ್ತೆಸೆದಳು. ತಾನು ಭೀಮನ ಮಡದಿಯಾಗಬೇಕೆಂದು ಬೇಡಿಕೊಂಡಳು. ಅವನಿಲ್ಲದೆ ತಾನು ಬದುಕಲಾರೆನೆಂದೂ ಹೇಳಿದಳು. ಭೀಮನು ತನ್ನನ್ನು ಒಪ್ಪಿಕೊಳ್ಳಲು ನೆರವಾಗಬೇಕೆಂದು ಅವರನ್ನು ಬೇಡಿಕೊಂಡಳು. ಯುಧಿಷ್ಠಿರನು ಅವಳ ಬೇಡಿಕೆಯನ್ನು ಶರತ್ತಿನೊಂದಿಗೆ ಒಪ್ಪಿಕೊಂಡನು. ಭೀಮನು ಅಣ್ಣನ ಮಾತಿಗೆ ಮರ್ಯಾದೆಯನ್ನಿತ್ತು ಹಿಡಿಂಬೆಗೆ ಹೀಗೆಂದನು—

ಶೃಣು ರಾಕ್ಷಸಿ ಸತ್ಯೇನ ಸಮಯಂ ತೇ ವದಾಮ್ಯಹಮ್ ॥ ೧೯ ॥

ಯಾವತ್ಕಾಲೇನ ಭವತಿ ಪುತ್ರಸ್ಯೋತ್ಪಾದನಂ ಶುಭೇ ।
ತಾವತ್ಕಾಲಂ ಗಮಿಷ್ಯಾಮಿ ತ್ವಯಾ ಸಹ ಸುಮಧ್ಯಮೇ ॥ ೨೦ ॥

ಎಲೆ ರಕ್ಕಸಿಯೇ ! ನಾನು ಹೇಳುವುದನ್ನು ಗಮನವಿಟ್ಟು ಸರಿಯಾಗಿ ಕೇಳಿಕೋ. ನಾನು ಸತ್ಯದ ಮೇಲೆ ಆಣೆಯಿಟ್ಟು ನಿನಗೊಂದು ಶರತ್ತನ್ನು ಒಡ್ಡುವೆ (ನೀನದನ್ನು ಒಪ್ಪುವುದಾದರೆ ಮಾತ್ರ ನಾನು ನಿನ್ನನ್ನು ಮದುವೆಯಾಗುವೆನು). ಎಲೆ ಶುಭೆಯೇ ! ನಿನಗೆ ಒಂದು ಗಂಡು ಮಗು ಆಗುವವರೆಗೆ ಮಾತ್ರ ನನ್ನ ಸಹವಾಸ ಲಭಿಸೀತು (ಆಮೇಲೆ ಇಲ್ಲ).

ಹಿಡಿಂಬೆಯು ಭೀಮನ ಶರತ್ತನ್ನು ಒಪ್ಪಿದಳು. ಅವಳು ಚೆಲುವೆಯಂತೆ ರೂಪ ಧರಿಸಿ ಭೀಮನನ್ನು ಅಂತರಿಕ್ಷಕ್ಕೆ ಕರೆತಂದಳು.

+ ಈ ಆಣೆಯಲ್ಲಿ ಸತ್ಯವನ್ನು ಉಲ್ಲೇಖಿಸಲಾಗಿದೆ.

ವಿರಾಟ/೨೨

೨

ಕೀಚಕನ ಕಪಿಮುಷ್ಟಿಯಿಂದ ತನ್ನನ್ನು ಬಿಡಿಸಿಕೊಳ್ಳಲೆಂದು ಸೈರಂಧ್ರಿಯು ಭೀಮನನ್ನು ಏಕಾಂತದಲ್ಲಿ ಕಂಡಳು. ಅವನೆದುರು ತನ್ನ ಮನದಳಲನ್ನು ತೋಡಿಕೊಂಡಳು. ಭೀಮನು

ಅವಳಿಗೆ ಆಶ್ವಾಸನೆಯನ್ನಿತ್ತು, ಈ ಸಂದರ್ಭದಲ್ಲಿ ಏನು ಮಾಡಬೇಕೆಂಬುದನ್ನು ಅವಳಿಗೆ ಸರಿಯಾಗಿ ತಿಳಿಸಿ ಹೇಳಿದನು. ಅದೆಂದರೆ, ಅವಳು ಕೀಚಕನೊಡನೆ ಪ್ರೀತಿಯ ಸೋಗು ಹಾಕಿ ಅವನನ್ನು ಇರುಳ ಹೊತ್ತಿಗೆ ನಾಟಕಶಾಲೆಗೆ ಒಬ್ಬನೇ ಬರುವಂತೆ ಮಾಡುವುದು. ಅವನು ಅಲ್ಲಿಗೆ ಬರುವ ಮುನ್ನವೇ ಭೀಮನು ಅಲ್ಲಿ ಅಡಗಿ ಕುಳಿತುಕೊಳ್ಳುವುದು. ಕೀಚಕ ಸಲ್ಲದ ನಡತೆಗೆ ತೊಡಗುತ್ತಲೇ ಭೀಮನು ಅವನಿಗೆ ಸರಿಯಾದ ಪಾಠ ಕಲಿಸುವುದು. ಭೀಮನು ಸೈರಂಧ್ರಿಗೆ ಇವೆಲ್ಲ ಸಂಗತಿಗಳನ್ನು ನಿರ್ಧಾರದಿಂದ ಹೇಳಿದನು.

ಸತ್ಯಂ ಭ್ರಾತೄಂಶ್ಚ ಧರ್ಮಂ ಚ ಪುರಸ್ಕೃತ್ಯ ಬ್ರವೀಮಿ ತೇ ।
ಕೀಚಕಂ ನಿಹನಿಷ್ಯಾಮಿ ವೃತ್ರಂ ದೇವಪತಿರ್ಯಥಾ ॥ ೩೨ ॥

ತಂ ಗಹ್ವರೇ ಪ್ರಕಾಶೇ ವಾ ಪೋಥಯಿಷ್ಯಾಮಿ ಕೀಚಕಮ್ ।
ಅಥ ಚೇದಪಿ ಯೋತ್ಸ್ಯಂತಿ ಹಿಂಸೇ ಮತ್ಸ್ಯಾನಪಿ ಧ್ರುವಮ್ ॥ ೩೩ ॥

ತತೋ ದುರ್ಯೋಧನಂ ಹತ್ವಾ ಪ್ರತಿಪತ್ಸ್ಯೇ ವಸುಂಧರಾಮ್ ।
ಕಾಮಂ ಮತ್ಸ್ಯಮುಪಾಸ್ತಾಂ ಹಿ ಕುಂತೀಪುತ್ರೋ ಯುಧಿಷ್ಠಿರಃ ॥ ೩೪ ॥

ಸತ್ಯ, ಸೋದರರು ಹಾಗೂ ಧರ್ಮದ ಸಾಕ್ಷಿಯನ್ನಿಟ್ಟು ನಾನು ನಿನಗೆ ಹೇಳುವುದೇನೆಂದರೆ ದೇವೇಂದ್ರನು ವೃತ್ರನನ್ನು ಕೊಂದ ಹಾಗೆ ನಾನು ಕೀಚಕನನ್ನು ಯಮಲೋಕಕ್ಕೆ ಅಟ್ಟುವೆನು. ಒಂಟಿಯಾಗಿ ಇರುವಲ್ಲಾಗಲಿ, ಎಲ್ಲರೆದುರಲ್ಲಾಗಲಿ ನಾನು ಮಾತ್ರ ಕೀಚಕನನ್ನು ಮೆಟ್ಟಿಹಾಕುವೆನು. ಆಗ ಮತ್ಸ್ಯನಾಡಿನ ಸೇನೆ ಸಿದ್ಧವಾಗಿದ್ದರೆ ಅದನ್ನೂ ಕೊನೆಗಾಣಿಸದಿರೆನು. ತರುವಾಯದಲ್ಲಿಯೇ ದುರ್ಯೋಧನನನ್ನು ಕೊಂದು ಪೃಥ್ವೀಪತಿಯಾಗುವೆ (ಈ ಕೆಲಸದಲ್ಲಿ ಯಾರ ಮಾತನ್ನೂ ಕೇಳಲಾರೆ). ವಿರಾಟನನ್ನು ಸೇವೆಗೈಯುವುದೇ ಯುಧಿಷ್ಠಿರನಿಗೆ ಸಂತೋಷದ ಸಂಗತಿಯಾಗಿ ಕಾಣುತ್ತಿದ್ದರೂ (ನನಗದರ ಪರಿವೆಯಿಲ್ಲ).

+ ಈ ಆಣೆಯಲ್ಲಿಯ ಸತ್ಯ, ಸೋದರ ಹಾಗೂ ಧರ್ಮಗಳ ಉಲ್ಲೇಖ ಮುಖ್ಯ.

## ೨೨. ಮಾನವದಂಪತಿಗಳು **ಅನುಶಾಸನ/೪೨**

ವಿಪುಲನು ತನ್ನ ಗುರುವಿನ ಅಪ್ಪಣೆಯ ಮೇರೆಗೆ ಘೋರವಾದ ತಪಸ್ಸನ್ನಾಚರಿಸಿ ಸಮರ್ಥನಾದನು. ಅವನಿಗೆ ಎರಡೂ ಲೋಕಗಳನ್ನು ಗೆದ್ದುಕೊಂಡಷ್ಟು ಸಂತೋಷವಾಯಿತು. ಅವನ ಗುರುವಿನ ಮಡದಿಯ ಸೋದರಿಯ ಮದುವೆ ನಡೆದಿತ್ತು. ಆಗ ಒಬ್ಬಳು ಸ್ವರ್ಗೀಯ ಸುಂದರಿಯು ತನ್ನ ಸೌಂದರ್ಯದ ವೈಭವವನ್ನು ಮೆರೆಯುತ್ತ ಆಕಾಶ ಮಾರ್ಗವಾಗಿ ಹೋದಳು. ಅವಳ ಮೈಮೇಲಿಂದ ಉದುರಿಬಿದ್ದ ಹೂಗಳು ಸ್ವರ್ಗೀಯವಾದ ಸುಗಂಧವನ್ನು ಹೊತ್ತಿದ್ದವು. ರುಚಿಯು ಅವುಗಳನ್ನು ಕಲೆಹಾಕಿದಳು. ಈ ಹೂಗಳು ಅವಳ ಸೋದರಿ ಪ್ರಭಾವತಿಗೆ ತುಂಬ ಹಿಡಿಸುತ್ತಿದ್ದವು. ಅವಳು ತನಗೆ ಅಂಥ ಹೂಗಳು ಬೇಕೇಬೇಕೆಂದು ಹಟಮಾಡಿದಳು. ಆಗ ವಿಪುಲನ ಗುರು ದೇವಶರ್ಮನು ಅವನಿಗೆ ಅಂಥ ಹೂಗಳನ್ನು ತಂದುಕೊಡಲು ಹೇಳಿದನು. ವಿಪುಲನು ಆ ಹೂವು

ಗಳನ್ನು ಕಲೆಹಾಕಿಕೊಂಡು ಹಿಂತಿರುಗುವಾಗ ಅವನು ಮಾನವದಂಪತಿಗಳು ತಮ್ಮ ತಮ್ಮಲ್ಲಿ ಜಗಳಾಡುತ್ತಿರುವುದನ್ನು ಕಂಡನು. ಅವರಲ್ಲಿಯ ಒಬ್ಬರು 'ನೀನು ತುಂಬ ಲಗು ಬಗೆಯಿಂದ ಹೆಜ್ಜೆಯಿಕ್ಕುತ್ತಿರುವೆ' ಎಂದು ಅಂದರೆ ಇನ್ನೊಬ್ಬರು ಅದನ್ನೊಪ್ಪುತ್ತಿರಲಿಲ್ಲ. ಅವರಿಬ್ಬರ ಜಗಳ ತುಂಬ ಕಾವೇರಿದ ಹೊತ್ತಿನಲ್ಲಿ ಅವರಿಗೆ ವಿಪುಲನು ಕಾಣಿಸಿದನು. ಅವನನ್ನು ಕಂಡು ಅವರಿಬ್ಬರೂ ಆಣೆಮಾಡಿ ಹೇಳಹತ್ತಿದರು—

ತಯೋರ್ವಿಸ್ಪರ್ಧತೋರೇವಂ ಶಪಥೋಽಯಮುಭೂತ್ ತದಾ ।
ಸಹಸೋದ್ದಿಶ್ಯ ವಿಪುಲಂ ತತೋ ವಾಕ್ಯಮಥೋಚತುಃ ॥ ೨೦ ॥
ಆವಯೋರನೃತಂ ಪ್ರಾಹ ಯಸ್ತಸ್ಯಾಭೂದ್ ದ್ವಿಜಸ್ಯ ವೈ ।
ವಿಪುಲಸ್ಯ ಪರೇ ಲೋಕೇ ಯಾ ಗತಿಃ ಸಾ ಭವೇದಿತಿ ॥ ೨೧ ॥

ನಮ್ಮೀರ್ವರಲ್ಲಿ ಸುಳ್ಳುಮಾತಾಡುವವನ ಅವಸ್ಥೆಯು ಪರಲೋಕದಲ್ಲಿ ಈ ವಿಪುಲ ಬ್ರಾಹ್ಮಣನ ಅವಸ್ಥೆಯಂತೆಯೇ ಆದೀತು.

+ ನೋಡಿ : ಶಾಪ ಕ್ರ. ೧೨೮.

ಇದೊಂದು ಆಣೆಯೇ ಆಗಿದೆ. ಇದನ್ನು ೪೨/೫ರಲ್ಲಿ 'ಶಾಪಂ ಶ್ರುತ್ವಾ' ಎಂಬುದಾಗಿ ಇದನ್ನು ಶಾಪವೆಂದೇ ಉಲ್ಲೇಖಿಸಲಾಗಿದೆ.

## ೨೩. ಬೆಕ್ಕು ಶಾಂತಿ/೧೩೮

ಮೊದಲ ಸಂದರ್ಭ : ನೋಡಿ : ಆಣೆ—ಇಲಿ.

ಇಲಿಯು ಬೆಕ್ಕಿನೊಂದಿಗೆ ಗೆಳೆತನವನ್ನು ಮಾಡಿಕೊಂಡು ಮುಂಗುಲಿ ಹಾಗೂ ಗೂಗೆ ಗಳಿಂದ ಬದುಕಿ ಉಳಿಯಿತು. ಅವೆರಡೂ ಬೇಟೆ ಸಿಗದ್ದರಿಂದ ನಿರಾಶೆಹೊಂದಿ ಹೊರಟು ಹೋದವು. ಆಮೇಲೆ ಇಲಿಯು ಬಲೆಯನ್ನು ಕತ್ತರಿಸಿ ಬೆಕ್ಕನ್ನು ಪಾರುಮಾಡಿತು. ಅದು ಕೊನೆಕೊನೆಯ ಪಾಶವನ್ನು ಕತ್ತರಿಸುವಾಗ ಅಲ್ಲಿಗೆ ಬೇಡನು ಬಂದನು. ಬೆಕ್ಕು ಅವನಿಗೆ ಹೆದರಿ ಮರವನ್ನೇರಿತು. ಇಲಿಯು ಹೆದರಿಕೆಯಿಲ್ಲದೆ ತನ್ನ ಪೊದರನ್ನು ಹೊಕ್ಕಿತು. ಬೇಡನು ಮಾತ್ರ ಬರಿಗೈಯಲ್ಲಿ ಹಿಂದಿರುಗುವಂತಾಯಿತು.

ಸಂಕಟದಿಂದ ಪಾರಾದಕಾರಣ ಬೆಕ್ಕು ಸವಿಮಾತುಗಳಿಂದ ಇಲಿಯನ್ನು ಅದರ ಬಿಲ ದಿಂದ ಹೊರತರಲು ಯತ್ನಿಸುತ್ತಿತ್ತು. ತನ್ನ ಮೇಲಾದ ಉಪಕಾರವನ್ನು ಹಿಂತಿರುಗಿಸ ಬೇಕಾದ್ದರಿಂದ ಬಿಲದ ಹೊರಗೆ ಬರುವಂತೆ ಇಲಿಯನ್ನು ಕೇಳಿಕೊಳ್ಳಹತ್ತಿತು. ಇಲಿಯು ತನ್ನ ಮಾತನ್ನು ನಂಬಲೆಂದು ಬೆಕ್ಕು ಅದಕ್ಕೆ ಹೀಗೆಂದಿತು—

ಈಶ್ವರೋ ಮೇ ಭವಾನಸ್ತು ಸ್ವಶರೀರಗೃಹಸ್ಯ ಚ ।
ಅರ್ಥಾನಾಂ ಚೈವ ಸರ್ವೇಷಾಮನುಶಾಸ್ತಾ ಚ ಮೇ ಭವ ॥ ೧೩೨ ॥

ಅಮಾತ್ಯೋ ಮೇ ಭವ ಪ್ರಾಜ್ಞ ಪಿತೇವೇಹ ಪ್ರಶಾಧಿ ಮಾಮ್ ।
ನ ತೇಽಸ್ತಿ ಭಯಮಸ್ಮತ್ತೋ ಜೀವಿತೇನಾತ್ಮನಃ ಶಪೇ ॥ ೧೩೩ ॥

ನಾನು ನನ್ನ ದೇಹ, ಮನೆ–ಎಲ್ಲವನ್ನೂ ನಿನಗೆ ಒಪ್ಪಿಸಲಿದ್ದೇನೆ. ನನಗೆ ದಾರಿ ತೋರು. ನನ್ನ ಸಂಪತ್ತನ್ನೆಲ್ಲ ನಿನಗೇ ಕೊಡಲಿದ್ದೇನೆ. ನೀನು ನನ್ನ ಮಂತ್ರಿಯಾಗಿ ನನಗೆ ತಂದೆಯಂತೆ ಅಪ್ಪಣೆ ಮಾಡು. ನಿನಗೆ ನನ್ನಿಂದ ಯಾವುದೇ ಬಗೆಯ ಭಯವಿಲ್ಲೆಂದು ನನ್ನ ಜೀವದ ಮೇಲೆ ಆಣೆಯಿಟ್ಟು ಹೇಳುತ್ತೇನೆ.

ಇಲಿಯು ಬೆಕ್ಕಿನ ಸವಿಮಾತುಗಳಿಗೆ ಬಲಿಬೀಳಲಿಲ್ಲ. ಬದಲು ಅದನ್ನು ಹೀಯಾಳಿಸಿತು. ಏನೆಂದರೂ ಅದು ಬಿಲದ ಹೊರಗೆ ಬರಲೊಪ್ಪಲಿಲ್ಲ. ಇಷ್ಟಾಗಿಯೂ ಆ ಬೆಕ್ಕು ನಾಚಿಕೊಂಡು ಹೀಗೆಂದಿತು—

ಸತ್ಯಂ ಶಪೇ ತ್ವಯಾಹಂ ವೈ ಮಿತ್ರದ್ರೋಹೋ ವಿಗರ್ಹಿತಃ ॥ ೧೮೫ ॥

ಗೆಳೆಯನಿಗೆ ದ್ರೋಹ ಬಗೆಯುವುದು ನಿಂದನೀಯವಾದ ಮಾತು ಎಂಬುದನ್ನು ನಿನ್ನ ಮೇಲೆ ಆಣೆಯಿಟ್ಟು ಸತ್ಯವನ್ನೇ ಹೇಳುತ್ತೇನೆ.

+ ಈ ಆಣೆಯಲ್ಲಿ ಸ್ವಂತದ ಪ್ರಾಣದ ಉಲ್ಲೇಖವಿದೆ.

## ೨೪. ಯುಧಿಷ್ಠಿರ ವನ/೧

೧

ಪಾಂಡವರು ಜೂಜಿನಲ್ಲಿ ತಮ್ಮದೆಲ್ಲವನ್ನೂ ಕಳೆದುಕೊಂಡು ಕಾಡಿಗೆ ಹೊರಟರು. ಆಗ ಹಸ್ತಿನಾಪುರದ ಪ್ರಜೆಗಳು, ಇವನ ಸೇವಕರು, ಹೆಂಗಳೆಯರು ಮುಂತಾದವರೆಲ್ಲ ಅವರನ್ನು ಹಿಂಬಾಲಿಸಿದರು. ಹೀಗೆಯೇ ಬಲು ದೂರದವರೆಗೆ ಸಾಗಿದರು. ಆಗ ಯುಧಿಷ್ಠಿರನು ಅವರಿಗೆ ಹೀಗೆಂದನು—

ನಿವರ್ತತಾಗತಾ ದೂರಂ ಸಮಾಗಮನಶಾಪಿತಾಃ ।
ಸ್ವಜನೇ ನ್ಯಾಸಭೂತೇ ಮೇ ಕಾರ್ಯಾ ಸ್ನೇಹಾನ್ವಿತಾ ಮತಿಃ ॥ ೩೭ ॥

'ಇನ್ನು ನೀವು ಹಿಂತಿರುಗಿ ಹೋಗಿ. ಬಲು ದೂರ ನಡೆದು ಬಂದಿರಿ. ಇನ್ನುಮುಂದೆ ನಮ್ಮ ಜೊತೆಗೆ ಬರುವುದು ಬೇಡ. ನಿಮಗೆ ನನ್ನ ಆಣೆಯಿದೆ. ನನ್ನವರೆಲ್ಲ ಒಂದು ಇಡುಗಂಟು ಇದ್ದ ಹಾಗಿದ್ದಾರೆ. ಅವರೊಂದಿಗೆ ಸ್ನೇಹದಿಂದಿರಿ.'

+ ಯುಧಿಷ್ಠಿರನು ತಾನು ಆಣೆ ಮಾಡಿಲ್ಲ. ತನ್ನೊಂದಿಗೆ ಬರುವವರಿಗೆ ಆಣೆ ಹಾಕಿದ್ದಾನೆ.

+ ನೋಡಿ : ಯುಧಿಷ್ಠಿರನ ಪಣ, ಕ್ರ, ೩.೨.

ಆಶ್ರಮ/೩

೨

ಕೌರವರ ನಾಶದ ತರುವಾಯ ಯುಧಿಷ್ಠಿರನ ಜೊತೆಗೆ ಧೃತರಾಷ್ಟ್ರ ಹಾಗೂ ಗಾಂಧಾರಿಯರು ಹದಿನೈದು ವರ್ಷಗಳ ಕಾಲ ಇದ್ದರೂ ಅವರಿಗೆ ಎಲ್ಲ ಬಗೆಯ ಸುಖ-ಸೌಕರ್ಯಗಳು ದೊರೆಕುತ್ತಿದ್ದವು. ಅವರನ್ನು ಉತ್ತಮ ರೀತಿಯಿಂದ ನೋಡಿಕೊಳ್ಳಲಾಗುತ್ತಿತ್ತು. ಭೀಮ ಮಾತ್ರ ಯಾರ ಗಮನಕ್ಕೂ ಬಾರದ ಹಾಗೆ ಅವರಿಗೆ ಚುಚ್ಚುನುಡಿಗಳನ್ನು

ಆಡುತ್ತಿದ್ದನು. ಅವುಗಳನ್ನು ಸಹಿಸಿಕೊಳ್ಳದಂತಾಗಲು ಅವರು ಕಾಡಿಗೆ ಹೊರಟರು. ಯುಧಿಷ್ಠಿರನ ಒಪ್ಪಿಗೆಯನ್ನು ಕೇಳಿದರು. ಯುಧಿಷ್ಠಿರನಿಗೆ ಬಲು ಕೆಡಕೆನ್ನಿಸಿತು. ಅವರು ಹೋಗದಿರಲೆಂದು ಅವನೆಂದನು—

ಸ ಮಾಂ ತ್ವಂ ಯದಿ ರಾಜೇಂದ್ರ ಪರಿತ್ಯಜ್ಯ ಗಮಿಷ್ಯಸಿ ।
ಪೃಷ್ಠತಸ್ತ್ವನುಯಾಸ್ಯಾಮಿ ಸತ್ಯಮಾತ್ಮಾನಮಾಲಭೇ ॥ ೫೨ ॥

ನೀವು ನಮ್ಮನ್ನು ಬಿಟ್ಟುಹೋಗುವಿರಾದರೆ ನಾನೂ ನಿಮ್ಮನ್ನು ಹಿಂಬಾಲಿಸುವೆನು.

+ ಈ ಆಣೆಯಲ್ಲಿ ಸತ್ಯದ ಉಲ್ಲೇಖವಿದೆ.

## ೨೫. ರಾಜರುಗಳ ಆಣೆಗಳು **ಅನುಶಾಸನ/೯೪**

**ಮೊದಲ ಸಂದರ್ಭ : ನೋಡಿ : ಆಣೆ—ಋಷಿಗಳ ಆಣೆಗಳು.**

ಒಂದು ಸಲ ಹಲವು ಜನ ಋಷಿಗಳು ಪ್ರಭಾಸ ಕ್ಷೇತ್ರದಲ್ಲಿ ಕಲೆತರು. ಅವರೆಲ್ಲ ತೀರ್ಥ ಕ್ಷೇತ್ರಗಳಿಂದ ಕೂಡಿದ ಪೃಥ್ವಿಯ ಮೇಲೆ ಸಂಚರಿಸಲು ನಿರ್ಧರಿಸಿದರು. ಅಗಸ್ತ್ಯ, ಶುಕ್ರ, ವಸಿಷ್ಠ, ವಿಶ್ವಾಮಿತ್ರ ಮೊದಲಾದ ಋಷಿಗಳ ಜೊತೆಗೆ ಇಂದ್ರ, ದಿಲೀಪ, ನಹುಷಾದಿ ಹಲವು ಜನ ರಾಜರುಗಳೂ ಕೂಡ ಈ ತೀರ್ಥಯಾತ್ರೆಯಲ್ಲಿದ್ದರು. ಋಷಿಗಳು ಹಾಗೂ ರಾಜರುಗಳು ಎಲ್ಲ ತೀರ್ಥಗಳಲ್ಲೂ ಪಾಪವನ್ನು ತೊಳೆದುಕೊಂಡು ಬ್ರಹ್ಮದೇವನ ಬ್ರಹ್ಮ ಸರ ತೀರ್ಥಕ್ಷೇತ್ರಕ್ಕೆ ಬಂದರು. ಅವರೆಲ್ಲ ಅಲ್ಲಿ ಮಿಂದು ಅಲ್ಲಿಯ ಕಮಲತಂತುಗಳನ್ನು ತಿಂದರು. ಅಗಸ್ತ್ಯ ಋಷಿಯು ಕೆರೆಯಲ್ಲಿ ಕಮಲವನ್ನು ಕಂಡು ಅದನ್ನು ಕಿತ್ತುಕೊಂಡನು. ಅಷ್ಟರಲ್ಲಿಯೇ ಯಾರೋ ಅವನ ಕಮಲವನ್ನು ಕದ್ದುಬಿಟ್ಟರು. ತಮ್ಮವರಲ್ಲಿಯೇ ಯಾರಾದರೊಬ್ಬರು ಕಳ್ಳರಾಗಿರುವರೆಂದು ಅಗಸ್ತ್ಯನು ಸಂದೇಹಪಟ್ಟನು. ಅವನು ಹಾಗೆಂದು ಆಡಿಯೂ ತೋರಿಸಿದನು. ಆಗ ಉಳಿದ ಋಷಿಗಳೆಲ್ಲ ಅಗಸ್ತ್ಯನಿಗೆ ಹೀಗೆಂದರು—

......ನ ತೇ ವಯಂ ಪುಷ್ಕರಂ ಚೋರಯಾಮಃ ।
ಮಿಥ್ಯಾಭಿಷಂಗೋ ಭವತಾ ನ ಕಾರ್ಯಃ ಶಪಾಮ ತೀಕ್ಷ್ಣೈಃ
ಶಪಥೈರ್ಮಹರ್ಷೇ ॥ ೧೪ ॥

ತೇ ನಿಶ್ಚಿತಾಸ್ತತ್ರ ಮಹರ್ಷಯಸ್ತು ಸಂಪಶ್ಯಂತೋ ಧರ್ಮಮೇತಂ ನರೇಂದ್ರಾಃ।
ತತೋಽಶಪಂತ ಶಪಥಾನ್ ಪರ್ಯಯೇಣ ಸಹೈವ ತೇ ಪಾರ್ಥಿವ ಪುತ್ರಪೌತ್ರೈಃ
॥ ೧೫ ॥

'ನಾವಾರೂ ನಿನ್ನ ಕಮಲವನ್ನು ಕದ್ದಿಲ್ಲ. ಸುಮ್ಮನೆ ನಮ್ಮ ಮೇಲೆ ಸುಳ್ಳು ಆರೋಪ ವನ್ನು ಹೊರಿಸಬೇಡ. ಬೇಕಿದ್ದರೆ ನಾವು ಉಗ್ರವಾದ ಆಣೆಗಳನ್ನು ಮಾಡಲು ಸಿದ್ಧರು.' ಆ ಮಹರ್ಷಿಗಳಿಗೂ ರಾಜರುಗಳಿಗೂ ಹಾಗೆ ಮಾಡುವುದೇ ಸರಿ ಕಂಡಿತು. ಹೀಗಾಗಿ ಆಮೇಲೆ ಒಬ್ಬರಾದಮೇಲೆ ಒಬ್ಬರಂತೆ ಹೀಗೆ ಆಣೆಗಳನ್ನು ಮಾಡಿದರು—

ಆಣೆಮಾಡಿ ಹೇಳಿದ ರಾಜರುಗಳಲ್ಲಿ ಬಂಧುಮಾರ, ಪುರು, ದಿಲೀಪ, ಶಿಬಿ, ಯಯಾತಿ,

ನಹುಷ ಹಾಗೂ ಅಂಬರೀಷರಿದ್ದರು. ಇಂದ್ರನೂ ಇವರೊಂದಿಗೆ ಆಣೆ ಮಾಡಿದನು. ಇದನ್ನು ಕುರಿತು ಬೇರೆಯಾಗಿ ವಿವೇಚಿಸಲಾಗಿದೆ. ನೋಡಿ : ಆಣೆ—ಇಂದ್ರ.

### ೧. ಧುಂಧುಮಾರ

ಅಕೃತಜ್ಞಸ್ತು ವಿಂತ್ರಾಣಾಂ ಶೂದ್ರಾಯಾಂ ಚ ಪ್ರಜಾಯತು ।
ಏಕಃ ಸಂಪನ್ನಮಶ್ನಾತು ಯಸ್ತೇ ಹರತಿ ಪುಷ್ಕರಮ್ ॥ ೨೧ ॥

ಗೆಳೆಯನ ಉಪಕಾರವನ್ನು ಸ್ಮರಿಸದಿರುವವನೂ, ಶೂದ್ರಹೆಣ್ಣಿನ ಹೊಟ್ಟೆಯಲ್ಲಿ ಹುಟ್ಟಿಬರುವವನೂ ಹಾಗೂ ಚೆನ್ನಾದ ಆಹಾರವನ್ನು ತಾನೊಬ್ಬನೇ ಉಣ್ಣುವವನೂ ಆದ ವ್ಯಕ್ತಿಯು ನಿನ್ನ ಕಮಲವನ್ನು ಕದ್ದಿರಲು ಸಾಕು.

ತಾನು ಕದ್ದಿಲ್ಲವೆಂದು ಇದರರ್ಥ.

### ೨. ಪುರು

ಚಿಕಿತ್ಸಾಯಾಂ ಪ್ರಚರತು ಭಾರ್ಯಯಾ ಚೈವ ಪುಷ್ಯತು ।
ಶ್ವಶುರಾತ್ತಸ್ಯ ವೃತ್ತಿಃ ಸ್ಯಾದ್ ಯಸ್ತೇ ಹರತಿ ಪುಷ್ಕರಮ್ ॥ ೨೨ ॥

ನಿನ್ನ ಕಮಲವನ್ನು ಕದಿಯುವವನು ವೈದ್ಯವೃತ್ತಿಯನ್ನು ಕೈಕೊಳ್ಳುವನು. ಹೆಂಡತಿಯ ದುಡಿಮೆಯಿಂದ ದುಡ್ಡುಳ್ಳವನಾದಾನು. ತನ್ನ ಹೊಟ್ಟೆಹೊರೆವ ಹೊರೆಯನ್ನೆಲ್ಲ ತನ್ನ ಮಾವನ ಮೇಲೆ ಹಾಕುವನು.

### ೩. ದಿಲೀಪ

ಉದಪಾನಪ್ಲವೇ ಗ್ರಾಮೇ ಬ್ರಾಹ್ಮಣೋ ವೃಷಲೀಪತಿಃ ।
ತಸ್ಯ ಲೋಕಾನ್ ಸ ವ್ರಜತು ಯಸ್ತೇ ಹರತಿ ಪುಷ್ಕರಮ್ ॥ ೨೩ ॥

ನಿನ್ನ ಕಮಲವನ್ನು ಕದಿಯುವವನು ಒಂದೇ ಜಲಾಶಯದಿಂದ ಊರವರೆಲ್ಲ ನೀರನ್ನು ಪಡೆಯುವಂಥ ಹಳ್ಳಿಯಲ್ಲಿದ್ದು (ತನ್ನ ಸಾವಿನ ತರುವಾಯ) ಶೂದ್ರಹೆಣ್ಣನ್ನು ಇಟ್ಟು ಕೊಳ್ಳುವ ಬ್ರಾಹ್ಮಣನ ಅವಸ್ಥೆಯನ್ನು ಹೊಂದುವನು.

### ೪. ಶಿಬಿ

ಅನಾಹಿತಾಗ್ನಿರ್ಮ್ರಿಯತಾಂ ಯಜ್ಞೇ ವಿಘ್ನಂ ಕರೋತು ಚ ।
ತಪಸ್ವಿಭಿರ್ವಿರುಧ್ಯೇಚ್ಚ ಯಸ್ತೇ ಹರತಿ ಪುಷ್ಕರಮ್ ॥ ೨೬ ॥

ನಿನ್ನ ಕಮಲವನ್ನು ಕದ್ದವನಿಗೆ ಅಗ್ನಿಹೋತ್ರವನ್ನು ಪಡೆಯುವ ಮೊದಲೇ ಸಾವು ಬಂದೀತು. ಅವನು ಯಜ್ಞದಲ್ಲಿ ವಿಘ್ನವನ್ನು ತಂದೊಡ್ಡುವನು. ಅಲ್ಲದೆ ತಪಸ್ವಿಗಳನ್ನು ವಿರೋಧಿಸುವನು.

**೫. ಯಯಾತಿ**

ಅನೃತೌ ಚ ವ್ರತೀ ಚೈವ ಭಾರ್ಯಾಯಾಂ ಸ ಪ್ರಜಾಯತು ।
ನಿರಾಕರೋತು ವೇದಾಂಶ್ಚ ಯಸ್ತೇ ಹರತಿ ಪುಷ್ಕರಮ್ ॥ ೨೭ ॥

ನಿನ್ನ ಕಮಲವನ್ನು ಕದಿಯುವವನು ಋತುಸಮಯವಿಲ್ಲದಾಗಲೂ, ವ್ರತವನ್ನು ಆಚರಿಸುತ್ತಿರುವಾಗಲೂ ತನ್ನ ಮಡದಿಯಲ್ಲಿ ಪ್ರಜೆಗಳನ್ನು ಹುಟ್ಟುಹಾಕುವನು. ಅವನು ವೇದಗಳನ್ನು ತಿರಸ್ಕರಿಸುವನು.

**೬. ನಹುಷ**

ಅತಿಥಿರ್ಗೃಹಸಂಸ್ಥೋಽಸ್ತು ಕಾಮವೃತ್ತಸ್ತು ದೀಕ್ಷಿತಃ ।
ವಿದ್ಯಾಂ ಪ್ರಯಚ್ಛತು ಭೃತೋ ಯಸ್ತೇ ಹರತಿ ಪುಷ್ಕರಮ್ ॥ ೨೮ ॥

ನಿನ್ನ ಕಮಲವನ್ನು ಕದಿಯುವ ಮುನಿಯು (ವ್ರತವನ್ನು ಹಿಡಿಯುವವನಾಗಿಯೂ) ಗೃಹಸ್ಥನ ಹಾಗೆ ಇರುವನು. ಯಜ್ಞದ ದೀಕ್ಷೆಯನ್ನು ಪಡೆದು ಕೂಡ ಸ್ವೈರಾಚಾರಿಯಾಗುವನು. ದುಡ್ಡಿಗಾಗಿ ವಿದ್ಯೆಯನ್ನು ಮಾರುವನು.

**೭. ಅಂಬರೀಷ**

ನೃಶಂಸಸ್ತ್ಯಕ್ತಧರ್ಮೋಽಸ್ತು ಸ್ತ್ರೀಷು ಜ್ಞಾತಿಷು ಗೋಷು ಚ ।
ನಿಹಂತು ಬ್ರಾಹ್ಮಣಂ ಚಾಪಿ ಯಸ್ತೇ ಹರತಿ ಪುಷ್ಕರಮ್ ॥ ೨೯ ॥

ನಿನ್ನ ಕಮಲವನ್ನು ಒಯ್ದವನು ಕ್ರೂರಿಯಾಗುವನು. ಹೆಣ್ಣು, ಹಸು ಹಾಗೂ ಜಾತಿಬಾಂಧವರ ಬಗೆಗಿನ ತನ್ನ ಕರ್ತವ್ಯಗಳನ್ನು ಪಾಲಿಸಲಾರನು. ಅವನು ಬ್ರಾಹ್ಮಣರನ್ನು ಕೊಲ್ಲುವನು.

## ೨೬. ವಸಿಷ್ಠ **ಅನುಶಾಸನ/೯೩**

೧

ಮೊದಲ ಸಂದರ್ಭ : ನೋಡಿ : ಆಣೆ—ಋಷಿಗಳ ಆಣೆಗಳು.

ಅನಧ್ಯಾಯೇ ಪಠೇಲ್ಲೋಕೇ ಶುನಃ ಸ ಪರಿಕರ್ಷತು ।
ಪರಿವ್ರಾಟ್ ಕಾಮವೃತ್ತಸ್ತು ಬಿಸಸ್ತೈನ್ಯಂ ಕರೋತಿ ಯಃ ॥ ೧೧೪ ॥

ಶರಣಾಗತಂ ಹಂತು ಸ ವೈ ಸ್ವಸುತಾಂ ಚೋಪಜೀವತು ।
ಅರ್ಥಾನ್ ಕಾಂಕ್ಷತು ಕೀನಾಶಾದ್ ಬಿಸಸ್ತೈನ್ಯಂ ಕರೋತಿ ಯಃ ॥ ೧೧೫ ॥

---

+ 'ನಾನು ಕಮಲವನ್ನು ಕದ್ದಿದ್ದರೆ' ಎಂಬುದಾಗಿ ಅಧ್ಯಾಹೃತವಾದ ವಾಕ್ಯವನ್ನು ಒಪ್ಪಿಕೊಂಡರೆ ಅನುಶಾಸನಪರ್ವ, ಅಧ್ಯಾಯ ೯೪ರಲ್ಲಿ ಬರುವ ರಾಜರುಗಳ ಈ ಉದ್ಗಾರಗಳಿಗೆ ಆಣೆಗಳ ಪ್ರತಿಷ್ಠೆ ಬರುತ್ತದೆ.

ಕಮಲತಂತುವನ್ನು ಕದ್ದವನು ಅನಧ್ಯಯನದ ದಿನದಂದೂ ಕೂಡ ಪಠಣವನ್ನು ಕೈಗೊಳ್ಳುವನು. ಜೊತೆಗೆ ನಾಯಿಯನ್ನು ಕರೆದುಕೊಂಡು ಅಲೆಯುವನು. ಸನ್ಯಸ್ತನಾಗಿಯೂ ಸ್ವೈರನಾಗಿ ನಡೆದುಕೊಳ್ಳುವನು. ಶರಣುಬಂದವನನ್ನು ಹೊಡೆದು, ಬಡಿದು ಮಾಡುವನು. ನಿರ್ಧನನಿಂದಲೂ ಧನಕ್ಕಾಗಿ ಆಸೆಪಡುವನು.

**ಅನುಶಾಸನ/೯೪**

೨

ಮೊದಲ ಸಂದರ್ಭ : ನೋಡಿ : ಆಣೆ—ರಾಜರುಗಳ ಆಣೆಗಳು.

ಅಸ್ವಾಧ್ಯಾಯಪರೋ ಲೋಕೇ ಶ್ವಾನಂ ಚ ಪರಿಕರ್ಷತು ।
ಪುರೇ ಚ ಭಿಕ್ಷುರ್ಭವತು ಯಸ್ತೇ ಹರತಿ ಪುಷ್ಕರಮ್ ॥ ೧೭ ॥

ನಿನ್ನ ಕಮಲವನ್ನು ಕದ್ದವನು ಸ್ವಾಧ್ಯಾಯವಿನ್ಮುಖನಾಗುವನು. ಜೊತೆಗೆ ನಾಯಿಯನ್ನು ಕರೆದುಕೊಂಡು ಅಲೆಯುವನು. (ವೈದಿಕ) ಭಿಕ್ಷುವೃತ್ತಿಯನ್ನು ಸ್ವೀಕರಿಸಿಯೂ (ನಾಗರಿಕ) ನಗರಗಳಲ್ಲಿ ವಾಸಮಾಡುವನು.

## ೨೭. ವಿಶ್ವಾಮಿತ್ರ

**ಅನುಶಾಸನ/೯೩**

೧

ಮೊದಲ ಸಂದರ್ಭ : ನೋಡಿ : ಆಣೆ—ಋಷಿಗಳ ಆಣೆಗಳು.

ಜೀವತೋ ವೈ ಗುರೂನ್ ಭೃತ್ಯಾನ್ ಭರಂತ್ವಸ್ಯ ಪರೇ ಜನಾಃ ।
ಅಗತಿರ್ಬಹುಪುತ್ರಃ ಸ್ಯಾದ್ ಬಿಸಸ್ತೈನ್ಯಂ ಕರೋತಿ ಯಃ ॥ ೧೨೪ ॥

ಅಶುಚಿರ್ಬ್ರಹ್ಮಕೂಟೋಽಸ್ತು ಋದ್ಧ್ಯಾ ಚೈವಾಪ್ಯಹಂಕೃತಃ ।
ಕರ್ಷತೋ ಮತ್ಸರೀ ಚಾಸ್ತು ಬಿಸಸ್ತೈನ್ಯಂ ಕರೋತಿ ಯಃ ॥ ೧೨೫ ॥

ವರ್ಷಾಚರೋಽಸ್ತು ಭೃತಕೋ ರಾಜ್ಞಶ್ಚಾಸ್ತು ಪುರೋಹಿತಃ ।
ಅಯಾಜ್ಯಸ್ಯ ಭವೇದೃತ್ವಿಗ್ ಬಿಸಸ್ತೈನ್ಯಂ ಕರೋತಿ ಯಃ ॥ ೧೨೬ ॥

ಕಮಲದ ದೇಟುಗಳನ್ನು ಕದಿಯುವವನು ಬದುಕಿರುವಾಗಲೂ ಬೇರೆಯವರಿಂದಲೇ ಆತನ ಗುರು ಹಾಗೂ ಸೇವಕರ ಪೋಷಣೆ ಸಾಗೀತು. ಅವನು ಉಚ್ಚ ಗತಿಯನ್ನು ಪಡೆಯಲಾರ. ಐಶ್ವರ್ಯದಿಂದಾಗಿ ಅವನಿಗೆ ಮದವೇರುವುದು. ಅವನು ಕರ್ಷಕನಾಗುವನು, ಅಸೂಯೆಪಡುವವನಾಗುವನು. ಮಳೆಗಾಲದಲ್ಲೂ ಅವನು ಪರನಾಡಿನಲ್ಲಿ ಅಲೆದಾಡುವಂತಾದೀತು. (ಬ್ರಾಹ್ಮಣನಾಗಿದ್ದು ಕೂಡ) ಸಂಬಳ ಪಡೆದು ದುಡಿಯಬೇಕಾದೀತು. ಅವನು ರಾಜಪುರೋಹಿತನಾಗಬಲ್ಲನಾದರೂ ಯಜ್ಞಕರ್ಮಗಳನ್ನು ಮಾತ್ರ ಬೇರೊಬ್ಬರಿಂದ ಮಾಡಿಸಬೇಕಾದೀತು. ಏಕೆಂದರೆ ಯಜ್ಞಕರ್ಮಗಳನ್ನು ಕೈಕೊಳ್ಳುವ ಅಧಿಕಾರ ಅವನಿಗೆ ಉಳಿಯಲಾರದು.

**ಅನುಶಾಸನ/೯೪**

೨

ಮೊದಲ ಸಂದರ್ಭ : ನೋಡಿ : ಆಣೆ—ರಾಜರುಗಳ ಆಣೆಗಳು.

ಕರೋತು ಭೃತಕೋಽವರ್ಷಾಂ ರಾಜ್ಞಶ್ಚಾಸ್ತು ಪುರೋಹಿತಃ ।
ಋತ್ವಿಗಸ್ತು ಹ್ಯಯಾಜ್ಯಸ್ಯ ಯಸ್ತೇ ಹರತಿ ಪುಷ್ಕರಮ್ ॥ ೩೩ ॥

ಹೂಗಳನ್ನು ಕದ್ದವನು ವೈಶ್ಯನ ಸೇವಕನಾಗುವನು. ಮಳೆಸುರಿತದಲ್ಲಿ ಅಡ್ಡಿಯನ್ನು ಒಡ್ಡುವನು. ರಾಜಪುರೋಹಿತನೆನ್ನಿಸಿಯೂ (ಅವನಿಗೆ ಯಜ್ಞದ ಅಧಿಕಾರ ದೊರಕಲಾರದು) ಅನಧಿಕಾರಿಗಳಾದ ಬ್ರಾಹ್ಮಣರಿಂದ ಯಜ್ಞವನ್ನು ಮಾಡಿಸುವನು.

## ೨೮. ಶಾಲ್ವ

**ವನ/೧೪**

ಹಸ್ತಿನಾಪುರದಲ್ಲಿ ಜೂಜಾಟವಾಗಿ ದ್ರೌಪದಿಯ ಮಾನಭಂಗ ನಡೆದ ಕಾಲಕ್ಕೆ ಶ್ರೀಕೃಷ್ಣ ದ್ವಾರಕೆಯಲ್ಲಿರಲಿಲ್ಲ. ಅವನು ಅಲ್ಲಿಗೆ ಮರಳಿ ಬಂದ ಬಳಿಕ ಪಾಂಡವರು ವನವಾಸಕ್ಕೆ ತೆರಳಿದ ವಾರ್ತೆ ಅವನನ್ನು ತಲುಪಿತು. ಆಮೇಲೆ ಅವನು ಅವರನ್ನು ಕಾಣಲೆಂದು ಕಾಡಿಗೆ ಹೋದನು. ತಾನು ದ್ವಾರಕೆಯಲ್ಲಿದ್ದಿದ್ದರೆ ಅವರ ಮೇಲೆ ಇಂತಹ ವಿಪರೀತ ಸಂಕಟ ಬಂದೆರಗುತ್ತಿರಲಿಲ್ಲವೆಂದು ಪಾಂಡವರಿಗೆ ಹೇಳಿದನು. ಅದಕ್ಕೆ ಯುಧಿಷ್ಠಿರನು ಆಗ ಅವನೆಲ್ಲಿದ್ದನು ಎಂದು ಕೇಳಿದನು. ಶ್ರೀಕೃಷ್ಣನ ಮಾರುತ್ತರದಲ್ಲಿ ಶಾಲ್ವನ ಆಣೆಯ ಉಲ್ಲೇಖ ಬರುತ್ತದೆ. ಶ್ರೀಕೃಷ್ಣನು ಶಿಶುಪಾಲನನ್ನು ಕೊಂದುದು ಶಾಲ್ವನಿಗೆ ಸಹಿಸಲಾಗಲಿಲ್ಲ. ಅವನು ಶ್ರೀಕೃಷ್ಣನನ್ನು ಕೊಲ್ಲಲು ದ್ವಾರಕೆಯ ಮೇಲೆ ಏರಿಹೋದನು. ಆದರೆ ಅಲ್ಲಿ ಶ್ರೀಕೃಷ್ಣ ಇರಲಿಲ್ಲ. ಹೀಗಾಗಿ ಅವನು ಹಲವು ಜನ ವೃಷ್ಣಿವೀರರನ್ನೂ, ಮಕ್ಕಳನ್ನೂ ಕೊಂದು ಉಪವನವನ್ನು ಹಾಳುಗೆಡವಿದನು. ಶ್ರೀಕೃಷ್ಣನ ಗೊತ್ತುಗುರಿಗಳನ್ನು ಕಂಡು ಹಿಡಿಯಲೆಂದು ಅವನು ಯಾದವರನ್ನು ಹೀಗೆ ಕೇಳಿದನು—

ತಸ್ಯ ಯುದ್ಧಾರ್ಥಿನೋ ದರ್ಪಂ ಯುದ್ಧೇ ನಾಶಯಿತಾಸ್ಮ್ಯಹಮ್ ।
ಆನರ್ತಾಃ ಸತ್ಯಮಾಖ್ಯಾತ ತತ್ರ ಗಂತಾಸ್ಮಿ ಯತ್ರ ಸಃ ॥ ೯ ॥

ತಂ ಹತ್ವಾ ವಿನಿವರ್ತಿಷ್ಯೇ ಕಂಸಕೇಶಿನಿಷೂದನಮ್ ।
ಅಹತ್ವಾ ನ ನಿವರ್ತಿಷ್ಯೇ ಸತ್ಯೇನಾಯುಧಮಾಲಭೇ ॥ ೧೦ ॥

'ಅವನಿಗೆ (ಶ್ರೀಕೃಷ್ಣನಿಗೆ) ಯುದ್ಧದ ತೀಟೆ ಬಹಳ. ಇಂದವನ ಸೊಲ್ಲಡಗಿಸುವೆ. ಆನರ್ತವಾಸಿಗಳೇ, ನಿಜ ಹೇಳಿ, ಅವನೆಲ್ಲಿರುವನು ? ಅವನಿದ್ದಲ್ಲಿಗೆ ಹೋಗುವೆನು. ಕಂಸ ಕೇಶಿಗಳನ್ನು ವಧೆ ಮಾಡಿದವನನ್ನು ನಾನು ಕೊಲ್ಲುವೆನು. ಅವನನ್ನು ಕೊಲ್ಲದೆ ಹಿಂದಿರುಗೆನೆಂದು ನನ್ನ ಆಯುಧಗಳನ್ನು ಸ್ಪರ್ಶಿಸಿ ಆಣೆಯಿಟ್ಟು ಹೇಳುತ್ತೇನೆ.'

+ ಈ ಆಣೆಯಲ್ಲಿ ಸತ್ಯ ಹಾಗೂ ಶಸ್ತ್ರಾಸ್ತ್ರಗಳ ಉಲ್ಲೇಖ ಮುಖ್ಯ.

## ೨೯. ಶಿಖಂಡಿ — ಭೀಷ್ಮ/೧೦೮

ಶಿಖಂಡಿಯು ಭೀಷ್ಮನ ಎದೆಗೆ ಮೂರು ಬಾಣಗಳನ್ನೆಸೆದು ಅವನನ್ನು ಗಾಯಗೊಳಿಸಿದನು. ಆಗ ಭೀಷ್ಮನು ಕೆರಳಿ ಶಿಖಂಡಿಗೆ, 'ನಾನು ನಿನ್ನೊಡನೆ ಕಾದಾಡಲಾರೆ. ನೀನು ಬೇಕಿದ್ದರೆ ನನ್ನೊಂದಿಗೆ ಹೋರಾಡು, ಬೇಡವಾಗಿದ್ದರೆ ಬಿಡು. ನೀನಂತೂ ಶಿಖಂಡಿಯಾಗಿರದೆ ಶಿಖಂಡಿನಿಯಾಗಿರುವೆ. ನೀನೊಂದು ಹೆಣ್ಣು! ನಾನು ಹೆಣ್ಣಿನ ಮೇಲೆ ಆಯುಧವನ್ನು ಎತ್ತಲಾರೆ' ಎಂದನು. ಭೀಷ್ಮನ ಮಾತು ಶಿಖಂಡಿಯನ್ನು ಇರಿಯಿತು. ಅವನು ಕೆರಳಿ ಕೆಂಡದಂತಾಗಿ ಭೀಷ್ಮನಿಗೆ ಹೀಗೆಂದನು—

ಪಾಂಡವಾನಾಂ ಪ್ರಿಯಂ ಕುರ್ವನ್ನಾತ್ಮನಶ್ಚ ನರೋತ್ತಮ ।
ಅದ್ಯ ತ್ವಾಂ ಶೋಧಯಿಷ್ಯಾಮಿ ರಣೇ ಪುರುಷಸತ್ತಮ ॥ ೪೭ ॥

ಧ್ರುವಂ ಚ ತ್ವಾಂ ಹನಿಷ್ಯಾಮಿ ಶತೇ ಸತ್ಯೇನ ತೇಽಗ್ರತಃ ।
ಏತಚ್ಛ್ರುತ್ವಾ ಚ ಮದ್ವಾಕ್ಯಂ ಯತ್ ಕೃತ್ಯಂ ತತ್ ಸಮಾಚರ ॥ ೪೮ ॥

ಕಾಮಮಭ್ಯಸ ವಾ ಮಾ ವಾ ನ ಮೇ ಜೀವನ್ ಪ್ರಮೋಕ್ಷ್ಯಸೇ ।
ಸುದೃಷ್ಟಃ ಕ್ರಿಯತಾಂ ಭೀಷ್ಮ ಲೋಕೋಽಯಂ ಸಮಿತಿಂಜಯ ॥

ಎಲೈ ನರೋತ್ತಮನೇ! ನಾನಿಂದು ನನ್ನ ಹಾಗೂ ಪಾಂಡವರ ಸಂತೋಷಕ್ಕಾಗಿ ನಿನ್ನೊಡನೆ ಹೋರಾಡಲಿರುವೆ. ನಾನಿಂದು ನಿನ್ನನ್ನು ಕೊಂದೇಬಿಡುವೆನೆಂದು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ನನ್ನ ಹೇಳಿಕೆಯನ್ನು ಆಲಿಸಿ ನಿನಗೆ ಸರಿಕಂಡಂತೆ ಮಾಡು. ನೀನು ನನ್ನನ್ನು ಬೇಕಿದ್ದರೆ ಕೊಲ್ಲು, ಬೇಡವಾದರೆ ಬಿಡು. ನಾನಂತೂ ಇಂದು ನಿನ್ನನ್ನು ಜೀವದೊಂದಿಗೆ ಉಳಿಯಲು ಬಿಡಲಾರೆ. ಎಲೈ ಭೀಷ್ಮನೇ, ಕೊನೆಯ ಬಾರಿಗೆ ಕಣ್ಣುಬಿಟ್ಟು ಈ ಜಗವನ್ನೊಂದು ಬಾರಿಗೆ ನೋಡಿಕೋ.

+ ಈ ಆಣೆಯಲ್ಲಿ ಸತ್ಯದ ಉಲ್ಲೇಖವಿದೆ.

## ೩೦. ಶುನಃಸಖ — ಅನುಶಾಸನ/೯೩

### ೧

ಮೊದಲ ಸಂದರ್ಭ : ನೋಡಿ : ಆಣೆ—ಋಷಿಗಳ ಆಣೆಗಳು.

ಅಧ್ವರ್ಯವೇ ದುಹಿತರಂ ವಾ ದದಾತು ಛಂದೋಗೇ ವಾ ಚರಿತಬ್ರಹ್ಮಚರ್ಯೇ ।
ಅಥರ್ವಣಂ ವೇದಮಧೀತ್ಯ ವಿಪ್ರಃ ಸ್ನಾಯೀತ ವಾ ಯೋ ಹರತೇ ಬಿಸಾನಿ ॥ ೧೩೨ ॥

ಕಮಲದ ದೇಟುಗಳನ್ನು ಕದ್ದಿರಬಹುದಾದವನು ಸಾಮವೇದವನ್ನು ಅಧ್ಯಯನ ಮಾಡುವವನೂ, ಬ್ರಹ್ಮಚರ್ಯ ವ್ರತವನ್ನು (ಸರಿಯಾಗಿ) ಪಾಲಿಸುವವನೂ ಆದ ಅಧ್ವರ್ಯುವಿಗೆ ಕನ್ಯಾದಾನವನ್ನು ಮಾಡತಕ್ಕದ್ದು. ಇಲ್ಲದಿದ್ದರೆ ಅವನು ಅಥರ್ವ ವೇದವನ್ನು ಅಧ್ಯಯನ ಮಾಡಿ ಆದಷ್ಟು ಶೀಘ್ರವಾಗಿ ಸ್ನಾತಕನಾದರೂ ಆಗತಕ್ಕದ್ದು.

+ ಈ ಆಣೆಯನ್ನು ಕೇಳುತ್ತಲೇ ಶುನಃಸಖನೇ ಕಮಲದ ದೇಟುಗಳನ್ನು ಕದ್ದಿರುವ ನೆಂಬುದು ಋಷಿಗಳಿಗೆಲ್ಲ ಮನದಟ್ಟಾಯಿತು. ಅವರು ಹಾಗೆಂದು ಆಡಿಯೂ ತೋರಿಸಿ ದರು. ಶುನಃಸಖನೂ ಕೂಡ ತಾನು ಕಮಲದ ದೇಟುಗಳನ್ನು ಕದ್ದಿರುವುದಾಗಿ ಒಪ್ಪಿ ಕೊಂಡನು. ಋಷಿಗಳನ್ನು ಪರೀಕ್ಷಿಸಲು ಹಾಗೂ ರಕ್ಷಿಸಲೆಂದು ತಾನು ಹಾಗೆ ಮಾಡಿರುವು ದಾಗಿ ಹೇಳಿದನು. ಯಾತುಧಾನಿಯು ಅವರನ್ನು ಕೊಲ್ಲಬಯಸಿದ್ದಳು. ಈ ಯೋಜನೆಯ ರೂಪುರೇಷೆಗಳನ್ನು ಸಿದ್ಧಪಡಿಸಿದವನು ವೃಷದರ್ಭನು. ನಾನು ಇಂದ್ರನಾದುದರಿಂದ ಇದೆಲ್ಲವನ್ನು ಕಂಡುಕೊಂಡೆ. ಹೀಗಾಗಿಯೇ ಇಲ್ಲಿ ಹಾಜರಾದೆನೆಂದು ಹೇಳಿದನು.

**ಅನುಶಾಸನ/೯೪**

೨

ಮೊದಲ ಸಂದರ್ಭ : **ನೋಡಿ :** ಶಾಪ—ರಾಜರುಗಳ ಆಣೆಗಳು.

> ಅಗ್ನಿಹೋತ್ರಮನಾದೃತ್ಯ ಸ ಸುಖಂ ಸ್ವಪತು ದ್ವಿಜಃ ।
> ಪರಿವ್ರಾಟ್ ಕಾಮವೃತ್ತೋಽಸ್ತು ಯಸ್ತೇ ಹರತಿ ಪುಷ್ಕರಮ್ ॥ ೪೦ ॥

ಯಾವ ಬ್ರಾಹ್ಮಣನು ಕಮಲಪುಷ್ಪವನ್ನು ಕದ್ದಿರುವನೋ ಆವನಿಂದ ಅಗ್ನಿಹೋತ್ರ ಅಲಕ್ಷ್ಯಕ್ಕೀಡಾಗಿಯೂ ಕೂಡ ಅವನಿಗೆ ಸುಖದ ನಿದ್ರೆ ಬಂದೀತು. ಅವನು ಸನ್ಯಸ್ತನಾಗಿ ದ್ದರೂ ಅವನ ವರ್ತನೆ ಮನಬಂದಂತೆ ಇದ್ದೀತು.

## ೩೧. ಶ್ರೀಕೃಷ್ಣ

**ದ್ರೋಣ/೧೮೦**

ಘಟೋತ್ಕಚನ ಸಾವಿನಿಂದಾಗಿ ಪಾಂಡವರೆಲ್ಲರು ಬಲು ಶೋಕಮಗ್ನರಾಗಿದ್ದ ವೇಳೆಗೆ ಶ್ರೀಕೃಷ್ಣ ಹರುಷ ತುಂಬಿ ನೆಗೆದಾಡಹತ್ತಿದ್ದನು. ಇದನ್ನು ಕಂಡು ಅರ್ಜುನನಿಗೆ ಬೆರ ಗಾಯಿತು. ಅವನು ಕೃಷ್ಣನಿಗೆ ಅವನ ನಡತೆಯನ್ನು ವಿವರಿಸುವಂತೆ ಹೇಳಿದನು. ಕರ್ಣನ ಸಾಮರ್ಥ್ಯವೆಲ್ಲ ಘಟೋತ್ಕಚನನ್ನು ಕೊಲ್ಲುವಲ್ಲಿಯೇ ಖರ್ಚಾಗಿತ್ತು. ಹೀಗಾಗಿ ಇನ್ನು ಕರ್ಣನನ್ನು ಕೊಲ್ಲುವಲ್ಲಿ ಯಾವ ಅಡ್ಡಿ ಆತಂಕಗಳೂ ಉಳಿದಿಲ್ಲವೆಂಬುದನ್ನು ಶ್ರೀಕೃಷ್ಣನು ಕಂಡಿದ್ದನು. ಅವನು ನಿಶ್ಚಿಂತನಾಗಿದ್ದನು. ಅದರಿಂದಾಗಿ ಅವನಿಗೆ ಸಂತೋಷವೂ ಆಗಿತ್ತು. ತನ್ನ ಕವಚಕುಂಡಲಗಳು ಹಾಗೂ ತೋಳುಬಲದಿಂದಾಗಿ ಕರ್ಣ ಅವಧ್ಯನಾಗಿದ್ದನೆಂಬು ದನ್ನು ಶ್ರೀಕೃಷ್ಣ ಅರಿತಿದ್ದನು. ಅದೃಷ್ಟದಿಂದಾಗಿ ಅವನ ಕವಚಕುಂಡಲಗಳನ್ನು ಕಸಿದು ಕೊಳ್ಳಲಾಗಿತ್ತು. ಇದ್ದ ಬಲವೆಲ್ಲ ಈ ರೀತಿ ನಾಶಹೊಂದಿತ್ತು. ಅವನು ಇನ್ನು ಅರ್ಜುನನ ಮೇಲೆ ತನ್ನ ಬಲವನ್ನು ಬಳಸುವಂತಿರಲಿಲ್ಲ. ಅವನಲ್ಲಿದ್ದ ಸಾಮರ್ಥ್ಯವನ್ನು ಒಂದು ಸಲಕ್ಕೆ ಮಾತ್ರ ಬಳಸಬಹುದಿತ್ತು. ಈ ಬಗೆಯಾಗಿ ಅರ್ಜುನನ ಮೇಲಿನ ಸಂಕಟ ತಪ್ಪಿದ್ದಕ್ಕಾಗಿ ಶ್ರೀಕೃಷ್ಣನಿಗೆ ಸಂತಸವಾಗಿತ್ತು. ಅವನು ಅರ್ಜುನನಿಗೆ ಹೀಗೆಂದು ಹೇಳಿದನು—

ಏವಂಗತೋಽಪಿ ಶಕ್ತ್ಯೋಽಯಂ ಹಂತುಂ ನಾನ್ಯೇನ ಕೇನಚಿತ್ ।
ಋತೇ ತ್ವಾಂ ಪುರುಷವ್ಯಾಘ್ರ ಶಪೇ ಸತ್ಯೇನ ಚಾನಘ ॥ ೨೩ ॥

ಎಲೈ ಗಂಡುಹುಲಿಯೇ (ಅರ್ಜುನನೇ)! ಇಂದು ಕರ್ಣ ಕವಚಹೀನನು, ಶಕ್ತಿ ಹೀನನು ಆಗಿದ್ದರೂ ನೀನಲ್ಲವೆ ಬೇರಿನ್ನಾರೂ ಅವನನ್ನು ಕೊಲ್ಲಲು ಅಸಮರ್ಥರು—ನಾನು ಈ ಮಾತನ್ನು ಸತ್ಯದ ಮೇಲೆ ಆಣೆಮಾಡಿ ಹೇಳುತ್ತಲಿದ್ದೇವೆ.

+ ಈ ಆಣೆಯಲ್ಲಿ ಸತ್ಯದ ಉಲ್ಲೇಖವಿದೆ.

ಕರ್ಣ/೭೩

೨

ಶ್ರೀಕೃಷ್ಣನು ಯುದ್ಧಕ್ಕೆ ಸಿದ್ಧನಾಗಿ ನಿಂತಿದ್ದ ಅರ್ಜುನನನ್ನು ಕರ್ಣವಧೆಯ ಗುರಿಯನ್ನು ತಲುಪುವಂತೆ ಹುರಿದುಂಬಿಸುತ್ತಲಿದ್ದಾನೆ. ಕೌರವರ ದುರುಳ ಲೀಲೆಗಳಿಗೆಲ್ಲ ಕರ್ಣನೇ ಪ್ರೇರಣಾಸ್ಥಾನವೆಂದು ಅರ್ಜುನನಿಗೆ ಮತ್ತೆ ಮತ್ತೆ ಹೇಳಿ ಅವನು ಅದನ್ನು ಮನಗಾಣುವಂತೆ ಮಾಡಹತ್ತಿದ್ದಾನೆ. ಅವನು ಸಾವಿನ ದವಡೆಯಲ್ಲಿದ್ದ ಅಭಿಮನ್ಯುವನ್ನು ಕಂಡಿದ್ದನು. ಅವನ ಹೇಳಿಕೆ—

ತನ್ಮೇ ದಹತಿ ಗಾತ್ರಾಣಿ ಸಖೇ ಸತ್ಯೇನ ತೇ ಶಪೇ ।
ಯತ್ ತತ್ರಾಪಿ ಚ ದುಷ್ಟಾತ್ಮಾ ಕರ್ಣೋಽಭ್ಯದ್ರುಹ್ಯತ ಪ್ರಭೋ ॥ ೭೬ ॥

(ದುರ್ಯೋಧನನ ಆರು ಜನ ಮಹಾರಥಿಗಳು ಅವನನ್ನು ಕೊಂದ) ಸನ್ನಿವೇಶ ನನ್ನ ಗಾತ್ರಗಳನ್ನೆಲ್ಲ ಸುಡಹತ್ತಿದೆ. ದುಷ್ಟಾತ್ಮನಾದ ಕರ್ಣನೇ (ಮುಖ್ಯವಾಗಿ) ದ್ರೋಹಿಯಾಗಿದ್ದನು. ಸತ್ಯದ ಮೇಲೆ ಆಣೆಯಿಟ್ಟು ಈ ಮಾತನ್ನು ನಿನಗೆ ಹೇಳುತ್ತಲಿದ್ದೇನೆ.

+ ಇಲ್ಲಿ ಸತ್ಯದ ಉಲ್ಲೇಖವು ಬಲು ಖಚಿತವಾದದ್ದು.

## ೩೨. ಸತ್ಯವಾನ ವನ/೨೯೨

ತಾನು ಯಮನ ಪಾಶದಿಂದ ಬಿಡುಗಡೆ ಹೊಂದಿದೆನೆಂಬುದು ಸತ್ಯವಾನನಿಗೆ ಅರ್ಥವಾಗಿರಲಿಲ್ಲ. ತಾನೊಂದು ಬಲುದೀರ್ಘವಾದ ನಿದ್ದೆ ತಿಳಿದೆದ್ದ ಭಾವನೆ ಅವನಲ್ಲಿತ್ತು. ತಾನು ಮನೆಗೆ ಹಿಂತಿರುಗಲು ತಡವಾದ್ದರಿಂದ ತಾಯಿತಂದೆಗಳು ಚಿಂತೆಯಲ್ಲಿ ಮುಳುಗಿರಬಹುದೆಂದುಕೊಂಡನು. ದಾರಿ ದುರ್ಗಮವಾಗಿದ್ದು, ಕಗ್ಗತ್ತಲೆಯು ಇರುಳಿದ್ದು ಕೂಡ ಅವನು ಮನೆಗೆ ಹಿಂತಿರುಗುವ ಬಗೆಗೆ ಸಾವಿತ್ರಿಯನ್ನು ಬಲವಂತಪಡಿಸಹತ್ತಿದನು. ಅವನ ಹೆತ್ತವರು ಕುರುಡರಾಗಿದ್ದರು. ಅವರು ಅವನನ್ನೇ ಅವಲಂಬಿಸಿದ್ದರು. ಅವನನ್ನಗಲಿ ಅವರಾಗಲಿ, ಅವರನ್ನಗಲಿ ಅವನಾಗಲಿ ಬದುಕು ಸಾಗಿಸುವುದು ಅಸಾಧ್ಯವೆನ್ನಿಸಿತ್ತು. ಅವನು ತನ್ನ ಈ ಬವಣೆಯನ್ನು ಸಾವಿತ್ರಿಯೆದುರು ತೋಡಿಕೊಂಡನು. ಅವನಂದ :

ಪುರಾ ಮಾತುಃ ಪಿತುರ್ವಾಪಿ ಯದಿ ಪಶ್ಯಾಮಿ ವಿಪ್ರಿಯಮ್ ।
ನ ಜೀವಿಷ್ಯೇ ವರಾರೋಹೇ ಸತ್ಯೇನಾತ್ಮಾನಮಾಲಭೇ ॥ ೧೦೧ ॥
ಯದಿ ಧರ್ಮೇ ಚ ತೇ ಬುದ್ಧಿರ್ಮಾಂ ಚೇಜ್ಜೀವಂತಮಿಚ್ಛಸಿ ।
ಮಮ ಪ್ರಿಯಂ ವಾ ಕರ್ತವ್ಯಂ ಗಚ್ಛಾವಾಶ್ರಮಮಂತಿಕಾತ್ ॥ ೧೦೨ ॥

'ಎಲೈ ವರಾರೋಹನೇ! ನಾನು ನನ್ನ ತಾಯಿತಂದೆಗಳಿಗೆ ಆಗಬಾರದ ಅಪ್ರಿಯ ವೇನಾದರೂ ಆದುದನ್ನು ಕಂಡೆನಾದರೆ ಬದುಕಿ ಉಳಿಯಲಾರೆ. ನಾನೀ ಮಾತನ್ನು ನನ್ನ ದೇಹವನ್ನು ಸ್ಪರ್ಶಿಸಿ, ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ. ನಾನು ಜೀವದಿಂದಿರು ವುದನ್ನು ನಿನಗೆ ಕಾಣಬೇಕೆಂದಿದ್ದರೆ, ನೀನು ಧರ್ಮದಲ್ಲಿ ಶ್ರದ್ಧೆಯುಳ್ಳವಳಾಗಿದ್ದರೆ ಹಾಗೂ ನನಗೆ ಪ್ರಿಯವೆನ್ನಿಸುವಂತೆ ನಡೆದುಕೊಳ್ಳಬೇಕೆಂದು ನೀನು ಬಗೆದಿದ್ದರೆ ನಾವು ಈಗಿಂದೀಗಲೇ ಆಶ್ರಮಕ್ಕೆ ಹಿಂತಿರುಗತಕ್ಕದ್ದು.'

+ ಈ ಆಣೆಯಲ್ಲಿ ದೇಹಸ್ಪರ್ಶ ಹಾಗೂ ಸತ್ಯದ ಉಲ್ಲೇಖವಿದೆ.

## ೩೩. ಆರು ಜನರ (ಋತುಗಳ) ಆಣೆ ಅನುಶಾಸನ/೪೨

ಮೊದಲ ಸಂದರ್ಭ : ನೋಡಿ : ಆಣೆ—ಮಾನವ ದಂಪತಿಗಳು,

ಕುರ್ವತಃ ಶಪಥಂ ತೇನ ಯಃ ಕೃತೋ ಮಿಥುನೇನ ತು ।
ವಿಪುಲಂ ವೈ ಸಮುದ್ದಿಶ್ಯ ತೇಽಪಿ ವಾಕ್ಯಮಥಾಬ್ರುವನ್ ॥ ೨೬ ॥
ಲೋಭಮಾಸ್ಥಾಯ ಯೋಽಸ್ಮಾಕಂ ವಿಷಮಂ ಕರ್ತುಮುತ್ಸಹೇತ್ ।
ವಿಪುಲಸ್ಯ ಪರೇ ಲೋಕೇ ಯಾ ಗತಿಸ್ತಾಮವಾಪ್ನುಯಾತ್ ॥ ೨೭ ॥

ಅವರು ಸಂತಸದಿಂದ ಇದ್ದರು. ಮಾನವ ದಂಪತಿಗಳ ಹಾಗೆ (ವಿಪುಲನನ್ನು ಉಲ್ಲೇಖಿಸಿ) ಆಣೆಮಾಡಿದರು. ಅವರು, 'ನಮ್ಮಲ್ಲಿಯ ಯಾರಾದರೂ ಆಸೆಬುರುಕತನದಿಂದಾಗಿ ಕಪಟ ಮಾಡಿದರಾದರೆ ಪರಲೋಕದಲ್ಲಿ ವಿಪುಲನಿಗೆ ಬಂದೊದಗುವ ಅವಸ್ಥೆಯೇ ಅವರಿಗೂ ಬರಲಿದೆ' ಎಂದರು.

ಈ ಆಣೆಯನ್ನು ಕೇಳಿ ವಿಪುಲನಿಗೆ ಬಲು ಕೆಡಕೆನಿಸಿತು.

+ ಇದೊಂದು ಆಣೆಯಾಗಿದೆ. ಆದರೆ ೪೨/೨೯ರಲ್ಲಿ 'ಶಾಪಂ ಶ್ರುತ್ವಾ' ಎಂಬ ಉಲ್ಲೇಖ ವಿದೆ. ಈ ಸಂದರ್ಭದಲ್ಲೂ ಅದು ಇದೆ.

## ೩೪. ಸಂಶಪ್ತಕ ಕರ್ಣ/೪೧

ಅರ್ಜುನನು ಕೌರವಸೇನೆಯನ್ನು ಮಣ್ಣುಮುಕ್ಕಿಸಿದುದನ್ನು ಕಂಡು ಸಂಶಪ್ತಕರು ಬಲು ಕೆರಳಿದರು. ಮತ್ತೆ,

ಕೃತ್ವಾ ಸಂಶಪ್ತಕಾ ಘೋರಂ ಶಪಥಂ ಪಾರಲೌಕಿಕಮ್ ॥ ೨ ॥

ಅವರು ಪರಲೋಕವನ್ನು ಕುರಿತು ಆಣೆಮಾಡಿ ನಾಲ್ದೆಸೆಗಳಿಂದಲೂ ಅರ್ಜುನನನ್ನು ಮುತ್ತಿದರು.

## ೩೫. ಸಾತ್ಯಕಿ ಮೌಸಲ/೩

ಶ್ರೀಕೃಷ್ಣನ ಅಪ್ಪಣೆಯ ಮೇರೆಗೆ ಯಾದವರು ತೀರ್ಥಯಾತ್ರೆಗೆಂದು ಕಡಲಿನ ದಿಕ್ಕಿನಲ್ಲಿ ಹೊರಟರು. ಹೆಂಗಳೆಯರೂ ಅವರೊಂದಿಗಿದ್ದರು. ತಿಂಡಿ, ಊಟ, ಪಾನೀಯ, ಮದ್ಯ ಮೊದಲಾದವುಗಳ ಸರಬರಾಜಿತ್ತು. ಕೃತವರ್ಮ, ಬಲರಾಮ, ಸಾತ್ಯಕಿ ಪುತ್ರ ಬಭ್ರು ಮೊದಲಾದವರೆಲ್ಲ ಮದ್ಯವನ್ನು ಸೇವಿಸುತ್ತಿದ್ದರು. ಮದ್ಯಸೇವನೆಯಿಂದಾಗಿ ಸಾತ್ಯಕಿಗೆ ಮೈಮೇಲೆ ಪರಿವೆಯಿರಲಿಲ್ಲ. ಮಲಗಿ ನಿದ್ರೆಹೋಗಿದ್ದ ದ್ರೌಪದಿಯ ಗಂಡುಮಕ್ಕಳನ್ನು ಕೊಂದದ್ದಕ್ಕಾಗಿ ಅವನು ಕೃತವರ್ಮನಿಗೆ ಅವಮಾನದ ಮಾತುಗಳನ್ನಾಡಿದನು. ಆಗ ಕೃತವರ್ಮನು ಉಪವಾಸಕ್ಕೆ ಕುಳಿತಿದ್ದ ಭೂರಿಶ್ರವನನ್ನು ಕೊಂದದ್ದಕ್ಕಾಗಿ ಸಾತ್ಯಕಿಯನ್ನು ಹೀಯಾಳಿಸಿದನು. ಶ್ರೀಕೃಷ್ಣನಿಗೆ ಕೃತವರ್ಮನ ಈ ಮಾತು ಇಷ್ಟವಾಗಲಿಲ್ಲ. ಸಾತ್ಯಕಿಯು ಶ್ರೀಕೃಷ್ಣನ ಬಳಿಯಿದ್ದ ಸ್ಯಮಂತಕಮಣಿಯ ಕಥೆಯನ್ನು ಅವನಿಗೆ ಹೇಳಿದನು. ಸತ್ಯಭಾಮೆಯೂ ಶ್ರೀಕೃಷ್ಣನ ಕೋಪ ಉಕ್ಕೇರುವಂತೆ ಮಾಡಿದಳು. ಹೀಗಾಗಿ ಸಾತ್ಯಕಿ ಕೆರಳಿ ಕೆಂಡವಾಗಿ ಸತ್ಯಭಾಮೆಗೆ ಹೀಗೆಂದನು—

ಪಂಚಾನಾಂ ದ್ರೌಪದೇಯಾನಾಂ ಧೃಷ್ಟದ್ಯುಮ್ನಶಿಖಂಡಿನೋಃ ॥ ೨೫ ॥

ಏಷ ಗಚ್ಛಾಮಿ ಪದವೀಂ ಸತ್ಯೇನ ಚ ತಥಾ ಶಪೇ ।
ಸೌಪ್ತಿಕೇ ಯೇ ಚ ನಿಹತಾಃ ಸುಪ್ತಾ ಯೇನ ದುರಾತ್ಮನಾ ॥ ೨೬ ॥

ದ್ರೋಣಪುತ್ರಸಹಾಯೇನ ಪಾಪೇನ ಕೃತವರ್ಮಣಾ ।
ಸಮಾಪ್ತಮಾಯುರಸ್ಯಾದ್ಯ ಯಶಶ್ಚೈವ ಸುಮಧ್ಯಮೇ ॥ ೨೭ ॥

ಇತ್ಯೇವಮುಕ್ತ್ವಾ ಖಡ್ಗೇನ ಕೇಶವಸ್ಯ ಸಮೀಪತಃ ।
ಅಭಿದ್ರುತ್ಯ ಶಿರಃ ಕ್ರುದ್ಧಶ್ಚಿಚ್ಛೇದ ಕೃತವರ್ಮಣಃ ॥ ೨೮ ॥

'ದ್ರೌಪದಿಯ ಐದು ಜನ ಮಕ್ಕಳು, ಧೃಷ್ಟದ್ಯುಮ್ನ, ಶಿಖಂಡಿಯರ ದಾರಿಯನ್ನೇ ನಾನೂ ಅನುಸರಿಸುವೆ. ಪಾಪಿಯಾದ ಕೃತವರ್ಮನು ನಿದ್ರೆಹೋದ ಪಾಂಡವವೀರರನ್ನು ಕೊಲ್ಲಲು ದ್ರೋಣನ ಮಗ ಅಶ್ವತ್ಥಾಮನಿಗೆ ನೆರವಾದನು. ನಾನಿಂದು ಅವನ ಆಯುಸ್ಸು ಹಾಗೂ ಕೀರ್ತಿಗಳಿಗೆ ಮಣ್ಣುಕೊಡಲಿದ್ದೇನೆ—ಎಂದು ಸತ್ಯದ ಮೇಲೆ ಆಣೆಯಿಟ್ಟು ಹೇಳುತ್ತೇನೆ' ಎಂದು ನುಡಿದವನೇ ಸಾತ್ಯಕಿಯು ಶ್ರೀಕೃಷ್ಣನ ಬಳಿಯಿಂದೆದ್ದು ಕತ್ತಿಯಿಂದ ಕೃತವರ್ಮನ ರುಂಡವನ್ನು ಮುಂಡದಿಂದ ಬೇರ್ಪಡಿಸಿಬಿಟ್ಟನು.

+ ಈ ಶಾಪದಲ್ಲಿ ಸತ್ಯದ ಉಲ್ಲೇಖವಿದೆ.

## ೧. ಅಭಿಮನ್ಯು ದ್ರೋ೩೫/೩೫

ದ್ರೋಣನು ಚಕ್ರವ್ಯೂಹವನ್ನು ಕಟ್ಟಿದನು. ಅರ್ಜುನನಿಲ್ಲದೆ ಪಾಂಡವರು ಅದನ್ನು ಭೇದಿಸಲು ಅಸಮರ್ಥರಾಗಿದ್ದರು. ಭೀಮನು ಹಲವು ಸಾವಿರದ ಸೇನೆಯೊಂದಿಗೆ ಕೌರವರ ವ್ಯೂಹಬದ್ಧವಾದ ಸೇನೆಯ ಮೇಲೆ ಏರಿಹೋದನು. ಆದರೆ ದ್ರೋಣನ ಬಾಣಗಳ ಮಳೆಗರೆತವನ್ನು ಎದುರಿಸಲಾಗದೆ ಪಾಂಡವರು ಹಿಮ್ಮೆಟ್ಟುವಂತಾಯಿತು. ಯುಧಿಷ್ಠಿರ ತುಂಬ ಚಿಂತೆಗೊಳಗಾದನು. ಚಕ್ರವ್ಯೂಹವನ್ನು ಭೇದಿಸುವ ಸಾಮರ್ಥ್ಯ ಉಳ್ಳವರೆಂದರೆ ಅರ್ಜುನ, ಶ್ರೀಕೃಷ್ಣ, ಪ್ರದ್ಯುಮ್ನ ಹಾಗೂ ಅಭಿಮನ್ಯು ಮಾತ್ರ. ಬೇರಾರಲ್ಲೂ ಈ ಸಾಮರ್ಥ್ಯವಿಲ್ಲದ್ದರಿಂದಾಗಿ ಯುಧಿಷ್ಠಿರನು ಈ ಕೆಲಸವನ್ನು ಅಭಿಮನ್ಯುವಿಗೆ ಒಪ್ಪಿಸಿದನು. ಅಭಿಮನ್ಯುವಿಗೆ ಬಲು ಸಂತೋಷವಾಯಿತು. ಕೌರವರ ಸೇನೆಗೆ ಮಣ್ಣುಮುಕ್ಕಿಸಿ ತಾನು ತನ್ನ ತಾಯಿ-ತಂದೆ ಹಾಗೂ ಶ್ರೀಕೃಷ್ಣನನ್ನು ಸಂತೋಷಪಡಿಸಬೇಕೆಂದು ತುಂಬ ದುರ್ದಮ್ಯವಾದ ಬಯಕೆಯನ್ನು ಹೊತ್ತಿದ್ದನು, ಅವನು ಯುಧಿಷ್ಠಿರನ ಅಪ್ಪಣೆಯನ್ನು ಪ್ರಮಾಣವೆಂದು ಬಗೆದು ಅವನಿಗೆ ಹೀಗೆಂದನು—

ನಾಹಂ ಪಾರ್ಥೇನ ಜಾತಃ ಸ್ಯಾಂ ನ ಜಾತಃ ಸುಭದ್ರಯಾ ।
ಯದಿ ಮೇ ಸಂಯುಗೇ ಕಶ್ಚಿಜ್ಜೀವಿತೋ ನಾದ್ಯ ಮುಚ್ಯತೇ ॥ ೨೭ ॥

ಯದಿ ಚೈಕರಥೇನಾಹಂ ಸಮಗ್ರಂ ಕ್ಷತ್ರಮಂಡಲಮ್ ।
ನ ಕರೋಮ್ಯಷ್ಟಧಾ ಯುದ್ಧೇ ನ ಭವಾಮ್ಯರ್ಜುನಾತ್ಮಜಃ ॥ ೨೮ ॥

ಈ ದಿನ ಯುದ್ಧದಲ್ಲಿ ಯಾವನಾದರೂ (ಕೌರವ) ಹಗೆ ನನ್ನಿಂದ ಜೀವದೊಂದಿಗೆ ಪಾರಾದರೆ ನಾನು ಅರ್ಜುನನ ಮಗನಲ್ಲ, ಸುಭದ್ರೆಯ ಮಗನೂ ಅಲ್ಲ (ಎಂದು ತಿಳಿಯಿರಿ). ನಾನು ಕೇವಲ ಒಂದು ರಥದಿಂದಲೇ ಶತ್ರುಗಳ ಸೇನೆಯನ್ನು ಎಂಟು ಭಾಗಗಳಲ್ಲಿ ನಾಮಶೇಷ ಮಾಡದಿದ್ದರೆ ನಾನು (ನನ್ನನ್ನು) ಅರ್ಜುನನ ಮಗನೆಂದುಕೊಳ್ಳಲಾರೆ.

+ ಈ ಪಣದಲ್ಲಿ ಸತ್ಯಕ್ರಿಯೆಯೂ ಇದೆ.

## ೨. ಅರ್ಜುನ ಸಭಾ/೭೭

### ಕರ್ಣವಧೆ

ಜೂಜಾಟದಲ್ಲಿ ತಮಗೆ ಸೋಲೊದಗಲು ಪಾಂಡವರು ವನವಾಸಕ್ಕೆ ಹೊರಟರು. ತೊಗಲು ಬಟ್ಟೆಗಳನ್ನುಟ್ಟು ಉತ್ತರೀಯಗಳನ್ನು ತೊಟ್ಟರು. ಅವರನ್ನು ಆ ಬಟ್ಟೆಗಳಲ್ಲಿ ಕಂಡು ದುಶ್ಶಾಸನನಿಗೆ ರಕ್ಕಸನಂತೆ ಸಂತಸವಾಯಿತು. ಅವನು ಪಾಂಡವರನ್ನು ಬಾಯಿಗೆ ಬಂದಂತೆ ಹೀಯಾಳಿಸಹತ್ತಿದನು. ಭೀಮನಿಗೆ ಅವನ ಈ ಮಾತುಗಳನ್ನು ಸಹಿಸಲಾಗಲಿಲ್ಲ. ಹೀಗಾಗಿ

ಅವನು ದುಃಶ್ಶಾಸನನಿಗೆ ಅಂಥವೇ ಸುಡುಸುಡುವ ಮಾತುಗಳನ್ನು ಆಡಿದನು, ಮಾರುತ್ತರಗಳನ್ನು ನೀಡಿದನು. ಪಾಂಡವರ ಬದಿಯ ಯಾವ ವೀರನು ಕೌರವರ ಬದಿಯ ಯಾವನನ್ನು ಕೊಲ್ಲಬಹುದೆಂಬುದನ್ನು ಖಡಾಖಂಡಿತವಾಗಿ ಹೇಳಿದನು. ದುಃಶ್ಶಾಸನನ ಮಾತಿನಿಂದ ಅರ್ಜುನನಿಗೂ ಎಲ್ಲಿಲ್ಲದ ಸಿಟ್ಟು ಬಂದಿತ್ತು. ಆದರೂ ಅವನು ಭೀಮನಿಗೆ ಅವನ ಕೋಪವನ್ನು ಹಿಡಿತದಲ್ಲಿ ಇಟ್ಟುಕೊಳ್ಳಲು ಹೇಳಿದನು. ಇಂದಿನಿಂದ ಹದಿನಾಲ್ಕನೆಯ ವರ್ಷದಲ್ಲಿ ನಡೆಯಲಿರುವುದನ್ನು ಕುರಿತಾದ ಮಾತು ಇಂದೇ ಏಕೆ ? ಅವನು ಈ ಮುಂಚಿನಂತೆ ಪಣ ತೊಟ್ಟು ಭೀಮನಿಗೆ ಆಶ್ವಾಸನೆಯನ್ನು ನೀಡಿದನು.

ಅಸೂಯಿತಾರಂ ದ್ರಷ್ಟಾರಂ ಪ್ರವಕ್ತಾರಂ ವಿಕತ್ಥನಮ್ ।
ಭೀಮಸೇನನಿಯೋಗಾತ್ ತೇ ಹಂತಾಹಂ ಕರ್ಣಮಾಹವೇ ॥ ೩೨ ॥

ಅರ್ಜುನಃ ಪ್ರತಿಜಾನೀತೇ ಭೀಮಸ್ಯ ಪ್ರಿಯಕಾಮ್ಯಯಾ ।
ಕರ್ಣಂ ಕರ್ಣಾನುಗಾಂಶ್ಚೈವ ರಣೇ ಹಂತಾಸ್ಮಿ ಪತ್ರಿಭಿಃ ॥ ೩೩ ॥

ಯೇ ಚಾನ್ಯೇ ಪ್ರತಿಯೋತ್ಸ್ಯಂತಿ ಬುದ್ಧಿಮೋಹೇನ ಮಾಂ ನೃಪಾಃ ।
ತಾಂಶ್ಚ ಸರ್ವಾನಹಂ ಬಾಣೈರ್ನೇತಾಸ್ಮಿ ಯಮಸಾದನಮ್ ॥ ೩೪ ॥

ಚಲೇದ್ಧಿ ಹಿಮವಾನ್ ಸ್ಥಾನಾನ್ನಿಷ್ಪ್ರಭಃ ಸ್ಯಾದ್ ದಿವಾಕರಃ ।
ಶೈತ್ಯಂ ಸೋಮಾತ್ ಪ್ರಣಶ್ಯೇತ ಮತ್ಸತ್ಯಂ ವಿಚಲೇದ್ ಯದಿ ॥ ೩೫ ॥

ನ ಪ್ರದಾಸ್ಯತಿ ಚೇದ್ ರಾಜ್ಯಮಿತೋ ವರ್ಷೇ ಚತುರ್ದಶೇ ।
ದುರ್ಯೋಧನೋऽಭಿಸತ್ಕೃತ್ಯ ಸತ್ಯಮೇತದ್ ಭವಿಷ್ಯತಿ ॥ ೩೬ ॥

'ಎಲೈ ಭೀಮಸೇನನೇ ! ನಮ್ಮ ಬಗೆಗೆ ಹೊಟ್ಟೆಕಿಚ್ಚಿರುವವನು, ನಮ್ಮ ವಿರುದ್ಧವಾಗಿ (ಅಕಾರಣವಾಗಿ) ಆಹ್ವಾನವನ್ನೀಯುವವನು, ಬೇರೆಯರಲ್ಲಿ ದುರ್ಬುದ್ಧಿಯನ್ನು ಹುಟ್ಟಿಸುವವನು ಅಲ್ಲದೆ ಸುಳ್ಳುದೊಡ್ಡಸ್ತಿಕೆಯನ್ನು ಮೆರೆಯುವ ಈ ಕರ್ಣನನ್ನು ನಿನ್ನ ಅಪ್ಪಣೆಯ ಮೇರೆಗೆ ಕೊಂದುಹಾಕುವೆನು. ಎಲೈ ಭೀಮನೇ, ನಿನಗೆ ಸಂತಸ ಸಿಗಲೆಂದು ಅರ್ಜುನನಾದ ನಾನು ಪಣ ತೊಡುವುದೇನೆಂದರೆ ನಾನು ಯುದ್ಧದಲ್ಲಿ ಕರ್ಣನನ್ನು ಅವನ ಅನುಯಾಯಿಗಳೊಂದಿಗೆ ನನ್ನ ಬಾಣಗಳಿಂದ ಕೊಲ್ಲುವೆನು. (ಯಾರಾದರೂ) ಬುದ್ಧಿಗೆಟ್ಟ ರಾಜರುಗಳು ಅವನ ಬದಿಯನ್ನು ವಹಿಸಿ ಯುದ್ಧದಲ್ಲಿ ನನ್ನನ್ನು ಎದುರಿಸಲು ಬಂದರೆ ಅವರಿಗೂ ಯಮಲೋಕದ ದರ್ಶನವಾದೀತು. (ಒಂದು ವೇಳೆ ತಪ್ಪಿ ಅಚಲವೆನಿಸಿದ ಈ) ಹಿಮಾಲಯ ಪರ್ವತ ಕೂಡ ವಿಚಲಿತವಾಗಬಹುದು, ಸ್ಥಾನಭ್ರಷ್ಟವಾದೀತು, ಸೂರ್ಯನ ತೇಜಸ್ಸನ್ನು ಕಗ್ಗತ್ತಲು ಮುಸುಕೀತು, ಚಂದ್ರನ ಶೀತಲತೆ ಇಲ್ಲವಾದೀತು, ಆದರೆ ನನ್ನ ಪಣ ಸುಳ್ಳಾಗಲಾರದು. ಹದಿನಾಲ್ಕು ವರ್ಷಗಳು ಪೂರ್ತಿಗೊಳ್ಳುತ್ತಲೇ ದುರ್ಯೋಧನನು ನಮ್ಮನ್ನು ಗೌರವದಿಂದ ಕರೆದು ನಮ್ಮ ರಾಜ್ಯವನ್ನು ನಮಗೆ ಕೊಡಲಿಲ್ಲವಾದರೆ ನನ್ನ ಪಣ ಕೃತಿಯಲ್ಲಿಳಿದೀತು—ಎಂಬುದನ್ನು ಖಂಡಿತವೆಂದು ತಿಳಿ.'

**ಕರ್ಣ/೬೭**

ತಾನು ಈವರೆಗೂ ಕರ್ಣನನ್ನು ಕೊಲ್ಲಲು ಏಕಾಗಲಿಲ್ಲ ಎಂಬುದನ್ನು ಕುರಿತು ಅರ್ಜುನನು ಯುಧಿಷ್ಠಿರನಿಗೆ ಹೇಳುವಾಗ ತನ್ನ ಪಣವನ್ನು ಮುಂದಿನ ಬಗೆಯಾಗಿ ಉಲ್ಲೇಖಿಸುತ್ತಾನೆ—

ಕರ್ಣ ನ ಚೇದದ್ಯ ನಿಹನ್ಮಿ ರಾಜನ್ ಸಬಾಂಧವಂ ಯುಧ್ಯಮಾನಂ ಪ್ರಸಹ್ಯ ॥ ೨೧ ॥

ಪ್ರತಿಶ್ರುತ್ಯಾಕುರ್ವತೋ ವೈ ಗತಿರ್ಯಾ ಕಷ್ಟಾ ಯಾತಾ ತಾಮಹಂ ರಾಜಸಿಂಹ ॥ ೨೨ ॥

ಯುದ್ಧೋತ್ಸುಕನಾದ ಕರ್ಣನನ್ನು ಅವನ ಬಂಧುಬಾಂಧವರೊಂದಿಗೆ ನಾನು ಕೊಲ್ಲದೆ ಹೋದೆನಾದರೆ ಪಣ ತೊಟ್ಟು ಅದನ್ನು ಪಾಲಿಸದಿದ್ದವರಿಗೆ ಬರಬಹುದಾದ ದುಃಖ ದಾಯಕವಾದ ಗತಿ ನನಗೆ ಬಂದೀತು.

**ಕರ್ಣ/೭೦**

ಗಾಂಡೀವ ಧನುಷ್ಯವನ್ನು ಅವಮಾನಗೊಳಿಸುವವರನ್ನು ತಾನು ಕೊಲ್ಲುವುದಾಗಿ ಅರ್ಜುನನು ಪಣ ತೊಟ್ಟಿದ್ದನು. ಯುಧಿಷ್ಠಿರನು ಗಾಂಡೀವ ಧನುಷ್ಯವನ್ನು ಅವಮಾನ ಗೊಳಿಸಿದ್ದರಿಂದ ಅರ್ಜುನನು ಅವನನ್ನು ಕೊಲ್ಲಲೆಂದು ಕತ್ತಿಯನ್ನು ಹಿರಿದನು. ಆಗ ಶ್ರೀಕೃಷ್ಣನು ಅವನನ್ನು ಧಿಕ್ಕರಿಸಿದನು. ಮಾನವಂತನಾದವನ ನಿಂದೆಯೆಂದರೆ ಅವನ ಸಾವು ಇದ್ದಂತೆ ಎಂದು ಹೇಳಿ ಅರ್ಜುನನು ನಿಂದೆಗೆ ಮೊರೆಹೋಗಿ ತನ್ನ ಪಣವನ್ನು ಪಾಲಿಸಬೇಕೆಂದು ಶ್ರೀಕೃಷ್ಣನು ಅವನಿಗೆ ಹೇಳಿದನು. ಆ ರೀತಿಯಾಗಿ ಅರ್ಜುನನು ಯುಧಿಷ್ಠಿರನನ್ನು ನಿಂದಿಸಿ, ಆಗಬಹುದಾಗಿದ್ದ ಅವನ ಕೊಲೆಯನ್ನು ತಪ್ಪಿಸಿದನು. ತಾನು ತನ್ನ ಹಿರಿಯಣ್ಣನನ್ನು ಟೀಕಿಸಬೇಕಾಗಿ ಬಂದುದಕ್ಕಾಗಿ ಅವನಿಗೆ ಬಹಳ ಕೆಡಕೆನಿಸಿತು. ಅವನು ಆತ್ಮಹತ್ಯೆಗೆ ಸಿದ್ಧನಾದನು. ಆಗ ಶ್ರೀಕೃಷ್ಣನು ಮತ್ತೆ ಅವನಿಗೆ ಆತ್ಮಸ್ತುತಿ ಯೆಂದರೆ ಪರನಿಂದೆಯಷ್ಟೇ ಪ್ರಭಾವಶಾಲಿಯಾದುದೆಂದು ಹೇಳಿ ಅವನನ್ನು ಆತ್ಮಾರ್ಪಣ ದಿಂದ ದೂರವಿರಿಸಿದನು. ಈ ಸಂದರ್ಭದಲ್ಲಿ ಆತ್ಮಸ್ತುತಿಯನ್ನು ಮೊರೆಯುತ್ತ ಅರ್ಜುನ ಹೀಗೆನ್ನುತ್ತಾನೆ—

ಅದ್ಯಾಪುತ್ರಾ ಸೂತಮಾತಾ ಭವಿತ್ರೀ ಕುಂತೀ ವಾಥೋ ವಾ ಮಯಾ ತೇನ ವಾಪಿ ।

ಸತ್ಯಂ ವದಾಮ್ಯದ್ಯ ನ ಕರ್ಣಮಾಜೌ ಶರೈರಹತ್ವಾ ಕವಚಂ ವಿಮೋಕ್ಷ್ಯೇ ॥ ೩೭ ॥

ಇಂದು ಒಬ್ಬ ಸೂತಪುತ್ರನ ತಾಯಿ ನನ್ನಿಂದಾಗಿ ಪುತ್ರಹೀನಳಾಗುವಳು ಇಲ್ಲವೆ ಕರ್ಣನು ನನ್ನನ್ನು ಕೊಂದರೆ ಕುಂತಿ ತನ್ನೊಬ್ಬ ಮಗನನ್ನು ಕಳೆದುಕೊಂಡಾಳು. ಇಂದಿನ ಕಾಳಗದಲ್ಲಿ ಕರ್ಣನನ್ನು ಕೊಲ್ಲದೆ ನಾನು (ದೇಹದ ಮೇಲಿನ) ಕವಚವನ್ನು ಕಳಚಲಾರೆನು. ನಿಜವಿದ್ದುದನ್ನೇ ನಾನೀಗ ಹೇಳುತ್ತಲಿರುವುದು.

**ಕರ್ಣ/೯೨**

ಅರ್ಜುನನು ಕರ್ಣನನ್ನು ಕೊಲ್ಲುವ ತನ್ನ ಪಣವನ್ನು ಪೂರ್ತಿಗೊಳಿಸಲೆಂದು ಗಾಂಡೀವ ಬಿಲ್ಲಿಗೆ ಅಂಜಲಿಕವೆಂಬ ಒಂದು ಬಲು ಶಕ್ತಿಶಾಲಿಯಾದ ಬಾಣವನ್ನು ಹೆದೆಗೇರಿಸಿದನು. ಅದನ್ನು ಅಭಿಮಂತ್ರಿತಗೊಳಿಸಿ ಹೆದೆಯನ್ನೆಳೆದನು.

ಕೃತ್ವಾ ವಿಮರ್ದಂ ಮಹದರ್ಜುನೇನ ಕರ್ಣೋ ಹತಃ ಕೇಸರಿಣೇವ ನಾಗಃ ।
ತೀರ್ಣಾ ಪ್ರತಿಜ್ಞಾ ಪುರುಷರ್ಷಭೇಣ ವೈರಸ್ಯಾಂತಂ ಗತವಾಂಶ್ಚಾಪಿ ಪಾರ್ಥಃ
॥ ೮ ॥

ಸಿಂಹವು ಆನೆಯನ್ನು ಕೊಂದುಬಿಡುವಂತೆ ಅರ್ಜುನನು ಹಿರಿದಾದ ಯುದ್ಧವನ್ನಾಡಿ ಕರ್ಣನನ್ನು ಯಮಪುರಿಗೆ ಅಟ್ಟಿ, ತನ್ನ ಪಣವನ್ನು ಪೂರ್ತಿಗೊಳಿಸಿ ಹಗೆತನಕ್ಕೆ ಮಣ್ಣು ಕೊಟ್ಟನು.

+ಬೇರೆ ಪುನರುಲ್ಲೇಖಗಳು : ಉದ್ಯೋಗ : ೧೩೯/೯೦ ; ೧೪೭/೭೧, ೭೩ ; ೧೪೮/೫ ; ೧೬೩/೨೩.

**ವನ/೧೫೮**

**೨**

ಕೈಲಾಸಪರ್ವತದ ಮೇಲೆ ದ್ರೌಪದಿಯೊಂದಿಗೆ ಪಾಂಡವರೆಲ್ಲ ಅರ್ಜುನನಿಗಾಗಿ ಕಾದಿದ್ದರು. ಹಿಂದಕ್ಕೆ ಒಂದು ಸಲ ಅರ್ಜುನನು ತೊಟ್ಟ ಆ ಪಣ ಯುಧಿಷ್ಠಿರನಿಗೆ ನೆನಪಾಯಿತು.

ಕೃತಶ್ಚ ಸಮಯಸ್ತೇನ ಪಾರ್ಥೇನಾಮಿತತೇಜಸಾ ॥ ೮ ॥
ಪಂಚವರ್ಷಾಣಿ ವತ್ಸ್ಯಾಮಿ ವಿದ್ಯಾರ್ಥೀತಿ ಪುರಾ ಮಯಿ ॥ ೯ ॥

ಮಿತಿಯಿಲ್ಲದ ತೇಜಸ್ಸಿನವನಾದ ಅರ್ಜುನನು ಅಸ್ತ್ರವಿದ್ಯೆಯನ್ನು ಗಳಿಸಲೆಂದು ಐದು ವರ್ಷಗಳ ಕಾಲ ದೇವಲೋಕದಲ್ಲಿ ತಾನು ವಾಸವಾಗಿರುವೆನೆಂದು ಪಣ ತೊಟ್ಟಿದ್ದನು.

**ವನ/೨೪೩**

**೩**

## ಸೆರೆಯಾಳು ದುರ್ಯೋಧನನ ಬಿಡುಗಡೆ

ಚಿತ್ರಸೇನ ಗಂಧರ್ವನು ದುರ್ಯೋಧನನನ್ನು ಸೋಲಿಸಿ ಅವನನ್ನೂ, ಹಾಗೂ ಹಲವು ಜನ ಕೌರವವೀರರನ್ನೂ ಸೆರೆಹಿಡಿದಿಟ್ಟನು. ಆಗ ದುರ್ಯೋಧನನ ಸೇವಕರು ಕಾಡಿನಲ್ಲಿ ವಾಸವಾಗಿದ್ದ ಪಾಂಡವರ ಬಳಿಗೆ ನೆರವು ಕೇಳಲು ಬಂದರು. ಆಗ ಯುಧಿಷ್ಠಿರನು ದುರ್ಯೋಧನ ಮೊದಲಾದವರನ್ನೆಲ್ಲ ಬಿಡುಗಡೆಗೊಳಿಸಲು ತನ್ನ ತಮ್ಮಂದಿರಿಗೆ ಹೇಳಿದನು. ಅಂದು ಅರ್ಜುನನು ಹೀಗೆಂದು ಪಣತೊಟ್ಟನು—

ಅಜಾತಶತ್ರೋರ್ವಚನಂ ತಚ್ಛ್ರುತ್ವಾ ತು ಧನಂಜಯಃ ।
ಪ್ರತಿಜಜ್ಞೇ ಗುರೋರ್ವಾಕ್ಯಂ ಕೌರವಾಣಾಂ ವಿಮೋಕ್ಷಣಮ್ ॥ ೨೦ ॥

ಯದಿ ಸಾಮ್ನಾ ನ ಮೋಕ್ಷ್ಯಂತಿ ಗಂಧರ್ವಾ ಧೃತರಾಷ್ಟ್ರಜಾನ್ ।
ಅದ್ಯ ಗಂಧರ್ವರಾಜಸ್ಯ ಭೂಮಿಃ ಪಾಸ್ಯತಿ ಶೋಣಿತಮ್ ॥ ೨೧ ॥

ಅರ್ಜುನಸ್ಯ ತು ತಾಂ ಶ್ರುತ್ವಾ ಪ್ರತಿಜ್ಞಾಂ ಸತ್ಯವಾದಿನಃ ।
ಕೌರವಾಣಾಂ ತದಾ ರಾಜನ್ ಪುನಃ ಪ್ರತ್ಯಾಗತಂ ಮನಃ ॥ ೨೨ ॥

(ವೈಶಂಪಾಯನ ಜನಮೇಜಯ ರಾಜನಿಗೆ ಹೀಗೆಂದನು—) 'ಅಜಾತಶತ್ರುವಾದ ಯುಧಿಷ್ಠಿರನು ಹೇಳುತ್ತಲೇ ಅರ್ಜುನನು ತನ್ನ ಹಿರಿಯಣ್ಣನ ಅಪ್ಪಣೆಯ ಮೇರೆಗೆ ದುರ್ಯೋಧನಾದಿ ಕೌರವರನ್ನು ಬಿಡುಗಡೆಗೊಳಿಸಲು (ಮುಂದಿನಂತೆ) ಪಣತೊಟ್ಟನು. ಗಂಧರ್ವರು ವಿವೇಕಬುದ್ಧಿಯಿಂದ ಕೌರವರನ್ನು ಬಿಡುಗಡೆ ಮಾಡಿದರೆ ಒಳ್ಳೆಯದು, ಇಲ್ಲವಾದರೆ ಗಂಧರ್ವರ ನೆತ್ತರಿನಿಂದ ನೆಲದ ಬಾಯಾರಿಕೆಯನ್ನು ಹಿಂಗಿಸಬೇಕಾದೀತು— ಎಂಬುದನ್ನು ಅವರ ಗಮನಕ್ಕೆ ತಂದುಕೊಳ್ಳಲಿ. ಸತ್ಯಪ್ರತಿಜ್ಞನೆನ್ನಿಸಿದ ಅರ್ಜುನನ ಈ ಮಾತು ಕೇಳಿ ಕೌರವರಲ್ಲಿ ಸಾಹಸ ಹುಟ್ಟಿತು.

ಭೀಷ್ಮ/೫೯

## ೪
## ಕೌರವ ಸಂಹಾರ

ಭೀಷ್ಮನಿಂದ ಪಾಂಡವಸೇನೆಯ ಅಪರಿಮಿತವಾದ ಸಂಹಾರ ಸಾಗಿದುದನ್ನು ಕಂಡು ಶ್ರೀಕೃಷ್ಣ ತುಂಬ ಕೆರಳಿದನು. ಅವನು ಭೀಷ್ಮನನ್ನು ಕೊಲ್ಲಲೆಂದು ರಥದಿಂದ ಕೆಳಗಿಳಿದು ಬಂದನು. ಆಗ ಅರ್ಜುನನು ಅವನನ್ನು ತಡೆಹಿಡಿದು ಪಣತೊಟ್ಟು ಹೇಳಿದನು—

ನ ಹಾಸ್ಯತೇ ಕರ್ಮ ಯಥಾಪ್ರತಿಜ್ಞಂ ಪುತ್ರೈಃ ಶಪೇ ಕೇಶವ ಸೋದರೈಶ್ಚ ।
ಅಂತಂ ಕರಿಷ್ಯಾಮಿ ಯಥಾ ಕುರೂಣಾಂ ತ್ವಯಾಹಮಿಂದ್ರಾನುಜ
ಸಂಪ್ರಯುಕ್ತಃ ॥ ೧೦೩ ॥

ತತಃ ಪ್ರತಿಜ್ಞಾಂ ಸಮಯಂ ಚ ತಸ್ಯ ಜನಾರ್ದನಃ ಪ್ರೀತಮನಾ ನಿಶಮ್ಯ ॥೧೦೪॥

'ಎಲೈ ಕೇಶವನೇ! ನಾನು ತೊಟ್ಟ ಪಣಕ್ಕೆ ಸರಿಯಾಗಿ ನನ್ನ ಕರ್ತವ್ಯವನ್ನು ಪಾಲಿಸುವೆನು — ಎಂದು ನನ್ನ ಮಕ್ಕಳು ಹಾಗೂ ಸೋದರರ ಮೇಲೆ ಆಣೆಯಿಟ್ಟು ಹೇಳುತ್ತೇನೆ. ನಿನ್ನ ಅಪ್ಪಣೆಯಾಗುತ್ತಲೇ ಕೌರವರನ್ನೆಲ್ಲ ಕೊಂದುಬಿಡುವೆ.' ಅರ್ಜುನನ ಪಣ ಹಾಗೂ ನಿರ್ಧಾರಗಳನ್ನು ಕೇಳಿ (ಸಂತುಷ್ಟನಾಗಿ ಶ್ರೀಕೃಷ್ಣ ಮತ್ತೆ ರಥವನ್ನೇರಿದನು.)

+ ಈ ಪಣದಲ್ಲಿ ಆಣೆಯ ಖಚಿತವಾದ ಉಲ್ಲೇಖ ಇದೆ.

ಭೀಷ್ಮ/೧೦೬

## ೫
## ಭೀಷ್ಮವಧೆ

ಭೀಷ್ಮನ ಬಾಣಗಳಿಂದ ಯುಧಿಷ್ಠಿರನ ಸೇನೆಯ ಸಂಹಾರ ಬಲು ಕಠೋರವಾಗಿ ಸಾಗುತ್ತಲೇ ಶ್ರೀಕೃಷ್ಣನು ಭೀಷ್ಮನನ್ನು ಕೊಲ್ಲಲೆಂದು ಸಂತಪ್ತನಾಗಿ ರಥದಿಂದಿಳಿದನು.

ಆದರೆ ಅರ್ಜುನ ತಾನು ಕೌರವಸೇನೆಯ ಸಂಹಾರಕ್ಕಾಗಿ ಆಣೆಮಾಡಿ ತೊಟ್ಟ ಪಣದಿಂದ ಸಂತುಷ್ಟನಾಗಿ ಮತ್ತೆ ರಥಾರೂಢನಾದನು. ಅರ್ಜುನನು ಅವನಿಗೆ ಅವನ ವಚನವನ್ನು ನೆನಪು ಮಾಡಿಕೊಟ್ಟನು. ತಾನು ಯುದ್ಧಕಾಲದಲ್ಲಿ ಸಾರಥ್ಯವನ್ನಷ್ಟೇ ಕೈಕೊಳ್ಳುವುದಾಗಿಯೂ ಕೈಯಲ್ಲಿ ಶಸ್ತ್ರವನ್ನು ಹಿಡಿಯುವುದಿಲ್ಲವೆಂದೂ ಶ್ರೀಕೃಷ್ಣನು ಒಪ್ಪಿಕೊಂಡಿದ್ದನು. ಅರ್ಜುನನು ಶ್ರೀಕೃಷ್ಣನ ಮನಸ್ಸಿನಲ್ಲಿರುವುದನ್ನು ಗುರುತಿಸಿ ಅವನಿಗೆ ಹೀಗೆಂದನು—

ಮಯ್ಯೇಷ ಭಾರಃ ಸರ್ವೋ ಹಿ ಹನಿಷ್ಯಾಮಿ ಪಿತಾಮಹಮ್ ।
ಶಪೇ ಕೇಶವ ಶಸ್ತ್ರೇಣ ಸತ್ಯೇನ ಸುಕೃತೇನ ಚ ॥ ೭೩ ॥

'ಎಲೈ ಕೇಶವನೇ! (ಅವರೆಲ್ಲರನ್ನೂ ಕೊಲ್ಲುವ) ಹೊಣೆ ನನ್ನ ಮೇಲಿದೆ (ಚಿಂತಿಸದಿರು). ನನ್ನ ಶಸ್ತ್ರಾಸ್ತ್ರಗಳು, ಸತ್ಯ ಹಾಗೂ ಸುಕೃತಗಳ ಮೇಲೆ ಆಣೆಯಿಟ್ಟು ಭೀಷ್ಮನನ್ನು ಕೊಲ್ಲುವೆನೆಂದು ಹೇಳುತ್ತೇನೆ.'

+ ಈ ಪಣದಲ್ಲಿ ಆಣೆಯ ಖಚಿತವಾದ ಉಲ್ಲೇಖ ಇದೆ.

+ ಬೇರೆ ಪುನರುಲ್ಲೇಖಗಳು : ಭೀಷ್ಮ : ೧೦೭/೩೫, ೩೬, ೯೬.

ದ್ರೋಣ/೧೩

೬

ಅರ್ಜುನನು ಯುಧಿಷ್ಠಿರನ ಕಾವಲಿಗೆ ಇರದಿದ್ದರೆ ತಾನು ಯುಧಿಷ್ಠಿರನನ್ನು ಜೀವಂತವಾಗಿಯೇ ಸೆರೆಹಿಡಿಯುವುದಾಗಿ ದ್ರೋಣನು ಶರತ್ತಿನ ಪಣವನ್ನು ತೊಟ್ಟಿದ್ದನು. ಯುಧಿಷ್ಠಿರನು ದ್ರೋಣನ ಈ ಪಣವನ್ನು ಅರ್ಜುನನೆದುರು ಹೇಳಿದನು. ತನ್ನ ಸುತ್ತುಮುತ್ತಲಲ್ಲೇ ಇದ್ದು ಹೋರಾಡೆಂದನು. ಅದಕ್ಕೆ ಅರ್ಜುನನು ಅವನಿಗೆ, 'ಎಂದೆಂದಿಗೂ ನನ್ನ ಕೈಯಿಂದ ದ್ರೋಣಾಚಾರ್ಯರ ಕೊಲೆಯಾಗದು. ಹಾಗೆಯೇ ನಾನೆಂದಿಗೂ ನಿನ್ನನ್ನು ತೊರೆದು ಇರಲಾರೆನೆಂಬುದನ್ನು ಖಂಡಿತವೆಂದು ತಿಳಿ' ಎಂದನು. ತನ್ನ ಈ ಹೇಳಿಕೆಗೆ ಬೆಂಬಲವಾಗಿ ಅವನು ಈ ರೀತಿ ಪಣತೊಟ್ಟನು—

ತ್ವಾಂ ನಿಗೃಹ್ಯಾಹವೇ ರಾಜ್ಯಂ ಧಾರ್ತರಾಷ್ಟ್ರೋಽಯಮಿಚ್ಛತಿ ॥ ೯ ॥

ನ ಸ ತಂ ಜೀವಲೋಕೇಽಸ್ಮಿನ್ ಕಾಮಂ ಪ್ರಾಪ್ಯೇತ್ ಕಥಂಚನ ।
ಪ್ರಪತೇದ್ ದ್ಯೌಃ ಸನಕ್ಷತ್ರಾ ಪೃಥಿವೀ ಶಕಲೀಭವೇತ್ ॥ ೧೦ ॥

ನ ತ್ವಾಂ ದ್ರೋಣೋ ನಿಗೃಹ್ಣೀಯಾಜ್ಜೀವಮಾನೇ ಮಯಿ ಧ್ರುವಮ್ ।
ಯದಿ ತಸ್ಯ ರಣೇ ಸಾಹ್ಯಂ ಕುರುತೇ ವಜ್ರಭೃತ್ ಸ್ವಯಮ್ ॥ ೧೧ ॥

ವಿಷ್ಣುರ್ವಾ ಸಹಿತೋ ದೇವೈರ್ನ ತ್ವಾಂ ಪ್ರಾಪ್ಸ್ಯತ್ಯಸೌ ಮೃಧೇ ।
ಮಯಿ ಜೀವತಿ ರಾಜೇಂದ್ರ ನ ಭಯಂ ಕರ್ತುಮರ್ಹಸಿ ॥ ೧೨ ॥

ದ್ರೋಣಾದಸ್ತ್ರಭೃತಾಂ ಶ್ರೇಷ್ಠಾತ್ ಸರ್ವಶಸ್ತ್ರಭೃತಾಮಪಿ ।
ಅನ್ಯಚ್ಚ ಬ್ರೂಯಾಂ ರಾಜೇಂದ್ರ ಪ್ರತಿಜ್ಞಾಂ ಮಮ ನಿಶ್ಚಲಾಮ್ ॥ ೧೩ ॥

ನ ಸ್ಮರಾಮ್ಯನೃತಂ ತಾವನ್ನ ಸ್ಮರಾಮಿ ಪರಾಜಯಮ್ ।
ನ ಸ್ಮರಾಮಿ ಪ್ರತಿಶ್ರುತ್ಯ ಕಿಂಚಿದಪ್ಯನೃತಂ ಕೃತಮ್ ॥ ೧೪ ॥

ಎಲೈ ಮಹಾರಾಜನೇ ! ಧೃತರಾಷ್ಟ್ರನ ಈ ಮಗ (ದುರ್ಯೋಧನ) ನಿನ್ನನ್ನು ಸೆರೆ ಹಿಡಿದು (ನಮ್ಮೆಲ್ಲ) ರಾಜ್ಯವನ್ನೆಲ್ಲ ನುಂಗಿಹಾಕುವುದರಲ್ಲಿ ಇದ್ದಾನೆ. ಆದರೆ ಅವನ ಈ ಬಯಕೆ ಎಂದೆಂದಿಗೂ ಈಡೇರದು. ಒಂದು ವೇಳೆ ತಾರೆಗಳೊಂದಿಗೆ ಮುಗಿಲು ಕುಸಿದು ಬಿದ್ದೀತು, ಭೂಮಿ ಒಡೆದು ಹೋಳಾದೀತು, ಆದರೆ ದುರ್ಯೋಧನನ ಮನೋರಥ ಕೈಗೂಡಲಾರದು. ಇಂದ್ರನೇ ದ್ರೋಣಾಚಾರ್ಯನ ನೆರವಿಗೆ ಬಂದರೂ ನಾನು ಜೀವ ದಿಂದಿರುವವರೆಗೆ ದ್ರೋಣಾಚಾರ್ಯ ನಿನ್ನನ್ನು ಸೆರೆಹಿಡಿಯಲಾರನೆಂಬುದು ತಪ್ಪಿಸ ಲಾಗದ ಸತ್ಯ. ಪ್ರತ್ಯಕ್ಷ ವಿಷ್ಣು ಇಲ್ಲವೆ ಇಂದ್ರನು ದೇವತೆಗಳ ಪಡೆಯೊಂದಿಗೆ ದುರ್ಯೋಧನನ ನೆರವಿಗೆ ಧಾವಿಸಿಬಂದರೂ ಕೂಡ ನೀನು ಹೆದರದಿರು. ಶಸ್ತ್ರಾಸ್ತ್ರಗಳ ಬಳಕೆಯಲ್ಲಿ ಅತ್ಯಂತ ಶ್ರೇಷ್ಠನಾದ ದ್ರೋಣಾಚಾರ್ಯನಿಗೆ ಹೆದರದಿರು. ನಾನು ನಿನಗೆ ನನ್ನ ಇನ್ನೊಂದು ಪಣವನ್ನು ಹೇಳಲಿದ್ದೇನೆ. ನಾನೆಂದಿಗೂ ಸುಳ್ಳಾಡಿದ ನೆನಪಿಲ್ಲ. ಹಾಗೆಯೇ ಸೋಲೆನ್ನುವುದೂ ನಾನರಿಯದ ಸಂಗತಿ. ತೊಟ್ಟ ಪಣವನ್ನು ಮುರಿದೆ ನೆಂಬುದೂ ಎಂದೆಂದಿಗೂ ನನ್ನಿಂದಾಗಿಲ್ಲ (ಹೀಗಾಗಿ ನಾನಾಡಿದ ಮಾತು ನಿಜವಾಗುವು ದೆಂಬಲ್ಲಿ ನನಗೆ ಸಂದೇಹವಿಲ್ಲ).

+ ಯುಧಿಷ್ಠಿರನನ್ನು ಜೀವದೊಂದಿಗೆ ಸೆರೆಹಿಡಿಯುವ ಪಣ ದ್ರೋಣನದು. ಅವನ ಪಣವನ್ನು ವಿಫಲಗೊಳಿಸುವ ಪಣ ಅರ್ಜುನನದು. ಹೀಗಾಗಿ ಇದು ಎದುರು ಪಣವಾಗಿದೆ.

**ದ್ರೋಣ/೭೩**

**೭**

## ಜಯದ್ರಥನ ವಧೆ

ಯುಧಿಷ್ಠಿರನಿಂದ ಅಭಿಮನ್ಯುವಿನ ವಧೆಯ ಕೆಟ್ಟ ವಾರ್ತೆಯನ್ನು ಕೇಳಿ ಅರ್ಜುನ ಬಹಳ ದುಃಖಿತನಾದನು. ಅವನು ತುಸು ಹೊತ್ತು ಎಚ್ಚರದಪ್ಪಿದನು ಕೂಡ. ಎಚ್ಚರ ತಿಳಿದೆದ್ದ ಮೇಲೆ ಅವನ ಕೋಪ ಉಕ್ಕೇರಿತು. ಅವನು ಜಯದ್ರಥನ ಕೊಲೆಯ ಪಣವನ್ನು ತೊಟ್ಟನು.

ಸತ್ಯಂ ವಃ ಪ್ರತಿಜಾನಾಮಿ ಶ್ವೋಽಸ್ಮಿ ಹಂತಾ ಜಯದ್ರಥಮ್ ।
ನ ಚೇದ್ ವಧಭಯಾದ್ ಭೀತೋ ಧಾರ್ತರಾಷ್ಟ್ರಾನ್ ಪ್ರಹಾಸ್ಯತಿ ॥ ೨೦ ॥
ನ ಚಾಸ್ಮಾಂಶರಣಂ ಗಚ್ಛೇತ್ ಕೃಷ್ಣಂ ವಾ ಪುರುಷೋತ್ತಮಮ್ ।
ಭವಂತಂ ವಾ ಮಹಾರಾಜ ಶ್ವೋಽಸ್ಮಿ ಹಂತಾ ಜಯದ್ರಥಮ್ ॥ ೨೧ ॥

ನಾಳೆ ನಾನು ಜಯದ್ರಥನನ್ನು ಕೊಲ್ಲುವೆನೆಂದು ನಿರ್ಧಾರದಿಂದ ನಿಜವನ್ನೇ ಹೇಳುತ್ತ ಲಿದ್ದೇನೆ. ನಮ್ಮಿಂದ ತನಗೊದಗಬಹುದಾದ ಸಾವಿನ ಹೆದರಿಕೆಯಿಂದಾಗಿ ಜಯದ್ರಥನು ಕೌರವರನ್ನು ತೊರೆದು ನನಗಾಗಲಿ, ಪುರುಷೋತ್ತಮನಾದ ಶ್ರೀಕೃಷ್ಣನಿಗಾಗಲಿ ಶರಣು ಬಾರದಿದ್ದರೆ ನಾಳೆ ಅವನು ಸಾಯುವುದು ಖಂಡಿತವೆಂದು ತಿಳಿ.

ಈ ಪ್ರತಿಜ್ಞೆಯೊಂದಿಗೇನೆ ಅರ್ಜುನ ಇನ್ನೊಂದನ್ನೂ ಮಾಡಿದನು—

ಯದಿ ವ್ಯುಷ್ಟಾಮಿಮಾಂ ರಾತ್ರಿಂ ಶ್ವೋ ನ ಹನ್ಯಾಂ ಜಯದ್ರಥಮ್ ।
ಇಮಾಂ ಚಾಪ್ಯಪರಾಂ ಭೂಯಃ ಪ್ರತಿಜ್ಞಾಂ ಮೇ ನಿಬೋಧತ ॥ ೪೬ ॥

ಯದ್ಯಸ್ಮಿನ್ನಹತೇ ಪಾಪೇ ಸೂರ್ಯೋಽಸ್ತಮುಪಯಾಸ್ಯತಿ ।
ಇಹೈವ ಸಂಪ್ರವೇಷ್ಟಾಹಂ ಜ್ವಲಿತಂ ಜಾತವೇದಸಮ್ ॥ ೪೭ ॥

ನಾಳೆಗೆ ಈ ಜಯದ್ರಥನನ್ನು ಕೊಲ್ಲುವ ಮೊದಲೇ ಸೂರ್ಯ ಮುಳುಗಿದವನಾದರೆ ನನ್ನೀ ಎರಡನೆಯ ಪಣವನ್ನೂ ಆಲಿಸು. ಹಾಗಾದರೆ ನಾನು ಧಗಧಗನೆ ಉರಿಯುವ ಬೆಂಕಿಗೆ ಹಾರಿಕೊಳ್ಳುವೆನು.

ದ್ರೋಣ/೭೬

ಅರ್ಜುನ ತನ್ನ ಪಣದ ದೃಢತೆಯನ್ನು ಕುರಿತು ಶ್ರೀಕೃಷ್ಣನಿಗೆ ಹೇಳಿದನು—

ಯಥಾ ಲಕ್ಷ್ಮ ಸ್ಥಿರಂ ಚಂದ್ರೇ ಸಮುದ್ರೇ ಚ ಯಥಾ ಜಲಮ್ ।
ಏವಮೇತಾಂ ಪ್ರತಿಜ್ಞಾಂ ಮೇ ಸತ್ಯಾಂ ವಿದ್ಧಿ ಜನಾರ್ದನ ॥ ೨೨ ॥

ಚಂದ್ರನ ಮೇಲಿರುವ ಕಲಂಕ ಇಲ್ಲವೆ ಕಡಲಿನ ಸ್ಥಿರವಾದ ನೀರಿನಂತೆ ನನ್ನ ಪಣವೂ ಸ್ಥಿರವಾದುದೆಂಬ ಸತ್ಯವನ್ನು ನೀನು ತಿಳಿ.

ದ್ರೋಣ/೮೦

ಅರ್ಜುನನಿಗೆ ಅವನ ಕನಸಿನಲ್ಲಿ ಶ್ರೀಕೃಷ್ಣನು ಕಂಡನು. ಆಗ ಅರ್ಜುನ ಅವನಿಗೆ ಹೀಗೆಂದನು—

ಮಯಾ ಪ್ರತಿಜ್ಞಾ ಮಹತೀ ಜಯದ್ರಥವಧೇ ಕೃತಾ ।
ಶ್ವೋಽಸ್ಮಿ ಹಂತಾ ದುರಾತ್ಮಾನಂ ಪುತ್ರಘ್ನಮಿಂತಿ ಕೇಶವ ॥ ೧೧ ॥

ಮತ್ಪ್ರತಿಜ್ಞಾವಿಘಾತಾರ್ಥಂ ಧಾರ್ತರಾಷ್ಟ್ರೈಃ ಕಿಲಾಚ್ಯುತ ॥ ೧೨ ॥

ನನ್ನ ಮಗನನ್ನು ಕ್ರೂರ ರೀತಿಯಿಂದ ಕೊಲ್ಲುವವನಾದ ಜಯದ್ರಥನನ್ನು ನಾನು ಕೊಲ್ಲುವೆನೆಂದು ಘೋರವಾದ ಪಣವನ್ನು ತೊಟ್ಟಿದ್ದೇನೆ. ಆದರೆ ನನ್ನೀ ಪಣ ಯಶಸ್ವಿಯಾಗದಿರಲೆಂದು ಈ ಧಾರ್ತರಾಷ್ಟ್ರರೆಲ್ಲ ಜಯದ್ರಥನನ್ನು ಅಡಗಿಸಿಟ್ಟು ಅವನನ್ನು ಕಾಯುತ್ತಿದ್ದಾರೆ. ಆದ್ದರಿಂದ—

ಪ್ರತಿಜ್ಞಾಪಾರಣಂ ಚಾಪಿ ನ ಭವಿಷ್ಯತಿ ಕೇಶವ ।
ಪ್ರತಿಜ್ಞಾಯಾಂ ಚ ಹೀನಾಯಾಂ ಕಥಂ ಜೀವೇತ ಮದ್ವಿಧಃ ॥ ೧೫ ॥

ಹೀಗಿರುವಲ್ಲಿ ನನಗೆ ನನ್ನ ಪಣವನ್ನು ಪೂರ್ತಿಗೊಳಿಸಲು ಆಗದಿದ್ದರೆ ನನ್ನಂಥವನು ಬದುಕಿ ಉಳಿಯುವುದಾದರೂ ಹೇಗೆ ?

**ದ್ರೋ/೧೪೫**

ಸೂರ್ಯ ಮುಳುಗುತ್ತಿರುವುದನ್ನು ಕಂಡು ಶ್ರೀಕೃಷ್ಣನು ಅರ್ಜುನನಿಗೆ ಹೀಗೆಂದನು—

ಚೋದಯಾಶ್ವಾನ್ ಭೃಶಂ ಕೃಷ್ಣ ಯತೋ ರಾಜಾ ಜಯದ್ರಥಃ ।
ಶ್ರೂಯಂತೇ ಪುಂಡರೀಕಾಕ್ಷ ತ್ರಿಷು ಧರ್ಮೇಷು ವರ್ತತೇ ॥ ೩ ॥

ಪ್ರತಿಜ್ಞಾಂ ಸಫಲಾಂ ಚಾಪಿ ಕರ್ತುಮರ್ಹಸಿ ಮೇಽನಘ ।
ಅಸ್ತಮೇತಿ ಮಹಾಬಾಹೋ ತ್ವರಮಾಣೋ ದಿವಾಕರಃ ॥ ೪ ॥

ಎಲೈ ಶ್ರೀಕೃಷ್ಣನೇ! ಕೂಡಲೇ ಜಯದ್ರಥನಿದ್ದಲ್ಲಿಗೆ ಕುದುರೆಗಳನ್ನು ಓಡಿಸು. ಜಯದ್ರಥನೆದುರು ಇನ್ನೂ ಬರಿ ಮೂರು ಧರ್ಮಗಳು (ದಾರಿಗಳು) ಮಾತ್ರ ಇವೆ. ನನ್ನ ಪಣ ಯಶವನ್ನು ಹೊಂದುವಂತೆ ಆಗಲಿ. ಎಲೈ ಮಹಾಬಾಹುವೇ! ಸೂರ್ಯದೇವ ತ್ವರೆಯಿಂದ ಪಡುವಣದತ್ತ ಹೊರಟಿದ್ದಾನೆ.

ಜಯದ್ರಥನನ್ನು ಕೊಲ್ಲಲೆಂದು ಹೊರಟಿದ್ದ ಅರ್ಜುನನ ರಥವನ್ನು ಕಂಡು ದುರ್ಯೋಧನ ಕರ್ಣನಿಗೆ ಹೀಗೆಂದನು—

ಸೈಂಧವೇ ರಕ್ಷ್ಯಮಾಣೇ ತು ಸೂರ್ಯಸ್ಯಾಸ್ತಮನಂ ಪ್ರತಿ ।
ಮಿಥ್ಯಾಪ್ರತಿಜ್ಞಃ ಕೌಂತೇಯಃ ಪ್ರವೇಕ್ಷ್ಯತಿ ಹುತಾಶನಮ್ ॥ ೧೪ ॥

ಸೂರ್ಯ ಮುಳುಗುವವರೆಗೂ ನಾವು ಸಿಂಧುರಾಜನನ್ನು ಕಾಪಾಡಿದೆವಾದರೆ ಅರ್ಜುನನ ಪ್ರತಿಜ್ಞೆ ಹಾಳಾಗಿ ಅವನು ಅಗ್ನಿಪ್ರವೇಶವನ್ನು ಕೈಕೊಳ್ಳಲೇಬೇಕು.

ದೈವೇನೋಪಹತಃ ಪಾರ್ಥೋ ವಿಪರೀತಶ್ಚ ಮಾನದ ।
ಕಾರ್ಯಾಕಾರ್ಯಮಜಾನಾನಃ ಪ್ರತಿಜ್ಞಾಂ ಕೃತವಾನ್ ರಣೇ ॥ ೧೭ ॥

ಎಲೈ ಮಾನವಂತನಾದ ಕರ್ಣನೇ! ಅರ್ಜುನನಿಗೆ ದೈವ ಪ್ರತಿಕೂಲವಾಗಿದೆ. ಹೀಗಾಗಿ ಅವನು ಬುದ್ಧಿಗೆಟ್ಟು ಸರಿ-ತಪ್ಪುಗಳನ್ನು ಯೋಚಿಸದೆಯೇ ಮಾಡಿದ ಈ ಪಣ ಆತ್ಮಘಾತಕವಾಗಲಿದೆ!

**ದ್ರೋ/೧೪೬**

ಶ್ರೀಕೃಷ್ಣನು ತನ್ನ ಯೋಗಸಾಮರ್ಥ್ಯದಿಂದ ಸೂರ್ಯನನ್ನು ಮರೆಮಾಚಿದನು. ಆಗ ಜಯದ್ರಥನನ್ನುಳಿದು ಉಳಿದವರಿಗೆಲ್ಲ ಸೂರ್ಯಾಸ್ತವಾಯಿತೆಂದೇ ಭಾಸವಾಯಿತು. ಜಯದ್ರಥನು ಸೂರ್ಯನತ್ತ ನೋಡುತ್ತ ನಿಂತನು. ಆಗ ಶ್ರೀಕೃಷ್ಣನು ಅರ್ಜುನನಿಗೆ ಹೀಗೆಂದನು—

ಅಯಂ ಕಾಲೋ ಮಹಾಬಾಹೋ ವಧಾಯಾಸ್ಯ ದುರಾತ್ಮನಃ ॥ ೭೨ ॥
ಛಿಂದಿ ಮೂರ್ಧಾನಮಸ್ಯಾಶು ಕುರು ಸಾಫಲ್ಯಮಾತ್ಮನಃ ॥ ೭೩ ॥

ಮಹಾಬಾಹುವಾದ ಎಲೈ ಅರ್ಜುನನೇ! ಈ ದುರಾತ್ಮನನ್ನು ಕೊಲ್ಲಲು ಇದೇ ಸರಿಯಾದ ಸಮಯ. ತಕ್ಷಣ ಈತನ ತಲೆಯನ್ನು ಕತ್ತರಿಸಿಹಾಕಿ ನಿನ್ನ ಪ್ರತಿಜ್ಞೆಯನ್ನು ಪೂರ್ತಿಗೊಳಿಸು.

ಶ್ರೀಕೃಷ್ಣನ ಹೇಳಿಕೆಯಂತೆ ಅರ್ಜುನನು ಜಯದ್ರಥನ ರುಂಡವನ್ನು ಹಾರಿಸಿಬಿಟ್ಟನು. ಅದು ಹೋಗಿ ಸಂಧ್ಯಾವಂದನೆಗೆಂದು ಕುಳಿತಿದ್ದ ಅವನ ತಂದೆ ವೃದ್ಧಕ್ಷತ್ರನ ತೊಡೆಯ ಮೇಲೆ ಬಿದ್ದಿತು. ಅದರಿಂದಾಗಿ ಅವನೂ ಜೀವವನ್ನು ಬಿಟ್ಟನು.

+ ಬೇರೆ ಪುನರುಲ್ಲೇಖಗಳು : ದ್ರೋಣ—೭೩/೫೧, ೫೩ ; ೭೪/೧೦ ; ೭೫/೧, ೫, ೯, ೧೩, ೧೪ ; ೭೭/೮, ೨೫ ; ೭೯/೧೧, ೧೨, ೧೪, ೨೧ ; ೮೦/೧ ; ೮೩/೧೩ ; ೯೨/೬ ; ೧೨೮/೪೯, ೫೦ ; ೧೪೩/೬೫ ; ೧೪೫/೯೦ ; ೧೪೬/೧೪೪ ; ೧೪೮/೨೫, ೩೨, ೩೩ ; ೧೪೯/-, ೭, ೪೨ ; ೧೫೨/೭ ; ೨೦೨/೧೪೬ ಹಾಗೂ ಸ್ತ್ರೀ—೨೨/೭, ೮.

**ದ್ರೋಣ/೧೪೮**

**೮**

## ವೃಷಸೇನನ ವಧೆ

ಅರ್ಜುನನು ಕರ್ಣನಿಗೆ ಅವನ ಕೊಚ್ಚಿಕೊಳ್ಳುವಿಕೆಗಾಗಿ ಸಂಡುಸುಡುವ ಪದಗಳಿಂದ ಎಚ್ಚರ ನೀಡಿದನು. ಅಭಿಮನ್ಯುವಿನ ವಧೆಯಿಂದಾಗಿ ಅವನು ಬಲು ಕ್ರುದ್ಧನಾಗಿದ್ದನು. ಭೀಮನು ಹಲವು ಬಾರಿ ಕರ್ಣನನ್ನು ಸೋಲಿಸಿದ್ದನು. ಆದರೂ ಅವನೆಂದಿಗೂ ಕರ್ಣನನ್ನು ಕುರಿತು ಅವಮಾನದ ಮಾತುಗಳನ್ನು ಆಡಿರಲಿಲ್ಲ. ಕರ್ಣನು ಭೀಮನನ್ನು ಕುರಿತು ಆಡಿದ ಕಹಿಮಾತುಗಳಿಂದಾಗಿ ಅರ್ಜುನ ರೊಚ್ಚಿಗೆದ್ದಿದ್ದನು ಅವನು ಕರ್ಣನಿಗೆ, 'ಅಭಿಮನ್ಯುವಿನ ಬಿಲ್ಲನ್ನು ಮುರಿವ ನಿನ್ನ ಕೃತಿ ಆತ್ಮಘಾತಕವಾದುದು. ನಿನ್ನ ಯೋಗ್ಯತೆ ನಿನ್ನ ಬಂಧು ಬಳಗದವರೊಂದಿಗೆ ಕೊಲ್ಲಲ್ಪಡುವುದೇ ಆಗಿದೆ. ಸಾಯುವ ಮುನ್ನ ಧರ್ಮಕಾರ್ಯ ಗಳೇನಾದರೂ ಉಳಿದಿದ್ದರೆ ಬೇಗನೆ ಅವುಗಳನ್ನು ಮುಗಿಸಿಕೋ' ಎಂದನು.

ಹಂತಾಸ್ಮಿ ವೃಷಸೇನಂ ತೇ ಪ್ರೇಕ್ಷಮಾಣಸ್ಯ ಸಂಯುಗೇ ।
ಯೇ ಚಾನ್ಯೇಽಪ್ಯುಪಯಾಸ್ಯಂತಿ ಬುದ್ಧಿಮೋಹೇನ ಮಾಂ ನೃಪಾಃ ॥ ೨೦ ॥

ನಾನು ಯುದ್ಧದಲ್ಲಿ ವೃಷಸೇನನನ್ನು ನಿನ್ನ ಕಣ್ಣೆದುರಿನಲ್ಲಿಯೇ ಕೊಲ್ಲಲಿದ್ದೇನೆ. ಅದೇ ರೀತಿಯಾಗಿ ಬುದ್ಧಿಗೆಟ್ಟು ನನ್ನೆದುರು (ನಿನ್ನ ಪತಿಯಿಂದ) ಹೋರಾಡಲು ಬರುವ ರಾಜರುಗಳನ್ನೆಲ್ಲ ಯಮಲೋಕಕ್ಕೆ ಅಟ್ಟುವೆನು.

ತಾಂಶ್ಚ ಸರ್ವಾನ್ ಹನಿಷ್ಯಾಮಿ ಸತ್ಯೇನಾಯುಧಮಾಲಭೇ ।
ತ್ವಾಂ ಚ ಮೂಢಾಕೃತಪ್ರಜ್ಞಮತಿಮಾನಿನಮಾಹವೇ ॥ ೨೧ ॥
ದೃಷ್ಟ್ವಾ ತಂ ದುರ್ಯೋಧನೋ ಮಂದೋ ಭೃಶಂ ತಪ್ಸ್ಯತಿ ಪಾತಿತಮ್ ।
ಅರ್ಜುನೇನ ಪ್ರತಿಜ್ಞಾತೇ ವಧೇ ಕರ್ಣಸುತಸ್ಯ ತು ॥ ೨೨ ॥

ನಾನು ಶಸ್ತ್ರವನ್ನು ಸ್ಪರ್ಶಿಸಿ ಪ್ರತಿಜ್ಞಾಪೂರ್ವಕವಾಗಿ ಸತ್ಯವನ್ನೇ ಈ ರೀತಿಯಾಗಿ ಹೇಳುತ್ತಲಿದ್ದೇನೆ—'ಎಲೋ ಮೂರ್ಖನೇ! ದುರ್ಬುದ್ಧಿಯುವನೂ, ಟೊಳ್ಳುಬಡಿವಾರ ವನ್ನು ಕೊಚ್ಚಿಕೊಳ್ಳುವವನೂ ಆದ ನಿನ್ನನ್ನು ಯುದ್ಧದ ಕಾಲಕ್ಕೆ ನೆಲಕ್ಕುರುಳಿಸುವುದನ್ನು ಕಂಡು ಪೆದ್ದನಾದ ದುರ್ಯೋಧನ ಕೂಡ ಪಶ್ಚಾತ್ತಾಪಪಡುವನು'—ಅರ್ಜುನನು ಈ ಬಗೆಯಾಗಿ ವೃಷಸೇನನ ವಧೆಯ ಪಣತೊಟ್ಟನು.

**ಕರ್ಣ/೫**

ಧೃತರಾಷ್ಟ್ರನು ಯುದ್ಧದಲ್ಲಿ ಅಂದಿನವರೆಗೆ ಮಡಿದ ವೀರರನ್ನು ಕುರಿತು ಸಂಜಯು ನನ್ನು ಕೇಳಿದನು. ಅವನು ಕರ್ಣನ ಸಾವಿನವರೆಗಿನ ವೃತ್ತಾಂತವನ್ನೆಲ್ಲ ಹೇಳಿದನು. ಅರ್ಜುನನು ವೃಷಸೇನನ ವಧೆಗಾಗಿ ತೊಟ್ಟ ಪಣ ಹೀಗಿತ್ತು—

ಸಮಃ ಕರ್ಣಸ್ಯ ಸಮರೇ ಯಃ ಸ ಕರ್ಣಸ್ಯ ಪಶ್ಯತಃ ।
ವೃಷಸೇನೋ ಮಹಾತೇಜಾಃ ಶೀಘ್ರಾಸ್ತ್ರೋ ದೃಢವಿಕ್ರಮಃ ॥ ೨೩॥

ಅಭಿಮನ್ಯೋರ್ವಧಂ ಸ್ಮೃತ್ವಾ ಪ್ರತಿಜ್ಞಾಮಪಿ ಚಾತ್ಮನಃ ।
ಧನಂಜಯೇನ ವಿಕ್ರಮ್ಯ ಗಮಿತೋ ಯಮಸಾದನಮ್ ॥ ೨೪ ॥

ಅಭಿಮನ್ಯುವಿನ ಕೊಲೆಯಿಂದಾಗಿ ಕ್ರುದ್ಧನಾದ ಅರ್ಜುನನು ತನ್ನ ಪಣವನ್ನು ಪೂರ್ತಿಗೊಳಿಸಲೆಂದು ಸಮರಾಂಗಣದಲ್ಲಿ ಕರ್ಣನಂತೆಯೇ ಕಲಿತನವನ್ನು ಮೆರೆಯುವವನು, ಕುಶಲತೆಯಿಂದ ಅಸ್ತ್ರಗಳನ್ನು ಬಳಸುವವನು, ಸುದೃಢನು, ಬಲದಂಡನು ಆದ ಕರ್ಣನ ಮಗ ವೃಷಸೇನನನ್ನು ಕರ್ಣನ ಕಣ್ಣೆದುರಿನಲ್ಲಿಯೇ ಯಮಲೋಕಕ್ಕೆ ತಳ್ಳಿದನು.

+ ಪುನರುಲ್ಲೇಖ : ಕರ್ಣ—೬೩/೯೯, ೧೦೦.

**ಕರ್ಣ/೬೯**

೯

## ಗಾಂಡೀವವನ್ನು ಅವಮಾನಗೊಳಿಸಿದವನ ವಧೆ

ಅರ್ಜುನನಿಂದ ಕರ್ಣನ ಕೊಲೆಗೆ ತುಂಬ ತಡವಾಗುತ್ತಿರುವುದನ್ನು ಕಂಡು ಯುಧಿಷ್ಠಿರನಿಗೆ ಎಲ್ಲಿಲ್ಲದ ಕೋಪ ಉಕ್ಕೇರಿ ಹರಿಯಿತು. ಅವನು, 'ಹಾಗಿದ್ದರೆ ನಿನ್ನ ಈ ಗಾಂಡೀವ ಬಿಲ್ಲನ್ನು ಶಸ್ತ್ರಾಸ್ತ್ರಗಳಲ್ಲಿ ನುರಿತವನಾದ ಇನ್ನಾರಿಗಾದರೂ ಕೊಟ್ಟುಬಿಡು' ಎಂದನು. ಗಾಂಡೀವಕ್ಕಾದ ಈ ಅವಮರ್ಯಾದೆ ಅರ್ಜುನನಿಗೆ ಸಹಿಸದಂತಿತ್ತು. ಅವನು ಯುಧಿಷ್ಠಿರನನ್ನು ಕೊಲ್ಲಲೆಂದು ಕತ್ತಿಯನ್ನು ಹಿರಿದನು. ಇದೆಲ್ಲವನ್ನು ಕಂಡು ಶ್ರೀಕೃಷ್ಣ ತುಂಬ ಬೆರಗಾದನು. ಅವನು ಅರ್ಜುನನನ್ನು ಅವನ ಮುಂಗೋಪಕ್ಕಾಗಿ ಹಳಿದನು. ಅವನಿಗೆ ಶೋಭಿಸದ ಇಂಥ ನಡತೆಗೆ ಕಾರಣವೇನೆಂದು ಅವನನ್ನು ಕೇಳಿದನು. ಅದಕ್ಕೆ ಸಂತಪ್ತ

---

ನೀಲಕಂಠ ಟೀಕೆ—

ತ್ರಿಷು ಧರ್ಮೇಷು ವರ್ತತೇ ।
ಯದಿ ಯುಧ್ಯಮಾನೋ ಹನ್ಯತೇ ತದಾ ತೂರ್ಣಂ ಸ್ವರ್ಗಪ್ರಾಪ್ತಿರೇವ ತಸ್ಯ ಧರ್ಮಃ ।
ಅಥ ಪಲಾಯಮಾನೋ ಹನ್ಯತೇ ತದಾ ನರಕಪ್ರಾಪ್ತಿರೇವ ತಸ್ಯ ಧರ್ಮಃ ।
ಅಥ ಮದ್ಭಯಾನ್ ಸ್ವದೇಶಂ ಗಚ್ಛತಿ ತಥಾ ಯಶಃ ಶರೀರನಾಶ ಏವ ತಸ್ಯ ಧರ್ಮಃ ।

ಸ್ವರ್ಗಪ್ರಾಪ್ತಿ, ನರಕವಾಸ ಹಾಗೂ ಅಪಕೀರ್ತಿ ಎಂಬಿವೇ ಮೂರು ಧರ್ಮಗಳು ಜಯದ್ರಥನೆದುರು ಇವೆ.

ನಾದ ಅರ್ಜುನನು ಯುಧಿಷ್ಠಿರನ ಮೇಲೆ ತನ್ನ ಕಣ್ಣನ್ನು ನೆಟ್ಟು ಶ್ರೀಕೃಷ್ಣನಿಗೆ ಹೀಗೆಂದನು—

ಅನ್ಯಸ್ಮೈ ದೇಹಿ ಗಾಂಡೀವಮಿತಿ ಮಾಂ ಯೋಽಭಿಚೋದಯೇತ್ ॥ ೯ ॥

ಭಿಂದ್ಯಾಮಹಂ ತಸ್ಯ ಶಿರ ಇತ್ಯುಪಾಂಶುವ್ರತಂ ಮಮ ।
ತದುಕ್ತಂ ಮಮ ಚಾನೇನ ರಾಜ್ಞಾಮಿತಪರಾಕ್ರಮ ॥ ೧೦ ॥

ಸಮಕ್ಷಂ ತವ ಗೋವಿಂದ ನ ತತ್ ಕ್ಷಂತುಮಿಹೋತ್ಸಹೇ ।
ತಸ್ಮಾದೇನಂ ವಧಿಷ್ಯಾಮಿ ರಾಜಾನಂ ಧರ್ಮಭೀರುಕಮ್ ॥ ೧೧ ॥

'ನನ್ನ ಗಾಂಡೀವ ಬಿಲ್ಲನ್ನು ಇನ್ನೊಬ್ಬನಿಗೆ ಕೊಟ್ಟುಬಿಡೆಂದು (ಉದ್ಧಟತನದಿಂದ) ನನಗೆ ಹೇಳುವವನ ರುಂಡವನ್ನು ಅವನ ಮುಂಡದಿಂದ ಬೇರ್ಪಡಿಸುವೆನೆಂದು ನಾನು (ಹಿಂದೆಯೇ) ಮನದಲ್ಲಿ ಪಣತೊಟ್ಟಿದ್ದೇನೆ. ಎಲೈ ಗೋವಿಂದನೇ! ಈ ಗಾಂಡೀವ ಬಿಲ್ಲನ್ನು ಇನ್ನೊಬ್ಬರಿಗೆ ಕೊಟ್ಟುಬಿಡೆಂದು ಈತ ನಿನ್ನೆದುರಿನಲ್ಲೇ ಹೇಳಿರುವನು. ಆದ್ದರಿಂದ ಇವನನ್ನು ಕ್ಷಮಿಸಲಾರೆ. ಇವನನ್ನು ಕೊಂದೇಬಿಡುವೆನು.'

ಶ್ರೀಕೃಷ್ಣ ಅರ್ಜುನನಿಗೆ ತಿಳಿಹೇಳುತ್ತಾನೆ. ಮಾನವಂತನಿಗೆ ಇನ್ನೊಬ್ಬರಿಂದ ನಿಂದೆಯನ್ನು ಕೇಳಿಕೊಳ್ಳುವುದೆಂದರೆ ಸಾವು ಬಂದಂತೆನ್ನಿಸುತ್ತದೆ—ಎಂಬುದನ್ನು ಅವನಿಗೆ ಮನಗಾಣಿಸಿದನು. ಈ ದಾರಿಯನ್ನು ಅವಲಂಬಿಸಿ ತನ್ನ ಪಣವನ್ನು ಪೂರ್ತಿಗೊಳಿಸಲು ಅರ್ಜುನನಿಗೆ ಹೇಳಿದನು. ಆದರಿಂದಾಗಿ ಯುಧಿಷ್ಠಿರನ ಕೊಲೆಯ ಸನ್ನಿವೇಶ ತಪ್ಪಿಹೋಯಿತು.

**ಕರ್ಣ/೭೦**

ಅರ್ಜುನನ ನಿಂದೆಗೆ ಗುರಿಯಾಗಿ ಯುಧಿಷ್ಠಿರ ಬಲುದುಃಖಿತನಾದನು. ಅವನು ರಾಜ್ಯವನ್ನು ಭೀಮನಿಗೊಪ್ಪಿಸಿ ಕಾಡಿಗೆ ಹೊರಟು ನಿಂತನು. ಶ್ರೀಕೃಷ್ಣನು ಅವನಿಗೂ ತಿಳಿಹೇಳಿದನು. ಆತನನ್ನು ಈ ದುಡುಕಿನಿಂದ ದೂರವಿರಿಸಿದನು. ಅವನು ಯುಧಿಷ್ಠಿರನ ಜೊತೆಗೆ ಮಾತನಾಡುವಾಗ ಅವನಿಗೆ ಅರ್ಜುನನ ಪಣದ ಬಗೆಗೆ ಹೇಳಿದನು—

ರಾಜನ್ ವಿದಿತಮೇತದ್ ವೈ ಯಥಾ ಗಾಂಡೀವಧನ್ವನಃ ।
ಪ್ರತಿಜ್ಞಾ ಸತ್ಯಸಂಧಸ್ಯ ಗಾಂಡೀವಂ ಪ್ರತಿ ವಿಶ್ರುತಾ ॥ ೪೯ ॥

ಬ್ರೂಯಾದ್ ಯ ಏವಂ ಗಾಂಡೀವಮನ್ಯಸ್ಮೈ ದೇಯಮಿತ್ಯುತ ।
ವಧ್ಯೋಽಸ್ಯ ಸ ಪುಮಾಂಲ್ಲೋಕೇ ತ್ವಯಾ ಚೋಕ್ತೋಽಯಮೀದೃಶಮ್ ॥ ೫೦ ॥

ತತಃ ಸತ್ಯಾಂ ಪ್ರತಿಜ್ಞಾಂ ತಾಂ ಪಾರ್ಥೇನ ಪ್ರತಿರಕ್ಷತಾ ।
ಮಚ್ಛಂದಾದವಮಾನೋಽಯಂ ಕೃತಸ್ತವ ಮಹೀಪತೇ ॥ ೫೧ ॥

ಗುರೂಣಾಮವಮಾನೋ ಹಿ ವಧ ಇತ್ಯಭಿಧೀಯತೇ ।
ತಸ್ಮಾತ್ ತ್ವಂ ವೈ ಮಹಾಬಾಹೋ ಮಮ ಪಾರ್ಥಸ್ಯ ಚೋಭಯೋಃ ॥ ೫೨ ॥

'ಎಲೈ ರಾಜನೇ! ಗಾಂಡೀವ ಧನುಸ್ಸಿನ ಬಗೆಗಿನ ಅರ್ಜುನನ ಪ್ರತಿಜ್ಞೆ ಎಲ್ಲರಿಗೂ (ನಿನಗೂ) ತಿಳಿದದ್ದೇ. ಅದನ್ನು ಇನ್ನೊಬ್ಬರಿಗೆ ಕೊಟ್ಟುಬಿಡೆಂದು ಅನ್ನುವವನು ಅರ್ಜುನನ ಕೈಯಿಂದ ಸಾವಿಗೀಡಾಗಲೇಬೇಕು. ನೀನೇ ಅವನಿಗೆ ಹೀಗೆಂದವನು. ಅರ್ಜುನ ತನ್ನ ಪಣದ ಪೂರ್ತಿಗಾಗಿಯೆಂದೇ ನನ್ನ ಹೇಳಿಕೆಯ ಮೇರೆಗೆ ನಿನ್ನನ್ನು ಹೀಯಾಳಿಸಿ ದನು. ಗುರುಗಳನ್ನು ಅವಮಾನಕ್ಕೀಡುಮಾಡುವುದೆಂದರೆ ಅವರನ್ನು ಕೊಂದಂತೆಯೇ ಸರಿ. ಹೀಗಾಗಿ ಅರ್ಜುನ ಹಾಗೂ ನನ್ನ ಈ ಸತ್ಯಸಂಧತೆಗಾಗಿ ನಮ್ಮಿಬ್ಬರನ್ನೂ ಕ್ಷಮಿಸು.'

+ ಪುನರುಲ್ಲೇಖ : ಕರ್ಣ–೬೯/೧೨, ೧೩, ೨೭, ೭೨, ೭೫, ೮೮ ; ೭೦/೪೯, ೫೦, ೫೪, ೫೫.

## ೩. ಅಲಾಯುಧ ದ್ರೋಣ/೧೭೬

ಕರ್ಣ ಹಾಗೂ ಘಟೋತ್ಕಚರಲ್ಲಿ ಕಾಳಗ ಸಾಗಿದಾಗ ರಾಕ್ಷಸರ ದೊರೆ ಅಲಾಯುಧ ತಾನಾಗಿಯೇ ದುರ್ಯೋಧನನ ಬಳಿಗೆ ಬಂದನು. ಅವನಿಗೆ ಭೀಮನನ್ನು ಕಂಡರೆ ಆಗು ತ್ತಿರಲಿಲ್ಲ. ಭೀಮನು ಅಲಾಯುಧನ ಸೋದರ ಹಿಡಿಂಬ, ಬಕಾಸುರರನ್ನು ಕೊಂದಿದ್ದನು. ಇದೂ ಅಲ್ಲದೆ ಹಿಡಿಂಬೆಯನ್ನು ಮದುವೆಯಾಗಿದ್ದನು. ಹೀಗಾಗಿ ಅಲಾಯುಧನು ಭೀಮನ ಮೇಲೆ ಸೇಡು ತೀರಿಸಿಕೊಳ್ಳಲೆಂದು ಅಲ್ಲಿಗೆ ಬಂದಿದ್ದನು. ಅವನು ಘಟೋತ್ಕಚ ನನ್ನು ಕೊಲ್ಲುವ ಉದ್ದೇಶದಿಂದ ದುರ್ಯೋಧನನಿಗೆ ಹೀಗೆ ಅಂದನು—

ತಮಹಂ ಸಗಣಂ ರಾಜನ್ ಸವಾಜಿರಥಕುಂಜರಮ್ ॥ ೮ ॥
ಹೈಡಿಂಬಿಂ ಸ ಸಹಾಮಾತ್ಯಂ ಹಂತುಮಭ್ಯಾಗತಃ ಸ್ವಯಮ್ ।
ಅದ್ಯ ಕುಂತೀಸುತಾನ್ ಸರ್ವಾನ್ ವಾಸುದೇವಪುರೋಗಮಾನ್ ॥ ೯ ॥
ಹತ್ವಾ ಸಂಭಕ್ಷಯಿಷ್ಯಾಮಿ ಸರ್ವೈರನುಚರೈಃ ಸಹ ।
ನಿವಾರಯ ಬಲಂ ಸರ್ವಂ ವಯಂ ಯೋತ್ಸ್ಯಾಮ ಪಾಂಡವಾನ್ ॥ ೧೦ ॥

'ಎಲೈ ರಾಜನೇ! ನಾನಿಲ್ಲಿಗೆ ಬಂದಿರುವುದು ಭೀಮನನ್ನು ಅವನ ಆನೆಗಳು, ಕುದುರೆ ಗಳು, ರಥಗಳೊಂದಿಗೂ, ಘಟೋತ್ಕಚನನ್ನು ಅವನ ಅಮಾತ್ಯರೊಂದಿಗೆ ಕೊಂದುಬಿಡ ಲೆಂದು. ಶ್ರೀಕೃಷ್ಣನ ನಾಯಕತ್ವದಲ್ಲಿರುವ ಪಾಂಡವರು ಹಾಗೂ ಅವರ ಹಿಂಬಾಲಕರನ್ನು ನಾನಿಂದು ಕೊಂದುಬಿಡಲಿದ್ದೇನೆ. ನೀನು ನಿನ್ನ ಸೇನೆಯನ್ನು ಹಿಂತೆಗೆದುಕೋ. ನಾವೇ ಪಾಂಡವರೊಂದಿಗೆ ಹೋರಾಡುವೆವು.'

ಈ ಮಾತುಗಳು ಪ್ರತಿಜ್ಞೆಯಂತೆಯೇ ಇವೆ. ಪಣವೆಂಬ ಪದ ಮಾತ್ರವಿಲ್ಲ.

ದ್ರೋಣ/೧೭೮

ಇಲ್ಲಿ 'ಪಣ'ವೆಂಬ ಖಚಿತವಾದ ಉಲ್ಲೇಖವಿದೆ.

ದುರ್ಯೋಧನನು ಅಲಾಯುಧನ ಆಸೆಯನ್ನು ಸಂತೋಷದಿಂದ ಪೂರೈಸಿದನು. ಅಲಾಯುಧ, ಘಟೋತ್ಕಚರಲ್ಲಿ ಘನಘೋರವಾದ ಕಾಳಗ ನಡೆಯಿತು. ಕೊನೆಯಲ್ಲಿ

ಮಾತ್ರ ಘಟೋತ್ಕಚನು ಅಲಾಯುಧನ ರುಂಡವನ್ನು ಕಡಿದು ಹಾರಿಸಿ ದುರ್ಯೋಧನನ ಎದುರು ಚೆಲ್ಲಿದನು. ಅದನ್ನು ಕಂಡು ದುರ್ಯೋಧನ ಬಲುದುಃಖಿತನಾದನು. ಏಕೆಂದರೆ—

ತೇನ ಹ್ಯಸ್ಯ ಪ್ರತಿಜ್ಞಾತಂ ಭೀಮಸೇನವಧಂ ಯುಧಿ ।
ಹಂತೇತಿ ಸ್ವಯಮಾಗಮ್ಯ ಸ್ಮರತಾ ವೈರಮುತ್ತಮಮ್ ॥ ೩೮ ॥

ಅಲಾಯುಧ ತಾನಾಗಿಯೇ ದುರ್ಯೋಧನನಲ್ಲಿಗೆ ಬಂದಿದ್ದನು. ತಾನು ಹಾಗೂ ಭೀಮನ ನಡುವೆ ಇದ್ದ ಹಳೆಯ ಹಗೆತನದ ಬಗೆಗೆ ಹೇಳಿ ಯುದ್ಧದಲ್ಲಿ ತಾನು ಭೀಮನನ್ನು ಕೊಲ್ಲುವುದಾಗಿ ಪಣತೊಟ್ಟಿದ್ದನು.

## ೪. ಅಶ್ವತ್ಥಾಮ

ಆದಿ/೨

೧

### ಧೃಷ್ಟದ್ಯುಮ್ನ ಮೊದಲಾದ ಪಾಂಚಾಲರು ಹಾಗೂ ಪಾಂಡವರ ವಧೆ

ರಣಭೂಮಿಯಲ್ಲಿ ಮರಣೋನ್ಮುಖನಾಗಿ ಬಿದ್ದುಕೊಂಡಿರುವ ದುರ್ಯೋಧನನನ್ನು ಕಂಡು ಅಶ್ವತ್ಥಾಮನಿಗೆ ಬಲು ದುಃಖವಾಯಿತು. ಭೀಮನು ಅಧರ್ಮದಿಂದ ದುರ್ಯೋಧನನ ಊರುಭಂಗವನ್ನು ಮಾಡಿ ಅವನನ್ನು ಈ ದುರವಸ್ಥೆಯಲ್ಲಿರಿಸಿದ್ದನು. ಹೀಗಾಗಿ ಅಶ್ವತ್ಥಾಮನಿಗೆ ಅವನ ಮೇಲೆ ತಾಳಲಾಗದಷ್ಟು ಸಿಟ್ಟುಬಂದಿತು. ಅವನು ಈ ರೀತಿ ಪಣತೊಟ್ಟನು—

ಸಮೇತ್ಯ ದದೃಶುರ್ಭೂಮೌ ಪತಿತಂ ರಣಮೂರ್ಧನಿ ।
ಪ್ರತಿಜಜ್ಞೇ ದೃಢಕ್ರೋಧೋ ದ್ರೋಣಿರ್ಯತ್ರ ಮಹಾರಥಃ ॥ ೨೯೩ ॥
ಅಹತ್ವಾ ಸರ್ವಪಂಚಾಲಾನ್ ಧೃಷ್ಟದ್ಯುಮ್ನಪುರೋಗಮಾನ್ ।
ಪಾಂಡವಾಂಶ್ಚ ಸಹಾಮಾತ್ಯಾನ್ ನ ವಿಮೋಕ್ಷ್ಯಾಮಿ ದಂಶನಮ್ ॥ ೨೯೪ ॥

'ನಾನು ಧೃಷ್ಟದ್ಯುಮ್ನ ಮೊದಲಾದ ಪಾಂಚಾಲರನ್ನು ಹಾಗೂ ಪಾಂಡವರನ್ನು ಅವರ ಅಮಾತ್ಯರೊಂದಿಗೆ ಕೊಲ್ಲುವ ತನಕ ಮೈಮೇಲಿನ ಕವಚವನ್ನು ತೆಗೆಯಲಾರೆ' ಎಂದು ಅಶ್ವತ್ಥಾಮನು ನೆತ್ತರಿನ ಮಡುವಿನಲ್ಲಿ ಬಿದ್ದಿದ್ದ ದುರ್ಯೋಧನನನ್ನು ಕಂಡು ಪಣತೊಟ್ಟನು. ಅವನು ಅದನ್ನು ದುರ್ಯೋಧನನಿಗ ಹೇಳಿದನು.

+ ಪುನರುಲ್ಲೇಖಗಳು : ದ್ರೋಣ—೧೫೬/೧೧೭, ೧೧೬.

ಶಲ್ಯ/೬೫

ಅಶ್ವತ್ಥಾಮನಿಗೆ ದ್ರೋಣಾಚಾರ್ಯನ ಕೊಲೆಗಿಂತಲೂ ದುರ್ಯೋಧನನದು ಹೆಚ್ಚು ಅಸಹನೀಯವಾಗಿ ಕಂಡಿತು. ಅವನು ಸಾವಿನ ಹೊಸ್ತಿಲಲ್ಲಿ ಇದ್ದ ದುರ್ಯೋಧನನ ಕೈಮೇಲೆ ಕೈಯಿಟ್ಟು ಹೀಗೆಂದನು—

ಶೃಣು ಚೇದಂ ವಚೋ ಮಹ್ಯಂ ಸತ್ಯೇನ ವದತಃ ಪ್ರಭೋ ॥ ೩೫ ॥

ಇಷ್ಟಾಪೂರ್ತೇನ ದಾನೇನ ಧರ್ಮೇಣ ಸುಕೃತೇನ ಚ ।
ಅದ್ಯಾಹಂ ಸರ್ವಪಂಚಾಲಾನ್ ವಾಸುದೇವಸ್ಯ ಪಶ್ಯತಃ ॥ ೩೬ ॥
ಸರ್ವೋಪಾಯೈರ್ಹಿ ನೇಷ್ಯಾಮಿ ಪ್ರೇತರಾಜನಿವೇಶನಮ್ ॥ ೩೭ ॥

'ನನ್ನ ನುಡಿಯನ್ನು ಆಲಿಸು. ನಾನು ಆಣೆಮಾಡುತ್ತೇನೆ. ಅಲ್ಲದೆ ಇಷ್ಟ, ತೃಪ್ತಿ, ದಾನ, ಧರ್ಮ ಹಾಗೂ ಸುಕೃತಗಳ ಮೇಲೆ ಆಣೆಯಿಟ್ಟು ಪಣತೊಡುವೆನು. ಶ್ರೀಕೃಷ್ಣನ ಕಣ್ಣೆದುರಿನಲ್ಲೇ ಪಾಂಚಾಲರನ್ನೆಲ್ಲ ಎಲ್ಲ ಉಪಾಯಗಳಿಂದ ಯಮಲೋಕಕ್ಕೆ ರವಾನಿಸು ವೆನೆಂಬುದೇ ನನ್ನೀ ಪಣವು. (ನೀನು ನನಗೆ ಒಪ್ಪಿಗೆಯನ್ನಿತ್ತರೆ ಸಾಕು.)'

+ ಈ ಪಣದಲ್ಲಿ ಆಣೆಯೂ ಇದೆ.

+ ಪುನರುಲ್ಲೇಖಗಳು : ಸೌಪ್ತಿಕ—೧/೪೭, ೪೮ ; ೮/೧೪೫, ೧೪೬.

ದ್ರೋಣ/೧೯೫

ಧೃಷ್ಟದ್ಯುಮ್ನನು ಅಧರ್ಮದಿಂದ ದ್ರೋಣಾಚಾರ್ಯನನ್ನು ಕೊಂದನೆಂಬ ದುರುಳ ವಾರ್ತೆಯನ್ನು ಕೇಳಿ ಅಶ್ವತ್ಥಾಮನಿಗೆ ಬಲುದುಃಖವಾಯಿತು. ಅವನು ದುರ್ಯೋಧನ ನಿಗೆ ಹೀಗೆಂದನು—

ಅಕಾರ್ಯಂ ಪರಮಂ ಕೃತ್ವಾ ಮಿಥ್ಯಾವಾದೀ ಚ ಪಾಂಡವಃ ।
ಯೋ ಹ್ಯಸೌ ಧರ್ಮನಾऽऽಚಾರ್ಯಂ ಶಸ್ತ್ರಂ ಸಂನ್ಯಾಸಯಂತ್ ತದಾ ॥ ೧೩ ॥

ತಸ್ಮಾದ್ಯ ಧರ್ಮರಾಜಸ್ಯ ಭೂಮಿಃ ಪಾಸ್ಯತಿ ಶೋಣಿತಮ್ ।
ಶಪೇ ಸತ್ಯೇನ ಕೌರವ್ಯ ಇಷ್ಟಾಪೂರ್ತೇನ ಚೈವ ಹ ॥ ೧೪ ॥
ಅಹತ್ವಾ ಸರ್ವಪಂಚಾಲಾನ್ ಜೀವೇಯಂ ನ ಕಥಂಚನ ।
ಸರ್ವೋಪಾಯೈರ್ಯತಿಷ್ಯಾಮಿ ಪಂಚಾಲಾನಾಮಹಂ ವಧೇ ॥ ೧೫ ॥

ಧೃಷ್ಟದ್ಯುಮ್ನಂ ಚ ಸಮರೇ ಹಂತಾಹಂ ಪಾಪಕಾರಿಣಮ್ ।
ಕರ್ಮಣಾ ಯೇನ ತೇನೇಹ ಮೃದುನಾ ದಾರುಣೇನ ಚ ॥ ೧೬ ॥
ಪಂಚಾಲಾನಾಂ ವಧಂ ಕೃತ್ವಾ ಶಾಂತಿಂ ಲಬ್ಧಾಸ್ಮಿ ಕೌರವ ॥ ೧೭ ॥

ಪಾಂಡುವಿನ ಮಗ, ಯುಧಿಷ್ಠಿರನು, ಧರ್ಮರಾಜನೆನ್ನಿಸಿದವನು ಸುಳ್ಳು ಹೇಳಿ ಮೋಸದಿಂದ ನನ್ನ ತಂದೆಯು ಶಸ್ತ್ರಗಳನ್ನು ಕೆಳಗಿಡುವಂತೆ ಮಾಡಿದನು. ಇಂದು ನೆಲವು ಅವನ ನೆತ್ತರನ್ನು ಸೇವಿಸಲಿದೆ. ಆತನ ಈ ಕಾಯಕ ಬಲು ಘೋರವೂ, ಅಯೋಗ್ಯವೂ ಆದುದು. ಎಲೈ ದುರ್ಯೋಧನನೇ! ನಾನು ಇಷ್ಟ, ತೃಪ್ತಿಗಳ ಮೇಲೆ ಆಣೆಯಿಟ್ಟು ನಿನಗೆ ಹೇಳುವುದೇನೆಂದರೆ ಪಾಂಚಾಲರೆಲ್ಲರನ್ನೂ ಯಮಧರ್ಮನಲ್ಲಿಗೆ ಕಳಿಸದ ಹೊರತು ನಾನು ಬದುಕಲಾರೆ. ಪಾಂಚಾಲರ ವಧೆಗಾಗಿ ನನಗೆ ದೊರಕಬಹುದಾದ ಸಾಧಗಳನ್ನೆಲ್ಲ ಬಳಸುವೆನು. ಈ ಸಾಧನಗಳು ಸೌಮ್ಯವಾಗಿರಲಿ ಇಲ್ಲವೇ ಘೋರವಾಗಿರಲಿ. ಪಾಪಕರ್ಮ ವನ್ನು ಮಾಡಿದ ಧೃಷ್ಟದ್ಯುಮ್ನನನ್ನು ಕೊಂದೇಬಿಡುವೆನು. ಪಾಂಚಾಲರನ್ನು ನಾಶಪಡಿ ಸಿದ ತರುವಾಯವೇ ನನಗೆ ನೆಮ್ಮದಿ ದೊರಕಲಿದೆ.

ದ್ರೋಣ/೧೯೯

ಧೃಷ್ಟದ್ಯುಮ್ನನ ಕೊಲೆಯ ಪಣ ಹೀಗಿತ್ತೆಂದು ಸಂಜಯ ಧೃತರಾಷ್ಟ್ರನಿಗೆ ಹೇಳುತ್ತಲಿದ್ದಾನೆ. ಧೃಷ್ಟದ್ಯುಮ್ನನು ದ್ರೋಣಾಚಾರ್ಯನನ್ನು ಕೊಂದು ಅವನ ತಲೆಗೂದಲುಗಳನ್ನು ಹಿಡಿದೆಳೆದ ಕಾರಣ ಅಶ್ವತ್ಥಾಮನು ಬಲು ಕೆರಳಿ ಕೆಂಡವಾಗಿದ್ದನು. ಅವನು ಕೌರವರಿಗೆ ಹೀಗೆಂದನು—

ಯಸ್ಮಾದ್ ಯುಧ್ಯಂತಮಾಚಾರ್ಯಂ ಧರ್ಮಕಂಚುಕಮಾಸ್ಥಿತಃ ।
ಮುಂಚ ಶಸ್ತ್ರಮಿತಿ ಪ್ರಾಹ ಕುಂತೀಪುತ್ರೋ ಯುಧಿಷ್ಠಿರಃ ॥ ೫ ॥

ತಸ್ಮಾತ್ ಸಂಪಶ್ಯತಸ್ತಸ್ಯ ದ್ರಾವಯಿಷ್ಯಾಮಿ ವಾಹಿನೀಮ್ ।
ವಿದ್ರಾವ್ಯ ಸರ್ವಾನ್ ಹಂತಾಸ್ಮಿ ಜಾಲ್ಮಂ ಪಾಂಚಾಲಮೇವ ತಂ ॥ ೬ ॥

ಸರ್ವಾನೇತಾನ್ ಹನಿಷ್ಯಾಮಿ ಯದಿ ಯೋತ್ಸ್ಯಂತಿ ಮಾಂ ರಣೇ ।
ಸತ್ಯಂ ತೇ ಪ್ರತಿಜಾನಾಮಿ ಪರಿವರ್ತಯ ವಾಹಿನೀಮ್ ॥ ೭ ॥

ಧರ್ಮದ ಸೋಗು ಹಾಕುವ ಕುಂತೀಪುತ್ರ ಯುಧಿಷ್ಠಿರನು ಹೋರಾಡುತ್ತಲಿದ್ದ ದ್ರೋಣಾಚಾರ್ಯನು ಶಸ್ತ್ರಗಳನ್ನು ಇಡುವಂತೆ ಮಾಡಿದನು. ನಾನಿಂದು ಅವನ ಕಣ್ಣೆದುರಿನಲ್ಲೇ ಅವನ ಸೇನೆಯನ್ನೆಲ್ಲ ಓಡಿಸಿಬಿಡುವೆನು. ಆಮೇಲೆ ಅಧಮರಾದ ಆ ಪಾಂಚಾಲರನ್ನು ಕೊಲ್ಲುವೆನು. ನನ್ನೊಂದಿಗೆ ಕಾದಾಡಬಯಸುವವರನ್ನೆಲ್ಲ ಕೊಂದುಬಿಡುವೆ. ನಿನಗೆ ಈ ಸತ್ಯವನ್ನು ಪ್ರತಿಜ್ಞಾಪೂರ್ವಕವಾಗಿ ಹೇಳುತ್ತಲಿದ್ದೇನೆ.

ಕರ್ಣ/೫೭

ಅಶ್ವತ್ಥಾಮನು ಪ್ರತಿಜ್ಞಾಪೂರ್ವಕವಾಗಿ ದುರ್ಯೋಧನನಿಗೆ ಹೀಗೆಂದನು—

ಧೃಷ್ಟದ್ಯುಮ್ನನು ಶಸ್ತ್ರಗಳನ್ನಿಟ್ಟು ನಿಂತ ನನ್ನ ತಂದೆಯನ್ನು ಕೊಂದಿದ್ದಾನೆ. ಆದರ ಸೇಡು ಹಾಗೂ ಕೌರವರ ಕಾರ್ಯಸಿದ್ಧಿಗಾಗಿಯೆಂದು—

ಧೃಷ್ಟದ್ಯುಮ್ನಮಹತ್ವಾಹಂ ನ ವಿಮೋಕ್ಷ್ಯಾಮಿ ದಂಶನಮ್ ।
ಅನೃತಾಯಾಂ ಪ್ರತಿಜ್ಞಾಯಾಂ ನಾಹಂ ಸ್ವರ್ಗಮವಾಪ್ನುಯಾಮ್ ॥ ೯ ॥
ಅರ್ಜುನೋ ಭೀಮಸೇನಶ್ಚ ಯೋಧೋ ಯೋ ರಕ್ಷಿತಾ ರಣೇ ।
ಧೃಷ್ಟದ್ಯುಮ್ನಸ್ಯ ತಂ ಸಂಖ್ಯೇ ನಿಹನಿಷ್ಯಾಮಿ ಸಾಯಕೈಃ ॥ ೧೦ ॥

ಧೃಷ್ಟದ್ಯುಮ್ನನನ್ನು ಕೊಲ್ಲದ ಹೊರತು ನನ್ನ ಕವಚವನ್ನು ಕಳಚಲಾರೆ. ನನ್ನೀ ಪಣ ಸುಳ್ಳಾದರೆ ನನಗೆ ಸ್ವರ್ಗ ದೊರಕದು. ಧೃಷ್ಟದ್ಯುಮ್ನನ ನೆರವಿಗೆಂದು ಭೀಮ, ಅರ್ಜುನರು ನನ್ನೊಂದಿಗೆ ಕಾದಾಡಲು ಬಂದರೆ ಅವರನ್ನೂ ಕೂಡ ನನ್ನ ಬಾಣಗಳಿಂದ ಕೊಂದು ಬಿಡುವೆ.

+ ಈ ಪಣದಲ್ಲಿ ಸತ್ಯಕ್ರಿಯೆಯ ಛಾಯೆಯಿದೆ.

ಇವೆಲ್ಲ ಪಣಗಳ ಗುರಿ ಪಾಂಚಾಲರು ಹಾಗೂ ಪಾಂಡವರನ್ನು ಸಂಹರಿಸುವುದೇ ಆಗಿದ್ದರೂ ಸನ್ನಿವೇಶಗಳು ಬೇರೆಬೇರೆಯಾಗಿವೆ. ಅವೆಂದರೆ—ದ್ರೋಣವಧೆ ಹಾಗೂ ದುರ್ಯೋಧನನ ವಧೆ.

ಉದ್ಯೋಗ/೧೯೩

೨

ದುರ್ಯೋಧನನು ಅಶ್ವತ್ಥಾಮನಿಗೆ, 'ಪಾಂಡವರ ಸೇನೆಯನ್ನು ಸೋಲಿಸಲು ನಿನಗೆಷ್ಟು ಕಾಲಾವಧಿ ಬೇಕಾದೀತು ?' ಎಂದೆನ್ನಲು—

ದ್ರೌಣಿಸ್ತು ದಶರಾತ್ರೇಣ ಪ್ರತಿಜಜ್ಞೇ ಬಲಕ್ಷಯಮ್ ॥ ೧೯ ॥

ತಾನು ಹತ್ತು ದಿನಗಳಲ್ಲಿ ಶತ್ರುಸೈನ್ಯವನ್ನು ಸೋಲಿಸುವುದಾಗಿ ಅವನು ಪಣ ತೊಟ್ಟನು.

+ ಪುನರುಲ್ಲೇಖ : ಉದ್ಯೋಗ—೧೯೪/೫.

## ೫. ಅಸಿತ ದೇವಲ ಶಲ್ಯ/೫೦

ವೈಶಂಪಾಯನನು ಜನಮೇಜಯರಾಜನಿಗೆ ಜೈಗೀಷವ್ಯ ಮುನಿಯ ಯೋಗಸಾಮರ್ಥ್ಯವನ್ನು ಕುರಿತು ಹೇಳುವಲ್ಲಿ ಅಸಿತ ದೇವಲನ ಪಣದ ಉಲ್ಲೇಖ ಬಂದಿದೆ. ಈತನಿಗೆ ಮುನಿಯ ಯೋಗಸಾಮರ್ಥ್ಯದ ಅನುಭವ ಬರುತ್ತಲೇ ಅವನಿಗೆ ಶರಣುಹೋದನು. ತನಗೆ ಸನ್ಯಾಸಿಯಾಗುವ ಬಯಕೆಯಾಗಿದೆಯೆಂದು ಅವನಿಗೆ ಹೇಳಿದನು. ಮುನಿಯು ಅವನಿಗೆ ಸನ್ಯಾಸಿಯ ದೀಕ್ಷೆಯನ್ನು ಕೊಡಲು ಸಿದ್ಧತೆಗಳನ್ನು ಮಾಡಿಕೊಂಡನು. ಆದರೆ ಇದರಿಂದಾಗಿ ದೇವಲನ ಪಿತೃಗಳಿಗೆ ತುಂಬ ಚಿಂತೆಗಿಟ್ಟುಕೊಂಡಿತು. ಅವನು ಸನ್ಯಾಸಿಯಾದರೆ ತಮಗೆ ಆಹಾರ ದೊರಕುವುದೆಂತು ? ಅವರ ಈ ಕಾರುಣ್ಯಪೂರ್ಣವಾದ ಮಾತುಗಳನ್ನು ಕೇಳಿ ದೇವಲನು ಮೋಕ್ಷದಾಸೆಯನ್ನು ಕೈಬಿಡಲು ನಿರ್ಧರಿಸಿದನು. ಇದರಿಂದಾಗಿ ಹಣ್ಣುಗಳು, ಬೇರುಗಳು, ಮದ್ದುಗಳು, ದರ್ಭೆ, ಹೂವುಗಳು ವಿಲಾಪವನ್ನು ಆರಂಭಿಸಿದವು. ಏಕೆಂದರೆ—

ಪುನರ್ನೋ ದೇವಲಃ ಕ್ಷುದ್ರೋ ಮಾನಂ ಛೇತ್ಸ್ಯತಿ ದುರ್ಮತಿಃ ॥ ೬೦ ॥
ಅಭಯಂ ಸರ್ವಭೂತೇಭ್ಯೋ ಯೋ ದತ್ವಾ ನಾವಬುಧ್ಯತೇ ॥ ೬೧ ॥

'ಈ ಸುಳ್ಳುಬುರುಕ ದೇವಲ ನಮ್ಮನ್ನು ಇನ್ನೊಮ್ಮೆ ಹಾಳುಮಾಡುವನು. ತಾನೇ ಪ್ರಾಣಿಮಾತ್ರರೆಲ್ಲರಿಗೂ ಅಭಯವನ್ನಿತ್ತ ತನ್ನ ಪಣವನ್ನೇ ಇನ್ನು ಮರೆತುಬಿಡುವನು.'

+ ಅಸಿತ ದೇವಲನು ಸನ್ಯಾಸವನ್ನು ಪಡೆಯುವ ನಿರ್ಧಾರದಿಂದಾಗಿ ವನಸ್ಪತಿಗಳಿಗೆಲ್ಲ ಸಂತಸವಾಗಿತ್ತು. ಆದರೆ ಅವನು ತನ್ನ ಯೋಚನೆಯನ್ನು ಬದಲಾಯಿಸುತ್ತಲೇ ಅವು ಮತ್ತೆ ದುಃಖಕ್ಕೊಳಗಾದವು. ಅವನ ಮೋಕ್ಷತ್ಯಾಗದ ಯೋಚನೆ ಅವುಗಳಿಗೆ ತೊಂದರೆಯದಾಗಿತ್ತು

## ೬. ಇಂದ್ರ ಶಲ್ಯ/೪೩

ವಿಶ್ವಾಮಿತ್ರನ ಶಾಪದಿಂದಾಗಿ ಸರಸ್ವತಿ ಹೊಳೆಯು ನೀರು ಒಂದು ವರ್ಷಕಾಲ ನೆತ್ತರಿನಿಂದ ಕೂಡಿತ್ತು. (ನೋಡಿ : ಶಾಪ : ಕ್ರ. ೯೫, ವಿಶ್ವಾಮಿತ್ರ > ಸರಸ್ವತಿ) ಆಗ ರಾಕ್ಷಸರು

ಅದರ ನೀರನ್ನು ಕುಡಿಯಲೆಂದು ಅದರ ದಡದಲ್ಲಿ ಬಿಡಾರ ಹೂಡಿದರು. ಸರಸ್ವತಿಗೆ ಬಂದೊದಗಿದ ಈ ಶೋಚನೀಯವಾದ ಅವಸ್ಥೆಯನ್ನು ಕಂಡು ಮುನಿಗಳೆಲ್ಲ ಬಲು ಕಂಗೆಟ್ಟಿದ್ದರು. ಅವರು ಬಲುಕಠೋರವಾದ ತಪಸ್ಸನ್ನು ಆಚರಿಸಿ, ಮಹಾದೇವನನ್ನು ಒಲಿಸಿಕೊಂಡು, ಸರಸ್ವತಿಯನ್ನು ಶಾಪದಿಂದ ಬಿಡುಗಡೆ ಮಾಡಿಸಿದರು. ರಾಕ್ಷಸರ ಕೋರಿಕೆಯ ಮೇರೆಗೆ ಸರಸ್ವತಿಯು ಅರುಣೆಯ ನೆರವು ಪಡೆದು ಅವರನ್ನು ಶುದ್ಧಗೊಳಿಸಿದಳು. ಅರುಣೆಯಲ್ಲಿ ಮಿಂದುಬಂದರೆ ಬ್ರಹ್ಮಹತ್ಯೆಯ ಪಾತಕ ನಾಶಹೊಂದುತ್ತದೆ. ಇಂದ್ರನಿಗೆ ಬ್ರಹ್ಮಹತ್ಯೆಯ ಪಾತಕ ತಗುಲಿದ್ದುದು ಹೇಗೆ, ಅವನು ಪಾಪಮುಕ್ತನಾದುದು ಹೇಗೆ ?—ಎಂಬುದನ್ನು ಕುರಿತು ಜನಮೇಜಯನು ವೈಶಂಪಾಯನನಿಗೆ ಕೇಳಿದನು. ಹೀಗಾಗಿ ಅವನು, ಇಂದ್ರನು ತೊಟ್ಟು ಮುರಿದ ಪಣವನ್ನು ಕುರಿತು ಹೇಳುತ್ತಲಿದ್ದಾನೆ.

ನಮುಚಿಯು ಇಂದ್ರನ ಹೆದರಿಕೆಯಿಂದಾಗಿ ಸೂರ್ಯಕಿರಣಗಳಲ್ಲಿ ಅಡಗಿದ್ದನು. ಇಂದ್ರ ಅವನೊಂದಿಗೆ ಗೆಳೆತನವನ್ನು ಬೆಳೆಯಿಸಿದನು. ಅವನಿಗೆ ಹೀಗೆಂದನು—

> ನಾ ಚಾರ್ದ್ರೇಣ ನ ಶುಷ್ಕೇಣ ನ ರಾತ್ರೌ ನಾಪಿ ಚಾಹನಿ ॥ ೩೫ ॥
> ವಧಿಷ್ಯಾಮ್ಯಸುರಶ್ರೇಷ್ಠ ಸಖೇ ಸತ್ಯೇನ ತೇ ಶಪೇ ।
> ಏವಂ ಸ ಕೃತ್ವಾ ಸಮಯಂ ದೃಷ್ಟ್ವಾ ನೀಹಾರಮೀಶ್ವರಃ ॥ ೩೬ ॥
> ಚಿಚ್ಛೇದಾಸ್ಯ ಶಿರೋ ರಾಜನ್ನಪಾಂ ಫೇನೇನ ವಾಸವಃ ॥ ೩೭ ॥

'ನಾನು ನಿನ್ನನ್ನು ಹಗಲಲ್ಲಾಗಲಿ, ಇರುಳಲ್ಲಾಗಲಿ ಇಲ್ಲವೆ ಒಣಶಸ್ತ್ರದಿಂದ ಕೊಲ್ಲುವುದಿಲ್ಲ. ಸತ್ಯದ ಮೇಲೆ ಆಣೆಯಿಟ್ಟು ಈ ಮಾತನ್ನು ಹೇಳುತ್ತಲಿದ್ದೇನೆ' ಎಂದು ಇಂದ್ರನು ಪಣತೊಟ್ಟು ಕೂಡ ನೀರಿನ ನೊರೆಯಿಂದ ನಮುಚಿಯ ತಲೆಯನ್ನು ದೇಹದಿಂದ ಬೇರ್ಪಡಿಸಿದನು.

ನಮುಚಿಯ ತಲೆಯು ಇಂದ್ರನನ್ನು ಹಿಂಬಾಲಿಸಿ ಬರಹತ್ತಿತು. ಹೀಗಾಗಿ ಇಂದ್ರ ಬ್ರಹ್ಮದೇವನ ಬಳಿಗೆ ಹೋದನು. ಅವನು ಅರುಣತೀರ್ಥದಲ್ಲಿ ಸ್ನಾನಮಾಡುವುದರಿಂದ ಪಾಪ ಕಳೆಯುವುದೆಂದು ಹೇಳಿದನು.

+ ಇದೊಂದು ಪಾಲಿಸದಿದ್ದ ಪಣವಾಗಿದೆ.

## ೭. ಉತ್ತಂಕ

ಅಶ್ವಮೇಧ/೫೭

ಉತ್ತಂಕನು ವೇದಮುನಿಯ ಶಿಷ್ಯನು. ಗುರುಪತ್ನಿಯು ಸೌದಾಸರಾಜನ ರಾಣಿಯಾದ ಮದಯಂತಿಯ ಬಳಿಯಿದ್ದ ಅದ್ವಿತೀಯವಾದ ಕುಂಡಲಗಳನ್ನು ಗುರುದಕ್ಷಿಣೆಯಾಗಿ ತನಗೆ ತಂದೊಪ್ಪಿಸೆಂದು ಅವನಿಗೆ ಹೇಳಿದಳು. ಇವು ವಿಶಿಷ್ಟ ಬಗೆಯ ಕುಂಡಲಗಳಾಗಿದ್ದುವು. ಇವುಗಳನ್ನು ಪಡೆಯುವುದು ಹಗುರಾದ ಕೆಲಸವಾಗಿರಲಿಲ್ಲ. ಇವು ದಿವ್ಯವಾದ ಕುಂಡಲುಗಳಾದ್ದರಿಂದ ಎಲ್ಲರೂ ಅವುಗಳನ್ನು ಪಡೆಯಲು ಹಾತೊರೆಯುತ್ತಿದ್ದರು. ಹೀಗಾಗಿ ಅವುಗಳನ್ನು ಜತನವಾಗಿ ಇಡುವುದು ಬಲು ಕಷ್ಟದ ಕಾಯಕವೆನ್ನಿಸಿತ್ತು. ಅವು ನೆಲದ ಮೇಲೆ ಬಿದ್ದರೆ ನಾಗರು ಅವುಗಳನ್ನು ಒಯ್ದುಬಿಡುವರೆಂಬ ಹೆದರಿಕೆ ಇತ್ತು.

ಅವುಗಳನ್ನು ಅಪವಿತ್ರವಾದ ತಾಣದಲ್ಲಿಟ್ಟರೆ ಯಕ್ಷರು ಹಾರಿಸಿಬಿಡುವರು. ಮೈಮೇಲೆ ತೊಟ್ಟು ನಿದ್ರೆಹೋದರೆ ದೇವತೆಗಳು ಕದ್ದೊಯ್ಯುವರು. ಈ ಕುಂಡಲುಗಳಿಂದ ಒಂದೇ ರೀತಿಯಾಗಿ ಚಿನ್ನ ಹೊರಬರುತ್ತಿತ್ತು. ಅವುಗಳ ಹೊಳಪು ತಾರೆ-ನಕ್ಷತ್ರಗಳಂಥದು. ಅವು ಮೈಮೇಲಿದ್ದರೆ ಹಸಿವು-ನೀರಡಿಕೆಗಳು ಹಿಂಗುತ್ತಿದ್ದವು, ವಿಷ, ಬೆಂಕಿ, ಕಾಡುಮೃಗ ಗಳಿಂದ ಹೆದರಿಕೆಯಿರಲಿಲ್ಲ. ತೊಟ್ಟವರ ಮೈಯಳತೆಗೆ ತಕ್ಕಂತೆ ಅವುಗಳ ಆಕಾರ ಹಿರಿಕಿರಿ ದಾಗುತ್ತಿತ್ತು.

ಉತ್ತಂಕ ಕುಂಡಲುಗಳನ್ನು ತರಲು ಹೊರಟನು. ದಾರಿಯಲ್ಲಿ ರಾಕ್ಷಸತನವನ್ನು ಪಡೆದ ಸೌದಾಸರಾಜನ ಭೆಟ್ಟಿಯಾಯಿತು (ನೋಡಿ : ಶಾಪ—ಪು. ೧೨೧—ವಸಿಷ್ಠ > ಸೌದಾಸ). ರಾಕ್ಷಸ ಹಸಿದಿದ್ದನು. ಅವನು ಈತನನ್ನು ತಿಂದುಬಿಡಲು ಹವಣಿಸಿದನು. ಆಗ ಉತ್ತಂಕನು ಅವನಿಗೆ ಅಂದನು—

> ಸಂಶ್ರುತಶ್ಚ ಮಯಾ ಯೋಽರ್ಥೋ ಗುರವೇ ರಾಜಸತ್ತಮ ।
> ತ್ವದಧೀನಃ ಸ ರಾಜೇಂದ್ರ ತಂ ತ್ವಾಂ ಭಿಕ್ಷೇ ನರೇಶ್ವರ ॥ ೭ ॥

ಎಲೈ ನರೇಶ್ವರನೇ! ನಾನು (ಗುರುದಕ್ಷಿಣೆಯಾಗಿ ಕೊಡಲೊಪ್ಪಿದ ಕುಂಡಲುಗಳು) ನಿನ್ನ ಬಳಿಯಿವೆ. ಅವುಗಳನ್ನು ಭಿಕ್ಷೆಯೆಂದು ನನಗೆ ಕೊಡು. (ಗುರುದಕ್ಷಿಣೆಯನ್ನು ಸಲ್ಲಿಸಿ ನಿನ್ನ ಆಹಾರವಾಗಿ ಹಿಂತಿರುಗುವೆನು.)

> ಉಪಾಹೃತ್ಯ ಗುರೋರರ್ಥಂ ತ್ವದಾಯತ್ತಮರಿಂದಮ ।
> ಸಮಯೋಽನೇಹ ರಾಜೇಂದ್ರ ಪುನರೇಷ್ಯಾಮಿ ತೇ ವಶಮ್ ॥ ೯ ॥
> ಸತ್ಯಂ ತೇ ಪ್ರತಿಜಾನಾಮಿ ನಾತ್ರ ಮಿಥ್ಯಾ ಕಥಂಚನ ।
> ಅನೃತಂ ನೋಕ್ತಪೂರ್ವಂ ಮೇ ಸ್ವೈರೇಷ್ವಪಿ ಕುತೋಽನ್ಯಥಾ ॥ ೧೦ ॥

ನಾನು ಗುರುವಿಗೆ ಕೊಡಬೇಕಿದ್ದ ಮಣಿಕುಂಡಲುಗಳು ನಿನ್ನ ಬಳಿಯಿವೆ. ಅವುಗಳನ್ನು ಅವರಿಗೊಪ್ಪಿಸಿ ಮೊದಲೇ ನಿರ್ಧರಿಸಿದಂತೆ ನಾನು ನಿನ್ನಲ್ಲಿಗೆ ಬರುವೆನು. ನನ್ನ ಪ್ರತಿಜ್ಞೆ ನಿಜವಾದುದು. ಅದೆಂದಿಗೂ ಸುಳ್ಳಾಗಲಾರದು. ನಾನೆಂದಿಗೂ ಚೇಷ್ಟೆಗಾಗಿ ಕೂಡ ಸುಳ್ಳಾಡಿದವನಲ್ಲ. ಅಂದಬಳಿಕ ಈಗ (ಪಣವನ್ನು ತೊಡುವಲ್ಲಿ) ಹೇಗೆ ಸುಳ್ಳಾಡುವೆನು?

+ ಪುನರುಲ್ಲೇಖಗಳು : ಅಶ್ವಮೇಧ—೫೮/೯, ೧೦.

## ೮. ಉತ್ತಮೌಜ ದ್ರೋಣ/೨೩

ಸಂಜಯನು ಧೃತರಾಷ್ಟ್ರನಿಗೆ ಪಾಂಡವಸೇನೆ ದ್ರೋಣನ ಮೇಲೆ ಯಾವ ರೀತಿ ಏರಿ ಹೋಗುತ್ತಲಿತ್ತು ಎಂಬುದನ್ನು ಕುರಿತು ಹೇಳುವಲ್ಲಿ ಉತ್ತಮೌಜನ ಪಣದ ಉಲ್ಲೇಖ ಮಾತ್ರ ಈ ರೀತಿಯಾಗಿ ಬಂದಿದೆ—

> ಕೃಷ್ಣಾಸ್ತು ಮೇಘಸಂಕಾಶಾ ಅವಹನ್ನುತ್ತಮೌಜಸಮ್ ।
> ದುರ್ಧರ್ಷಾಯಶಾಭಿಸಂಧಾಯ ಕ್ರುದ್ಧಂ ಯುದ್ಧಾಯ ಭಾರತ ॥ ೮ ॥

ಕಾರ್ಮೋಡಗಳಂತೆ ಕಪ್ಪಾಗಿರುವ ಕುದುರೆಗಳು ಅಜೇಯನೂ ಹಾಗೂ ಯುದ್ಧಕ್ಕಾಗಿ ಪಣತೊಟ್ಟವನೂ ಆದ ಉತ್ತಮೌಜನನ್ನು ಕರೆದೊಯ್ದುವು.

+ ಇಲ್ಲಿ ಪಣದ ವಿವರಗಳಿಲ್ಲ. ಬರಿ ಉಲ್ಲೇಖ ಮಾತ್ರವಿದೆ.

## ೯. ಉತ್ತರೆ ಅಶ್ವಮೇಧ/೬೮

ಉತ್ತರೆಯು ಬಸಿರಿನ ಮೇಲೆ ಅಸ್ತ್ರಪ್ರಯೋಗವಾದದ್ದರಿಂದ ಅವಳು ಸತ್ತುಹೋದ ಮಗು ವನ್ನು ಹೆತ್ತಳು. ಅದನ್ನು ಕಂಡು ಅವಳು ಬಲುದುಃಖಿತಳಾದಳು. ಅವಳು ಶ್ರೀಕೃಷ್ಣನ ಪಾದಗಳ ಮೇಲೆ ತನ್ನ ತಲೆಯಿಟ್ಟು ಆ ಮಗುವನ್ನು ಬದುಕಿಸುವಂತೆ ಅವನನ್ನು ಬೇಡಿ ಕೊಂಡಳು. ಹಿಂದಕ್ಕೆ ಅವಳು ಅಭಿಮನ್ಯುವಿನ ಎದುರು ತೊಟ್ಟ ಪಣ ನೆನಪಾಯಿತು. ಅದನ್ನವಳು ಶ್ರೀಕೃಷ್ಣನಿಗೆ ಹೇಳಿದಳು—

ಮಯಾ ಚೈತತ್ ಪ್ರತಿಜ್ಞಾತಂ ರಣಮೂರ್ಧನಿ ಕೇಶವ ।
ಅಭಿಮನ್ಯೌ ಹತೇ ವೀರ ತ್ವಾಮೇಷ್ಯಾಮ್ಯಚಿರಾದಿತಿ ॥ ೨೩ ॥

ತಚ್ಚ ನಾಕರವಂ ಕೃಷ್ಣ ನೃಶಂಸಾ ಜೀವಿತಪ್ರಿಯಾ ।
ಇದಾನೀಂ ಮಾಂ ಗತಾಂ ತತ್ರ ಕಿಂ ನು ವಕ್ಷ್ಯತಿ ಫಾಲ್ಗುನಿಃ ॥ ೨೪ ॥

ಅಭಿಮನ್ಯುವು ಯುದ್ಧಕ್ಕೆ ಸಿದ್ಧನಾಗಿ ನಿಂತಾಗ ನಾನೊಂದು ಪಣ ತೊಟ್ಟಿದ್ದೆ. ಅದೆಂದರೆ (ದುರ್ದೈವದಿಂದಾಗಿ) ಕಾಳಗದಲ್ಲಿ ಅವನು ಮಡಿದನೆಂದರೆ ನಾನೂ ಅವನ ಬೆನ್ನಿಗೆ ಹೊರಟುಹೋಗುವುದೆಂದು. ಆದರೆ ನನಗೆ ನನ್ನ ಪಣವನ್ನು ಪಾಲಿಸಲಾಗಲಿಲ್ಲ. ನನ್ನದು ಕಲ್ಲುಹೃದಯ. ನನಗೆ ನನ್ನ ಗಂಡನಿಗಿಂತ ನನ್ನ ಜೀವವೇ ಹೆಚ್ಚಿನದಾಗಿ ಕಂಡಿತು. (ಹೀಗೇ ಅಲ್ಲವೆ ಇದರರ್ಥ?) (ಇಷ್ಟೊಂದು ತಡಮಾಡಿ) ಇನ್ನು ಅವನ ಭೆಟ್ಟಿಗೆಂದು ಹೋಗಲು ನಿರ್ಧರಿಸಿದೆನಾದರೆ ಪಾರ್ಥನ ಆ ಮಗನು ನನಗೆ ಏನೆಂದು ಬೆಲೆ ಕಟ್ಟಿಯಾನು ?

+ ಪಾಲಿಸಲಾಗದ ಪಣವಿದು.

## ೧೦. ಋಚೀಕ ವನ/೧೧೫

ಪರಶುರಾಮನು ಕ್ಷತ್ರಿಯರ ಸಂಹಾರವನ್ನು ಕೈಕೊಂಡದ್ದೇಕೆ ?—ಎಂಬುದನ್ನು ಕುರಿತು ಅವನೊಬ್ಬ ಶಿಷ್ಯನೂ, ಸ್ನೇಹಿತನೂ ಆದ ಅಕೃತವ್ರಣನು ಯುಧಿಷ್ಠಿರನಿಗೆ ಹೇಳುತ್ತಲಿದ್ದಾನೆ.

ಕಾನ್ಯಕುಬ್ಜದ ದೊರೆ ಗಾಧಿ ಬಲುಪರಾಕ್ರಮಿಯಾಗಿದ್ದನು. ಅವನಿಗೆ ಸತ್ಯವತಿಯೆಂಬ ಬಲುಲಾವಣ್ಯವತಿಯಾದ ಮಗಳಿದ್ದಳು. ಋಚೀಕನು ಅವಳಿಗಾಗಿ ಬೇಡಿಕೆಯನ್ನು ಹಾಕಿದನು. ದೊರೆಯು ಕನ್ಯಾಶುಲ್ಕವನ್ನು ಪಡೆದು ಮದುವೆ ಮಾಡಿಕೊಡಲು ಒಪ್ಪಿದನು. ಶುಲ್ಕವೆಂದು ಒಂದು ಸಾವಿರ ಬೆಳ್ಳನೆಯ ಹಾಗೂ ನಾಗಾಲೋಟದ ಕುದುರೆಗಳು

ಬೇಕೆಂದನು. ಈ ಕುದುರೆಗಳ ಕಿವಿಗಳ ಬಣ್ಣ ಒಂದು ಬದಿಗೆ ಕಪ್ಪಾಗಿರತಕ್ಕದ್ದೆಂಬ ಶರತ್ತು ಬೇರೆ ಇತ್ತು. ಋಚೀಕನು ಈ ಬಗೆಯಾಗಿ ಪಣತೊಟ್ಟನು—

ಏಕತಃ ಶ್ಯಾಮಕರ್ಣಾನಾಂ ಪಾಂಡುರಾಣಾಂ ತರಸ್ವಿನಾಮ್ ।
ದಾಸ್ಯಾಮ್ಯಶ್ವಸಹಸ್ರಂ ತೇ ಮಮ ಭಾರ್ಯಾ ಸುತಾಸ್ತು ತೇ ॥ ೨೫ ॥
ಸ ತಥೇತಿ ಪ್ರತಿಜ್ಞಾಯ...... ॥ ೨೬ ॥

'ಎಲೈ ರಾಜನೇ! ಒಂದು ಬದಿಗೆ ಕಪ್ಪು ಕಿವಿಯುಳ್ಳ ಒಂದು ಸಾವಿರ ನಾಗಾಲೋಟದ ಕುದುರೆಗಳನ್ನು (ಶುಲ್ಕವೆಂದು) ಕೊಡುವೆನು. ನಿನ್ನ ಮಗಳು ನನ್ನ ಮಡದಿಯಾಗಲಿ'— ಎಂದು ಪಣವನ್ನು ತೊಟ್ಟನು.

ಋಚೀಕನು ವರುಣನಿಂದ ಅಂಥ ಒಂದು ಸಾವಿರ ಕುದುರೆಗಳನ್ನು ಪಡೆದು ತನ್ನ ಪಣವನ್ನು ಪೂರ್ತಿಗೊಳಿಸಿದನು. ಆಮೇಲೆ ಸತ್ಯವತಿಯನ್ನು ಮಡದಿಯಾಗಿ ಪಡೆದನು.

## ೧೧. ಔರ್ವ — ಆದಿ/೧೭೯

ಔರ್ವನೆಂಬ ಋಷಿಯು ತನ್ನ ತಾಯಿಯ ತೊಡೆಯಿಂದ ಹುಟ್ಟಿಬಂದನು. ಬಸಿರಲ್ಲಿದ್ದಾಗಲೇ ಅವನಿಗೆ ಷಡಂಗವೇದಗಳ ಜ್ಞಾನ ತಿಳಿದಿತ್ತು. ಕ್ಷತ್ರಿಯರು ಅವನ ಪಿತೃಗಳನ್ನು ಕೊಂದ ಕಾರಣ ಅವನು ಅವರೆಲ್ಲರ ಮೇಲೆ ತುಂಬ ಕೋಪಗೊಂಡನು. ಅವನು ತನ್ನ ಸಾಮರ್ಥ್ಯದಿಂದ ಕ್ಷತ್ರಿಯರನ್ನೆಲ್ಲ ಕುರುಡರನ್ನಾಗಿ ಮಾಡಿಬಿಟ್ಟನು. ಆದರೆ ಅವರೆಲ್ಲ ಶರಣು ಬರುತ್ತಲೇ ಅವರಿಗೆ ಮತ್ತೆ ಕಣ್ಣುಗಳನ್ನು ನೀಡಿದನು. ಅವನು ಇಡಿಯ ಜಗತ್ತನ್ನೇ ನಾಶಪಡಿಸಲೆಂದು ತಪಸ್ಸನ್ನು ಆಚರಿಸಿದನು. ಪಿತೃಗಳು ಅವನನ್ನು ಈ ಯೋಚನೆಯನ್ನು ಕೈಬಿಡುವಂತೆ ಹೇಳಿದರು. ಕೋಪದ ಭರದಲ್ಲಿ ಈ ಜಗತ್ತನ್ನು ನಾಶಗೊಳಿಸಬೇಡೆಂದರು. ಅದಕ್ಕೆ ಅವನು ಅವರಿಗೆ ಹೀಗೆ ಹೇಳಿದನು—

ಉಕ್ತವಾನಸ್ಮಿ ಯಾಂ ಕ್ರೋಧಾತ್ ಪ್ರತಿಜ್ಞಾಂ ಪಿತರಸ್ತದಾ ।
ಸರ್ವಲೋಕವಿನಾಶಾಯ ನ ಸಾ ಮೇ ವಿತಥಾ ಭವೇತ್ ॥ ೧ ॥
ವೃಥಾರೋಷಪ್ರತಿಜ್ಞೋ ವೈ ನಾಹಂ ಭವಿತುಮುತ್ಸಹೇ ।
ಅನಿಸ್ತೀರ್ಣೋ ಹಿ ಮಾಂ ರೋಷೋ ದಹೇದಗ್ನಿರಿವಾರಣಿಮ್ ॥ ೨ ॥

ಪಿತೃಗಳೇ! ನಾನು ಕೆರಳಿಹೋಗಿ ಈ ಜಗತ್ತನ್ನು ನಾಶಪಡಿಸಲೆಂದು ತೊಟ್ಟ ಪಣ ಎಂದೆಂದಿಗೂ ಸುಳ್ಳಾಗದು. ಕೋಪ ಹಾಗೂ ಪಣ ಸುಳ್ಳಾಗುವವೆಂಬ ಅಪಕೀರ್ತಿಯನ್ನು ನಾನು ಸಹಿಸಲಾರೆ.

ಪಿತೃಗಳು ಅವನಿಗೆ ಕ್ರೋಧಾಗ್ನಿಯನ್ನು ನೀರಲ್ಲಿ ಬಿಟ್ಟುಬಿಡಲು ಹೇಳಿದರು. ಔರ್ವನು ಹಾಗೆಯೇ ಮಾಡಿದನು.

## ೧೨. ಪಾರಿವಾಳ — ಶಾಂತಿ/೧೪೬

ಯುಧಿಷ್ಠಿರನು ಭೀಷ್ಮನನ್ನು ಶರಣುಬಂದವರ ಬಗೆಗಿನ ಧರ್ಮ ಯಾವುದೆಂದು ಕೇಳಿದನು. ಭೀಷ್ಮ ಅದನ್ನು ಹೇಳುವಾಗ ಪಾರಿವಾಳದ ಕಥೆಯನ್ನು ಹೇಳಿದನು.

ಒಂದು ಸಲ ಒಬ್ಬ ಬೇಡನು ಒಂದು ಹೆಣ್ಣುಪಾರಿವಾಳ ಹಕ್ಕಿಯನ್ನು ಹಿಡಿದನು. ಅದು ಸಾವಿನ ಹೊಸ್ತಿಲಲ್ಲಿತ್ತು. ಆಗ ತನ್ನ ಬಗೆಗೆ ತನ್ನ ಗಂಡನಾದ ಗಂಡುಪಾರಿವಾಳವು ಧನ್ಯತೆಯ ಮಾತುಗಳನ್ನು ಆಡಿದುದನ್ನು ಕೇಳಿ ಅದು ಬಲು ಸಂತಸಪಟ್ಟಿತು. ಹೆಣ್ಣು ಪಾರಿವಾಳದಂತೆಯೇ ಆ ಗಂಡುಹಕ್ಕಿ ಕೂಡ ತನ್ನ ಮಡದಿಯನ್ನು ಬಲು ಪ್ರೀತಿಸುತ್ತಿತ್ತು. ಹೆಣ್ಣುಹಕ್ಕಿಯು ತನ್ನ ಗಂಡನಿಗೆ, ಶರಣುಬಂದವರನ್ನು ಕಾಪಾಡಲೆಂದು ಜೀವವನ್ನು ಬೇಕಿದ್ದರೆ ತೆರಬೇಕೆಂದು ಹೇಳಿತು. ಹೀಗಾಗಿ ಆ ಪಾರಿವಾಳವು ಹಗೆಯಾಗಿದ್ದ ಆ ಬೇಡ ನನ್ನೂ ಬರಮಾಡಿಕೊಂಡಿತು. ಚಳಿಯಿಂದ ನಡುಗುತ್ತಲಿದ್ದ ಬೇಡನಿಗೆಂದು ತರಗೆಲೆ ಗಳನ್ನು ಕಲೆಹಾಕಿ ಕೊಟ್ಟಿತು. ಅವನ ಹಸಿವನ್ನು ಹಿಂಗಿಸಲೆಂದು ತನ್ನನ್ನೇ ಅವನಿಗೆ ಒಪ್ಪಿಸಲು ನಿರ್ಧರಿಸಿತು. ಅತಿಥಿಯನ್ನು ಸತ್ಕರಿಸುವುದು ತನ್ನ ಧರ್ಮವೆಂದು ಹೇಳಿ—

ತತಃ ಕೃತಪ್ರತಿಜ್ಞೋ ವೈ ಸ ಪಕ್ಷೀ ಪ್ರಹಸನ್ನಿವ ।
ತಮಗ್ನಿಂ ತ್ರಿಃಪರಿಕ್ರಮ್ಯ ಪ್ರವಿವೇಶ ಮಹಾಮತಿಃ ॥ ೨೩ ॥

ಪಣತೊಟ್ಟ ಆ ಹಕ್ಕಿಯು (ಚಳಿಯ ನಿವಾರಣೆಗಾಗಿ ಹೊತ್ತಿಸಿದ) ಬೆಂಕಿಗೆ ಮೂರು ಸುತ್ತು ಸುತ್ತಿ ಬಂದು ಪ್ರಸನ್ನವಾದ ಮನದಿಂದ ಅಗ್ನಿಪ್ರವೇಶ ಮಾಡಿತು.

## ೧೩. ಕರ್ಣ ವನ/೨೫೨

೧

ಚಿತ್ರಸೇನ ಗಂಧರ್ವನು ದುರ್ಯೋಧನಾದಿಗಳನ್ನು ಸೆರೆಹಿಡಿದು ಇಟ್ಟಾಗ ಅರ್ಜುನ ತನ್ನ ಸಾಮರ್ಥ್ಯದಿಂದ ಅವರೆಲ್ಲರನ್ನು ಬಿಡುಗಡೆಗೊಳಿಸಿದನು. ದುರ್ಯೋಧನನಿಗೆ ಮಾತ್ರ ಇದರಿಂದ ಬಲುದೊಡ್ಡ ಅವಮಾನ ಎನ್ನಿಸಿತು. ಅವನು ದುಃಶ್ಯಾಸನನಿಗೆ ಪಟ್ಟ ಕಟ್ಟಿ ತಾನು ಉಪವಾಸ ಕೈಗೊಳ್ಳಲು ನಿರ್ಧರಿಸಿದನು. ದುಶ್ಯಾಸನ, ಶಕುನಿ, ಕರ್ಣರು ಅವನನ್ನು ಈ ವಿಚಾರದಿಂದ ದೂರವಿರಿಸಲು ಹಲವು ಬಗೆಯಾಗಿ ಹೇಳಿ ನೋಡಿದರು. 'ಇದು ಶೋಕಿಸುತ್ತ ಕುಳಿತುಕೊಳ್ಳುವ ಹೊತ್ತಲ್ಲ, ಹೋರಾಡುವ ಹೊತ್ತು' ಎಂದು ಹೇಳಿದರು. ತಮ್ಮ ಹೇಳಿಕೆ ದುರ್ಯೋಧನನಿಗೆ ಮನದಟ್ಟಾಗಲೆಂದು ಈ ರೀತಿ ಪಣ ತೊಟ್ಟರು—

ಸತ್ಯಂ ತೇ ಪ್ರತಿಜಾನಾಮಿ ವಧಿಷ್ಯಾಮಿ ರಣೇಽರ್ಜುನಮ್ ॥ ೪೨ ॥
ಗತೇ ತ್ರಯೋದಶೇ ವರ್ಷೇ ಸತ್ಯೇನಾಯುಧಮಾಲಭೇ ।
ಆನಯಿಷ್ಯಾಮ್ಯಹಂ ಪಾರ್ಥಾನ್ ವಶಂ ತವ ಜನಾಧಿಪ ॥ ೪೩ ॥

'ಯುದ್ಧದಲ್ಲಿ ಅರ್ಜುನನನ್ನು ಖಂಡಿತವಾಗಿಯೂ ಕೊಲ್ಲುವೆನು' ಎಂದು ಸತ್ಯದ ಮೇಲೆ ಆಣೆಯಿಟ್ಟು ನಿನಗೆ ಹೇಳುತ್ತೇನೆ. 'ಹದಿಮೂರನೆಯ ವರ್ಷ ಮುಗಿಯುತ್ತಲೇ ನಾನು ಪಾಂಡವರನ್ನು ನಿನಗೆ ತಂದೊಪ್ಪಿಸುವೆ'ನೆಂದು ಬಿಲ್ಲಿಗೆ ಕೈಹಚ್ಚಿ ಹೇಳುತ್ತೇನೆ.

ವನ/೨೫೭

ದುರ್ಯೋಧನನು ರಾಜಸೂಯ ಯಜ್ಞವನ್ನು ಮಾಡಬೇಕು ಎಂದುಕೊಂಡಿದ್ದನು. ಆದರೆ ಯುಧಿಷ್ಠಿರ ಬದುಕಿರುವವರೆಗೂ ಅವನಿಗೆ ಅಂಥ ಅಧಿಕಾರ ಇಲ್ಲವೆಂದು

ಬ್ರಾಹ್ಮಣರು ಹೇಳಿದ್ದರು. ಆಗ ಕರ್ಣನು ದುರ್ಯೋಧನನಿಗೆ ಹೀಗೆಂದನು—

ಪಾದೌ ನ ಧಾವಯೇ ತಾವದ್ ಯಾವನ್ನ ನಿಹತೋಽರ್ಜುನಃ ॥ ೧೬ ॥
ಕೀಲಾಲಜಂ ನ ಖಾದೇಯಂ ಕರಿಷ್ಯೇ ಚಾಸುರವ್ರತಮ್ ।
ನಾಸ್ತೀತಿ ನೈವ ವಕ್ಷ್ಯಾಮಿ ಯಾಚಿತೋ ಯೇನ ಕೇನಚಿತ್ ॥ ೧೭ ॥

ಯುದ್ಧದಲ್ಲಿ ಅರ್ಜುನನನ್ನು ಕೊಲ್ಲದೆ ನಾನು ಯಾರಿಂದಲೂ ನನ್ನ ಕಾಲುಗಳನ್ನು ತೊಳೆಯಿಸಿಕೊಳ್ಳೆನು, ನೀರಿನಲ್ಲಷ್ಟೇ ಹುಟ್ಟಿದ ತಿಂಡಿಗಳನ್ನು ತಿನ್ನೆನು, ಅಸುರವ್ರತವನ್ನು ಆಚರಿಸೆನು, ಯಾಚಕನು ಏನೇ ಕೇಳಿದರೂ ಇಲ್ಲೆನ್ನೆನು.

ದ್ರೋಣ/೧೫೮

ಪಾಂಡವರ ಸೈನ್ಯವು ದುರ್ಯೋಧನನನ್ನು ಸುತ್ತುಗಟ್ಟಿತ್ತು. ಆಗ ಅವನು ಕರ್ಣನಿಗೆ ಗೆಳೆತನದ ಪರೀಕ್ಷೆಯು ಹೊತ್ತು ಬಂದಿದೆ ಎಂದನು. ಅದಕ್ಕೆ ಕರ್ಣನು ಅವನಿಗೆ ಈ ರೀತಿ ಆಶ್ವಾಸನೆಯನ್ನಿತ್ತನು—

ಪರಿತ್ರಾತುಮಿಹ ಪ್ರಾಪ್ತೋ ಯದಿ ಪಾರ್ಥಂ ಪುರಂದರಃ ।
ತಮಪ್ಯಾಶು ಪರಾಜಿತ್ಯ ತತೋ ಹಂತಾಸ್ಮಿ ಪಾಂಡವಮ್ ॥ ೫ ॥
ಸತ್ಯಂ ತೇ ಪ್ರತಿಜಾನಾಮಿ ಸಮಾಶ್ವಸಿಹಿ ಭಾರತ ।
ಹಂತಾಸ್ಮಿ ಪಾಂಡುತನಯಾನ್ ಪಂಚಾಲಾಂಶ್ಚ ಸಮಾಗತಾನ್ ॥ ೬ ॥

ಎಲೈ ರಾಜನೇ! ಇಂದ್ರನೇ ಅರ್ಜುನನನ್ನು ಕಾಪಾಡಲೆಂದು ಬಂದರೆ ಮೊದಲು ಅವನನ್ನೇ ಕೊಂದು ಆಮೇಲೆ ಅರ್ಜುನನನ್ನು ಕೊಲ್ಲುವೆನು. ನೀನು ತಾಳ್ಮೆಯಿಂದಿರು. ಪಾಂಡವರು ಹಾಗೂ ಪಾಂಚಾಲರನ್ನು ಒಂದೇ ವೇಳೆಗೆ ಕೊಲ್ಲುವೆನು—ಎಂದು ಪ್ರತಿಜ್ಞಾಪೂರ್ವಕವಾಗಿ ನಿನಗೆ ಹೇಳುತ್ತೇನೆ.

+ ಪುನರುಲ್ಲೇಖಗಳು : ವನ—೨೫೩/೨೩ ; ೨೫೭/೧೮, ೨೨ ; ಕರ್ಣ—೬೬/೩೯ ; ೭೪/೧೯.

ಉದ್ಯೋಗ/೧೯೩

## ೨

## ಐದು ದಿನಗಳಲ್ಲಿ ಪಾಂಡವರ ವಧೆ

ಪಾಂಡವರನ್ನು ಎಷ್ಟು ದಿನಗಳಲ್ಲಿ ಕೊಲ್ಲಬಲ್ಲಿರೆಂದು ದುರ್ಯೋಧನನು ಭೀಷ್ಮ, ದ್ರೋಣ, ಕೃಪ, ಅಶ್ವತ್ಥಾಮ ಹಾಗೂ ಕರ್ಣರನ್ನು ಕೇಳಿದನು. ದಿನವೊಂದಕ್ಕೆ ಹತ್ತು ಸಾವಿರ ಯೋಧರು ಹಾಗೂ ಒಂದು ಸಾವಿರ ರಥಿಗಳ ಲೆಕ್ಕದಂತೆ ಆಗುವ ಕಾಲ ಇಲ್ಲವೆ ಅಸ್ತ್ರಗಳನ್ನು ಬಳಸಿ ಒಂದು ತಿಂಗಳ ಕಾಲದಲ್ಲಿ—ಎಂದು ಭೀಷ್ಮನು ಹೇಳಿದನು. ದ್ರೋಣನು ಒಂದು ತಿಂಗಳು, ಕೃಪನು ಎರಡು ತಿಂಗಳು ಹಾಗೂ ಅಶ್ವತ್ಥಾಮನು ಹತ್ತು ದಿನಗಳು, ಎಂದರು. ಆಗ ಕರ್ಣನು ಹೀಗೆ ಪಣತೊಟ್ಟನು—

......ಪಂಚರಾತ್ರೇಣ ಪ್ರತಿಜಜ್ಞೇ ಮಹಾಸ್ತ್ರವಿತ್ ॥ ೨೦ ॥

ಕೇವಲ ಐದು ದಿನಗಳಲ್ಲಿ ಪಾಂಡವನನ್ನು ಸದೆಬಡಿಯುವೆ.

+ ಪುನರುಲ್ಲೇಖಗಳು : ಉದ್ಯೋಗ—೧೯೪/೬.

ದ್ರೋಣ/೧೪೭

೩

## ದುರ್ಯೋಧನನ ಗೆಳೆತನ

ದುರ್ಯೋಧನನು ಕರ್ಣನನ್ನು ಅಂಗರಾಜನನ್ನಾಗಿ ಮಾಡಿದನು. ಕರ್ಣ ಬಲುಸಂತುಷ್ಟನಾದನು. ಮುಂದೆ ಅವನು ಯಾವಾಗಲೂ ದುರ್ಯೋಧನನೊಂದಿಗೆ ಸ್ನೇಹಭಾವವನ್ನೇ ಪ್ರಕಟಪಡಿಸಿದನು. (ಆದಿ—೧೩೫/೧೫)

ಮಾನಯುಂಸ್ತವ ಪುತ್ರಸ್ಯ ಬಾಲ್ಯಾತ್ ಪ್ರಭೃತಿ ಸೌಹೃದಮ್ ॥ ೬೯ ॥
ಕೃತಾಂ ರಾಜ್ಯಪ್ರದಾನೇನ ಪ್ರತಿಜ್ಞಾಂ ಪ್ರತಿಪಾಲಯನ್ ॥ ೭೦ ॥

'ಸಾತ್ಯಕಿಯು ಬಾಣಗಳಿಂದಾಗಿ ರಥವನ್ನು ಕಳೆದುಕೊಂಡು ಕರ್ಣನು ನಿನ್ನ ಮಗ ದುರ್ಯೋಧನನೊಂದಿಗಿದ್ದ ತನ್ನ ಬಾಲ್ಯದ ಗೆಳೆತನವನ್ನು ನೆನೆದು ಹಾಗೂ ಅವನಿಂದ ತನಗೆ ರಾಜ್ಯವು ದೊರೆತ ದಿನ ತಾನು ಕೈಕೊಂಡ ಪ್ರತಿಜ್ಞೆಯನ್ನು ನೆನೆದು ಅವನು ದುರ್ಯೋಧನನ ರಥವನ್ನೇರಿದನು.'

ಉದ್ಯೋಗ/೬೨

೪

## ಶರತ್ತಿನ ಶಸ್ತ್ರಸಂನ್ಯಾಸ

ಕರ್ಣನು ಯುದ್ಧಕ್ಕಾಗಿ ಹಾತೊರೆದಿದ್ದ ದುರ್ಯೋಧನನಿಗೆ ಸಂತೋಷವಾಗಲೆಂದು ತನ್ನ ಸಾಮರ್ಥ್ಯದ ಬಗೆಗೆ ಪೊಳ್ಳುದೊಡ್ಡಸ್ತಿಕೆಯನ್ನು ಕೊಚ್ಚಿಕೊಳ್ಳಹತ್ತಿದನು. ಇದನ್ನು ಕಂಡು ಭೀಷ್ಮನು ಅವನಿಗೆ ಹಿಂದೆ ನಡೆದುಹೋದ ಸಂಗತಿಗಳನ್ನು ನೆನಪು ಮಾಡಿಕೊಟ್ಟನು. ಶ್ರೀಕೃಷ್ಣನ ಸಾಮರ್ಥ್ಯದ ಸರಿಯಾದ ಅರಿವನ್ನು ಉಂಟುಮಾಡಿಕೊಟ್ಟನು. ಭೀಷ್ಮ ಹೇಳಿದುದು ಸರಿಯಾಗಿಯೇ ಇದ್ದರೂ ಕೇಳಲು ಕಿವಿಗಳಿಗೆ ಕಟುವಾಗಿತ್ತು. ಹೀಗಾಗಿ ಕರ್ಣನೆಂದುಕೊಂಡನು. ಅವನು ಶ್ರೀಕೃಷ್ಣನ ಹಿರಿಮೆಯನ್ನೊಮ್ಮೆ ಒಪ್ಪಿಕೊಂಡನಾದರೂ ಭೀಷ್ಮನ ಮಾತುಗಳಿಂದ ಅವನಿಗೆ ಕೋಪ ಬಂದಿತು. ಅವನು ಹೀಗೆಂದನು—

ನ್ಯಸ್ಯಾಮಿ ಶಸ್ತ್ರಾಣಿ ನ ಜಾತು ಸಂಖ್ಯೇ ಪಿತಾಮಹೋ
ದ್ರಕ್ಷ್ಯತಿ ಮಾಂ ಸಭಾಯಾಮ್ ।
ತ್ವಯಿ ಪ್ರಶಾಂತೇ ತು ಮಮ ಪ್ರಭಾವಂ ದ್ರಕ್ಷ್ಯಂತಿ ಸರ್ವೇ
ಭುವಿ ಭೂಮಿಪಾಲಾಃ ॥ ೧೩ ॥

ಇಗೋ, ಈ ಶಸ್ತ್ರಗಳನ್ನು ಕೆಳಗಿಟ್ಟೆ. ಇನ್ನುಮುಂದೆ ಯುದ್ಧ ಇಲ್ಲವೆ ಯುದ್ಧದ ಬಗೆಗಿನ ಸಲಹೆಗಳ ಕಾಲಕ್ಕೆ ನಾನಿರಲಾರೆ. ಪಿತಾಮಹರಿಗೆ ಚಿರವಿಶ್ರಾಂತಿ ದೊರೆತ ತರುವಾಯುವೇ ಬೇರೆ ನರೇಶರಿಗೆ ನನ್ನ ಪ್ರಭಾವ ಕಂಡೀತು.

+ ಕರ್ಣನ ಈ ಮಾತುಗಳು ಪಣದಂತಿವೆ. ಭೀಷ್ಮನೂ ಕೂಡ ಹೀಗೆನ್ನುವ ಕರ್ಣನಿಗೆ, 'ಸತ್ಯಪ್ರತಿಜ್ಞಃ ಕಿಲ ಸೂತಪುತ್ರಃ' ಎಂದು ಕೊಂಕುನುಡಿಯುನ್ನು ಆಡಿದ್ದಾನೆ.

ಭೀಷ್ಮ/೯೭

ಭೀಷ್ಮ ಸೇನಾಪತಿಯಾಗಿ ಎಂಟು ದಿನಗಳಾಗಿದ್ದವು. ಆದರೂ ಪಾಂಡವರನ್ನು ಗೆದೆಯು ಲಾಗಲಿಲ್ಲ. ಇಷ್ಟೇ ಅಲ್ಲದೆ ಕೌರವಸೇನೆ ಅಪರಿಮಿತವಾದ ಹಾನಿಗೊಳಗಾಯಿತು. ಹೀಗಾಗಿ ದುರ್ಯೋಧನನ ಹುರುಪು ಇಳಿಮುಖವಾಯಿತು. ಆಗ ಕರ್ಣನು ಮೇಲಿನ ಪಣಕ್ಕೆ ಪೂರಕವಾಗಿ ಇನ್ನೊಂದು ಪಣವನ್ನು ತೊಟ್ಟನು. ಅವನೆಂದದ್ದು—

ನಿವೃತ್ತೇ ಯುಧಿ ಗಾಂಗೇಯೇ ನ್ಯಸ್ತಶಸ್ತ್ರೇ ಚ ಭಾರತ ॥ ೮ ॥

ಅಹಂ ಪಾರ್ಥಾನ್ ಹನಿಷ್ಯಾಮಿ ಸಹಿತಾನ್ ಸರ್ವಸೋಮಕೈಃ ।
ಪಶ್ಯತೋ ಯುಧಿ ಭೀಷ್ಮಸ್ಯ ಶಪೇ ಸತ್ಯೇನ ತೇ ನೃಪ ॥ ೯ ॥

ಭೀಷ್ಮನು ರಣಭೂಮಿಯುನ್ನು ತೊರೆದು ಶಸ್ತ್ರಗಳನ್ನು ಕೆಳಗಿಟ್ಟರೆ ನಾನು ಅವನ ಕಣ್ಣೆದುರಿನಲ್ಲಿಯೇ ಸೋಮಕ ಹಾಗೂ ಪಾಂಡವರನ್ನು ಸಂಹಾರಮಾಡುವೆನೆಂದು ಪಣ ತೊಡುತ್ತೇನೆ.

+ ಉದ್ಯೋಗಪರ್ವದ ಪ್ರತಿಜ್ಞೆಯಲ್ಲಿ 'ಭೀಷ್ಮನಿಗೆ ಚಿರಶಾಂತಿ ಸಿಕ್ಕ ತರುವಾಯ' ಎಂಬ ಖಚಿತವಾದ ಉಲ್ಲೇಖವಿದೆ. ಭೀಷ್ಮಪರ್ವದ ಪಣದಲ್ಲಿ 'ಭೀಷ್ಮನ ಕಣ್ಣೆದುರಿನಲ್ಲಿ' ಎಂಬ ಮಾರ್ಪಾಟಾಗಿರುವುದು ಕಂಡುಬರುತ್ತದೆ.

ತ್ವಯಿ ಜೀವತಿ ಕೌರವ್ಯ ನಾಹಂ ಯೋತ್ಸ್ಯೇ ಕದಾಚನ ॥ ದ್ರೋಣ—೧/೩೮

ಪುನರುಲ್ಲೇಖ: ದ್ರೋಣ—೧/೩೯, ೪೦.

ದ್ರೋಣ/೧೮೨

೫

## ಅರ್ಜುನನಿಗಾಗಿ ಮಾತ್ರ ವಾಸವಶಕ್ತಿಯ ಬಳಕೆ

ವಾಸವಶಕ್ತಿಯನ್ನು ಒಂದು ಸಲ ಮಾತ್ರ ಬಳಸಲು ಸಾಧ್ಯ ಎಂಬುದನ್ನು ಪಾಂಡವ ರಂತೆಯೇ ಕೌರವರೂ ಅರಿತಿದ್ದರು. ಹೀಗಾಗಿ ದುರ್ಯೋಧನ, ದುಶ್ಶಾಸನ, ಶಕುನಿ, ಜಯದ್ರಥ ಮೊದಲಾದವರೆಲ್ಲ ಅದನ್ನು ಅರ್ಜುನನಿಗಾಗಿಯೇ ಕಾದಿರಿಸಲು ಅರ್ಜುನನಿಗೆ ಹೇಳಿದ್ದರು.

ನಾನ್ಯಸ್ಯ ಶಕ್ತಿರೇಷಾ ತೇ ಮೋಕ್ತವ್ಯಾ ಜಯತಾಂ ವರ ॥ ೩೭ ॥

ಕರ್ಣನು ಈ ಮಾತನ್ನು ಪ್ರತಿಜ್ಞಾಪೂರ್ವಕವಾಗಿ ಒಪ್ಪಿಕೊಂಡಿದ್ದನು.

ತಥೇತಿ ಚ ಪ್ರತಿಜ್ಞಾತಂ ಕರ್ಣೇನ...... ॥ ೩೯ ॥

ಆದರೆ ಯಾವಾಗಲೂ ಅರ್ಜುನನ ಹಿತಕ್ಕಾಗಿ ಎಚ್ಚರವಹಿಸುತ್ತಿದ್ದ ಶ್ರೀಕೃಷ್ಣನು ಅದನ್ನು ಕರ್ಣನು ಘಟೋತ್ಕಚನಿಗಾಗಿ ಬಳಸುವುದು ಅನಿವಾರ್ಯವಾಗುವಂತೆ ನೋಡಿಕೊಂಡನು.

ಕರ್ಣ/೪೩

೬

## ಶಲ್ಯನ ಅಪ್ರಿಯ ಮಾತುಗಳಿಗೆ ಕ್ಷಮೆ

ದುರ್ಯೋಧನನು ಶಲ್ಯನಿಗೆ ಕರ್ಣನ ಸಾರಥ್ಯವನ್ನು ವಹಿಸಲು ಕೇಳಿಕೊಂಡನು. ಶಲ್ಯನಿಗೆ ಅದು ತನ್ನ ಭಯಂಕರವಾದ ಅಪಮಾನ ಎನ್ನಿಸಿತು. ಅವನು ಯುದ್ಧಮಾಡುವುದನ್ನೇ ನಿರಾಕರಿಸಿದನು. ಸೂತಪುತ್ರನೊಬ್ಬನ ಸಾರಥ್ಯವನ್ನು ಮಾಡಲು ಗೌರವಾನ್ವಿತನಾದ ರಾಜನೊಬ್ಬನಿಗೆ ಹೇಳಲಾಗಿತ್ತು. ಅದನ್ನು ಆಲಿಸುವುದಾಗಲಿ, ಅದನ್ನು ಒಪ್ಪಿಕೊಳ್ಳುವುದಾಗಲಿ ಶಲ್ಯನಿಗೆ ಸಹನೆಯಾಗದಿರುವುದು ಸ್ವಾಭಾವಿಕವೇ ಆಗಿತ್ತು. ಆದರೆ ದುರ್ಯೋಧನನು ಸವಿಮಾತುಗಳಿಂದ ಅವನನ್ನು ಸಮಾಧಾನಪಡಿಸಿದನು. ಅಲ್ಲದೆ ತನ್ನ ಮಾತುಗಳನ್ನು ಅವನಿಗೆ ಮನದಟ್ಟಾಗುವಂತೆಯೂ ಮಾಡಿದನು. ಅವನು ಸಾರಥ್ಯದಲ್ಲಿ ಶ್ರೀಕೃಷ್ಣನಿಗಿಂತಲೂ ಶ್ರೇಷ್ಠನೆಂದು ಹೊಗಳಿದನು. ಹೀಗಾಗಿ ಶಲ್ಯನು ಶರತ್ತಿನೊಂದಿಗೆ ಒಪ್ಪಿಕೊಂಡನು. ಅದೆಂದರೆ, ತಾನು ಹೇಳಿದುದನ್ನು ಕರ್ಣನು ಕೇಳಿಕೊಳ್ಳತಕ್ಕದ್ದು ಎಂಬುದು. ದುರ್ಯೋಧನ ಒಪ್ಪಿಕೊಂಡನು (ನೋಡಿ : ಕರ್ಣ/೩೨). ಶಲ್ಯನು ಕರ್ಣನಿಗೆ ಚುಚ್ಚುನುಡಿಗಳನ್ನಾಡಹತ್ತಿದನು (ಶಲ್ಯ ಹಾಗೆಂದು ಯುಧಿಷ್ಠಿರನಿಗೆ ಮಾತುಕೊಟ್ಟಿದ್ದನು). ಕರ್ಣನಿಗೆ ಬಲು ಕೋಪ ಉಕ್ಕೇರಿಬಂದಿತು. ಆದರೆ ಅವನು ಮಾತಿನಲ್ಲಿ ಸಿಕ್ಕಿಹಾಕಿಕೊಂಡಿದ್ದನು. ಅವನು ಹೀಗೆನ್ನುತ್ತಾನೆ—

> ಕೃತಶ್ಚ ಸಮಯಃ ಪೂರ್ವಂ ಕ್ಷಂತವ್ಯಂ ವಿಪ್ರಿಯಂ ತವ ॥ ೯ ॥

ನಿನ್ನ ಕಟುನುಡಿಗಳಿಗಾಗಿ ನಿನ್ನನ್ನು ಕ್ಷಮಿಸುವುದಾಗಿ ಮೊದಲೇ ಪಣತೊಟ್ಟಿದ್ದೇನೆ (ಇಲ್ಲದಿದ್ದರೆ ನೀನು ಹೆಚ್ಚುಕಾಲ ಬದುಕಿ ಉಳಿಯುವಂತಿರಲಿಲ್ಲ).

## ೧೪. ಕುಂತಿ (ಪೃಥಾ) ವನ/೩೦೪

ಒಂದು ಸಲ ಮಹಾತೇಜಸ್ವಿಯೂ, ವೇದಸಂಪನ್ನನೂ, ವ್ರತಾಚರಣೆಯೂ ಆದ ಒಬ್ಬ ಮಹಾತಪಸ್ವಿಯು ಕುಂತಿಭೋಜ ದೊರೆಯಲ್ಲಿಗೆ ಬಂದನು. ದೊರೆಯು ಅವನನ್ನು ಯಥಾಯೋಗ್ಯ ರೀತಿಯಿಂದ ಬರಮಾಡಿಕೊಂಡನು. ಅವನ ಆದರಾತಿಥ್ಯಗಳ ಹೊಣೆಯನ್ನೆಲ್ಲ ತನ್ನ ದತ್ತುಮಗಳ ಮೇಲೆ ಹೊರಿಸಿದನು. ಅವಳು ಅತಿಥಿಯನ್ನು ಸರಿಯಾಗಿ ನೋಡಿಕೊಳ್ಳುವಳೆಂಬ ಭರವಸೆ ಅವನಲ್ಲಿದ್ದೇ ಇತ್ತು. ಆದರೂ ಅವನು ಅವಳಿಗೆ ಕೆಲವು ಸಲಹೆಸೂಚನೆಗಳನ್ನಿತ್ತನು. ಅತಿಥಿಯನ್ನು ಸರಿಯಾಗಿ ಸೇವೆಗೈಯುವುದರಿಂದ ಕಲ್ಯಾಣವೇ ಆದೀತು. ಆದರೆ ಸೇವೆಯತ್ತ ಅಸಡ್ಡೆ ತೋರಿದರೆ ಮಾತ್ರ ಕುಲ ನಾಶಹೊಂದದೇ ಇರದು ಎಂದು ಅವನು ಅವಳಿಗೆ ಹೇಳಿದನು. ಅವಳು ತಂದೆ ತನಗೊಪ್ಪಿಸಿದ ಹೊಣೆಯನ್ನು ಒಪ್ಪಿಕೊಂಡು ಹೀಗೆಂದಳು—

ಬ್ರಾಹ್ಮಣಂ ಯಂತ್ರಿತಾ ರಾಜನ್ನುಪಸ್ಥಾಸ್ಯಾಮಿ ಪೂಜಯಾ ।
ಯಥಾಪ್ರತಿಜ್ಞಂ ರಾಜೇಂದ್ರ ನ ಚ ಮಿಥ್ಯಾ ಬ್ರವೀಮ್ಯಹಮ್ ॥ ೧ ॥

ಎಲೈ ರಾಜನೇ! ನಾನು ನಿಯಮಗಳನ್ನು ಸರಿಯಾಗಿ ಪಾಲಿಸುತ್ತ ತೊಟ್ಟ ಪಣದಂತೆಯೇ ಬ್ರಾಹ್ಮಣನನ್ನು ಸೇವೆಗೈಯುವೆನು. ನಾನು ಸುಳ್ಳು ಹೇಳುತ್ತಿಲ್ಲ.

## ೧೫. ಕೌಶಿಕ ಶಾಂತಿ/೧೯೯

ಧರ್ಮರಾಜ ಯುಧಿಷ್ಠಿರನು ಕೇಳಿದ್ದರಿಂದ ಭೀಷ್ಮನು ಅವನಿಗೆ ಒಂದು ಹಳೆಯ ವಾದ ವಿವಾದವನ್ನು ಕುರಿತು ಹೇಳುತ್ತಲಿದ್ದಾನೆ. ಒಂದು ಸಲ ಯಮ, ಕಾಲ, ಮೃತ್ಯು ಹಾಗೂ ಜಪತಪಗಳನ್ನು ಮಾಡುವ ಬ್ರಾಹ್ಮಣನು ಒಂದೆಡೆಯಲ್ಲಿ ಕಲೆತಿದ್ದರು. ಆಗ ತೀರ್ಥ ಯಾತ್ರೆಯನ್ನು ಮಾಡುತ್ತಲಿದ್ದ ಇಕ್ಷ್ವಾಕು ಅಲ್ಲಿಗೆ ಬಂದು ತಲುಪಿದನು. ಅವನು ಅವರೆಲ್ಲ ರನ್ನೂ ತಕ್ಕಹಾಗೆ ಪೂಜಿಸಿದನು. ಅವರೂ ಕೂಡ ಆತನಿಗೆ ಆಸನ, ಪಾದೋದಕ, ಅರ್ಘ್ಯ ಮೊದಲಾದವನ್ನೆಲ್ಲ ನೀಡಿದರು. ಬ್ರಾಹ್ಮಣನು ಆ ರಾಜನನ್ನು ತಮ್ಮ ಕೈಲಾದುದೇನನ್ನು ಮಾಡುವಾ ?—ಎಂದು ಕೇಳಿದನು. ಆಗ ರಾಜನು ಆತನಿಗೆ ತನ್ನ ಜಪದ ಫಲವನ್ನು ಕೊಡೆಂದನು. ಅದಕ್ಕೆ ಬ್ರಾಹ್ಮಣ, 'ಕ್ಷತ್ರಿಯನಾದ ನೀನು ಯುದ್ಧಕ್ಕಾಗಿ ಕೇಳುವುದನ್ನು ಬಿಟ್ಟು ಇದೇನನ್ನು ಕೇಳುತ್ತಿರುವೆ ?' ಎಂದನು. ಬ್ರಾಹ್ಮಣನ ಬಲ ಅವನ ವಾಣಿಯಲ್ಲಿರುತ್ತದೆ. ವಾಗ್ಯುದ್ಧಕ್ಕಾಗಿಯೆಂದೇ ತಾನದನ್ನು ಕೇಳುತ್ತಿರುವುದಾಗಿ ರಾಜನು ಹೇಳಿದನು. ಆಗ ಬ್ರಾಹ್ಮಣ ಹೀಗೆಂದನು—

ಸ್ವೈವಾದ್ಯಾಪಿ ಪ್ರತಿಜ್ಞಾ ಮೇ ಸ್ವಶಕ್ತ್ಯಾ ಕಿಂ ಪ್ರದೀಯತಾಮ್ ।
ಬ್ರೂಹಿ ದಾಸ್ಯಾಮಿ ರಾಜೇಂದ್ರ ವಿಭವೇ ಸತಿ ಮಾ ಚಿರಮ್ ॥ ೪೭ ॥

ನನ್ನ ಪ್ರತಿಜ್ಞೆ ಇಂದಿಗೂ ಹಾಗೆಯೇ ಇದೆ. ನನ್ನ ಶಕ್ತ್ಯನುಸಾರ ನಾನು ನಿನಗೇನು ಕೊಡಲೆಂಬುದನ್ನು ಹೇಳು. ಸುಮ್ಮನೆ ತಡ ಬೇಡ. ನನ್ನಲತೆಯಲ್ಲಿದ್ದರೆ ನಾನದನ್ನು ನಿನಗೆ ಕೊಟ್ಟೇಕೊಡುವೆ. ಹೀಗಾಗಿ ರಾಜ ಕೇಳಿದ ಜಪದ ಫಲವನ್ನು ಕೊಡಲು ಸಿದ್ಧನಾದನು. ಆಗ ರಾಜನು, 'ನನಗೆ ಜಪದ ಫಲ ಬೇಡ. ಜಪದ ಜ್ಞಾನವನ್ನು ಕುರಿತು ಹೇಳು. ಅದರಿಂದ ದೊರಕುವ ಫಲ ಏನೆಂಬುದನ್ನು ಹೇಳು' ಎಂದನು. ಅದು ತನಗೆ ಗೊತ್ತಿಲ್ಲವೆಂದು ಬ್ರಾಹ್ಮಣ ಹೇಳಿದನು. 'ನಾನು ನಿನಗೆ ನಿನ್ನ ಕೇಳಿಕೆಯ ಮೇರೆಗೆ ನನ್ನ ಜಪದ ಫಲವನ್ನು ಕೊಡುತ್ತಲಿದ್ದೇನೆ. ಅದನ್ನು ಸ್ವೀಕರಿಸು' ಎಂದು ಆ ಬ್ರಾಹ್ಮಣನು ಒತ್ತಾಯಿಸತೊಡಗಿದನು. ರಾಜನಾದರೆ ಅದನ್ನು ಪಡೆಯಲು ಒಪ್ಪಲಿಲ್ಲ. ಕ್ಷತ್ರಿಯನು ದಾನವನ್ನು ಪಡೆಯುವಂತಿಲ್ಲವಲ್ಲ. ಆಗ ಬ್ರಾಹ್ಮಣ, 'ನಾನು ಸುಳ್ಳಾಡೆನು. ನೀನೂ ನಿನ್ನ ಮಾತುಗಳನ್ನು ಹೊರಳಿಸಬೇಡ' ಎಂದನು.

ಸಂಶ್ರುತಂ ಚ ಮಯಾ ಪೂರ್ವಂ ದದಾನೀತ್ಯವಿಚಾರಿತಮ್ ।
ತದ್ ಗೃಹೀಷ್ವಾವಿಚಾರೇಣ ಯದಿ ಸತ್ಯೇ ಸ್ಥಿತೋ ಭವಾನ್ ॥ ೫೯ ॥

'ನೀನು ಕೇಳಿದುದನ್ನು ಯಾವುದೇ ಯೋಚನೆ ಮಾಡದೆ ಕೊಡಲು ಪಣತೊಟ್ಟಿದ್ದೇನೆ. ನೀನು ಸತ್ಯವಚನಿಯಾಗಿದ್ದರೆ ನಾನು ಯೋಚಿಸದೆ ಕೊಟ್ಟುದನ್ನು ನೀನು ಸ್ವೀಕರಿಸಬೇಕು.'

## ೧೬. ಜನಕ ಶಾಂತಿ/೧೮

ಭಾರತಯುದ್ಧದ ಕಾಲಕ್ಕೆ ಮಾನವಸಂಹಾರ ಭಯಂಕರವಾಗಿ ನಡೆಯಿತು. ಆದರಿಂದ ರೋಸಿಹೋಗಿ ಯುಧಿಷ್ಠಿರ ಸನ್ಯಾಸಿಯಾಗುವೆನೆನ್ನತೊಡಗಿದನು. ಆಗ ದ್ರೌಪದಿ ಹಾಗೂ ಅವನ ಒಡಹುಟ್ಟಿದವರು ಅವನಿಗೆ ಬಗೆಬಗೆಯಾಗಿ ತಿಳಿಹೇಳಲು ಯತ್ನಿಸಿದರು. ಅರ್ಜುನನು ತನ್ನ ಹೇಳಿಕೆಯನ್ನು ಮನಗಾಣಿಸಲೆಂದು ಜನಕರಾಜನ ಉದಾಹರಣೆಯನ್ನು ಕೊಟ್ಟನು. ಜನಕ ಬಲುಪರಾಕ್ರಮಿ ಹಾಗೂ ವೈಭವಸಂಪನ್ನನಾದ ರಾಜನಾಗಿದ್ದನು. ಅವನು ಎಲ್ಲ ಬಗೆಯ ರಾಜಭೋಗಗಳನ್ನು ತೊರೆದು ಭಿಕ್ಷೆಯನ್ನು ಬೇಡಿ ಬದುಕಲು ಆರಂಭಿಸಿದನು. ಒಂದು ಮುಟ್ಟಿಗೆ ಜವೆಗೋದಿಯನ್ನು ಸೇವಿಸಿ ಜೀವ ಹಿಡಿದುಕೊಂಡು ಇರಹತ್ತಿದನು. ಅವನ ಮಡದಿಗೆ ಈ ನಡತೆ ಹಿಡಿಸಲಿಲ್ಲ. ಅವಳು ಸಿಟ್ಟಿಗೆದ್ದು ಏಕಾಂತದಲ್ಲಿರುವಾಗ ಅವನಿಗೆ, 'ತುಂಬುರಾಜ್ಯವನ್ನು ತೊರೆದು ಭಿಕ್ಷೆ ಬೇಡಿ ಬದುಕುತ್ತಿರುವುದು ನೀನು ಮಾಡುತ್ತಿರುವ ತಪ್ಪು' ಎಂದಳು.

ಪ್ರತಿಜ್ಞಾ ತೇಽನ್ಯಥಾ ರಾಜನ್ ವಿಚೇಷ್ಟಾ ಚಾನ್ಯಥಾ ತವ ॥ ೮ ॥

'ನಿನ್ನ ಪ್ರತಿಜ್ಞೆ ಏನು ? ನೀನು ನಡೆದುಕೊಳ್ಳುವುದೇನು ? ಅದಕ್ಕೆ ತೀರ ವಿರುದ್ಧವಾಗಿದೆಯಲ್ಲ ! (ಇದನ್ನು ಗಮನಿಸು)'

ಅವಳು ಹಲವು ಉದಾಹಣೆಗಳಿಂದ ಆತನ ನಡತೆ ತಪ್ಪೆಂಬುದನ್ನು ಅವನಿಗೆ ತಿಳಿ ಹೇಳಿದಳು.

ಧಾನಾಮುಷ್ಟೇರಿಹಾರ್ಥಶ್ಚೇತ್ ಪ್ರತಿಜ್ಞಾ ತೇ ವಿನಶ್ಯತಿ ॥ ೨೧ ॥

'ಜೀವದಿಂದಿರಲು ನಿನಗೆ ಬರಿ ಒಂದು ಮುಟ್ಟಿಗೆ ಜವೆಗೋದಿ ಸಾಕಿದ್ದರೆ ತ್ಯಾಗವನ್ನು ಮಾಡುವ ಬಗೆಗಿನ ನಿನ್ನ ಪಣಕ್ಕೆ ಆದಾವ ಅರ್ಥ ಉಳಿದೀತು ?'

+ ಇಲ್ಲಿ ಪಣದ ಉಲ್ಲೇಖ ಮಾತ್ರ ಇದೆ. ಅದರ ಸ್ವರೂಪ ಸ್ಫುಟವಾಗಿಲ್ಲ.

## ೧೭. ತ್ರಿಗರ್ತದ ರಾಜ ದ್ರೋಣ/೧೭

ಯುಧಿಷ್ಠಿರನಿಗೆ ಅರ್ಜುನನ ಸಂರಕ್ಷಣೆ ಇಲ್ಲದಿದ್ದರೆ ತಾನು ಅವನನ್ನು ಜೀವದಿಂದ ಸೆರೆ ಹಿಡಿಯುವುದಾಗಿ ದ್ರೋಣನು ಪಣತೊಟ್ಟಿದ್ದನು. ಅರ್ಜುನನನ್ನು ಸೋಲಿಸುವುದು ಅವನಿಂದೇಕೆ, ದೇವತೆಗಳಿಂದಲೂ ಆಗದ ಮಾತಾಗಿತ್ತು. ಅರ್ಜುನ ತುಸುಹೊತ್ತಾದರೂ ಯುಧಿಷ್ಠಿರನಿಂದ ದೂರಾದರೆ ಯುಧಿಷ್ಠಿರನನ್ನು ತಾನು ಹಿಡಿಯಬಲ್ಲೆನೆಂಬ ಕೆಚ್ಚು ದ್ರೋಣನಲ್ಲಿತ್ತು. ಅವನು ಹಾಗೆಂದು ದುರ್ಯೋಧನನೆದುರು ಆಡಿಯೂ ತೋರಿಸಿದ್ದನು. ಇದೇ ಸುಮಾರಿಗೆ ತ್ರಿಗರ್ತದೇಶದ ದೊರೆ ತನ್ನ ಸೋದರರೊಂದಿಗೆ ಅಲ್ಲಿಗೆ ಬಂದು

ತಲುಪಿದನು. ಅರ್ಜುನನು ಹಿಂದಕ್ಕೆ ಅವನನ್ನು ಅವಮಾನಗೊಳಿಸಿದ್ದರಿಂದ ಅವನಲ್ಲಿ ಅರ್ಜುನನ ಬಗೆಗೆ ಸಿಟ್ಟು ಇತ್ತು. ಅವನ ತಪ್ಪೇನೂ ಇಲ್ಲದಿರುವಾಗಲೂ ಅರ್ಜುನ ಈ ಅಪರಾಧವನ್ನು ಎಸಗಿದ್ದನು. ಹೀಗಾಗಿ ಈ ದೊರೆ ಅರ್ಜುನನನ್ನು ಕೊಲ್ಲಲು ಸಿದ್ಧನಿದ್ದನು. ಅವನು ಹೀಗೆಂದನು—

ಅದ್ಯಾಸ್ತ್ವನರ್ಜುನಾ ಭೂಮಿರತ್ರಿಗರ್ತಾಥ ವಾ ಪುನಃ ।
ಸತ್ಯಂ ತೇ ಪ್ರತಿಜಾನೀಮೋ ನೈತನ್ಮಿಥ್ಯಾ ಭವಿಷ್ಯತಿ ॥ ೧೬ ॥

ಈ ದಿನ ಬಂದಿತೆಂದರೆ ಪೃಥ್ವಿ ಅರ್ಜುನರಹಿತವಾದೀತು ಇಲ್ಲವೆ ತ್ರಿಗರ್ತವು ಸೊನ್ನೆಯಾದೀತೆಂಬುದಾಗಿ ನಾವೆಲ್ಲರೂ ಪ್ರತಿಜ್ಞಾಪೂರ್ವಕವಾಗಿ ಹೇಳುತ್ತೇವೆ. ನನ್ನ ಮಾತು ಅದೆಂದಿಗೂ ಸುಳ್ಳಾಗಲಾರದು.

ಸಹಿತಾ ಭ್ರಾತರಃ ಪಂಚ ರಥಾನಾಮಯುತೇನ ಚ ।
ನ್ಯವರ್ತಂತ ಮಹಾರಾಜ ಕೃತ್ವಾ ಶಪಥಮಾಹವೇ ॥ ೧೮ ॥
ನಾನಾಜನಪದೇಭ್ಯಶ್ಚ ರಥಾನಾಮಯುತಂ ಪುನಃ ।
ಸಮುತ್ಥಿತಂ ವಿಶಿಷ್ಟಾನಾಂ ಶಪಥಾರ್ಥಮುಪಾಗಮತ್ ॥ ೨೧ ॥

ಹೀಗೆಂದು ಸಾರಿದವರಾದ ಈ ಐವರು ಒಡಹುಟ್ಟಿದವರು ಹಾಗೂ ಹತ್ತು ಸಾವಿರ ಜನ ರಥಿಗಳು ಈ ಪಣವನ್ನು ತೊಟ್ಟು ಯುದ್ಧಕ್ಕಾಗಿ ಹಿಂತಿರುಗಿ ಹೋದರು. ಅಲ್ಲಿಗೆ ಹಲವಾರು ದೇಶಗಳಿಂದ ಹತ್ತು ಸಾವಿರ ಜನ ದೊರೆಗಳು ಬಂದಿದ್ದರು. ಅವರೂ ಕೂಡ ಪಣವನ್ನು ಪಾಲಿಸಲೆಂದು ಎದ್ದರು.

ಪ್ರಜ್ವಾಲ್ಯ ಕೃಷ್ಣವರ್ತ್ಮಾನಮುಪಾಗಮ್ಯ ರಣವ್ರತಮ್ ।
ತಸ್ಮಿನ್ನಗ್ನೌ ತದಾ ಚಕ್ರುಃ ಪ್ರತಿಜ್ಞಾಂ ದೃಢನಿಶ್ಚಯಾಃ ॥ ೨೭ ॥
ಶೃಣ್ವತಾಂ ಸರ್ವಭೂತಾನಾಮುಚ್ಚೈರ್ವಾಚೋ ಬಭಾಷಿರೇ ।
ಸರ್ವೇ ಧನಂಜಯವಧೇ ಪ್ರತಿಜ್ಞಾಂ ಚಾಪಿ ಚಕ್ರಿರೇ ॥ ೨೮ ॥

ಬೆಂಕಿಯನ್ನು ಪ್ರಜ್ವಲಿಸಿ ಹಾಗೂ ಯುದ್ಧದ ವ್ರತವನ್ನು ತೊಟ್ಟು ಆ ವೀರರು ನಿಶ್ಚಯಪೂರ್ವಕವಾಗಿ ಪ್ರತಿಜ್ಞೆಯನ್ನು ಗೈದರು. ಅವನು ಎಲ್ಲರಿಗೂ ಕೇಳಿಬರುವಂತೆ ದೊಡ್ಡದಾದ ದನಿಯಲ್ಲಿ ಅರ್ಜುನನ ವಧೆಯ ಪಣವನ್ನು ತೊಟ್ಟರು. ಇದನ್ನು ಕುರಿತು ಶ್ಲೋಕ ೨೯ರಿಂದ ೩೬ರ ವರೆಗೆ ಸವಿಸ್ತರವಾದ ವರ್ಣನೆಯಿದೆ.

### ದ್ರೋಣ/೧೯

ತ್ರಿಗರ್ತದ ದೊರೆಯು ತನ್ನ ಸೈನಿಕರಿಗೆ ರಣಾಂಗಣದಿಂದ ಓಡಿಹೋಗದಿರಲು ಹೇಳಿದನು. ಅವರು ಹೆದರುವ ಕಾರಣವಿಲ್ಲೆಂದು ಆಶ್ವಾಸನೆಯನ್ನಿತ್ತು, ಅವರನ್ನು ಹುರಿದುಂಬಿಸಿದನು. ಅವನು ಹೀಗೆಂದನು—

ಶಪ್ತ್ವಾಥ ಶಪಥಾನ್ ಘೋರಾನ್ ಸರ್ವಸೈನ್ಯಸ್ಯ ಪಶ್ಯತಃ ।
ಗತ್ವಾ ದೌರ್ಯೋಧನಂ ಸೈನ್ಯಂ ಕಿಂ ವೈ ವಕ್ಷ್ಯಥ ಮುಖ್ಯಶಃ ॥ ೨೮ ॥

ಇಡಿಯ ಸೇನೆಯ ಎದುರು ಇಂಥ ಘೋರ ಆಣೆಯನ್ನು ಮಾಡಿದ ಬಳಿಕ ನಿಮ್ಮಂತಹ ಪ್ರಮುಖರಾದ ಕಡುಗಲಿಗಳು ದುರ್ಯೋಧನನ ಸೇನೆಯೆದುರು ಇನ್ನೇನನ್ನು ಹೇಳಿಯಾರು ?

+ ಈ ಪಣದಲ್ಲಿ ಆಣೆಯ ಉಲ್ಲೇಖವಿದೆ. ಶ್ಲೋಕ ೨೯-೩೭ರಲ್ಲಿಯ ವರ್ಣನೆ ಶರತ್ತಿನದು.

## ೧೮. ದಮಯಂತಿ ವನ/೭೩

ಋತುಪರ್ಣ ರಾಜನ ರಥವು ಕುಂಡಿನಪುರವನ್ನು ಪ್ರವೇಶಿಸುತ್ತಲೇ ಅದರ ಸದ್ದು ಬರಿ ದಮಯಂತಿಗೆ ಮಾತ್ರವಲ್ಲದೆ ಲಾಯದಲ್ಲಿಯ ಕುದುರೆಗಳಿಗೂ ಗುರುತಿನದಾಗಿ ಕಂಡಿತು. ಅದನ್ನು ಕೇಳಿ ದಮಯಂತಿಯಂತೂ ಬಲು ಸಂತಸಹೊಂದಿದಳು. ರಥದ ಸಾರಥಿ ನಲನೇ ಆಗಿರಲು ಸಾಕೆಂದುಕೊಂಡಳು. ಆಗ ಅವಳು ತನ್ನಷ್ಟಕ್ಕೇ ಗೊಣಗಿಕೊಂಡುದು ಒಂದು ಪಣದಂತೆಯೇ ಇದೆ.

ಅದ್ಯ ಚಂದ್ರಾಭವಕ್ತ್ರಂ ತಂ ನ ಪಶ್ಯಾಮಿ ನಲಂ ಯದಿ ।
ಅಸಂಖ್ಯೇಯಗುಣಂ ವೀರಂ ವಿನಂಕ್ಷ್ಯಾಮಿ ನ ಸಂಶಯಃ ॥ ೯ ॥

ಯದಿ ವೈ ತಸ್ಯ ವೀರಸ್ಯ ಬಾಹ್ವೋರ್ನಾದ್ಯಾಹಮಂತರಮ್ ।
ಪ್ರವಿಶಾಮಿ ಸುಖಸ್ಪರ್ಶಂ ನ ಭವಿಷ್ಯಾಮ್ಯಸಂಶಯಮ್ ॥ ೧೦ ॥

ಯದಿ ಮಾಂ ಮೇಘನಿರ್ಘೋಷೋ ನೋಪಗಚ್ಛತಿ ನೈಷಧಃ ।
ಅದ್ಯ ಚಾಮೀಕರಪ್ರಖ್ಯಂ ಪ್ರವೇಕ್ಷ್ಯಾಮಿ ಹುತಾಶನಮ್ ॥ ೧೧ ॥

ಯದಿ ಮಾಂ ಸಿಂಹವಿಕ್ರಾಂತೋ ಮತ್ತವಾರಣವಿಕ್ರಮಃ ।
ನಾಭಿಗಚ್ಛತಿ ರಾಜೇಂದ್ರೋ ವಿನಂಕ್ಷ್ಯಾಮಿ ನ ಸಂಶಯಃ ॥ ೧೨ ॥

ಹಲವು ಗುಣಗಳಿಂದ ಕೂಡಿದವನೂ, ಚಂದಿರನಂತೆ ಮೋರೆಯುಳ್ಳವನೂ. ವೀರ ಶಿರೋಮಣಿಯೂ ಆದ ನಲನು ನನಗಿಂದು ಕಾಣದೆ ಹೋದನಾದರೆ ನನ್ನ ಬದುಕು ಇಂದೇ ಕೊನೆಗೊಳ್ಳುವುದೆಂಬಲ್ಲಿ ಸಂದೇಹವಿಲ್ಲ. ನಾನಿಂದು ವೀರಶ್ರೇಷ್ಠನಾದ ಆ ನಲನ ತೋಳ್ತೆಕ್ಕೆಯಲ್ಲಿ ಆಸರೆಯನ್ನು ಹೊಂದದಿದ್ದರೆ ನಾನು ಬದುಕಿ ಉಳಿಯಲಾರೆ. ಮೋಡ ಗಳಂತೆ ಗರ್ಜಿಸುವ ಆ ನಿಷಧರಾಜನು (ನಲ) ಇಂದು ನನ್ನ ಸನ್ನಿಧಿಗೆ ಬಾರದಿದ್ದರೆ ನಾನು ಹೊಂಬಣ್ಣದ ಉರಿನಾಲಿಗೆಗಳ ಅಗ್ನಿಯನ್ನು ಪ್ರವೇಶಿಸುವೆನು. ಸಿಂಹದಂತೆ ಶೂರನೂ, ಆನೆಯಂತೆ (ಡೌಲಿನ) ನಡಿಗೆಯುಳ್ಳವನೂ, ರಾಜರುಗಳಲ್ಲೆಲ್ಲ ಶ್ರೇಷ್ಠನೂ ಆಗಿರುವ ನಲನು ಇಂದು ಬಾರದಿದ್ದರೆ ನನ್ನ ಬಾಳು ಹಾಳಾದೀತು—ಎಂಬಲ್ಲಿ ಸಂದೇಹವಿಲ್ಲ.

+ ಇದು ಶರತ್ತಿನ ಪಣವಾಗಿದ್ದು ಇದರಲ್ಲಿ ಸತ್ಯಕ್ರಿಯೆಯ ಛಾಯೆಯಿದೆ.

## ೧೯. ದುರ್ಯೋಧನ

ವನ/೩೪

### ೧

### ಪಾಂಡವರ ರಾಜ್ಯಾಧಿಕಾರ

ಭೀಷ್ಮನು ಕ್ಷತ್ರಿಯರ ನಿಜವಾದ ಧರ್ಮ ಯಾವುದೆಂಬುದನ್ನು ಹಲವು ವಿಧದಿಂದ ಯುಧಿಷ್ಠಿರನಿಗೆ ತಿಳಿಸಿ ಹೇಳಿದನು. ಎರಡನೆಯ ಸಲ ಜೂಜಿನ ಕರೆಗೆ ಓಗೊಟ್ಟು ಅದೆಂತಹ ದೈನ್ಯವನ್ನು ಬರಮಾಡಿಕೊಂಡೆ—ಎಂಬುದನ್ನೂ ಅವನಿಗೆ ಕಣ್ಣೆದುರು ಚಿತ್ರ ಕಟ್ಟುವಂತೆ ಹೇಳಿದನು. ಆಗ ಯುಧಿಷ್ಠಿರ ತಾನು ಅದಾವ ಸನ್ನಿವೇಶದಲ್ಲಿ ಈ ಕರೆಯನ್ನು ಒಪ್ಪಿಕೊಂಡೆನೆಂಬುದನ್ನು ವಿವರಿಸಿದನು. ದುರ್ಯೋಧನನು ಜೂಜಿನ ಶರತ್ತೆಂದು 'ಹನ್ನೆರಡು ವರ್ಷಗಳ ವನವಾಸ ಹಾಗೂ ಒಂದು ವರ್ಷದ ಅಜ್ಞಾತವಾಸಗಳಲ್ಲದೆ ಗುರುತು ಸಿಕ್ಕರೆ ಮತ್ತೆ ಹನ್ನೆರಡು ವರ್ಷಗಳ ವನವಾಸ'ವೆಂದು ಹೇಳಿ ಈ ರೀತಿಯಾಗಿ ಪಣತೊಟ್ಟಿದ್ದನು—

> ತ್ವಾಂ ಚೇಚ್ಛ್ರುತ್ವಾ ತಾತ ತಥಾ ಚರಂತಮುಪಭೋಕ್ಷ್ಯಂತೇ ಭರತಾನಾಂ ಚರಾಶ್ಚ ।
> ಅನ್ಯಾಂಶ್ಚರೇಥಾಸ್ತಾವತೋಽಬ್ದಾಂಸ್ತಥಾ ತ್ವಂ ನಿಶ್ಚಿತ್ಯ ತತ್ ಪ್ರತಿಜಾನೀಹಿ ಪಾರ್ಥ ॥ ೧೦ ॥
> ಚರೇಶ್ಚೇನ್ನೋಽವಿದಿತಃ ಕಾಲಮೇತಂ ಯುಕ್ತೋ ರಾಜನ್ ಮೋಹಯಿತ್ವಾ ಮದೀಯಾನ್ ।
> ಬ್ರವೀಮಿ ಸತ್ಯಂ ಕುರುಸಂಸದೀಹ ತವೈವ ತಾ ಭಾರತ ಪಂಚ ನದ್ಯಃ ॥ ೧೧ ॥

ಆಗ ದುರ್ಯೋಧನನು ಹೀಗೆಂದನು: 'ಎಲೈ ಕೌಂತೇಯನೇ! ನೀವು ಅಜ್ಞಾತ ವಾಸದಲ್ಲಿರುವಾಗ ನಮ್ಮ ಬೇಹುಗಾರರಿಗೆ ಸಿಕ್ಕುಬಿದ್ದಿರೆಂದರೆ ಮತ್ತೆ ಹನ್ನೆರಡು ವರ್ಷಗಳ ಕಾಲ ವನವಾಸದಲ್ಲಿ ಕಳೆಯಬೇಕಾದೀತು. ಈ ಸಂಗತಿಯನ್ನು ಗಮನದಲ್ಲಿರಿಸಿ ಕೊಂಡೇ ಜೂಜಿನ ಬಗೆಗೆ ಯಾವ ಪಣವನ್ನು ತೊಡಲಿಕ್ಕಿದೆಯೋ ಹಾಗೆ ಮಾಡು. ನೀವು ಎಚ್ಚರದಿಂದಿದ್ದು ನಮ್ಮ ಬೇಹುಗಾರರಿಗೆ ನಿಮ್ಮ ಸುಳಿವು ಸಿಕ್ಕದೆಹೋದರೆ ಇಡಿಯ ಪಂಚನದಿಗಳ ನಾಡಿನ ಮೇಲೆ ನಿನ್ನ ಹಕ್ಕು ನಡೆದೀತೆಂದು ಕೌರವರೆಲ್ಲರ ಎದುರಿನಲ್ಲೇ ಸತ್ಯಪ್ರತಿಜ್ಞೆಯನ್ನು ಮಾಡುತ್ತೇನೆ.'

ಯುಧಿಷ್ಠಿರನು 'ತಥಾಸ್ತು' ಎಂದು ನುಡಿದು ತನ್ನ ಒಪ್ಪಿಗೆಯನ್ನಿತ್ತಿದ್ದನು.

+ ಈ ಪ್ರತಿಜ್ಞೆಯು ಶರತ್ತಿನದು.

ದ್ರೋಣ/೧೫೦

### ೨

### ಪಾಂಡವ ಹಾಗೂ ಪಾಂಚಾಲರ ಸಂಹಾರ

ಜಯದ್ರಥನ ಕೊಲೆಯಾದ ತರುವಾಯ ದುರ್ಯೋಧನನ ಮನ ನಿರಾಶೆಯಿಂದ ತುಂಬಿ ಕೊಂಡಿತು. ಅವನಿಗೆ ವಿಜಯದ ಯಾವುದೇ ಲಕ್ಷಣಗಳು ಕಂಡುಬರುತ್ತಿರಲಿಲ್ಲ. ಅವನು

ತನ್ನ ಈ ನಿರಾಶೆಯನ್ನು ದ್ರೋಣನೆದುರು ತೋಡಿಕೊಂಡನು. ಪ್ರಸಂಗ ಹೀಗಿರುವಾಗಲು ಅವನು ಈ ಬಗೆಯಾಗಿ ಪಣತೊಟ್ಟನು—

ಸತ್ಯಂ ತೇ ಪ್ರತಿಜಾನಾಮಿ ಸರ್ವಶಸ್ತ್ರಭೃತಾಂ ವರ ।
ಇಷ್ಟಾಪೂರ್ತೇನ ಚ ಶಪೇ ವೀರ್ಯೇಣ ಚ ಸುತೈರಪಿ ॥ ೨೬ ॥

ನಿಹತ್ಯ ತಾನ್ ರಣೇ ಸರ್ವಾನ್ ಪಾಂಚಾಲಾನ್ ಪಾಂಡವೈಃ ಸಹ ।
ಶಾಂತಿಂ ಲಬ್ಧಾಸ್ಮಿ ತೇಷಾಂ ವಾ ರಣೇ ಗಂತಾ ಸಲೋಕತಾಮ್ ॥ ೨೭ ॥

'ಶಸ್ತ್ರಗಳನ್ನು ಹಿಡಿದಿರುವವರೆಲ್ಲರಲ್ಲಿ ಶ್ರೇಷ್ಠನಾದ ಗುರುದೇವನೇ! ಪಾಂಡವರೊಂದಿಗೆ ಪಾಂಚಾಲರೆಲ್ಲರನ್ನೂ ಯುದ್ಧದಲ್ಲಿ ಕೊಂದು ನಾನು ಮನಶ್ಶಾಂತಿಯನ್ನಾದರೂ ಹೊಂದುವೆ, ಇಲ್ಲವಾದರೆ ಯುದ್ಧದಲ್ಲಿ ಅವರ ಜೊತೆಗೆ ಯಮಲೋಕಕ್ಕೆಹೋಗುವೆನೆಂದು ಯಜ್ಞ, ದಾನಧರ್ಮ, ಪರಾಕ್ರಮ ಹಾಗೂ ಗಂಡುಮಕ್ಕಳೆಲ್ಲರ ಮೇಲೆ ಆಣೆಮಾಡಿ ಹೇಳುತ್ತೇನೆ.'

## ೨೦. ದುಶ್ಶಾಸನ ವನ/೨೪೯

ಅರ್ಜುನನು ಯುಧಿಷ್ಠಿರನ ಅಪ್ಪಣೆಯ ಮೇರೆಗೆ ದುರ್ಯೋಧನನನ್ನು ಚಿತ್ರರಥ ಗಂಧರ್ವನ ಸೆರೆಯಿಂದ ಬಿಡಿಸಿದನು. ಯಾರನ್ನು ಕಂಡರೆ ತನಗಾಗುತ್ತಿರಲಿಲ್ಲವೋ ಅಂಥ ಅರ್ಜುನನಿಂದ ತಾನು ಬದುಕಿ ಉಳಿಯಲು ನೆರವು ಪಡೆಯಬೇಕಾಯಿತಲ್ಲ! —ಎಂದು ದುರ್ಯೋಧನನಿಗೆ ಬಲುದುಃಖವಾಯಿತು. ಇಷ್ಟರಲ್ಲಿಯೇ ಚಿತ್ರಸೇನನು ದುರ್ಯೋಧನನ ದುರುಳ ಉದ್ದೇಶವನ್ನು ಖಂಡಿತವಾಗಿ ಆಡಿ ತೋರಿಸಿದ್ದರಿಂದ ಈತ ನಾಚಿ ನೀರಾದನು. ಹೀಗೆಲ್ಲ ಅವಮಾನಗೊಂಡು ಹಸ್ತಿನಾಪುರಕ್ಕೆ ಹಿಂತಿರುಗುವುದು ಅವನಿಗೆ ಬಲುಕಷ್ಟದ್ದಾಗಿ ತೋರಿತು. ಹೀಗಾಗಿ ರಾಜ್ಯವನ್ನು ತೊರೆದು ಸಾವು ಬರುವ ವರೆಗೂ ಉಪವಾಸ ಮಾಡುವುದೆಂದುಕೊಂಡನು. ದುಶ್ಶಾಸನನನ್ನು ಪಟ್ಟಕ್ಕೇರಿಸಿ ಅವನಿಗೆ ರಾಜ್ಯಾಡಳಿತೆಯನ್ನು ಮುಂದುವರಿಸಲು ಹೇಳಬೇಕೆಂದುಕೊಂಡನು. ಇದನ್ನು ಕೇಳಿ ದುಶ್ಶಾಸನನಿಗೆ ತುಂಬ ಕೆಡಕೆನಿಸಿತು. ಅವನು ದುರ್ಯೋಧನನ ಪಾದಗಳ ಮೇಲೆ ಹಣೆಯಿಟ್ಟು ತನ್ನ ಯೋಚನೆಗಳಿಂದ ದೂರವಿರುವಂತೆ ಅವನನ್ನು ಕೋರಿದನು. ಅಲ್ಲದೆ ಈ ಮುಂದಿನಂತೆ ಪಣತೊಟ್ಟನು—

ಉಕ್ತವಾಂಶ್ಚ ನರವ್ಯಾಘ್ರೋ ನೈತದೇವಂ ಭವಿಷ್ಯತಿ ॥ ೩೦ ॥

ವಿದೀರ್ಯೇತ್ ಸಕಲಾ ಭೂಮಿರ್ದ್ಯೌಶ್ಚಾಪಿ ಶಕಲೀಭವೇತ್ ।
ರವಿರಾತ್ಮಪ್ರಭಾಂ ಜಹ್ಯಾತ್ ಸೋಮಃ ಶೀತಾಂಶುತಾಂ ತ್ಯಜೇತ್ ॥ ೩೧ ॥

ವಾಯುಃ ಶೈಘ್ರ್ಯಮಥೋ ಜಹ್ಯಾದ್ಧಿಮವಾಂಶ್ಚ ಪರಿವ್ರಜೇತ್ ।
ಶುಷ್ಯೇತ್ ತೋಯಂ ಸಮುದ್ರೇಷು ವಹ್ನಿರಪ್ಯುಷ್ಣತಾಂ ತ್ಯಜೇತ್ ॥ ೩೨ ॥

ನ ಚಾಹಂ ತ್ವದೃತೇ ರಾಜನ್ ಪ್ರಶಾಸೇಯಂ ವಸುಂಧರಾಮ್ ॥ ೩೩ ॥

'ಹೀಗಾಗಲೂ (ಸಂತರಾಂ) ಸಾಧ್ಯವಿಲ್ಲ. (ಒಂದು ವೇಳೆ) ಭೂಮಿ ಬಿರಿದು ಹೋಳಾದೀತು, ಬಾನೊಡೆದು ತುಂಡಾದೀತು, ಸೂರ್ಯನ ತೇಜಸ್ಸು ಹಾಗೂ ಚಂದಿರನ ತಂಪು ಇಲ್ಲವಾದಾವು, ಗಾಳಿಯು ರಭಸ ಇಳಿಮುಖವಾದೀತು, ಹಿಮಾಲಯಂ ಅದುರೀತುಂ, ಕಡಲುಂ ಬತ್ತೀತುಂ, ಬೆಂಕಿ ತನ್ನ ಬಿಸಿಯನ್ನೇ ಕಳೆದುಕೊಂಡೀತುಂ, ಆದರೆ ನೀನಿಲ್ಲದೆ ನಾನು ಭೂಮಿಯನ್ನು (ಕೂಡ) ಆಳಲಾರೆ. ಎಲೈ ರಾಜನೇ ! ನೀನು ಪ್ರಸನ್ನನಾಗಿರು (ನೂರು ವರ್ಷ ರಾಜ್ಯವಾಳು.)'

## ೨೧. ದ್ರೋಣ

ಉದ್ಯೋಗ/೧೯೪

೧

### ಪಾಂಡವರ ನಾಶಕ್ಕಾಗಿ ಬೇಕಿದ್ದ ಕಾಲಾವಧಿ

ಯುಧಿಷ್ಠಿರನು ತನಗೆ ಬೇಹುಗಾರರಿಂದ ಬಂದ ವಾರ್ತೆಯನ್ನು ತನ್ನ ಸೋದರರಿಗೆ ಹೇಳುತ್ತಲಿದ್ದಾನೆ. ದುರ್ಯೋಧನನು ಪಾಂಡವರ ಸೇನೆಯನ್ನು ಕಂಡು ಭೀಷ್ಮನಿಗೆ 'ಪಾಂಡವರ ಸೇನೆಯನ್ನು ಎಷ್ಟು ಕಾಲಾವಧಿಯಲ್ಲಿ ನಾಶಪಡಿಸಬಲ್ಲೆ ?' ಎಂದು ಕೇಳಿದನು. ಅದಕ್ಕೆ ಭೀಷ್ಮನು, 'ನಾನು ದಿನವೊಂದಕ್ಕೆ ಹತ್ತು ಸಾವಿರ ಯೋಧರು ಹಾಗೂ ಒಂದು ಸಾವಿರ ಜನ ರಥಿಗಳನ್ನು ನಾಶಪಡಿಸುವೆನು. ಈ ಲೆಕ್ಕದಲ್ಲಿ ಬೇಕಿರುವಷ್ಟು ಕಾಲಾವಧಿ ಇಲ್ಲವೆ ಹಿರಿದಾದ ಅಸ್ತ್ರಗಳನ್ನು ಬಳಸಿದರೆ ಒಂದು ತಿಂಗಳಲ್ಲಿ ಅವರನ್ನೆಲ್ಲ ನಾಶಪಡಿಸಬಲ್ಲೆ' ಎಂದನು. ಆಮೇಲೆ ಅದೇ ಪ್ರಶ್ನೆಯನ್ನು ದ್ರೋಣನಿಗೆ ಕೇಳಲಾಗಿ ಅವನು, 'ನಾನು ಮುಪ್ಪಾಗಿದ್ದೇನೆ. ನನ್ನ ಸಾಮರ್ಥ್ಯ ಹಾಗೂ ಕಾರ್ಯಗಳಿಗೆ ಮಿತಿಗಳಿವೆ. ಆದರೂ ಭೀಷ್ಮನಂತೆ ನಾನೂ ಕೂಡ ಒಂದು ತಿಂಗಳಲ್ಲಿ ಪಾಂಡವರನ್ನು ನಾಶಪಡಿಸಬಲ್ಲೆ' ಎಂದನು. ಹೀಗೆ ಕೃಪಾಚಾರ್ಯನು ತಾನು ಎರಡು ತಿಂಗಳುಗಳಲ್ಲಿ, ಅಶ್ವತ್ಥಾಮನು ತಾನು ಹತ್ತು ದಿನಗಳಲ್ಲಿ ಎಂದರೆ ಕರ್ಣನು ತನಗೆ ಐದು ದಿನಗಳು ಸಾಕೆಂದು ಕೊಚ್ಚಿಕೊಂಡರು. ಈ ಸಂದರ್ಭದಲ್ಲಿ ದ್ರೋಣನ ಪ್ರತಿಜ್ಞೆ ಹೀಗಿದೆ—

ತಾವತಾ ಚಾಪಿ ಕಾಲೇನ ದ್ರೋಣೋಽಪಿ ಪ್ರತಿಜಜ್ಞಿವಾನ್ ॥ ೪ ॥

(ಭೀಷ್ಮನು ಹೇಳಿದ ಒಂದು ತಿಂಗಳ ಕಾಲವನ್ನು ಗಮನಿಸಿ) ಅಷ್ಟು ಅವಧಿಯಲ್ಲಿಯೇ ಪಾಂಡವರನ್ನು ನಾಶಪಡಿಸುವುದಾಗಿ ದ್ರೋಣನು ಪಣತೊಟ್ಟನು.

ದ್ರೋಣ/೧೨

೨

ಭೀಷ್ಮನು ಕೊಲೆಯಾದ ಬಳಿಕ ದುರ್ಯೋಧನನು ದ್ರೋಣನಿಗೆ ಸೇನೆಯ ದಂಡನಾಯಕತ್ವವನ್ನು ಒಪ್ಪಿಸಿದನು. ಇದರಿಂದ ದ್ರೋಣನು ಸಂತುಷ್ಟನಾಗಿ ದುರ್ಯೋಧನನಿಗೆ ವರವನ್ನು ಕೇಳೆಂದನು. ದುರ್ಯೋಧನನು 'ಯುಧಿಷ್ಠಿರನನ್ನು ಜೀವಂತವಾಗಿ ಹಿಡಿತರುವಂತಾಗಲಿ' ಎಂದು ವರವನ್ನು ಕೇಳಿದನು. ದ್ರೋಣನು ಶರತ್ತಿನೊಂದಿಗೆ ಒಪ್ಪಿಗೆ ನೀಡಿ ಈ ರೀತಿ ಪಣತೊಟ್ಟನು—

ಅಹಂ ಗೃಹೀತ್ವಾ ರಾಜಾನಂ ಸತ್ಯಧರ್ಮಪರಾಯಣಮ್ ।
ಆನಯಿಷ್ಯಾಮಿ ತೇ ರಾಜನ್ ವಶಮದ್ಯ ನ ಸಂಶಯಃ ॥ ೨೬ ॥

ಯದಿ ಸ್ಥಾಸ್ಯತಿ ಸಂಗ್ರಾಮೇ ಮುಹೂರ್ತಮಪಿ ಮೇಽಗ್ರತಃ।
ಅಪನೀತೇ ನರವ್ಯಾಘ್ರೇ ಕುಂತೀಪುತ್ರೇ ಧನಂಜಯೇ ॥ ೨೭ ॥

ಫಾಲ್ಗುನಸ್ಯ ಸಮೀಪೇ-ತು ನ ಹಿ ಶಕ್ಯೋ ಯುಧಿಷ್ಠಿರಃ ।
ಗ್ರಹೀತುಂ ಸಮರೇ ರಾಜನ್ ಸೇಂದ್ರೈರಪಿ ಸುರಾಸುರೈಃ ॥ ೨೮ ॥

'ಎಲೈ ರಾಜನೇ ! ಯುಧಿಷ್ಠಿರನ ಪಕ್ಕದಿಂದ ಕುಂತಿಯ ಮಗ ಅರ್ಜುನನನ್ನು ದೂರಕೊಯ್ದರೆ ಮಾತ್ರ ನಾನು ಯುಧಿಷ್ಠಿರನನ್ನು ಜೀವಂತವಾಗಿ ಸೆರೆಹಿಡಿದು ತರ ಬಲ್ಲೆನು. ಅಷ್ಟಕ್ಕೆ ಒಂದು ಮುಹೂರ್ತ ಸಾಕು. ಆದರೆ ಅರ್ಜುನ ಅವನ ಪಕ್ಕದಲ್ಲಿದ್ದು ಅವನನ್ನು ಕಾಯುತ್ತಿದ್ದರೆ ಇಂದ್ರ, ದೇವತೆಗಳು ಇಲ್ಲವೆ ಅಸುರರು ಬಂದರೂ ಅವರಿಂದ ಈ ಕಾರ್ಯಕವಾಗದು.

+ ಈ ಪಣವು ಶರತ್ತಿನದು. 'ಸಾಂತರಂ ತು ಪ್ರತಿಜ್ಞಾತೇ...' (೨೯) ಎಂಬುದಾಗಿ ಸ್ಪಷ್ಟವಾದ ಉಲ್ಲೇಖವಿದೆ. 'ಸಾಂತರೇ ತು ಪ್ರತಿಜ್ಞಾತೇ...' ಎಂಬ ಪುನರುಲ್ಲೇಖವು ೧೩/೧ರಲ್ಲಿ ಇದೆ.

**ದ್ರೋಣ/೩೩**

ಯುದ್ಧ ಶುರುವಾಗುತ್ತಲೇ ಅರ್ಜುನನು ತನ್ನ ಸಾಮರ್ಥ್ಯದಿಂದ ಕೌರವಸೇನೆಗೆ ದುರ್ದಶೆಯನ್ನು ತಂದಿಟ್ಟನು. ಅಲ್ಲದೆ ಭೀಮ, ಧೃಷ್ಟದ್ಯುಮ್ನ ಹಾಗೂ ಸಾತ್ಯಕಿಗಳು ಅತುಲನೀಯವಾದ ಪರಾಕ್ರಮವನ್ನು ಮೆರೆದು ನೆಲಕ್ಕೆಲ್ಲ ಕೌರವಸೇನೆಯ ನೆತ್ತರನ್ನು ಕುಡಿಸಿದರು. ಅದರಿಂದಾಗಿ ದುರ್ಯೋಧನ ತುಂಬ ಕೆರಳಿಬಿಟ್ಟನು. ಅವನು ದ್ರೋಣನಿಗೆ 'ಯುಧಿಷ್ಠಿರನು ಇಷ್ಟೊಂದು ಹತ್ತಿರಕ್ಕೆ ಬಂದಾಗಲೂ ನೀವಾರೂ ಆತನನ್ನು ಸೆರೆಹಿಡಿ ಯದೇ ಇರುವುದು ನಿಮ್ಮಂಥವರಿಗೆ ಶೋಭಿಸುವುದಿಲ್ಲ' ಎಂದನು.

ವರಂ ದತ್ವಾ ಮಮ ಪ್ರೀತಃ ಪಶ್ಚಾದ್ ವಿಕೃತವಾನಸಿ ।
ಆಶಾಭಂಗಂ ನ ಕುರ್ವಂತಿ ಭಕ್ತಸ್ಯಾರ್ಯಾಃ ಕಥಂಚನ ॥ ೯ ॥

'ನನ್ನಮೇಲೆ ಸಂತುಷ್ಟರಾಗಿ ನೀವೇ ವರವನ್ನಿತ್ತಿರಿ. ಅದನ್ನು ಮುರಿದವರೂ ನೀವೇ. ಗೌರವಸ್ಥರಾದವರು ಭಕ್ತನನ್ನು ಹೀಗೆಲ್ಲ ಉದಾಸೀನವಮಾಡರು.' ದುರ್ಯೋಧನನ ಈ ಚುಚ್ಚುನುಡಿಯನ್ನು ಸಹಿಸುವುದು ದ್ರೋಣನಿಂದಾಗಲಿಲ್ಲ. ಅರ್ಜುನನ ಕಾವಲಿರುವಾಗ ಯುಧಿಷ್ಠಿರನನ್ನು ಸೆರೆಹಿಡಿದು ತರುವುದು ತನಗೇ ಏಕೆ, ಇಂದ್ರ, ದೇವತೆಗಳು ಹಾಗೂ ಅಸುರರಿಗೂ ಸಾಧ್ಯವಿಲ್ಲೆಂದು ತಾನು ಮೊದಲೇ ಹೇಳಿರುವುದನ್ನು ದುರ್ಯೋಧನನಿಗೆ ನೆನಪು ಮಾಡಿಕೊಟ್ಟು ಆ ಪಣವನ್ನು ಇನ್ನೊಮ್ಮೆ ಉಚ್ಚರಿಸಿದನು.

ಸತ್ಯಂ ತಾತ ಬ್ರವೀಮ್ಯದ್ಯ ನೈತಜ್ಜಾತ್ವನ್ಯಥಾ ಭವೇತ್ ।
ಅದ್ಯೈಕಂ ಪ್ರವರಂ ಕಂಚಿತ್ ಪಾತಯಿಷ್ಯೇ ಮಹಾರಥಮ್ ॥ ೧೩ ॥

ತಂ ಚ ವ್ಯೂಹಂ ವಿಧಾಸ್ಯಾಮಿ ಯೋಽಭೇದ್ಯಸ್ತ್ರಿದಶೈರಪಿ ।
ಯೋಗೇನ ಕೇನಚಿದ್ ರಾಜನ್ನರ್ಜುನಸ್ತ್ವಪನೀಯತಾಮ್ ॥ ೧೪ ॥

ನಾನು ನಿಜವನ್ನೇ ಹೇಳುತ್ತಲಿದ್ದೇನೆ. ಅದೆಂದಿಗೂ ಸುಳ್ಳಾಗದು. ನಾನಿಂದು ಒಬ್ಬನಾದರೂ ಪಾಂಡವರ ಶ್ರೇಷ್ಠನಾದ ವೀರನನ್ನು ತಪ್ಪದೆ ಕೊಂದುಬಿಡುವೆ. ಈ ದಿನ ನಾನು ರಚಿಸಲಿರುವ ವ್ಯೂಹ ದೇವತೆಗಳಿಗೂ ಅಭೇದ್ಯವಾದುದು. ಏನಿದ್ದರೂ ಅರ್ಜುನನನ್ನು ಮಾತ್ರ ದೂರವಿರಿಸುವುದು ಅಗತ್ಯದ್ದು.

+ ದ್ರೋಣನು ಯುಧಿಷ್ಠಿರನನ್ನು ಜೀವದೊಂದಿಗೆ ಸೆರೆಹಿಡಿದು ತರುವೆನೆಂದು ವರವನ್ನೀಯುವಾಗ (ದ್ರೋಣ—೧೨/೨೬-೨೮) ಖಂಡಿತವಾಗಿ ಹೇಳಿದ್ದಾನೆ. ಇಲ್ಲಿ ಮಾತ್ರ ಪಣವನ್ನು ಪುನರುಚ್ಚರಿಸುವಾಗ ಯುಧಿಷ್ಠಿರನ ಬದಲು ಬೇರಾವನಾದರೂ ಪಾಂಡವ ವೀರನೆಂಬ ಉಲ್ಲೇಖ ಇದೆ. ಇದಲ್ಲದೆ ಜೀವಂತವಾಗಿ ಅವನನ್ನು ಹಿಡಿವ ಬದಲು ಕೊಂದು ಬಿಡುವುದಾಗಿ ನಮೂದಿಸಲಾಗಿದೆ. ಈ ಮಾರ್ಪಾಟನ್ನು ವಿವರಿಸುವುದಾದರೆ ದ್ರೋಣನು ತನಗಾದ ಪರಾಜಯದಿಂದಾಗಿ ಪಣವನ್ನು ಮಾರ್ಪಡಿಸಿರಬಹುದು ಇಲ್ಲವೆ ಇದೊಂದು (ದ್ರೋಣ—೩೩/೧೩-೧೪) ಬೇರೆಯೇ ಆದ ಪಣವಾಗಿರಲೂ ಸಾಕು. ಇವೆರಡೂ ಪಣಗಳು ಶರತ್ತಿನವಾಗಿದ್ದು ಸಮಾನವಾದ ಶರತ್ತನ್ನು ಹೊಂದಿವೆ.

+ ಬೇರೆ ಪುನರುಲ್ಲೇಖಗಳು : ದ್ರೋಣ—೧೨/೩೦ : ೧೩/೪, ೫, ೬ ; ೧೭/೪೩ ; ೯೪/೨೩, ೨೪ ; ೧೧೧/೧೩, ೩೫, ೩೭.

ದ್ರೋಣ/೧೫೧

೩

## ಪಾಂಚಾಲರ ಸಂಹಾರ

ಜಯದ್ರಥನ ಕೊಲೆಯಾಗುತ್ತಲೇ ದುರ್ಯೋಧನನು ಬಲು ಹತಾಶನಾದನು. ಹೀಗಾಗಿ ಅವನು ದ್ರೋಣನಿಗೆ ಮರ್ಮಭೇದಕವಾದ ಮಾತುಗಳಿಂದ ಇರಿಯುಹತ್ತಿದನು. ದ್ರೋಣನೂ ಅವನಿಗೆ ಅವನ ತಪ್ಪನ್ನು ತೋರಿಸಿಕೊಟ್ಟನು. ಆಮೇಲೆ ಮುಂದಿನಂತೆ ಪಣತೊಟ್ಟನು—

ನಾಹತ್ವಾ ಸರ್ವಪಾಂಚಾಲಾನ್ ಕವಚಸ್ಯ ವಿಮೋಕ್ಷಣಮ್ ।
ಕರ್ತಾಸ್ಮಿ ಸಮರೇ ಕರ್ಮ ಧಾರ್ತರಾಷ್ಟ್ರ ಹಿತಂ ತವ ॥ ೩೪ ॥

ಪಾಂಚಾಲರೆಲ್ಲರನ್ನೂ ಸಂಹರಿಸದೆ ನಾನು ನನ್ನ ಕವಚವನ್ನು ಕಳಚಲಾರೆ. ಯುದ್ಧದಲ್ಲಿಯ ನನ್ನ ಈ ಕಾರ್ಯ ನಿನಗೆ ಹಿತವಾದದ್ದೇ ಆಗಿರುವುದು.

+ ಬೇರೆ ಪುನರುಲ್ಲೇಖಗಳು : ೧೫೭/೩೬, ೩೭.

## ೨೨. ಧೃಷ್ಟದ್ಯುಮ್ನ ವನ/೫೧

೧

### ಕೌರವರ ಸಂಹಾರ

ಶ್ರೀಕೃಷ್ಣನು ಕಾಮ್ಯಕ ವನದಲ್ಲಿ ಪಾಂಡವರನ್ನು ಕಂಡನು. ಆಗ ನಡೆದುದನ್ನೆಲ್ಲ ಸಂಜಯ ಧೃತರಾಷ್ಟ್ರನಿಗೆ ಹೇಳುತ್ತಲಿದ್ದಾನೆ. ಪಾಂಡವರು ಜೂಜಾಟದಲ್ಲಿ ಸೋತದ್ದರಿಂದ ದ್ರೌಪದಿಯೊಂದಿಗೆ ಕಾಡಿಗೆ ಹೋದರು. ಶ್ರೀಕೃಷ್ಣನಿಗೆ ಈ ವಾರ್ತೆ ತಿಳಿದುಬರುತ್ತಲೂ ಅವನು ಅವರನ್ನು ಕಾಣಲೆಂದು ಅಲ್ಲಿಗೆ ಹೋದನು. ಆಗ ಧೃಷ್ಟದ್ಯುಮ್ನ, ಧೃಷ್ಟಕೇತು ಹಾಗೂ ಕೇಕಯರೂ ಅಲ್ಲಿಗೆ ಬಂದಿದ್ದರು. ಶ್ರೀಕೃಷ್ಣನು ಇಂದ್ರಪ್ರಸ್ಥದಲ್ಲಿ ಪಾಂಡವರ ವೈಭವ ಹಾಗೂ ರಾಜಸೂಯ ಯಜ್ಞದಲ್ಲಿಯ ದುರ್ಲಭ ಹಾಗೂ ವಿಲೋಭನೀಯವಾದ ನೋಟವನ್ನು ಕಂಡಿದ್ದನು. ಹೀಗಾಗಿ ಈಗ ಕೃಷ್ಣಾಜಿನವನ್ನು ತೊಟ್ಟ ಅವರನ್ನೆಲ್ಲ ಕಂಡು ಕೆರಳಿ ಕೆಂಡವಾದನು. ಅವನು ಯುಧಿಷ್ಠಿರನಿಗೆ ಯುದ್ಧವನ್ನು ಹೂಡಿ ಕೌರವರು ಮೋಸದಿಂದ ನುಂಗಿಹಾಕಿದ ರಾಜ್ಯವನ್ನು ಮರಳಿ ಪಡೆಯುವಂತೆ ಹೇಳಿದನು. ಆಗ ಯುಧಿಷ್ಠಿರನು ಆ ಬಗೆಯಾಗಿ ಪಣತೊಟ್ಟನು. (ನೋಡಿ : ಪಣ : ಯುಧಿಷ್ಠಿರ, ವನ—೫೧/೩೩–೩೪.) ಆಗ ಧೃಷ್ಟದ್ಯುಮ್ನಾದಿಗಳು ಶ್ರೀಕೃಷ್ಣನ ಕೋಪವನ್ನು ಇಳಿಸಲು ಯತ್ನಿಸಿದರು. ಧೃಷ್ಟದ್ಯುಮ್ನನು ದ್ರೌಪದಿಯನ್ನು ಉದ್ದೇಶಿಸಿ ಹೀಗೆ ಪಣತೊಟ್ಟನು—

> ಪ್ರತಿಜಾನೀಮಹೇ ಸತ್ಯಂ ಮಾ ಶುಚೋ ವರವರ್ಣಿನಿ ।
> ಯೇ ಸ್ಮ ತೇಽಕ್ಷಜಿತಾಂ ಕೃಷ್ಣೇ ದೃಷ್ಟ್ವಾ ತ್ವಾಂ ಪ್ರಾಹಸಂಸ್ತದಾ ।
> ಮಾಂಸಾನಿ ತೇಷಾಂ ಖಾದಂತೋ ಹರಿಷ್ಯಂತಿ ವೃಕದ್ವಿಜಾಃ ॥ ೩೭ ॥
> ಪಾಸ್ಯಂತಿ ರುಧಿರಂ ತೇಷಾಂ ಗೃಧ್ರಾ ಗೋಮಾಯವಸ್ತಥಾ ।
> ಉತ್ತಮಾಂಗಾನಿ ಕರ್ಷಂತೋ ಯೈಃ ಕೃಷ್ಟಾಸಿ ಸಭಾತಲೇ ॥ ೩೮ ॥
> ತೇಷಾಂ ದ್ರಕ್ಷ್ಯಸಿ ಪಾಂಚಾಲಿ ಗಾತ್ರಾಣಿ ಪೃಥಿವೀತಲೇ ।
> ಕ್ರವ್ಯಾದೈಃ ಕೃಷ್ಯಮಾಣಾನಿ ಭಕ್ಷ್ಯಮಾಣಾನಿ ಚಾಸಕೃತ್ ॥ ೩೯ ॥
> ಪರಿಕ್ಲಿಷ್ಟಾಸಿ ಯೈಸ್ತತ್ರ ಯೈಶ್ಚಾಸಿ ಸಮುಪೇಕ್ಷಿತಾ ।
> ತೇಷಾಮುತ್ಕೃತ್ತಶಿರಸಾಂ ಭೂಮಿಃ ಪಾಸ್ಯತಿ ಶೋಣಿತಮ್ ॥ ೪೦ ॥

'ಎಲೈ ವರವರ್ಣಿನಿಯೇ ! ನೀನು ಶೋಕಾಕುಲಳಾಗದಿರು. ನಿನ್ನನ್ನು ಜೂಜಾಟದಲ್ಲಿ ಗೆದ್ದುಕೊಂಡಾಗ ನಕ್ಕವರೆಲ್ಲರನ್ನೂ ತೋಳಗಳು, ಹದ್ದುಗಳು ಹರಿಹರಿದು ಅವರ ಮಾಂಸಗಳನ್ನು ತಿನ್ನುವಂತೆ ಮಾಡುವೆವೆಂದು ಪ್ರತಿಜ್ಞಾಪೂರ್ವಕವಾಗಿ ನಿನಗೆ ಹೇಳುತ್ತೇವೆ. ನಿನ್ನನ್ನು ಓಲಗಕ್ಕೆ ಎಳೆದು ತಂದವರ ತಲೆಗಳನ್ನು ಕಡಿದು ಚೆಲ್ಲಿ ನರಿ, ಹದ್ದುಗಳು ಅವರ ನೆತ್ತರನ್ನು ಕುಡಿಯುವಂತೆ ಮಾಡುವೆವು. ಎಲೆ ಪಾಂಚಾಲಿ ! ಆ ದುರಾತ್ಮರ ಹೆಣಗಳನ್ನು ಹರಿದು ತಿನ್ನಲೆಂದು ಕಾಡುಮೃಗಗಳು ಮಾಡುವ ಎಳೆದಾಟವನ್ನು ಕಂಡೀಯಂತೆ. ಈ ಭೂಮಿಯು ನಿನ್ನನ್ನು ತುಂಬಿದ ಸಭೆಗೆ ಎಳೆದುತಂದವರನ್ನು,

ಅವಮಾನಗೊಳಿಸಿದವರನ್ನು, ಉದಾಸೀನವಾಗಿ ಕಂಡವರನ್ನೆಲ್ಲ (ಕೊಲ್ಲಲಾಗಿ ಧಡದಿಂದ ಬೇರ್ಪಡಿಸಲ್ಪಟ್ಟ ಅವರ) ತಲೆಗಳ ನೆತ್ತರನ್ನು ಕುಡಿದೀತು.

ದ್ರೋಣ/೧೬೦

೨

## ದ್ರೋಣ, ಅಶ್ವತ್ಥಾಮರ ವಧೆ

ಅರ್ಜುನನ ಬಾಣಗಳ ಮಳೆಗರೆತದಿಂದಾಗಿ ಕೌರವಸೇನೆ ಹೆದರಿ ಕಂಗಾಲಾಗಿ ಓಟ ಕಿತ್ತಿತು. ಆಗ ದುರ್ಯೋಧನನು ಅಶ್ವತ್ಥಾಮನಿಗೆ ಅರ್ಜುನನನ್ನು ಸೆದೆಬಡಿಯಲು ಹೇಳಿದನು. ಅಶ್ವತ್ಥಾಮ ತನ್ನ ಬಲವನ್ನು ಅರಿತಂತೆಯೇ ಪಾಂಡವರ ಬಲವನ್ನೂ ಅರಿತಿದ್ದನು. ಅವನು ಅದನ್ನು ದುರ್ಯೋಧನನಿಗೂ ಹೇಳಿದನು. ತಾನು ಸೋಮಕ ಹಾಗೂ ಪಾಂಚಾಲರನ್ನು ಖಂಡಿತವಾಗಿ ಸೋಲಿಸುವೆನೆಂದನು. ಅಶ್ವತ್ಥಾಮ, ಧೃಷ್ಟದ್ಯುಮ್ನರಲ್ಲಿ ಕಾಳಗಕ್ಕೆ ಶುರುವಾಯಿತು. ದ್ರೋಣನ ಈ ಮಗನ ಬಾಣಗಳಿಂದ ಹಲವಾರು ಜನ ಸೈನಿಕರಿಗೆ ಕಂಠಸ್ನಾನ ಆಗತೊಡಗಿತು. ಆಗ ಧೃಷ್ಟದ್ಯುಮ್ನನು ಅಶ್ವತ್ಥಾಮನಿಗೆ ಹೀಗೆಂದನು :

ನ ಜಾನೀಷೇ ಪ್ರತಿಜ್ಞಾಂ ಮೇ ವಿಪ್ರೋತ್ಪತ್ತಿಂ ತಥೈವ ಚ ॥ ೩೪ ॥
ದ್ರೋಣಂ ಹತ್ವಾ ಕಿಲ ಮಯಾ ಹಂತವ್ಯಸ್ತ್ವಂ ಸುದುರ್ಮತೇ ।
ತತಸ್ತ್ವಾಹಂ ನ ಹನ್ಮ್ಯದ್ಯ ದ್ರೋಣೇ ಜೀವತಿ ಸಂಯುಗೇ ॥ ೩೫ ॥
ಇಮಾಂ ತು ರಜನೀಂ ಪ್ರಾಪ್ತಾಮಪ್ರಭಾತಾಂ ಸುದುರ್ಮತೇ ।
ನಿಹತ್ಯ ಪಿತರಂ ತೇಽದ್ಯ ತತಸ್ತ್ವಾಮಪಿ ಸಂಯುಗೇ ॥ ೩೬ ॥
ನೇಷ್ಯಾಮಿ ಪ್ರೇತಲೋಕಾಯ ಹ್ಯೇತನ್ಮೇ ಮನಸಿ ಸ್ಥಿತಮ್ ॥ ೩೭ ॥

ಎಲೈ ದ್ವಿಜನೇ ! ನಾನು ಕೈಕೊಂಡ ಪ್ರತಿಜ್ಞೆಯೇನು ಹಾಗೂ ನನ್ನ ಹುಟ್ಟು ಯಾವುದಕ್ಕಾಗಿ ಎಂಬುದನ್ನು ನೀನು ಅರಿತಂತಿಲ್ಲ. ಮೊದಲು ನನ್ನಿಂದ ದ್ರೋಣನ ಕೊಲೆಯಾಗಲಿದೆ. ಆಮೇಲೆ ನಿನ್ನದು. ಹೀಗಾಗಿ ದ್ರೋಣ ಬದುಕಿರುವವರೆಗೂ ನಾನು ನಿನ್ನನ್ನು ಕೊಲ್ಲಲಾರೆ. ಆದರೆ ಎಲೋ ದುರ್ಬುದ್ಧಿಯುವನೇ ! ಇಂದಿನ ಇರುಳಲ್ಲಿಯೇ ಬೆಳಗಾಗುವ ಮುನ್ನ ತಂದೆಯನ್ನು ಕೊಂದು ತರುವಾಯ ನಿನ್ನನ್ನು ಯಮಲೋಕಕ್ಕೆ ಅಟ್ಟುವ ಯೋಚನೆಯಿದೆ.

+ ನೋಡಿ : ಸತ್ಯಕ್ರಿಯೆ : ಧೃಷ್ಟದ್ಯುಮ್ನ–ದ್ರೋಣ/೧೮೬–೪೬.

## ೨೩. ನಕುಲ ಸಭಾ/೭೭

ಮೊದಲ ಸಂದರ್ಭ : ನೋಡಿ : ಕರ್ಣ ಹಾಗೂ ಸಹದೇವನನ್ನು ಕೊಲ್ಲಲು ಅರ್ಜುನನು ಮಾಡಿದ ಪಣ, ಸಭಾ—೭೭/೩೨-೩೬.

ನಕುಲನು ಕೆರಳಿ ಈ ಬಗೆಯಾಗಿ ಪಣತೊಟ್ಟನು—

ಸುತೇಯಂ ಯಜ್ಞಸೇನಸ್ಯ ದ್ಯೂತೇऽಸ್ಮಿನ್ ಧೃತರಾಷ್ಟ್ರಜೈಃ ।
ಯೈರ್ವಾಚಃ ಶ್ರಾವಿತಾ ರೂಕ್ಷಾಃ ಸ್ಥಿತೈರ್ದುರ್ಯೋಧನಪ್ರಿಯೇ ॥ ೪೩ ॥
ತಾನ್ ಧಾರ್ತರಾಷ್ಟ್ರಾನ್ ದುರ್ವೃತ್ತಾನ್ ಮುಮೂರ್ಷೂನ್ ಕಾಲನೋದಿತಾನ್।
ಗಮಯಿಷ್ಯಾಮಿ ಭೂಯಿಷ್ಠಾನಹಂ ವೈವಸ್ವತಕ್ಷಯಮ್ ॥ ೪೪ ॥
ನಿರ್ದೇಶಾದ್ ಧರ್ಮರಾಜಸ್ಯ ದ್ರೌಪದ್ಯಾಃ ಪದವೀಂ ಚರನ್ ।
ನಿರ್ಧಾರ್ತರಾಷ್ಟ್ರಾಂ ಪೃಥಿವೀಂ ಕರ್ತಾಸ್ಮಿ ನಚಿರಾದಿವ ॥ ೪೫ ॥

ದುರ್ಯೋಧನನಿಗೆ ಪ್ರಿಯವಾದುದನ್ನು ಮಾಡಲೆಂದು ಧೃತರಾಷ್ಟ್ರನ ಮಕ್ಕಳು ದ್ರೌಪದಿಯನ್ನು (ಕಿವಿಗೆ) ಕಟುವಾದ ಮಾತುಗಳಿಂದ ಹೀಯಾಳಿಸಿ ಜರಿದಿದ್ದು ಕಾಲನೇ ಈ ದುರುಳರನ್ನು ತನ್ನ ದವಡೆಯಲ್ಲಿ ಹಿಡಿದಿದ್ದಾನೆ. ಹೀಗಾಗಿ ನಾನು ಇವರೆಲ್ಲರನ್ನೂ ಕೊಂದುಬಿಡುವೆನು. ದ್ರೌಪದಿಗೆ ಪ್ರಿಯ ಎನ್ನಿಸಿದುದನ್ನು ಮಾಡಲೋಸುಗ ಯುಧಿಷ್ಠಿರನ ಒಪ್ಪಿಗೆಯನ್ನು ಪಡೆದು ಧೃತರಾಷ್ಟ್ರನ ಈ ಮಕ್ಕಳೆಲ್ಲರನ್ನೂ ಈ ಭೂತಲದಿಂದ ಹೇಳ ಹೆಸರಿಲ್ಲದ ಹಾಗೆ ಕಿತ್ತೆಸೆಯುವೆನು.

## ೨೪. ನಲ

ವನ/೫೫

### ೧

### ದೇವತೆಗಳಿಗೆ ಸಹಕಾರ

ನಾರದನಿಂದ ದಮಯಂತಿಯ ಸ್ವಯಂವರದ ವಾರ್ತೆ ತಿಳಿಯುತ್ತಲೇ ಅಗ್ನಿ, ವರುಣ, ಯಮ ಹಾಗೂ ಇಂದ್ರರು ಅವಳನ್ನು ಪಡೆಯಲೆಂದು ವಿದರ್ಭದತ್ತ ಹೊರಟರು. ದಾರಿಯಲ್ಲಿ ಅವರಿಗೆ ನಲರಾಜನ ಭೆಟ್ಟಿ ಆಯಿತು. ಅವನ ಸುಂದರವಾದ ಸ್ವರೂಪ ಹಾಗೂ ಐಶ್ವರ್ಯಗಳನ್ನು ಕಂಡು ಅವರೆಲ್ಲ ಗಲಿಬಿಲಿಗೊಂಡರು. ಆದರೂ ಅವರದನ್ನು ತೋರಗೊಡದೆ ಅವನನ್ನು ಬಾಯ್ತುಂಬ ಹೊಗಳಿ ಅವನು ತಮ್ಮದೊಂದು ಮುಖ್ಯ ವಾದ ಕೆಲಸಕ್ಕೆ ದೂತನಾಗಿ ನೆರವಾಗಲು ಕೇಳಿದರು. ಆಗ,

ತೇಭ್ಯಃ ಪ್ರತಿಜ್ಞಾಯ ನಲಃ ಕರಿಷ್ಯ ಇತಿ……॥ ೧ ॥

ನಲನು ದೇವತೆಗಳಿಗೆ ನೆರವಾಗಲು ಒಪ್ಪಿಕೊಂಡು, ಪಣತೊಟ್ಟು ಕೆಲಸದ ಸ್ವರೂಪ ಎಂಥದೆಂದು ಕೇಳಿದನು. ತಾವೆಲ್ಲ ದಮಯಂತಿಯ ಸ್ವಯಂವರಕ್ಕೆ ಹೊರಟಿರುವುದಾಗಿ ಹೇಳಿ ದೇವತೆಗಳು ತಮ್ಮ ತಮ್ಮ ಗುರುತು ಮಾಡಿಕೊಟ್ಟರು. ಅವನಿಗೆ ದಮಯಂತಿಯ ಬಳಿಗೆ ಹೋಗಿ ದೇವತೆಗಳೆಲ್ಲ ಅವಳನ್ನು ಪಡೆಯಲು ಬರುತ್ತಿರುವುದಾಗಿ ಹೇಳೆಂದರು. ತಾನು ಕೂಡ ಅದೇ ಕಾರ್ಯಕ್ಕಾಗಿ ಹೊರಟಿರುವುದಾಗಿ ನಲನು ಅವರಿಗೆ ಅರುಹಿದನು. ತಾನೂ ಒಬ್ಬ ಅಭ್ಯರ್ಥಿಯಾಗಿರುವ ಕಾರಣ ತನಗೆ ದಮಯಂತಿಯ ಮಂದಿರದಲ್ಲಿ ಪ್ರವೇಶ ದೊರಕಲಾರದೆಂದು ಅವನು ಹೇಳಿದನು. ಅದಕ್ಕೆ ಅವರು ಹೀಗೆಂದರು—

ಕರಿಷ್ಯ ಇತಿ ಸಂಶ್ರುತ್ಯ ಪೂರ್ವಮಸ್ಮಾಸು ನೈಷಧ ।
ನ ಕರಿಷ್ಯಸಿ ಕಸ್ಮಾತ್ ತ್ವಂ ವ್ರಜ ನೈಷಧ ಮಾ ಚಿರಮ್ ॥ ೯ ॥

'ನೀನು ನನ್ನೊಂದಿಗೆ (ಸಹಕರಿಸುವೆ) ಮಾಡುವೆನೆಂದು ಮಾತುಕೊಟ್ಟು ಈಗ ಅದನ್ನು ಪಾಲಿಸುತ್ತಿಲ್ಲವೇಕೆ ? (ಸುಮ್ಮನೆ ಹೊತ್ತು ಕಳೆಯದೆ) ಬೇಗ ಹೊರಡು.'

ನಲನು ದಮಯಂತಿಯ ಮಂದಿರವನ್ನು ಹೊಕ್ಕನು. ಅವಳ ಅಂದಚೆಂದಗಳನ್ನು ಕುರಿತು ಅವನಲ್ಲಿ ಕಾಮಭಾವನೆ ಹುಟ್ಟಿತು. ಆದರೂ,

ಸತ್ಯಂ ಚಿಕೀರ್ಷಮಾಣಸ್ತು ಧಾರಯಾಮಾಸ ಹೃಚ್ಛಯಮ್ ॥ ೧೪ ॥

ತನ್ನ ಪಣವನ್ನು ಪೂರ್ತಿಗೊಳಿಸಲೆಂದು ಅದನ್ನು ಹತ್ತಿಕ್ಕಿದನು.

ವನ/೫೬

ನಲನು ದೇವತೆಗಳ ದೂತನಾಗಿ ಒಳ್ಳೆಯ ರೀತಿಯಿಂದ ಅವರ ಮಹಾತ್ಮೆಯನ್ನು ಅವಳಿಗೆ ಮನದಟ್ಟು ಮಾಡಿಕೊಟ್ಟನು. ಆದರೆ ದಮಯಂತಿಯು ಅವನಿಗೆ ತನ್ನನ್ನೇ ಮಡದಿಯಾಗಿ ಸ್ವೀಕರಿಸುವಂತೆ ಕೋರಿ ಅವನೆದುರು ತನ್ನ ಖಂಡಿತವಾದ ನಿಲುವನ್ನು ಹೇಳಿದಳು. ಇಷ್ಟೇ ಅಲ್ಲದೆ, ಅವನು ತನ್ನ ಕೋರಿಕೆಯನ್ನು ಮನ್ನಿಸದಿದ್ದರೆ ತಾನು ಆತ್ಮಹತ್ಯೆಯನ್ನು ಮಾಡಿಕೊಳ್ಳುವುದಾಗಿ ಆಡಿದಳು. ಆಗ ನಲನು ಅವಳಿಗೆ ತನ್ನೆದುರು ಇರುವ ತೊಡಕನ್ನು ತೋಡಿಕೊಂಡನು.

ಕಥಂ ಹ್ಯಹಂ ಪ್ರತಿಶ್ರುತ್ಯ ದೇವತಾನಾಂ ವಿಶೇಷತಃ ।
ಪರಾರ್ಥೇ ಯತ್ನಮಾರಭ್ಯ ಕಥಂ ಸ್ವಾರ್ಥಮಿಹೋತ್ಸಹೇ ॥ ೧೬ ॥

ದೇವತೆಗಳೆದುರು ಪರೋಪಕಾರದ ಪಣವನ್ನು ತೊಟ್ಟು ಈಗ (ನಿನ್ನ ಕೋರಿಕೆಯನ್ನು ಮನ್ನಿಸಿ) ನನ್ನ ಸ್ವಾರ್ಥವನ್ನು ಹೇಗೆ ಸಾಧಿಸಲಿ ?

ವನ/೭೧

೨

## ಋತುಪರ್ಣನನ್ನು ಹೊತ್ತಿಗೆ ಸರಿಯಾಗಿ ವಿದರ್ಭಕ್ಕೆ ತಲುಪಿಸುವುದು

ದಮಯಂತಿಯ ದೂತರಿಂದ ಅವಳ ಸ್ವಯಂವರದ ವಾರ್ತೆಯನ್ನು ತಿಳಿದು ಋತುಪರ್ಣ ರಾಜನು ಒಬ್ಬ ಅಭ್ಯರ್ಥಿಯಾಗಿ ವಿದರ್ಭ ದೇಶಕ್ಕೆ ಹೊರಟು ನಿಂತನು. ಆದರೆ ಅಂತರ ಬಲುದೂರದ್ದು ಹಾಗೂ ವೇಳೆ ಮಾತ್ರ ಒಂದು ದಿನದ್ದು ಉಳಿದಿತ್ತು. ಹೊತ್ತಿಗೆ ಸರಿಯಾಗಿ ಅಲ್ಲಿಗೆ ಹೋಗಿ ತಲುಪುವುದು ಅಸಾಧ್ಯವೆನ್ನಿಸಿತ್ತು. ಅವನು ತನ್ನ ಬಯಕೆಯನ್ನು ಬಾಹುಕನೆದುರು (ನಲ) ಆಡಿ ತೋರಿಸಿದನು. ಅದನ್ನು ಕೇಳಿ ನಲ ಮನದಲ್ಲಿಯೇ ನೊಂದುಕೊಂಡನು. ಅವನಿಗೆ ಈ ವಾರ್ತೆಯನ್ನು ನಂಬಲಾಗಲಿಲ್ಲ. ದಮಯಂತಿ ಇಂಥದೇನಾದರೂ ವಿಪರೀತವನ್ನೇ ಮಾಡುವಳೆಂಬ ಬಗೆಗೆ ಅವನಿಗೆ ಖಾತ್ರಿಯಿತ್ತು. ಆದರೂ ಈ ವಾರ್ತೆಯ ಸತ್ಯಾಸತ್ಯತೆಯನ್ನು ಅರಿತುಕೊಳ್ಳಲೆಂದು ನಲನು ಋತುಪರ್ಣನನ್ನು ವಿದರ್ಭ ದೇಶಕ್ಕೆ ಕರೆದೊಯ್ಯಲು ನಿರ್ಧರಿಸಿದನು. ಹೀಗಾಗಿ ಬಾಹುಕನು ರಾಜನಿಗೆ ಕೈಜೋಡಿಸಿ ಹೀಗೆಂದನು—

ಪ್ರತಿಜಾನಾಮಿ ತೇ ವಾಕ್ಯಂ ಗಮಿಷ್ಯಾಮಿ ನರಾಧಿಪ ।
ಏಕಾಹ್ನಾ ಪುರುಷವ್ಯಾಘ್ರ ವಿದರ್ಭನಗರೀಂ ನೃಪ ॥ ೧೦ ॥

'ಎಲೈ ರಾಜನೇ! ನಿನ್ನ ಹೇಳಿಕೆ ನನಗೆ ಅರ್ಥವಾಯಿತು. ನಾನು ನಿನ್ನನ್ನು ಬರಿ ಒಂದು ದಿನದಲ್ಲಿ ವಿದರ್ಭಕ್ಕೆ ಕರೆದೊಯ್ಯುವೆನೆಂದು ಪ್ರತಿಜ್ಞೆಮಾಡಿ ಹೇಳುತ್ತೇನೆ.'

ವನ/೭೬

೩

## ದಮಯಂತಿಯೊಡನೆ ಏಕನಿಷ್ಠನಾಗಿರುವ ಬಗೆಗೆ

ನಲನು ಮದುವೆಯ ಹೊತ್ತಿಗೆ ದಮಯಂತಿಗೆ ಆಶ್ವಾಸನೆಯೊಂದಿಗೆ ಹೀಗೆಂದನು: '(ದೇವತೆಗಳು ನಿನಗಾಗಿ ಆಸೆಪಟ್ಟಿರುವುದನ್ನು ಅರಿತೂ) ನೀನು ನನ್ನಂತಹ ಮಾನವ ನನ್ನು ಸ್ವೀಕರಿಸಿದೆ. ದೇವತೆಗಳ ಎದುರಿನಲ್ಲಿಯೇ ನನ್ನನ್ನು ಮದುವೆಯಾದೆ. ಹೀಗಾಗಿ ನಾನು ಯಾವಾಗಲೂ ನಿನ್ನ ಅಪ್ಪಣೆಯಂತೆ ನಡೆದುಕೊಳ್ಳುವೆನು. ನಾವಿಬ್ಬರೂ ಬದುಕಿ ಇರುವವರೆಗೆ ನಮ್ಮಿಬ್ಬರ ನಡುವಣ ಪ್ರೀತಿ ಕಡಿದುಹೋಗದು. ನಾನು ನಿನಗೆ ಏಕನಿಷ್ಠ ನಾಗಿ ಉಳಿಯುವೆನು.' ಈ ಕಥೆಯು ವನ—೩೭/೩೧–೩೨ರಲ್ಲಿ ಬಂದಿದೆ.

ಋತುಪರ್ಣರಾಜನನ್ನು ಕರೆತಂದ ಸಾರಥಿ ಬಾಹುಕನೆಂದರೆ ನಲನೇ ಆಗಿರುವನೆಂದು ದಮಯಂತಿಗೆ ಒಳಗೊಳಗೇ ತಿಳಿದಿತ್ತು. ಅವಳು ಅವನನ್ನು ಬಗೆಬಗೆಯಾಗಿ ಪರೀಕ್ಷಿಸಿ ದಳು. ತರುವಾಯ ತನ್ನ ತಾಯಿತಂದೆಗಳ ಅಪ್ಪಣೆಯನ್ನು ಪಡೆದು ಬಾಹುಕನನ್ನು ಭೆಟ್ಟಿಯಾದಳು. ನಿಜವೇನೆಂಬುದನ್ನು ಅರಿತುಕೊಳ್ಳುವುದೇ ಅವಳ ಗುರಿಯಾಗಿತ್ತು. ಮೊದಲ ಭೆಟ್ಟಿಯ ಕಾಲಕ್ಕೆ ಅವಳು, ಅವನು ನಲನನ್ನು ಎಲ್ಲಿಯಾದರೂ ಕಂಡಿರುವನೇ? ಎಂದು ಕೇಳಿದಳು. ನಲನ ಬಣ್ಣನೆ ಹಾಗೂ ಆತನ ತನ್ನ ಮೇಲಿರುವ ಅನನ್ಯಸಾಧಾರಣ ವಾದ ಪ್ರೇಮವನ್ನು ಕುರಿತು ಮಾತಾಡುತ್ತ ನಲನ ಪ್ರತಿಜ್ಞೆಯನ್ನು ಕುರಿತು ಹೀಗೆಂದು ಉಲ್ಲೇಖಿಸಿದಳು—

ಅಗ್ನೌ ಪಾಣಿಂ ಗೃಹೀತ್ವಾ ತು ದೇವಾನಾಮಗ್ರತಸ್ತಥಾ ।
ಭವಿಷ್ಯಾಮೀತಿ ಸತ್ಯಂ ತು ಪ್ರತಿಶ್ರುತ್ಯ ಕ್ವ ತದ್ ಗತಮ್ ॥ ೧೪ ॥

ಅವನು ದೇವತೆಗಳನ್ನು ಹಾಗೂ ಅಗ್ನಿಯನ್ನು ಸಾಕ್ಷಿಗಳನ್ನಾಗಿರಿಸಿ ನನ್ನ ಕೈಯನ್ನು ತನ್ನ ಕೈಯಲ್ಲಿ ಹಿಡಿದುಕೊಳ್ಳುವಾಗ ನನ್ನೊಡನೆ ಏಕನಿಷ್ಠನಾಗಿ ಇರುವೆನೆಂದು ಪಣ ತೊಟ್ಟಿದ್ದನು. ಈಗ ಅವರ ನೈಜತೆ ಕಣ್ಮರೆಯಾದುದು (ಹೇಗೆ) ಎಲ್ಲಿ?

## ೨೫. ನೃಗ

ಅನುಶಾಸನ/೭೦

ಭೀಷ್ಮನು ಯುಧಿಷ್ಠಿರನಿಗೆ ಗೋದಾನದ ಹೆಗ್ಗಳಿಕೆಯನ್ನು ಹೇಳುತ್ತಲಿದ್ದಾನೆ. ನೃಗ ರಾಜನು ಬಗೆಬಗೆಯ ದಾನಧರ್ಮಗಳನ್ನು ಮಾಡಿ ಪುಣ್ಯಸಂಚಯವನ್ನು ಗಳಿಸಿದ್ದನು. ಆದರೆ ಅವನ ಕೈಯಿಂದ ಪಾಪಗಳೂ ಆಗಿದ್ದವು. ಅವನು ಹಲವಾರು ಹಸುಗಳನ್ನು

ದಾನವಾಗಿ ಕೊಟ್ಟಿದ್ದನು. ಒಂದು ಸಲ ಅವನು ಒಂದು ಆಕಳನ್ನು ಒಬ್ಬ ಬ್ರಾಹ್ಮಣನಿಗೆ ದಾನವಾಗಿ ಕೊಟ್ಟಿದ್ದನು. ಅದು ತಪ್ಪಿ ಮತ್ತೆ ಅವನ ಹಸುಗಳ ಹಿಂಡನ್ನೇ ಸೇರಿ ಕೊಂಡಿತು. (ಅದು ತನ್ನದೇ ಆದ ಹಸುವೆಂದುಕೊಂಡು) ಅದನ್ನು ಇನ್ನೊಬ್ಬ ಬ್ರಾಹ್ಮಣ ನಿಗೆ ದಾನವಾಗಿ ಕೊಡಲಾದ್ದರಿಂದ ವಾದಕ್ಕಿಟ್ಟುಕೊಂಡಿತು, ಅದನ್ನು ಬಗೆಹರಿಸಲೆಂದು ರಾಜನು ಆ ಹಸುವಿನ ಬದಲು ಹಲವು ವಸ್ತುಗಳನ್ನು ಕೊಡಮಾಡಿದನು. ಆದರೆ ಅವರಿಬ್ಬರೂ ಅವುಗಳನ್ನು ಪಡೆಯಲು ಒಪ್ಪಲಿಲ್ಲ. ರಾಜನು ತಾನು ರಕ್ಷಣಕರ್ತನಾಗಿರುವೆ ನೆಂದು ಪ್ರತಿಜ್ಞೆಯನ್ನು ಮಾಡಿಯೂ ಅದನ್ನು ಕಾಯ್ದುಕೊಳ್ಳದೆ ಹೋದುದರಿಂದಾಗಿ ಸಾವಿನ ತರುವಾಯ ಅವನಿಗೆ ಓತಿಯ ಹುಟ್ಟು ಬಂದಿತಲ್ಲದೆ ಅವನೊಂದು ಬಾವಿಗೆ ಬಿದ್ದನು. ನೃಗನು ಸತ್ತು ಯಮಲೋಕವನ್ನು ತಲುಪುತ್ತಲೇ ಯಮರಾಜನು ಅವನನ್ನು ಉದ್ದೇಶಿಸಿ, 'ಎಲೈ ರಾಜನೇ ! ನೀನು ಬಲು ದೊಡ್ಡ ಪುಣ್ಯವಂತನು !' ಎಂದನು.

> ಅಸ್ತಿ ಚೈವ ಕೃತಂ ಪಾಪಮಜ್ಞಾನಾತ್ ತದಪಿ ತ್ವಯಾ ।
> ಚರಸ್ವ ಪಾಪಂ ಪಶ್ಚಾದ್ ವಾ ಪೂರ್ವಂ ವಾ ತ್ವಂ ಯಥೇಚ್ಛಸಿ ॥ ೨೨ ॥
> ರಕ್ಷಿತಾಸ್ಮೀತಿ ಚೋಕ್ತಂ ತೇ ಪ್ರತಿಜ್ಞಾ ಚಾನೃತಾ ತವ ।
> ಬ್ರಾಹ್ಮಣಸ್ವಸ್ಯ ಚಾದಾನಂ ದ್ವಿವಿಧಸ್ತೇ ವ್ಯತಿಕ್ರಮಃ ॥ ೨೩ ॥

"ಆದರೆ ಅರಿವಿಲ್ಲದೆಯೇ ನಿನ್ನಿಂದ ಪಾಪಕೃತ್ಯವೂ ನಡೆದಿದೆ. ಅದಕ್ಕಾಗಿ ನೀನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕಾದೀತು. ಮೊದಲಲ್ಲೋ, ಆಮೇಲೆಯೋ ಎಂಬುದನ್ನು ಮಾತ್ರ ನೀನೇ (ನಿರ್ಧರಿಸಬಲ್ಲೆ). 'ನಾನು ರಕ್ಷಣಕರ್ತ'ನೆಂದು ನೀನು ಪ್ರತಿಜ್ಞೆಯನ್ನು ಮಾಡಿದ್ದರೂ ಅದು ಸುಳ್ಳಾಯಿತು. ಅಲ್ಲದೆ ದಾನವಾಗಿ ಕೊಟ್ಟ ಹಸು ವನ್ನು ಮರಳಿ ಪಡೆದೆ. ಇದು ನಿನ್ನ ಇನ್ನೊಂದು ಅಪರಾಧ."

+ ವಿಫಲಗೊಂಡ ಪ್ರತಿಜ್ಞೆ.

+ ನೋಡಿ : ವಾಲ್ಮೀಕಿರಾಮಾಯಣದಲ್ಲಿ ಇಬ್ಬರು ಬ್ರಾಹ್ಮಣರು ನೃಗರಾಜನಿಗಿತ್ತ ಶಾಪ. (ವಾಲ್ಮೀಕಿರಾಮಾಯಣ : ಶಾಪ ಮತ್ತು ವರ, ಶಾಪ ಕ್ರ. ೪೯).

ರಾಮಾಯಣ ಹಾಗೂ ಮಹಾಭಾರತಗಳಲ್ಲಿ ನೃಗರಾಜನ ಕಥೆ ಭಿನ್ನವಾಗಿದೆ.

## ೨೬. ಪರಶುರಾಮ ವನ/೧೧೭

### ೧

### ಪೃಥ್ವಿಯನ್ನು ನಿಃಕ್ಷತ್ರಿಯವನ್ನಾಗಿ ಮಾಡುವ ಬಗೆಗೆ

ಪರಶುರಾಮನ ಶಿಷ್ಯನೂ, ಸ್ನೇಹಿತನೂ ಆದ ಅಕೃತವ್ರಣನು ಯುಧಿಷ್ಠಿರನಿಗೆ ಪರಶುರಾಮನ ಪಣವನ್ನು ಕುರಿತು ಹೇಳುತ್ತಲಿದ್ದಾನೆ. ಕಾರ್ತವೀರ್ಯ ಸಹಸ್ರಾರ್ಜುನನ ಮಕ್ಕಳು ಬಲುಕ್ರೂರವಾದ ಬಗೆಯಿಂದ ಜಮದಗ್ನಿಯನ್ನು ಕೊಂದ ಸುದ್ದಿಯನ್ನು ತಿಳಿದು ಪರಶರಾಮ ಕೋಪದಿಂದ ಕಿಡಿಕಿಡಿಯಾದನು. ತನ್ನ ತಂದೆಯ ಅಂತ್ಯಸಂಸ್ಕಾರ ಗಳನ್ನು ತೀರಿಸಿದ ತರುವಾಯ,

......ರಾಮಃ ಪರಪುರಂಜಯಃ ।
ಪ್ರತಿಜಜ್ಞೇ ವಧಂ ಚಾಪಿ ಸರ್ವಕ್ಷತ್ರಸ್ಯ ಭಾರತ ॥ ೬ ॥

ಕ್ಷತ್ರಿಯರೆಲ್ಲರನ್ನೂ ಕೊಲ್ಲುವೆನೆಂದು ಪಣತೊಟ್ಟನು.

ಆ ಪ್ರಕಾರವಾಗಿ ಅವನು ಕಾರ್ತವೀರ್ಯನ ಗಂಡುಮಕ್ಕಳೆಲ್ಲರನ್ನೂ ಅಲ್ಲದೆ ಅವರಿಗೆ ನೆರವಾದ ಉಳಿದ ಕ್ಷತ್ರಿಯರನ್ನೂ ಕೊಂದುಬಿಟ್ಟನು.

ಉದ್ಯೋಗ/೧೭೮

೨

## ಬ್ರಾಹ್ಮಣರ ಅಪ್ಪಣೆಯಿಲ್ಲದೆ ಶಸ್ತ್ರಗಳನ್ನು ಹಿಡಿಯದಿರುವ ಬಗೆಗೆ

ಅಂಬೆಯು ಭೀಷ್ಮನ ಮೇಲೆ ಸೇಡು ತೀರಿಸಿಕೊಳ್ಳುವ ತನ್ನ ಕೆಲಸಕ್ಕೆ ನೆರವಾಗಲು ಪರಶುರಾಮನನ್ನು ಬೇಡಿಕೊಂಡಳು. ಅವನಿಗೆ ನಡೆದುದನ್ನೆಲ್ಲ ಹೇಳಿದಳು. ಭೀಷ್ಮ ಹಾಗೂ ಶಾಲ್ವನಿಗೆ ತಿಳಿಹೇಳಿ ಅವಳ ದುಃಖವನ್ನು ದೂರಗೊಳಿಸುವುದಾಗಿ ಅವನು ಮಾತುಕೊಟ್ಟನು. ಭೀಷ್ಮನನ್ನು ಕೊಲ್ಲುವುದೇ ಅಂಬೆಯ ಮುಖ್ಯ ಗುರಿಯಾಗಿತ್ತು. ಅವಳು ಭೀಷ್ಮನನ್ನು ಕೊಂದುಬಿಡುವಂತೆ ಪರಶುರಾಮನನ್ನು ಒತ್ತಾಯಿಸತೊಡಗಿದಳು. ಅದಕ್ಕೆ ಪರಶುರಾಮನು ಅವಳಿಗೆ ಹೀಗೆಂದನು—

ಕಾಶ್ಯೇ ನ ಕಾಮಂ ಗೃಹ್ಣಾಮಿ ಶಸ್ತ್ರಂ ವೈ ವರವರ್ಣಿನಿ ।
ಋತೇ ಬ್ರಹ್ಮವಿದಾಂ ಹೇತೋಃ ಕಿಮನ್ಯತ್ ಕರವಾಣಿ ತೇ ॥ ೨ ॥

'ಬ್ರಹ್ಮವಿದನಾದ ಬ್ರಾಹ್ಮಣನ ಕೆಲಸಗಳಿಗಾಗಿ ಹೊರತು (ಬೇರಿನ್ನಾವ ಕಾರಣಕ್ಕಾಗಿಯೂ) ನಾನು ಶಸ್ತ್ರವನ್ನು ಹಿಡಿಯಲಾರೆ. ಹೀಗಾಗಿ ಅದೊಂದನ್ನು ಬಿಟ್ಟು ನಿನಗಾಗಿ ಬೇರೇನನ್ನು ಮಾಡಲಿ, ಹೇಳು.' ಅವನು ಪಣವನ್ನು ಮತ್ತೆ ಉಚ್ಚರಿಸಿದನು.

ನ ತು ಶಸ್ತ್ರಂ ಗ್ರಹೀಷ್ಯಾಮಿ ಕಥಂಚಿದಪಿ ಭಾಮಿನಿ ।
ಋತೇ ನಿಯೋಗಾದ್ ವಿಪ್ರಾಣಾಮೇಷ ಮೇ ಸಮಯಃ ಕೃತಃ ॥ ೪ ॥

ಎಲೆ ಭಾಮಿನಿಯೇ! ಬ್ರಾಹ್ಮಣರ ಒಪ್ಪಿಗೆಯಿಲ್ಲದೆ ಬೇರಾವ ಕಾರಣಕ್ಕಾಗಿಯೂ ನಾನು ಆಯುಧಕ್ಕೆ ಕೈಹಚ್ಚುವವನಲ್ಲ—ಎಂಬುದು ನನ್ನ ಪಣ.

ಉದ್ಯೋಗ/೧೭೮

೩

## ಶರಣಾರ್ಥಿಗಳನ್ನು ಬಿಟ್ಟುಕೊಡದಿರುವ ಬಗೆಗೆ

ಭೀಷ್ಮನು ತನಗಿತ್ತ ಮಾತನ್ನು ಪೂರ್ತಿಗೊಳಿಸಲೆಂದು ಭೀಷ್ಮನನ್ನು ಕೊಲ್ಲಲೇಬೇಕೆಂದು ಅಂಬೆಯು ಪರಶುರಾಮನೆದುರು ಹಟಹಿಡಿದಳು. ಆಗ ಅಕೃತವ್ರಣನು ಪರಶುರಾಮನಿಗೆ ಅವನ ಇನ್ನೊಂದು ಪಣವನ್ನು ನೆನಪು ಮಾಡಿಕೊಟ್ಟನು. ಅವನು ಹೀಗೆಂದನು—

ಜಿತ್ವಾ ವೈ ಕ್ಷತ್ರಿಯಾನ್ ಸರ್ವಾನ್ ಬ್ರಾಹ್ಮಣೇಷು ಪ್ರತಿಶ್ರುತಾ ।
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರಶ್ಚೈವ ರಣೇ ಯದಿ ॥ ೧೨ ॥
ಬ್ರಹ್ಮದ್ವಿಡ್ ಭವಿತಾ ತಂ ವೈ ಹನಿಷ್ಯಾಮೀತಿ ಭಾರ್ಗವ ।
ಶರಣಾರ್ಥೇ ಪ್ರಪನ್ನಾನಾಂ ಭೀತಾನಾಂ ಶರಣಾರ್ಥಿನಾಮ್ ॥ ೧೩ ॥
ನ ಶಕ್ಷ್ಯಾಮಿ ಪರಿತ್ಯಾಗಂ ಕರ್ತುಂ ಜೀವನ್ ಕಥಂಚನ ।
ಯಂಶ್ಚ ಕೃತ್ಸ್ನಂ ರಣೇ ಕ್ಷತ್ರಂ ವಿಜೇಷ್ಯತಿ ಸವನಾಗತಮ್ ॥ ೧೪ ॥
ದೀಪ್ತಾತ್ಮಾನಮಹಂ ತಂ ಚ ಹನಿಷ್ಯಾಮೀತಿ ಭಾರ್ಗವ ।
ಸ ಏವಂ ವಿಜಯೀ ರಾಮ ಭೀಷ್ಮಃ ಕುರುಕುಲೋದ್ವಹಃ ।
ತೇನ ಯುಧ್ಯಸ್ವ ಸಂಗ್ರಾಮೇ ಸಮೇತ್ಯ ಭೃಗುನಂದನ ॥ ೧೫ ॥

'ಎಲೈ ಮಹರ್ಷಿಯೆ! ಭಾರ್ಗವನೆ! ನೀನು ಕ್ಷತ್ರಿಯರನ್ನೆಲ್ಲ ಸೋಲಿಸಿದ ತರುವಾಯ ಬ್ರಾಹ್ಮಣರೆದುರು ಒಂದು ಪಣವನ್ನು ತೊಟ್ಟಿದ್ದೆ. (ಅದೆಂದರೆ) ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಲ್ಲಿ ಯಾರೇ ಆಗಲಿ ಬ್ರಾಹ್ಮಣರನ್ನು ದ್ವೇಷಿಸಿದರೆ ಅವರನ್ನು ಯುದ್ಧದಲ್ಲಿ ಕೊಲ್ಲುವೆ. ಭಯಭೀತರಾಗಿ ನನಗೆ ಶರಣುಬಂದವರನ್ನು ನಾನು ಜೀವದಿಂದಿರುವವರೆಗೆ ಅದೆಂದಿಗೂ ಅಲಕ್ಷ್ಯಕ್ಕೀಡಾಗದಂತೆ ನೋಡಿಕೊಳ್ಳುವೆನು. ಕ್ಷತ್ರಿಯರೆಲ್ಲರನ್ನು ಯುದ್ಧದಲ್ಲಿ ಗೆದೆಯುವ ವೀರಪುರುಷನನ್ನೂ ಕೊಂದುಬಿಡುವೆನೆಂಬುದು. ಭೀಷ್ಮನು ಕ್ಷತ್ರಿಯರನ್ನು ಗೆದ್ದಿರುವ ಕಾರಣ ನೀವು ಅವನೊಂದಿಗೆ ಹೋರಾಡಲು ಅಡ್ಡಿಯಿಲ್ಲ.' ಪರಶುರಾಮನೂ ಕೂಡ ತನ್ನ ಪ್ರತಿಜ್ಞೆ ನೆನಪಿನಲ್ಲಿದೆ ಎಂದು ಹೇಳಿದನು.

+ ಮೊದಲ ಪ್ರತಿಜ್ಞೆಯಿಂದಾಗಿ ಭೀಷ್ಮನ ಮೇಲೆ ಪರಶುರಾಮನು ಶಸ್ತ್ರವನ್ನು ಎತ್ತುವಂತಿರಲಿಲ್ಲ. ಅವಳಿಗಾದರೋ ಮಾತುಕೊಟ್ಟಿದ್ದನು. ಈ ಪೇಚಿನಿಂದ ದಾರಿಯನ್ನು ಕಂಡುಹಿಡಿಯಲೆಂದು ಎರಡನೆಯ ಪಣ ಬಂದಿರಲು ಸಾಕು.

## ೨೭. ಪರಾಶರ ಆದಿ/೧೭೭

ಪರಾಶರನೆಂದರೆ ವಸಿಷ್ಠನ ಮಗ ಶಕ್ತಿ ಹಾಗೂ ಅವನ ಮಡದಿ ಅದೃಶ್ಯಂತಿಯ ಮಗನು. ಈತನು ಬಸಿರಲ್ಲಿರುವಾಗಲೇ ಈತನ ಮೈಯಲ್ಲಿ ರಾಕ್ಷಸ ಸಂಚಾರ ನಡೆಯಿತು. ಹೀಗಾಗಿ ಕಲ್ಮಾಷಪಾದ ರಾಜನು ಶಕ್ತಿಯನ್ನು ಹಿಡಿದು ವಸಿಷ್ಠನ ಮಕ್ಕಳೆಲ್ಲರನ್ನೂ ತಿಂದು ತೇಗಿದನು. ವಸಿಷ್ಠನು ಈ ಮಗುವಿನ ಹುಟ್ಟಿನಿಂದಲೇ ಸಂಸ್ಕಾರಗಳನ್ನೆಲ್ಲ ಮಾಡಿದ್ದರಿಂದ ಅವನೇ ತನ್ನ ತಂದೆಯೆಂದು ಬಗೆದಿದ್ದಿತು. ಒಂದು ಸಲ ಅವನ ತಾಯಿ ಅವನಿಗೆ ಇದ್ದ ಸಂಗತಿಯನ್ನು ಹೇಳಿದಳು. ವಸಿಷ್ಠನು ಅವನಿಗೆ ತಾತನೆಂಬುದನ್ನೂ ಹೇಳಿದಳು. ತನ್ನ ತಂದೆಯ ಶೋಚನೀಯವಾದ ಸಾವಿನ ವಾರ್ತೆಯನ್ನು ಕೇಳಿ ಪರಾಶರ ತುಂಬ ಕೆರಳಿಬಿಟ್ಟನು.

.........ಸತ್ಯವಾಗೃಷಿಸತ್ತಮಃ ।
ಸರ್ವಲೋಕವಿನಾಶಾಯ ಮತಿಂ ಚಕ್ರೇ ಮಹಾತ್ಮನಾಃ ॥ ೯ ॥

ಸತ್ಯವಾದಿಯಾದ ಆ ಮುನಿಶ್ರೇಷ್ಠ ಪರಶುರಾಮನು ಎಲ್ಲ ಲೋಕಗಳನ್ನೂ ನಾಶ ಪಡಿಸಲು ಯೋಚಿಸಿದನು.

+ 'ಪಣ'ವೆಂಬ ಖಚಿತವಾದ ಪದಪ್ರಯೋಗವಿಲ್ಲದೆಹೋದರೂ ಇಲ್ಲಿಯ ನಿಶ್ಚಯಾತ್ಮಕವಾದ ಉದ್ಗಾರವೆಂದರೆ.ಪಣದಂತೆಯೇ ಇದೆ. ವಸಿಷ್ಠನು ಅವನನ್ನು ಅವನ ಕೋಪ ಹಾಗೂ ನಿರ್ಧಾರಗಳಿಂದ ದೂರವಿರಿಸಲೆಂದು ಅವನಿಗೆ ಔರ್ವನ ಕಥೆಯನ್ನು ಹೇಳಿದನು.

## ೨೮. ಪಾಂಡವರು ವನ/೯೩

### ತೀರ್ಥಯಾತ್ರೆ

ಪಾಂಡವರು ಲೋಮಶ ಮತ್ತು ಧೌಮ್ಯ ಋಷಿಗಳೊಂದಿಗೆ ತೀಥಯಾತ್ರೆಗೆ ಹೊರಡಲು ಸಿದ್ಧರಾದರು. ಈ ವಾರ್ತೆಯನ್ನರಿತ ಕಾಡಿನಲ್ಲಿದ್ದ ಕೆಲವು ಬ್ರಾಹ್ಮಣರು ತೀರ್ಥ ಕ್ಷೇತ್ರಗಳ ದರ್ಶನವನ್ನು ಪಡೆಯಲೆಂದು ತಾವೂ ಅವರನ್ನು ಜತೆಗೂಡುವೆವೆಂದರು. ವ್ಯಾಸ, ನಾರದ, ಪರ್ವತಾದಿ ಋಷಿಗಳೂ ಕೂಡ ಪಾಂಡವರ ಭೆಟ್ಟಿಗಾಗಿ ಬಂದರು. ಯುಧಿಷ್ಠಿರನು ಅವರನ್ನು ಯಥೋಚಿತವಾಗಿ ಬರಮಾಡಿಕೊಂಡನು, ಸತ್ಕರಿಸಿದನು. ಋಷಿಗಳು ಅವರಿಗೆ ಮಾನುಷವ್ರತ, ದೇವವ್ರತ ಮೊದಲಾದವುಗಳ ಹಿರಿಮೆ, ಮಹಿಮೆಗಳನ್ನು ಹೇಳಿದರು. ತೀರ್ಥಯಾತ್ರೆಯ ಯಥೋಚಿತವಾದ ಫಲ ದೊರಕಲು ಏನನ್ನು ಮಾಡಬೇಕೆಂಬುದನ್ನು ಹೇಳಿದರು.

ತೇ ತಥೇತಿ ಪ್ರತಿಜ್ಞಾಯ ಕೃಷ್ಣಯಾ ಸಹ ಪಾಂಡವಾಃ ।
ಕೃತಸ್ವಸ್ತ್ಯಯನಾಃ ಸರ್ವೇ ಮುನಿಭಿರ್ದಿವ್ಯಮಾನುಷೈಃ ॥ ೨೪ ॥

ದ್ರೌಪದಿಯೊಂದಿಗೆ ಪಾಂಡವರು 'ಒಳ್ಳೆಯದು' ಎಂದು ನುಡಿದು ಋಷಿಗಳ ಹೇಳಿಕೆಯಂತೆ ತೀರ್ಥಯಾತ್ರೆಯನ್ನು ಕೈಕೊಳ್ಳುವ ಪಣತೊಟ್ಟರು. ಆಗ ಅಲ್ಲಿ ನೆರೆದಿದ್ದ ದೇವರ್ಷಿಗಳು ಹಾಗೂ (ಮಾನವ) ಋಷಿಗಳು ಸ್ವಸ್ತಿವಾಚನವನ್ನು ಮಾಡಿದರು.

## ೨೯. ಬೃಹಸ್ಪತಿ ಆಶ್ವಮೇಧಿಕ/೫

ಯುಧಿಷ್ಠಿರನ ಕೇಳಿಕೆಯ ಮೇರೆಗೆ ಮಹರ್ಷಿಯು ಅವನಿಗೆ ಮರುತ್ತನ ಪರಾಕ್ರಮ ಹಾಗೂ ಅವನಿಗಾದ ಸುವರ್ಣಪ್ರಾಪ್ತಿಗಳನ್ನು ಕುರಿತು ಹೇಳುತ್ತಲಿದ್ದಾನೆ.

ದೇವರಾಜ ಇಂದ್ರ ಹಾಗೂ ಮರುತ್ತರಲ್ಲಿ ವಿಲಕ್ಷಣವಾದ ಸ್ಪರ್ಧೆಯಿತ್ತು. ಇಂದ್ರನು ಅದೆಷ್ಟೇ ಹೆಣಗಿಯೂ ಮರುತ್ತನನ್ನು ಮೀರಿಸುವಲ್ಲಿ ಯಶಸ್ವಿಯಾಗಲಿಲ್ಲ. ಅಂಗಿರ ಇಂದ್ರನ ಪುರೋಹಿತ. ಅವನು ಸದೇಹವಾಗಿ ಸ್ವರ್ಗಕ್ಕೆ ಬಂದವನು. ತರುವಾಯ ಇಂದ್ರನು ಅಂಗಿರನ ಮಗ ಬೃಹಸ್ಪತಿಯನ್ನು ಪುರೋಹಿತನನ್ನಾಗಿ ಮಾಡಲು ನಿರ್ಧರಿಸಿದನು. ಅವನು ಈ ಸಂಗತಿಯನ್ನು ಬೃಹಸ್ಪತಿಗೆ ಹೇಳಿದನು. ಆದರೆ ಅವನು ಮರುತ್ತನ ಯಜ್ಞ, ಶ್ರಾದ್ಧಕರ್ಮ ಮುಂತಾದವುಗಳನ್ನೇನೂ ಮಾಡಕೂಡದೆಂದನು. ಬೃಹಸ್ಪತಿಯು ಮರುತ್ತನ ಕುಲಪುರೋಹಿತನಾಗಿದ್ದನು. ತಾನು ಇಂದ್ರನ ಪೌರೋಹಿತ್ಯವನ್ನು ಪಡೆಯು

ಬೇಕೆಂದು ಆತನಿಗೂ ಆಸೆಯಾಗಿತ್ತು. ಆದರೆ ಇಂದ್ರನು ಅವನಿಗೆ ಮಾನವರ ಪೌರೋಹಿತ್ಯವನ್ನು ಮಾಡಕೂಡದೆಂದು ಕರಾರು ಹಾಕಿದ್ದನು. ಇಂದ್ರನ ಶರತ್ತನ್ನು ಒಪ್ಪಿಕೊಂಡು ಅವನು ಈ ರೀತಿ ಪಣತೊಟ್ಟನು—

ಸಮಾಶ್ವಸಿಹಿ ದೇವೇಂದ್ರ ನಾಹಂ ಮರ್ತ್ಯಸ್ಯ ಕರ್ಹಿಚಿತ್ ।
ಗ್ರಹೀಷ್ಯಾಮಿ ಸ್ರುವಂ ಯಜ್ಞೇ ಶೃಣು ಚೇದಂ ವಚೋ ಮಮ ॥ ೨೬ ॥
ಹಿರಣ್ಯರೇತಾ ನೋಷ್ಣಃ ಸ್ಯಾತ್ ಪರಿವರ್ತೇತ ಮೇದಿನೀ ।
ಭಾಸಂ ತು ನ ರವಿಃ ಕುರ್ಯಾನ್ನ ತು ಸತ್ಯಂ ಚಲೇನ್ಮಯಿ ॥ ೨೭ ॥

ಎಲೈ ದೇವೇಂದ್ರನೇ! ಕೊಂಚ ತಾಳು. (ನಿನ್ನ ಪೌರೋಹಿತ್ಯವನ್ನು ಒಪ್ಪಿಕೊಂಡ ಬಳಿಕ) ಯಾವದೇ ಮಾನವನ ಯಜ್ಞದಲ್ಲಿ ಪಾಲ್ಗೊಳ್ಳೆನು. ಕೈಯಲ್ಲಿ ಸ್ರುವೆಯನ್ನು ಹಿಡಿಯೆನು. ಬಿಸಿಲೇರಿರಲಿ, ತಂಪೆರಚಲಿ, ಪೃಥ್ವಿಯಲ್ಲಿ ಏರುಪೇರುಗಳಾಗಲಿ ಇಲ್ಲವೆ ನೇಸರ ಬೆಳಕು ಬೀರುವುದನ್ನು ನಿಲ್ಲಿಸಲಿ—ಏನಿದ್ದರೂ ನನ್ನ ಈ ಪಣ ಸುಳ್ಳಾಗದೆಂಬುದನ್ನು ನೆನಪಿನಲ್ಲಿಡು.

ಅಶ್ವಮೇಧಿಕ/೬

ಬೃಹಸ್ಪತಿಯ ಈ ಪ್ರತಿಜ್ಞೆ ಮರುತ್ತನಿಗೆ ತಿಳಿದುಬಂದಿತು. ಹೀಗಾಗಿ ಅವನೊಂದು ಹಿರಿದಾದ ಯಜ್ಞವನ್ನು ಹೂಡಿದನು. ಬೃಹಸ್ಪತಿಯನ್ನು ಕಂಡು ಅವನಿಗೆ ಹೀಗೆಂದನು: 'ಗುರುದೇವರೇ! ಹಿಂದಕ್ಕೆ ನೀವೇ ನನಗೆ ಕೈಕೊಳ್ಳಲು ಹೇಳಿದ ಎಲ್ಲ ಬಗೆಯ ಯಜ್ಞಗಳನ್ನೂ ಕೈಕೊಳ್ಳಲು ಈಗ ಸಿದ್ಧನಾಗಿದ್ದೇನೆ. ನೀವು ನಮ್ಮ ಕುಲಪುರೋಹಿತರು. ಹೀಗಾಗಿ ಇವುಗಳ ಪೌರೋಹಿತ್ಯವನ್ನು ವಹಿಸಿಕೊಳ್ಳುವ ಅಗ್ರಹಕ್ಕು ನಿಮ್ಮದಾದ್ದರಿಂದ ನೀವು ಅದನ್ನು ಒಪ್ಪಿಕೊಳ್ಳಿರೆಂದು ಬೇಡಿಕೊಳ್ಳುತ್ತೇನೆ. ಬೃಹಸ್ಪತಿಯು ಅದನ್ನು ನಿರಾಕರಿಸಿಬಿಟ್ಟನು. ಅವನು ಹೀಗೆಂದನು—

ನ ಕಾಮಯೇ ಯಾಜಯಿತುಂ ತ್ವಾಮಹಂ ಪೃಥಿವೀಪತೇ ।
ವೃತೋಽಸ್ಮಿ ದೇವರಾಜೇನ ಪ್ರತಿಜ್ಞಾತಂ ಚ ತಸ್ಯ ಮೇ ॥ ೬ ॥

'ಎಲೈ ರಾಜನೇ! ಇನ್ನುಮುಂದೆ ನಾನು ನಿನ್ನ ಯಜ್ಞಕರ್ಮಗಳನ್ನು ಮಾಡಬಯಸೆನು. ಈಗ ನಾನು ದೇವೇಂದ್ರನ ಪೌರೋಹಿತ್ಯವನ್ನು ಸ್ವೀಕರಿಸಿರುವೆನು. ಅಲ್ಲದೆ (ಮಾನವನ ಪೌರೋಹಿತ್ಯವನ್ನು ಸ್ವೀಕರಿಸೆನೆಂದು) ಅವನ ಬಳಿ ಪಣತೊಟ್ಟಿದ್ದೇನೆ.'

ಇದೆಲ್ಲವನ್ನು ಆಲಿಸಿಯೂ ಮರುತ್ತನು ಮತ್ತೆ ಅವನಿಗೆ ತನ್ನ ಕೋರಿಕೆಯನ್ನು ಸಲ್ಲಿಸಿದನು. ತಾನು ಅವನ ಶಿಷ್ಯನೆಂದೂ, ಗುರುಸೇವೆಗಾಗಿ ತತ್ಪರನಾಗಿರುವುದಾಗಿಯೂ ಹೇಳಿದನು. ಇಷ್ಟಾಗಿಯೂ ಬೃಹಸ್ಪತಿಯು ಒಲ್ಲೆನೆಂದನು.

ಅಮರ್ತ್ಯಂ ಯಾಜಯಿತ್ವಾಹಂ ಯಾಜಯಿಷ್ಯೇ ಕಥಂ ನರಮ್ ।
ಮರುತ್ತ ಗಚ್ಛ ವಾ ಮಾ ವಾ ನಿವೃತ್ತೋಽಸ್ಮ್ಯದ್ಯ ಯಾಜನಾತ್ ॥ ೮ ॥
ನ ತ್ವಾಂ ಯಾಜಯಿತಾಸ್ಮ್ಯದ್ಯ ವೃಣು ಯಂ ತ್ವಮಿಹೇಚ್ಛಸಿ ।
ಉಪಾಧ್ಯಾಯಂ ಮಹಾಬಾಹೋ ಯಸ್ತೇ ಯಜ್ಞಂ ಕರಿಷ್ಯತಿ ॥ ೯ ॥

'ಅಮರರ ಪೌರೋಹಿತ್ಯ ದೊರೆತದ್ದರಿಂದ ಮರ್ತ್ಯಮಾನವರ ಯಜ್ಞಗಳನ್ನು ಹೇಗೆ ಮಾಡಬಲ್ಲೆ? ನೀನು ಬೇಕಿದ್ದರೆ ನಿಲ್ಲು, ಬೇಡವಾದರೆ ಹೊರಟುಹೋಗು. ನಾನಂತೂ ಮರ್ತ್ಯರ ಪೌರೋಹಿತ್ಯದಿಂದ ನಿವೃತ್ತನಾಗಿದ್ದೇನೆ. ನಾನು ನಿನ್ನ ಯಜ್ಞವನ್ನು ಮಾಡ ಲಾರೆ. ನಿನಗೆ ಬೇಕಿದ್ದರೆ ಇನ್ನಾರನ್ನಾದರೂ ಪುರೋಹಿತನೆಂದು ನೇಮಿಸಿಕೋ. ಅವನಿಂದ ಯಜ್ಞವನ್ನು ಮಾಡಿಸು.'

## ೩೦. ಭೀಮ

ಸಭಾ/೭೧

### ೧
### ಊರುಭಂಗ

ದುರ್ಯೋಧನನು ತುಂಬುಸಭೆಯಲ್ಲಿ ದ್ರೌಪದಿಗೆ ತನ್ನ ತೊಡೆಯನ್ನು ತೆರೆದು ತೋರಿ ಸಿದ್ದರಿಂದ ಕೆರಳಿದ ಭೀಮನು ಹೀಗೆಂದು ಪಣತೊಟ್ಟನು—

ಪಿತೃಭಿಃಸಹ ಸಾಲೋಕ್ಯಂ ಮಾ ಸ್ಮ ಗಚ್ಛೇದ್ ವೃಕೋದರಃ ।
ಯದ್ಯೇತಮೂರುಂ ಗದಯಾ ನ ಭಿಂದ್ಯಾಂ ತೇ ಮಹಾಹವೇ ॥ ೧೪ ॥

'ಎಲೈ ದುರ್ಯೋಧನನೇ! ಯುದ್ಧದ ಕಾಲಕ್ಕೆ ನನ್ನ ಗದಾಪ್ರಹಾರಗಳಿಂದ ನಿನ್ನ ತೊಡೆಯನ್ನು ಒಡೆದು ಹುಡಿಹುಡಿ ಮಾಡದಿದ್ದರೆ ಈ ವೃಕೋದರನಿಗೆ ಪಿತೃಗಳಿಗೆ ಪ್ರಾಪ್ತವಾದಂತಹ ಪುಣ್ಯಲೋಕವು ಪ್ರಾಪ್ತವಾಗಲಾರದು.'

ಸಭಾ/೭೭

ಈ ಪಣದಲ್ಲಿ ಊರುಭಂಗದಂತೆಯೇ ತಲೆಯನ್ನು ನೆಲದ ಮೇಲೆ ಕಾಲಿನಿಂದ ಒದೆಯುವು ದಾಗಿಯೂ ಉಲ್ಲೇಖವಿದೆ.

ಶಿರಃ ಪಾದೇನ ಚಾಸ್ಯಾಹಮಧಿಷ್ಠಾಸ್ಯಾಮಿ ಭೂತಲೇ ॥ ೨೮ ॥

+ಬೇರೆ ಉಲ್ಲೇಖಗಳು : ವನ—೪೯/೧೧ ; ೩೧೩/೪, ೫. ಉದ್ಯೋಗ—೭೫/೧೩–೧೪ ; ೧೬೦/೯–೧೧, ೬೯–೭೦ ; ೧೬೧/೭೧ ; ೧೬೩/೩೨–೩೪. ಕರ್ಣ—೫/೯ ; ೨೯/೩೩ ; ೮೩/೫೧. ಶಲ್ಯ—೫/೧೪ ; ೩೩/೨೭–೨೮ ; ೫೮/೭–೮ ; ೫೯/೧೫–೧೬ ; ೬೦/೧೬–೧೯, ೨೫.

ಸಭಾ/೬೮

### ೨
### ದುಃಶಾಸನನ ನೆತ್ತರವನ್ನು ಕುಡಿಯುವ ಬಗೆಗೆ

ಯುಧಿಷ್ಠಿರನು ಜೂಜಾಟದಲ್ಲಿ ದ್ರೌಪದಿಯೊಂದಿಗೆ ಎಲ್ಲವನ್ನೂ ಕಳೆದುಕೊಂಡನು. ತರುವಾಯ ದುಶ್ಶಾಸನನು ದ್ರೌಪದಿಯನ್ನು ಆ ತುಂಬಿದ ಸಭೆಗೆ ದರದರನೆ ಎಳೆದು ತಂದನು. ಅವಳನ್ನು ಅವಮಾನಗೊಳಿಸಿದನು. ಕರ್ಣ ಬಾಯಿಗೆ ಬಂದಂತೆ ಒದರಿದನು. ಹೀಗಾಗಿ ಭೀಮನ ಸಿಟ್ಟು ಕಟ್ಟೆಯೊಡೆಯಿತು. ಅವನು ಹೀಗೆಂದು ಪಣತೊಟ್ಟನು—

ಅಸ್ಯ ಪಾಪಸ್ಯ ದುರ್ಬುದ್ಧೇರ್ಭಾರತಾಪಸದಸ್ಯ ಚ ।
ನ ಪಿಬೇಯಂ ಬಲಾದ್ ವಕ್ಷೋ ಭಿತ್ತ್ವಾ ಚೇದ್ ರುಧಿರಂ ಯುಧಿ ॥ ೫೩ ॥

ನಾನು ಯುದ್ಧಕಾಲಕ್ಕೆ ದುಶ್ಶಾಸನನ ಎದೆಯನ್ನು ಸೀಳಿ ನೆತ್ತರವನ್ನು ಕುಡಿಯದೆ ಹೋದರೆ ನನ್ನ ಪಿತೃಗಳಿಗೆ ದೊರೆತ ಸದ್ಗತಿ ನನಗೆ ದೊರಕದೇ ಹೋದೀತು.

+ ಈ ಪ್ರತಿಜ್ಞೆಯಲ್ಲಿ ಆಣೆ ಹಾಗೂ ಸತ್ಯಕ್ರಿಯೆ ಇವೆರಡೂ ಇವೆ. ಶಶಾಪ ತತ್ರ ಭೀಮಸ್ತು—ಎಂದು ೬೮/೫೦ರಲ್ಲಿ ಉಲ್ಲೇಖಿಸಲಾಗಿದೆ. ನೀಲಕಂಠನು ಶಶಾಪ ಶಪಥಂ ಕೃತವಾನ್—ಎಂದಿದ್ದಾನೆ. ಸತ್ಯಕ್ರಿಯೆಯಂತೂ ಸ್ಪಷ್ಟವಾಗಿಯೇ ಇದೆ. ನೋಡಿ: **ಭೀಮನ ಸತ್ಯಕ್ರಿಯೆ:** ಸಭಾ—೬೮/೫೦–೫೨.

+ ಬೇರೆ ಪುನರುಲ್ಲೇಖಗಳು : ಸಭಾ—೭೭/೨೧, ೨೯. ಉದ್ಯೋಗ : ೧೬೦/೯–೧೦, ೬೬–೬೭, ೭೦ ; ೧೬೧/೭೧ ; ೧೬೨/೨೭ ; ೧೬೩/೧೫–೧೬, ೩೨–೩೪. ದ್ರೋಣ—೧೪೮/೫–೬. ಕರ್ಣ—೮೩/೨೮–೨೯, ೫೦. ಸ್ತ್ರೀ—೧೫/೧೮–೨೦.

**ಸಭಾ/೭೭**

**೩**

### ಕೌರವರ ಸಂಹಾರ

ಭೀಮನು ದುರ್ಯೋಧನ ಹಾಗೂ ದುಶ್ಶಾಸನರನ್ನು ಕೊಲ್ಲುವ ಬಗೆಗೆ ಉಚ್ಚರಿಸಿದ ಪಣದೊಂದಿಗೆಯೇ ಧೃತರಾಷ್ಟ್ರನ ಮಕ್ಕಳಾದ ನೂರು ಜನ ಕೌರವರೆಲ್ಲರನ್ನೂ ಕೊಲ್ಲುವ ಪಣವನ್ನೂ ತೊಟ್ಟನು.

ಧಾರ್ತರಾಷ್ಟ್ರಾನ್ ರಣೇ ಹತ್ವಾ ಮಿಷತಾಂ ಸರ್ವಧನ್ವಿನಾಮ್ ।
ಶಮಂ ಗಂತಾಸ್ಮಿ ನಾಚಿರಾತ್ ಸತ್ಯಮೇತದ್ ಬ್ರವೀಮಿ ತೇ ॥ ೨೨ ॥

ಎಲ್ಲರ ಎದುರಿನಲ್ಲಿಯೇ ಧೃತರಾಷ್ಟ್ರನ ಮಕ್ಕಳೆಲ್ಲರನ್ನೂ ಕೊಂದು ಶಾಂತನಾಗುವೆನು—ಎಂದು ನಿಜವಿದ್ದ ಮಾತನ್ನೇ ಹೇಳುತ್ತಲಿದ್ದೇನೆ.

+ ಬೇರೆ ಪುನರುಲ್ಲೇಖಗಳು: ಸಭಾ—೭೭/೨೪. ಉದ್ಯೋಗ—೧೬೦/೯–೧೦, ೬೬–೬೭, ೭೦ ; ೧೬೧/೭೧ ; ೧೬೨/೨೫–೨೭ : ೧೬೩/೩೨–೩೪. ದ್ರೋಣ—೧೨೩/೩೬ ; ೧೩೭/೩೧–೩೨ ; ೧೭೮/೪೦. ಶಲ್ಯ—೫/೧೪.

## ೩೧. ಭೀಷ್ಮ

ಆದಿ/೧೦೦

**೧**

### ರಾಜತ್ಯಾಗ ಹಾಗೂ ಆಮರಣ ಬ್ರಹ್ಮಚರ್ಯೆ

ಮೀನುಗಾರ ಹೆಣ್ಣನ್ನು ಮದುವೆಯಾಗಬೇಕೆಂಬ ಶಂತನುವಿನ ಬಯಕೆ, ಮೀನುಗಾರನ ಶರತ್ತು, ಅದರಿಂದಾಗಿ ಶಂತನುವಿನಲ್ಲಿ ಹುಟ್ಟಿಕೊಂಡ ವಿಷಣ್ಣತೆಗಳನ್ನೆಲ್ಲ ಕುರಿತು ವೃದ್ಧ ಅಮಾತ್ಯನಿಂದ ದೇವವ್ರತನಿಗೆ ತಿಳಿದುಬಂದಿತು. ಅವನು ತನ್ನ ತಂದೆಗಾಗಿ ಕನ್ಯೆಯನ್ನು

ಕೇಳಲೆಂದು ಮೀನುಗಾರನಲ್ಲಿಗೆ ಹೋದನು. ಮೀನುಗಾರನು ಇವನನ್ನು ಸರಿಯಾಗಿ ಬರ ಮಾಡಿಕೊಂಡನು. ಅವನು ಮದುವೆಗೆ ಮುಖ್ಯವಾಗಿ ಇರುವ ತೊಂದರೆಯನ್ನು ಹೇಳಿದನು. ರಾಜ್ಯವನ್ನು ಆಳುವಲ್ಲಿ ಇಬ್ಬರ ನಡುವೆ ಬಲತ್ವದ ತೊಂದರೆಯಿರಲು ಸಾಧ್ಯ. ಇಂಥ ಹೊತ್ತು ಬಾರದಿರಲಿ ಎಂದು ತಾನು ಭಾವಿಸುತ್ತಿರುವುದಾಗಿ ಅವನು ಹೇಳಿದನು. ಆಗ ದೇವವ್ರತನು ಎಲ್ಲರೆದುರಲ್ಲೇ ಹೀಗೆಂದನು—

ಇದಂ ಮೇ ವ್ರತಮಾದತ್ಸ್ವ ಸತ್ಯಂ ಸತ್ಯವತಾಂ ವರ ।
ನೈವ ಜಾತೋ ನ ವಾ ಜಾತ ಈದೃಶಂ ವಕ್ತುಮುತ್ಸಹೇತ್ ॥ ೮೬ ॥
ಏವಮೇತತ್ ಕರಿಷ್ಯಾಮಿ ಯಥಾ ತ್ವಮನುಭಾಷಸೇ ।
ಯೋಽಸ್ಯಾಂ ಜನಿಷ್ಯತೇ ಪುತ್ರಃ ಸ ನೋ ರಾಜಾ ಭವಿಷ್ಯತಿ ॥ ೮೭ ॥

ನನ್ನ ಈ ಸತ್ಯಪ್ರತಿಜ್ಞೆಯನ್ನು ಕೇಳು. ನಾನು ಈಗ ಹೇಳುತ್ತಿರುವಂತೆ ಹಿಂದಕ್ಕೆ ಯಾರೂ ಹೇಳಲಿಲ್ಲ. ಮುಂದೆಯೂ ಯಾರೂ ಹೇಳಲಿಕ್ಕಿಲ್ಲ. ಎಲ್ಲವೂ ನಿನ್ನ ಇಚ್ಛೆಯಂತೆಯೇ ಆಗಲಿದೆ. (ನೀನು ನಿಶ್ಚಿಂತೆಯಾಗಿರು.) ನಿನ್ನ ಮಗಳಿಗಾಗುವ ಮಗನೇ ನನ್ನ ತಂದೆಯ ತರುವಾಯ ರಾಜನಾಗಲಿರುವನು.

ದೇವವ್ರತನ ಮಾತು ಕೇಳಿ ಮೀನುಗಾರ ತನ್ನ ಮೆಚ್ಚಿಕೆಯನ್ನು ಸೂಚಿಸಿದನು. ಆದರೆ ಇನ್ನೊಂದು ಸಮಸ್ಯೆ ಅವನನ್ನು ಕಾಡುತ್ತಿತ್ತು. ಅದೆಂದರೆ, ದೇವವ್ರತನು ರಾಜ್ಯದಮೇಲೆ ಹಕ್ಕನ್ನು ಬಿಟ್ಟರೂ ಅವನ ಮಕ್ಕಳು ಈ ಹಕ್ಕನ್ನು ಹೇಳಿದರೆ ತನ್ನ ಮೊಮ್ಮಗನ ಹಕ್ಕು ಸಂಕಟಕ್ಕೆ ಸಿಲುಕೀತೆಂಬ ಭಯ. ಅವನು ಅದನ್ನೂ ಹೇಳಿಬಿಟ್ಟನು. ಆಗ ದೇವವ್ರತನು ಮೊದಲ ಪಣಕ್ಕೆ ಪೂರಕವಾದ ಇನ್ನೊಂದು ಪಣವನ್ನೂ ತೊಟ್ಟನು. ಅವನು ಎಲ್ಲರನ್ನೂ ಉದ್ದೇಶಿಸಿ ಹೀಗೆಂದನು—

ರಾಜ್ಯಂ ತಾವತ್ ಪೂರ್ವಮೇವ ಮಯಾ ತ್ಯಕ್ತಂ ನರಾಧಿಪಾಃ ।
ಅಪತ್ಯಹೇತೋರಪಿ ಚ ಕರಿಷ್ಯೇಽದ್ಯ ವಿನಿಶ್ಚಯಮ್ ॥ ೯೫ ॥
ಅದ್ಯಪ್ರಭೃತಿ ಮೇ ದಾಶ ಬ್ರಹ್ಮಚರ್ಯಂ ಭವಿಷ್ಯತಿ ।
ಅಪುತ್ರಸ್ಯಾಪಿ ಮೇ ಲೋಕಾ ಭವಿಷ್ಯಂತ್ಯಕ್ಷಯಾ ದಿವಿ ॥ ೯೬ ॥

ಈ ಮೊದಲೇ ರಾಜ್ಯ(ಸುಖ)ದ ಮೇಲೆ ನೀರು ಬಿಟ್ಟಿರುವೆ. ಆದರೆ ಅಷ್ಟೇ ಸಾಲದೆಂದು ಈಗ ಮಕ್ಕಳನ್ನು ಪಡೆಯುವುದನ್ನು ಕುರಿತು ಕೂಡ ನಾನು ನಿರ್ಧರಿಸಲಿದ್ದೇನೆ. ನಾನು ಇಂದಿನಿಂದ ಬ್ರಹ್ಮಚರ್ಯವ್ರತವನ್ನು ಪಾಲಿಸಲಿದ್ದೇನೆ. ನಾನು ನಿಪುತ್ರಕನಾದರೂ ಸ್ವರ್ಗದಲ್ಲಿ ನನಗೆ ಅಕ್ಷಯಲೋಕವು ದೊರಕುವಲ್ಲಿ ಮಾತ್ರ ತೊಂದರೆಯಿರದು.

ಭೀಷ್ಮನ ಪಣದ ಮಾತುಗಳನ್ನು ಕೇಳಿ ಮೀನುಗಾರನು ಸತ್ಯವತಿ–ಶಂತನು ಇವರ ಮದುವೆಗೆ ಒಪ್ಪಿಗೆಯನ್ನು ನೀಡಿದನು.

ಉದ್ಯೋಗ/೧೪೭

ಶ್ರೀಕೃಷ್ಣನ ಮಧ್ಯಸ್ಥಿಕೆಯ ಕಾಲಕ್ಕೆ ಭೀಷ್ಮನು ದುರ್ಯೋಧನನಿಗೆ ಮಾಡಿದ ಉಪದೇಶದಲ್ಲಿ ಈ ಪ್ರತಿಜ್ಞೆಯ ಉಲ್ಲೇಖವಿದೆ. ಭೀಷ್ಮ ಹೀಗನ್ನುತ್ತಾನೆ—

ಪ್ರತಿಜ್ಞಾಂ ದುಷ್ಕರಾಂ ಕೃತ್ವಾ ಪಿತುರರ್ಥೇ ಕುಲಸ್ಯ ಚ ।
ಅರಾಜಾ ಚೋರ್ಧ್ವರೇತಾಶ್ಚ ಯಥಾ ಸುವಿದಿತಂ ತವ ।
ಪ್ರತೀತೋ ನಿವಸಾಮ್ಯೇಷ ಪ್ರತಿಜ್ಞಾಮನುಪಾಲಯನ್ ॥ ೨೦ ॥

ತಂದೆಯ ಮನದಲ್ಲಿದ್ದ ಸಂಗತಿಯನ್ನರಿತು ತಂದೆ ಹಾಗೂ ಕುಲದ ಕಲ್ಯಾಣಕ್ಕಾಗಿ ನಾನು ರಾಜ್ಯ ಹಾಗೂ ಸ್ತ್ರೀಸುಖಗಳನ್ನು ಬಿಟ್ಟುಕೊಡುವೆನೆಂದು ದುಷ್ಕರವಾದ ಪಣವನ್ನು ತೊಟ್ಟಿದ್ದೇನೆ. ಬಲುಸಂತೋಷದಿಂದಲೇ ನಾನು ಈ ಪ್ರತಿಜ್ಞೆಯನ್ನು ಪಾಲಿಸುತ್ತಲಿದ್ದೇನೆ.

ದುರ್ದೈವದಿಂದಾಗಿ ರಾಜ್ಯವನ್ನು ಸ್ವೀಕರಿಸುವುದು, ಅಂಬಿಕೆ–ಅಂಬಾಲಿಕೆಯರೊಂದಿಗೆ ನಿಯೋಗವನ್ನು ಕೈಕೊಂಡು ಗಂಡುಮಗುವನ್ನು ಹುಟ್ಟಿಸುವ ಹೊತ್ತು ಬಂದಾಗ ಅವನು ಸತ್ಯವತಿಯ ಕೋರಿಕೆಯನ್ನು ಮನ್ನಿಸಲಿಲ್ಲ.

(ಉದ್ಯೋಗ—೧೪೭/೩೨-೩೫)

+ ಪುನರುಲ್ಲೇಖ : ಉದ್ಯೋಗ—೧೭೩/೫.

ಉದ್ಯೋಗ/೧೯೨

೨

## ಶಿಖಂಡಿಯನ್ನು ಕೊಲ್ಲಲು ಒಪ್ಪದಿರುವುದು

ಸೋಮಕರು ಹಾಗು ಪಾಂಚಾಲರನ್ನು ಕೊಲ್ಲುವ ಪಣತೊಟ್ಟು ಕೂಡ ಶಿಖಂಡಿಯೊಂದಿಗೆ ಯುದ್ಧವೇಕಿಲ್ಲ ?—ಎಂದು ದುರ್ಯೋಧನನು ಭೀಷ್ಮನನ್ನು ಪ್ರಶ್ನಿಸಿದನು. ಅದಕ್ಕವನು ಅಂಬೋಪಾಖ್ಯಾನವನ್ನು ಹೇಳಿದನು. ಕಾಶಿರಾಜನ ಮಗಳು ಅಂಬೆ ದ್ರುಪದನ ಹೊಟ್ಟೆಯಲ್ಲಿ ಶಿಖಂಡಿಯಾಗಿ ಹುಟ್ಟಿಬಂದುದು ಭೀಷ್ಮನಿಗೆ ತಿಳಿದಿತ್ತು. ಈ ಸಂದರ್ಭದಲ್ಲಿ ಅವನು ತನ್ನ ಪ್ರತಿಜ್ಞೆಯನ್ನು ಈ ರೀತಿಯಾಗಿ ಹೇಳಿದನು—

ವ್ರತಮೇತನ್ಮಮ ಸದಾ ಪೃಥಿವ್ಯಾಮಪಿ ವಿಶ್ರುತಮ್ ।
ಸ್ತ್ರಿಯಾಂ ಸ್ತ್ರೀಪೂರ್ವಕೇ ಚೈವ ಸ್ತ್ರೀನಾಮ್ನಿ ಸ್ತ್ರೀಸರೂಪಿಣಿ ॥ ೬೬ ॥
ನ ಮುಂಚೇಯಮಹಂ ಬಾಣಮಿತಿ ಕೌರವನಂದನ ।
ನ ಹನ್ಯಾಮಹಮೇತೇನ ಕಾರಣೇನ ಶಿಖಂಡಿನಮ್ ॥ ೬೭ ॥
ಏತತ್ ತತ್ತ್ವಮಹಂ ವೇದ ಜನ್ಮ ತಾತ ಶಿಖಂಡಿನಃ ।
ತತೋ ನೈನಂ ಹನಿಷ್ಯಾಮಿ ಸಮರೇಷ್ವಾತತಾಯಿನಮ್ ॥ ೬೮ ॥

ಹೆಣ್ಣು, ಹಿಂದೆ ಹೆಣ್ಣಾಗಿದ್ದು ತರುವಾಯದಲ್ಲಿ ಗಂಡಸುತನವನ್ನು ಪಡೆದ, ಹೆಣ್ಣಿನ ಹೆಸರಿದ್ದ ಹಾಗೂ ಹೆಣ್ಣಿನಂತೆ ಕಾಣುವ ವ್ಯಕ್ತಿ ಯಾರೇ ಇದ್ದರೂ ಅವನ ಮೇಲೆ ಬಾಣಗಳನ್ನೆಸೆಯುವುದು ನಿಷಿದ್ಧವಾದುದೆಂದು ಬಗೆಯುತ್ತೇನೆ. ಭೂಮಿಯ ಮೇಲೆ ವಾಸವಾಗಿರುವವರೆಲ್ಲರೂ ನನ್ನ ಈ ಪಣವನ್ನು ಬಲ್ಲರು. ಶಿಖಂಡಿಯ ಪೂರ್ವವೃತ್ತಾಂತ ನನಗೆ ತಿಳಿದಿರುವ ಕಾರಣ ನಾನು ಅವನೊಂದಿಗೆ ಕಾದಾಟಕ್ಕೆ ಇಳಿಯಲಾರೆ. ಯುದ್ಧದ ಕಾಲಕ್ಕೆ ಅವನು ಆರ್ಭಟಿಸುತ್ತ ನನ್ನ ಮೇಲೆ ಏರಿಬಂದರೂ ನನಗೆ ಅವನು ಅವಧ್ಯನೇ ಸರಿ.

ಅವನು ಕಾಳಗಕ್ಕಾಗಿ ಸನ್ನದ್ಧನಾಗಿ ನನ್ನೆದುರು ನಿಂತರೂ ನಾನು ಅವನನ್ನು ಕೊಲ್ಲಲಾರೆ. ಏಕೆಂದರೆ ನನ್ನ ಕೈಯಿಂದ ಹೆಣ್ಣಿನ ಕೊಲೆ ಆದರೆ ನಾನು ಸಜ್ಜನರ ನಿಂದೆಗೆ ಗುರಿಯಾಗುವೆನು.

ಉದ್ಯೋಗ/೧೯೪

೩

## ಪಾಂಡವರ ಸಂಹಾರ

ದುರ್ಯೋಧನನು ಭೀಷ್ಮ, ದ್ರೋಣ ಮೊದಲಾದ ವೀರರನ್ನು ಅವರು ಪಾಂಡವ ವೀರರನ್ನು ಎಷ್ಟು ಕಾಲಾವಧಿಯಲ್ಲಿ ಸಂಹಾರಮಾಡಬಲ್ಲಿರೆಂದು ಕೇಳಿದನು. ಅದಕ್ಕೆ ಭೀಷ್ಮನು ದಿನಕ್ಕೆ ಹತ್ತು ಸಾವಿರ ಜನ ಯೋದ್ಧರು, ಒಂದು ಸಾವಿರ ರಥಿಗಳು ಎಂಬ ಈ ಲೆಕ್ಕದಂತೆ ತಗಲುವ ಅವಧಿ ಇಲ್ಲವೆ ದೊಡ್ಡ ಅಸ್ತ್ರಗಳನ್ನು ಬಳಸಿದರೆ ಒಂದು ತಿಂಗಳು ಎಂದು (ಉದ್ಯೋಗಪರ್ವ—೧೯೩/೯-೧೪) ಹೇಳಿದನು. ಇಲ್ಲಿ 'ಪ್ರತಿಜ್ಞೆ'ಯೆಂಬ ಪದವನ್ನು ಬಳಸಲಾಗಿಲ್ಲ. ಆದರೆ,

ಮಹಾಸೇನೇತಿ ಚ ತೇನೋಕ್ತೋ ಧಾರ್ತರಾಷ್ಟ್ರಃ ಸುದುರ್ಮತಿಃ ।
ತಾವತಾ ಚಾಪಿ ಕಾಲೇನ ದ್ರೋಣೋಽಪಿ ಪ್ರತಿಜಜ್ಞಿವಾನ್ ॥ ೪ ॥

ಯುಧಿಷ್ಠಿರನು ಇದನ್ನು ಕುರಿತು 'ಪ್ರತಿಜ್ಞೆ' ಎಂದು ಉಳಿದ ಪಾಂಡವರಿಗೆಲ್ಲ ಹೇಳುತ್ತಾನೆ.

ಭೀಷ್ಮ/೫೮

ಪಾಂಡವರಿಂದ ಕೌರವರ ದೊಡ್ಡ ಪ್ರಮಾಣದ ಹಾನಿ ನಡೆದುದನ್ನು ಕಂಡು ದುರ್ಯೋಧನ ಕೆರಳಿ ಕೆಂಡವಾದನು. ಅವನು ಭೀಷ್ಮನನ್ನು 'ಪಾಂಡವರ ಹೊಗಳುಭಟ್ಟ'ನೆಂದು ದೂರಿ ಅವನನ್ನು ಚುಚ್ಚುನುಡಿಗಳಿಂದ ಇರಿದನು. ದುರ್ಯೋಧನನ ಈ ನುಡಿ ಕೇಳಿ ಭೀಷ್ಮನಿಗೂ ಕೆರಳಿತು. ಮೊದಲಿನಿಂದಲೇ ಭೀಷ್ಮನು ಇಂದ್ರನಿಂದ ಹಿಡಿದು ದೇವತೆಗಳೆಲ್ಲರಿಗೂ ಪಾಂಡವರನ್ನು ಸೋಲಿಸುವುದು ಹೇಗೆ ಅಸಾಧ್ಯವೆಂಬ ಮಾತನ್ನು ದುರ್ಯೋಧನನಿಗೆ ಹೇಳುತ್ತಲೇ ಬಂದಿದ್ದನು. ಇಷ್ಟೆಲ್ಲ ಇದ್ದು, ತಾನು ಮುಪ್ಪಿನವನಾಗಿದ್ದೂ ಕೂಡ ಈ ದಿನ ಕೌರವರ ಹಿತಕ್ಕಾಗಿ ಏನೆಲ್ಲ ಮಾಡಲು ಸಾಧ್ಯವೋ ಅದನ್ನು ತಾನು ಮಾಡುವುದಾಗಿ ಪಣ ತೊಟ್ಟನು—

ಅದ್ಯ ಪಾಂಡುಸುತಾನೇಕಃ ಸಸೈನ್ಯಾನ್ ಸಹ ಬಂಧುಭಿಃ ।
ಸೋಽಹಂ ನಿವಾರಯಿಷ್ಯಾಮಿ ಸರ್ವಲೋಕಸ್ಯ ಪಶ್ಯತಃ ॥ ೪೪ ॥

ಎಲ್ಲರ ಕಣ್ಣೆದುರಿನಲ್ಲಿಯೇ ನಾನು ಒಬ್ಬನೇ ಪಾಂಡವರನ್ನು ಅವರ ಸೈನ್ಯದೊಂದಿಗೆ ಸದೆಬಡಿಯುವೆನು.

+ ಪುನರುಲ್ಲೇಖ : ಭೀಷ್ಮ—೧೦೯/೮, ೨೬-೨೭.

## ೩೨. ಯುಧಿಷ್ಠಿರ

ವನ/೨೫

೧

### ವನವಾಸ ಮುಗಿದ ಬಳಿಕ ರಾಜ್ಯ-ಪ್ರಾಪ್ತಿ

ಅನಂದ್ಯೂತದ ಕಾಲಕ್ಕೆ ಆಟವನ್ನು ಆರಂಭಿಸುವ ಮುನ್ನ ಶಕುನಿಯು ಜೂಜಿನ ಶರತ್ತು ಗಳನ್ನು ತಿಳಿಸಿ ಹೇಳಿದನು (ಸಭಾ—೭೪/೯-೧೪). ಈ ಶರತ್ತುಗಳು ಒಪ್ಪಿಗೆಯಾಗಿದ್ದರೇನೆ ಜೂಜಾಟಕ್ಕೆ ಬನ್ನಿ–ಎಂದಿದ್ದನು. ಆಗ ಯುಧಿಷ್ಠಿರನು, 'ಆಹುತೇ ನ ನಿವರ್ತೇಯಮ್ ।' ಎಂದು ನುಡಿದು ತನ್ನ ಒಪ್ಪಿಗೆಯನ್ನು ನೀಡಿದನು. (ಇದನ್ನೇ ಪಣವೆಂದು ತಿಳಿಯು ಲಾಗುತ್ತದೆ.)

ಮಾರ್ಕಂಡೇಯನು ದ್ವೈತವನದಲ್ಲಿದ್ದ ಪಾಂಡವರ ಬಳಿಗೆ ಬಂದಾಗ ಈ ಪ್ರತಿಜ್ಞೆಯನ್ನು ಉಲ್ಲೇಖಿಸಿದ್ದಾನೆ.

> ಯಥಾಪ್ರತಿಜ್ಞಂ ಚ ಮಹಾನುಭಾವ ಕೃಚ್ಛ್ರಂ ವನೇ ವಾಸಮಿಮಂ ನಿರುಷ್ಯ ।
> ತತಃ ಶ್ರಿಯಂ ತೇಜಸಾ ತೇನ ದೀಪ್ತಾಮಾದಾಸ್ಯಸೇ ಪಾರ್ಥಿವ ಕೌರವೇಭ್ಯಃ॥ ೧೮ ॥

ಎಲೈ ಯುಧಿಷ್ಠಿರನೇ! ವನವಾಸದ ಈ ಕಷ್ಟದ ಕಾಲವನ್ನು ನಿನ್ನ ಪ್ರತಿಜ್ಞೆಯಂತೆ ಕಳೆದು ಕೈಬಿಟ್ಟುಹೋದ ರಾಜಲಕ್ಷ್ಮಿಯನ್ನು ಮತ್ತೆ ಕೌರವರಿಂದ ಪಡೆಯುವೆ.

+ ಬೇರೆ ಪುನರುಲ್ಲೇಖಗಳು : ವನ—೨೭/೨೪ ; ೩೪/೧೦-೧೧ ; ೫೧/೩೩–೩೪ ; ೧೭೬/೭ ; ೧೮೩/೨೧, ೩೫, ೩೯ ; ೨೫೬/೧೪. ವಿರಾಟ—೫/೧೨. ಉದ್ಯೋಗ—೧/೧೦, ೨೦ ; ೩/೮. ಶಾಂತಿ—೧೪೮/೩೬-೩೭.

ವನ/೩೪

೨

### ಧರ್ಮದ ಶ್ರೇಷ್ಠತೆ

ದ್ರೌಪದಿಯ ಮಾತುಗಳಿಂದ ತುಂಬ ಕೆರಳಿದ ಭೀಮನು ಯುಧಿಷ್ಠಿರನಿಗೆ ಬಲು ಕಠೋರವಾಗಿ ಮಾತನಾಡಿದನು. ಅವನು ಭೀಮನ ಮಾತುಗಳನ್ನು ಕೇಳಿಕೊಂಡು ಕೆರಳದೆ, ಸರಿಯಾದ ಸಮಯಕ್ಕಾಗಿ ಕಾಯಲು ಹೇಳಿದನು. ಮುಂದೆ ತಾನು ಈ ರೀತಿ ಪಣ ತೊಟ್ಟನು—

> ಮಮ ಪ್ರತಿಜ್ಞಾಂ ಚ ನಿಬೋಧ ಸತ್ಯಾಂ ವೃಣೇ ಧರ್ಮಮಮೃತಾಜ್ಜೀವಿತಾಚ್ಚ।
> ರಾಜ್ಯಂ ಚ ಪುತ್ರಾಶ್ಚ ಯಶೋ ಧನಂ ಚ ಸರ್ವಂ ನ ಸತ್ಯಸ್ಯ
> ಕಲಾಮುಪೈತಿ ॥ ೨೨ ॥

ಜೀವನ ಹಾಗೂ ಅಮರತ್ವಗಳಿಗಿಂತಲೂ ಧರ್ಮವು ಶ್ರೇಷ್ಠವಾದುದು. ರಾಜ್ಯಶ್ರೀ, ಮಕ್ಕಳು-ಮರಿಗಳು, ಕೀರ್ತಿ, ಸಂಪತ್ತುಗಳು ಸತ್ಯದ ಒಂದು ಬದಿಗೆ ಕೂಡ ಸಾಲದವುಗಳು.

ಶಲ್ಯ/೧೬

೩

## ಶಲ್ಯವಧೆ

ಶಲ್ಯ ತನ್ನ ಅತುಲವಾದ ಪರಾಕ್ರಮದಿಂದ ಪಾಂಡವರ ಸೇನೆಗೆ ಮಣ್ಣುಮುಕ್ಕಿಸಿದನು. ಇದರಿಂದಾಗಿ ಯುಧಿಷ್ಠಿರ ಬಲು ಸಿಟ್ಟಿಗೆದ್ದನು. ಅವನು ತನ್ನ ಕಡೆಯ ವೀರರನ್ನೆಲ್ಲ ಒಂದೆಡೆ ಕರೆದನು. ಅವರಿಗೆ ಈವರೆಗೆಂದರೆ ಕೌರವವೀರರೆಲ್ಲ ಮರಣಹೊಂದಿದ್ದು ಶಲ್ಯನೊಬ್ಬ ಮಾತ್ರ ಉಳಿದಿದ್ದಾನೆ. 'ಅವನು ನನ್ನ ಪಾಲಿಗೆ. ನೀವೆಲ್ಲ ನಿಮ್ಮ ಕರ್ತವ್ಯಗಳನ್ನು ಅಚ್ಚುಕಟ್ಟಾಗಿ ನೆರವೇರಿಸಿರುವಿರಿ. ಈಗ ನನಗೆ ನನ್ನದನ್ನು ಮಾಡಲು ಕೊಡಿ' ಎಂದನು.

ಜಯೋ ವಾಸ್ತು ವಧೋ ವಾಸ್ತು ಕೃತಬುದ್ಧಿರ್ಮಹಾರಥಃ ॥ ೧೫ ॥

ಈ ದಿನ ತನಗೆ ಒಂದಾದರೂ ಜಯ ಲಭಿಸೀತು, ಇಲ್ಲವಾದರೆ ತನ್ನ ವಧೆಯಾದರೂ ಆದೀತೆಂದು ಆತ ನಿರ್ಧರಿಸಿದನು.

ಯುಧಿಷ್ಠಿರನು ನಕುಲಸಹದೇವರಿಗೆ ತನ್ನ ರಥವನ್ನು ಕಾಯುವ ಹೊಣೆಯನ್ನು ಒಪ್ಪಿಸಿ ಅವರು ತಮ್ಮ ಸೋದರಮಾವನೊಂದಿಗೆ ಚೆನ್ನಾಗಿ ಹೋರಾಡಬೇಕೆಂದು ಹೇಳಿ ತನ್ನ ನಿರ್ಧಾರವನ್ನು ಮತ್ತೆ ಉಚ್ಚರಿಸಿದನು.

ಮಾಂ ವಾ ಶಲ್ಯೋ ರಣೇ ಹಂತಾ ತಂ ವಾಹಂ ಭದ್ರಮಸ್ತು ವಃ ॥ ೨೦ ॥
ಇತಿ ಸತ್ಯಾಮಿಮಾಂ ವಾಣೀಂ ಲೋಕವೀರಾ ನಿಬೋಧತ ॥ ೨೨ ॥

ಈ ಯುದ್ಧದಲ್ಲಿ ಶಲ್ಯನಾದರೂ ನನ್ನನ್ನು ಕೊಲ್ಲುವನು ಇಲ್ಲವೆ ನಾನಾದರೂ ಅವನನ್ನು. ನಾನು ನಿಮ್ಮೆಲ್ಲರಿಗೆ ಕಲ್ಯಾಣವನ್ನು ಬಯಸುತ್ತೇನೆ. ವೀರರೆಲ್ಲರೂ ನನ್ನ ಈ ಸತ್ಯವಚನವನ್ನು ಆಲಿಸಬೇಕು.

+ ಯುಧಿಷ್ಠಿರನ ಮಾತುಗಳು ಪಣದಂತೆಯೇ ಇವೆ.

## ೩೩. ರಾಜಕುಮಾರ

ದ್ರೋಣ/೩೪

ದ್ರೋಣನು ಚಕ್ರವ್ಯೂಹವನ್ನು ರಚಿಸಿದನು. ಗಾಲಿಯ ಒಂದೊಂದು ಹಲ್ಲಿನ ಸ್ಥಾನದಲ್ಲಿ ಒಬ್ಬೊಬ್ಬ ರಾಜಕುವರನನ್ನು ನೇಮಿಸಿದನು. ಅಲ್ಲಿ ಅರಸುಗುವರರ ಒಂದು ದೊಡ್ಡ ಸಮುದಾಯವೇ ಕಲೆತಿತ್ತು.

ಕೃತಾಭಿಸಮಯಾಃ ಸರ್ವೇ ಸುವರ್ಣವಿಕೃತಧ್ವಜಾಃ ।
ರಕ್ತಾಂಬರಧರಾಃ ಸರ್ವೇ ಸರ್ವೇ ರಕ್ತವಿಭೂಷಣಾಃ ॥ ೧೫ ॥

ಅವರೆಲ್ಲರೂ ಪಣತೊಟ್ಟಿದ್ದರು. ಅವರ ಪತಾಕೆಗಳು ಚಿನ್ನದಿಂದ ಕೂಡಿದವುಗಳಾಗಿದ್ದವು. ಅವರು ಉಟ್ಟ ಬಟ್ಟೆಗಳು ಕೆಂಬಣ್ಣದವಲ್ಲದೆ ತೊಟ್ಟ ಒಡವೆಗಳೂ ಕೆಂಬಣ್ಣದವು ಆಗಿದ್ದವು.

+ ಅರಸುಗುವರರದು ತೊಟ್ಟ ಪಣ ಏನೆಂಬುದರ ಖಚಿತವಾದ ಉಲ್ಲೇಖವಿಲ್ಲ. ಜೀವ ದಿಂದಿರುವವರೆಗೂ ಹೋರಾಡುವೆವೆಂಬ ಪಣ ಅದಾಗಿರಲು ಸಾಕು.

ಪ್ರತಿಜ್ಞೆಯನ್ನು ಕೈಕೊಂಡ ಒಂದೇ ಒಂದು ಉಲ್ಲೇಖ ಮಾತ್ರವಿದೆ.

+ ಹಿಂದಿಯ ಅನುವಾದ: ಉನ್ ಸಬನೇ ಪ್ರಾಣೋಂಕೇ ರಹತೇ ಯುದ್ಧಸೇ ವಿಮುಖ ನ ಹೋನೇ ಕೀ ಪ್ರತಿಜ್ಞಾ ಕರ ಲೀ ಥೀ ।

## ೩೪. ರುಕ್ಮಿ ಉದ್ಯೋಗ/೧೫೮

ಶ್ರೀಕೃಷ್ಣನು ರುಕ್ಮಿಣಿಯನ್ನು ಮದುವೆಯ ಮಂಟಪದಿಂದ ಓಡಿಸಿಕೊಂಡು ಹೋದನು. ಇದರಿಂದಾಗಿ ರುಕ್ಮಿ ತುಂಬ ಕೆರಳಿದನು. ಅವನಿಗೆ ತನ್ನ ಸಾಮರ್ಥ್ಯದ ಬಗ್ಗೆ ಬಲು ಹೆಮ್ಮೆಯಿತ್ತು. ಅವನು ಹೀಗೆಂದು ಪಣತೊಟ್ಟನು—

ಕೃತ್ವಾ ಪ್ರತಿಜ್ಞಾಂ ನಾಹತ್ವಾ ನಿವರ್ತಿಷ್ಯೇ ಜನಾರ್ದನಮ್ ॥ ೧೧ ॥

'ನಾನು ಕೃಷ್ಣನನ್ನು ಕೊಲ್ಲದೆ ಹಿಂತಿರುಗೆನು'—ಎಂದು ಅವನು ಭೀಷಣಪ್ರತಿಜ್ಞೆಯನ್ನು ಮಾಡಿದನು (ಮತ್ತೆ ಚತುರಂಗಸೇನೆಯೊಂದಿಗೆ ಅವನ ಮೇಲೇರಿಹೋದನು).

## ೩೫. ರುರು ಆದಿ/೧೦

ರುರುವಿನ ಮಡದಿ ಪ್ರಮದ್ವರೆ. ಅವನು ಅವಳನ್ನು ತುಂಬ ಪ್ರೀತಿಸುತ್ತಿದ್ದನು. ಅವಳು ಹಾವು ಕಡಿದು ಸತ್ತಳು. ಹೀಗಾಗಿ ಅವನು ಹಾವುಗಳೆಂದರೆ ಕಿಡಿ ಕಾರುತ್ತಿದನು. ಕಂಡ ಹಾವನ್ನು ಚಚ್ಚಿಹಾಕುತ್ತಿದ್ದನು. ಹೀಗೆಯೇ ಒಂದು ಸಲ ಕಾಡಿನಲ್ಲಿ ಅಲೆದಾಡುವಾಗ ಅವನಿಗೆ ಒಂದು ತುಂತುಭವು (ಎರೆಹುಳು) ಕಂಡಿತು. ಅವನದನ್ನು ಚಚ್ಚುವುದರಲ್ಲಿದ್ದನು. ಅಷ್ಟರಲ್ಲಿ ಅದು ಅವನಿಗೆ, 'ನಾನು ನಿನಗೆ ಅದಾವ ಅನ್ಯಾಯವನ್ನೂ ಬಗೆದಿಲ್ಲ. ಅಂದ ಬಳಿಕ ನನ್ನನ್ನೇಕೆ ಕೊಲ್ಲುವೆ ?' ಎಂದು ಕೇಳಿತು. ರುರು ಹೀಗೆಂದು ಉತ್ತರಿಸಿದನು—

ಮಮ ಪ್ರಾಣಸಮಾ ಭಾರ್ಯಾ ದಷ್ಟಾಸೀದ್ ಭುಜಗೇನ ಹ ।
ತತ್ರ ಮೇ ಸಮಯೋ ಘೋರ ಆತ್ಮನೋರಗ ವೈ ಕೃತಃ ॥ ೧ ॥
ಭುಜಂಗಂ ವೈ ಸದಾ ಹನ್ಯಾಂ ಯಂ ಯಂ ಪಶ್ಯೇಯಮಿತ್ಯುತ ।
ತತೋಽಹಂ ತ್ವಾಂ ಜಿಘಾಂಸಾಮಿ ಜೀವಿತೇನಾದ್ಯ ಮೋಕ್ಷ್ಯಸೇ ॥ ೨ ॥

'ನನ್ನ ಪ್ರಾಣಪ್ರಿಯಳಾದ ಮಡದಿಯನ್ನು ಒಂದು ಹಾವು ಕಚ್ಚಿತು. (ಅವಳು ಮರಣ ಹೊಂದಿದಳು.) ಆಗಲೇ ನಾನು ಕಂಡ ಹಾವುಗಳನ್ನೆಲ್ಲ ಕೊಲ್ಲುವ ಪಣತೊಟ್ಟೆ. ಹೀಗಾಗಿ ನಿನ್ನನ್ನೂ ಕೊಲ್ಲುತ್ತಿರುವೆ. ಇನ್ನು ನೀನು ಜೀವದಿಂದ ಇರಲಾರೆ.'

ಎರೆಹುಳು ತಾನು ನಂಜಿನದಲ್ಲವೆಂದೂ ನಿರುಪದ್ರವಿಯಾದ ತನ್ನನ್ನು ಕೊಲ್ಲಕೂಡ ದೆಂದೂ ಬೇಡಿಕೊಂಡಿತು. ಆ ಹುಳುವಿಗೆ ಹಿಂದಿನ ಜನ್ಮದಲ್ಲಿ ಶಾಪ ಸಿಕ್ಕುದನ್ನು ಕೇಳಿ ಅವನು ಅದನ್ನು ಕೊಲ್ಲಲಿಲ್ಲ. ರುರುವಿನಿಂದಾಗಿ ಆ ಎರೆಹುಳು ಶಾಪದಿಂದ ಬಿಡುಗಡೆ ಹೊಂದಿತು.

## ೩೬. ವಿಷ್ಣು ವನ/೧೧೫

ಶ್ರೀ ದತ್ತಾತ್ರೇಯನ ಕೃಪಾಪ್ರಸಾದದಿಂದಾಗಿ ಕಾರ್ತವೀರ್ಯ ಅರ್ಜುನನಿಗೆ ಒಂದು ಚಿನ್ನದ ರಥ ಸಿಕ್ಕಿತು. ತನಗೆ ದೊರೆತ ವರದಿಂದಾಗಿ ಅವನು ಬಲುಪ್ರಬಲನೆನ್ನಿಸಿದ್ದನು. ಅವನು ತನ್ನ ಸಾಮರ್ಥ್ಯವನ್ನು ತಪ್ಪುರೀತಿಯಲ್ಲಿ ಬಳಸಿ ದೇವ, ಯಕ್ಷ, ಋಷಿ ಹಾಗೂ ಉಳಿದ ಪ್ರಾಣಿಮಾತ್ರರನ್ನೂ ತುಂಬ ಹಿಂಸೆಗೀಡುಮಾಡುತ್ತಿದ್ದನು. ಹೀಗಾಗಿ ದೇವತೆಗಳೆಲ್ಲ ವಿಷ್ಣುವಿಗೆ ಮೊರೆಹೊಕ್ಕರು. ಕಾರ್ತವೀರ್ಯನನ್ನು ಸದೆಬಡಿಯುವಂತೆ ಅವನಿಗೆ ಬೇಡಿಕೊಂಡರು. ಒಂದು ಸಲವಂತೂ ಇಂದ್ರನು ಶಚಿಯೊಂದಿಗೆ ಪ್ರಣಯಕೇಳಿಯಲ್ಲಿ ನಿರತನಾದಾಗಲೇ ಈತನು ಅವನ ಮೇಲೆ ಏರಿಹೋದನು. ಆಗ ವಿಷ್ಣುವು ಇಂದ್ರನೊಂದಿಗೆ ಚರ್ಚಿಸಿದನು. ಇಂದ್ರನು—

> ಯದ್ ತದ್ ಭೂತಹಿತಂ ಕಾರ್ಯಂ ಸುರೇಂದ್ರೇಣ ನಿವೇದಿತವ್ ।
> ಸಂಪ್ರತಿಶ್ರುತ್ಯ ತತ್ ಸರ್ವಂ ಭಗವಾಂಲ್ಲೋಕಪೂಜಿತಃ ॥ ೧೮ ॥
> ಜಗಾಮ ಬದರೀಂ ರಮ್ಯಾಂ ಸ್ವಮೇವಾಶ್ರಮಮಂಡಲಮ್ ॥ ೧೯ ॥

ಪ್ರಾಣಿಮಾತ್ರರೆಲ್ಲರ ಹಿತಕ್ಕಾಗಿ ಮಾಡಬೇಕಾದುದನ್ನೆಲ್ಲ ಅರುಹಿದ ತರುವಾಯ ವಿಷ್ಣುವು ಹಾಗೆಯೇ ಮಾಡುವುದಾಗಿ ಪಣತೊಟ್ಟನು. ಅಲ್ಲಿಂದ ತನ್ನ (ಪ್ರಿಯ) ರಮಣೀಯವಾದ ಬದರೀತೀರ್ಥದ ಆಶ್ರಮದತ್ತ ತೆರಳಿದನು.

+ ಪ್ರತಿಜ್ಞೆಯೆಂದು ಖಚಿತವಾದ ಉಲ್ಲೇಖವು ಸಂಸ್ಕೃತದಲ್ಲಿ ಇಲ್ಲ ಎಂದಬಳಿಕ ಇದನ್ನೊಂದು ಪ್ರತಿಜ್ಞೆ ಎಂದೆನ್ನಬಹುದೆ ?

## ೩೭. ಶಲ್ಯ ಕರ್ಣ/೭

ಧೃತರಾಷ್ಟ್ರನ ಕೇಳಿಕೆಯ ಮೇರೆಗೆ ಸಂಜಯನು ಅವನಿಗೆ ಕೌರವರ ಬದಿಯ ಬದುಕಿ ಉಳಿದಿರುವ ವೀರರನ್ನು ಕುರಿತು ಹೇಳುತ್ತಲಿದ್ದಾನೆ. ಆಗ ಶಲ್ಯನ ಪ್ರತಿಜ್ಞೆಯ ಪ್ರಸ್ತಾಪ ಬಂದಿದೆ—

> ಆರ್ತಾಯನಿಃ ಸಮರೇ ದುಷ್ಪ್ರಕಂಪ್ಯಃ ಸೇನಾಗ್ರಣೀಃ ಪ್ರಥಮಸ್ತಾವಕಾನಾಮ್ ।
> ಯಃ ಸ್ವಸ್ತ್ರೀಯಾನ್ ಪಾಂಡವೇಯಾನ್ ವಿಸೃಜ್ಯ ಸತ್ಯಾಂ ವಾಚಂ ತ್ವಾಂ
> ಚಿಕೀರ್ಷುಸ್ತರಸ್ವೀ ॥ ೯ ॥
> ತೇಜೋವಧಂ ಸೂತಪುತ್ರಸ್ಯ ಸಂಖ್ಯೇ ಪ್ರತಿಶ್ರುತ್ಯಾಜಾತಶತ್ರೋಃ ಪುರಸ್ತಾತ್ ।
> ದುರಾಧರ್ಷಃ ಶಕ್ರಸಮಾನವೀರ್ಯಃ ಶಲ್ಯಃ ಸ್ಥಿತೋ ಯೋದ್ಧು-
> ಕಾಮಸ್ತ್ವದರ್ಥೇ ॥ ೧೦ ॥

ಯುದ್ಧದಲ್ಲಿ ವಿಚಲಿತನಾಗದವನು, ಶೂರನಿದ್ದು ತನ್ನ ಸೈನಿಕರ ಮೊದಲ ದಂಡನಾಯಕನಾದವನು, ಕೊಟ್ಟ ಮಾತಿಗೆ ತಪ್ಪಬಾರದೆಂದು ತನ್ನ ಸೋದರಳಿಯಂದಿರಾದ ಪಾಂಡವರ ಬದಿಯನ್ನು ತೊರೆದವನು, ಹಗೆಗಳೇ ಇಲ್ಲದವನಾದ ಯುಧಿಷ್ಠಿರನೆದುರು

ತನ್ನ ಬದಿಯಿಂದ ಹೋರಾಡಲೆಂದು ಯುದ್ಧಭೂಮಿಯ ಮೇಲೆ ನಿಂತವನು, ಕರ್ಣನ ಲವಲವಿಕೆಯನ್ನು, ಶೌರ್ಯವನ್ನು ಹಾಳುಮಾಡಲೆಂದೇ ಪಣತೊಟ್ಟವನು, ಬಲಶಾಲಿ ಇಂದ್ರನಂತೆ ಶೂರನೂ ಆದ ಶಲ್ಯನು-ಋತಾಯನನ ಮಗನು—ನಮಗಾಗಿ ಹೋರಾಡಲು ಉತ್ಸುಕನಾಗಿರುವನು.

+ ಇಲ್ಲಿ ಬರಿ ಒಂದು ಉಲ್ಲೇಖ ಮಾತ್ರವಿದೆ.

## ೩೮. ಶಂಕರ ಕರ್ಣ/೩೪

ದೈತ್ಯರಲ್ಲಿ ತಮ್ಮ ಸಾಮರ್ಥ್ಯದ ಬಗೆಗೆ ಅಹಂಕಾರ ಹುಟ್ಟಿತು. ಅವರು ದೇವತೆಗಳನ್ನೆಲ್ಲ ಪೀಡಿಸಹತ್ತಿದರು. ದೇವತೆಗಳೆಲ್ಲ ಒಂದಾಗಿ ಅವರೊಂದಿಗೆ ಹೋರಾಟಕ್ಕಿಳಿದರು. ದೇವತೆಗಳಿಗೆ ಗೆಲವನ್ನು ಪಡೆಯುವುದು ಕಷ್ಟದ್ದಾಗಿ ತೋರಹತ್ತಿತು. ಅವರು ಶಂಕರನ ಬಳಿಗೆ ಹೋದರು. ತಮ್ಮನ್ನು ದೈತ್ಯರ ಹಿಂಸೆಯಿಂದ ಉಳಿಸಬೇಕು ಎಂದು ಅವನನ್ನು ಬೇಡಿಕೊಂಡರು.

ಪ್ರತಿಜ್ಞಾಯ ತತೋ ದೇವೋ ದೇವತಾನಾಂ ರಿಪುಕ್ಷಯಮ್ ॥ ೧೪೩ ॥

ಆಗ ಕಲ್ಯಾಣಪ್ರದನಾದ ಶಂಕರನು ದೇವತೆಗಳೆಲ್ಲರ ಎದುರಲ್ಲಿ ಅವರ ಶತ್ರುಗಳನ್ನು ಸಂಹರಿಸುವುದಾಗಿ ಪ್ರತಿಜ್ಞೆಯನ್ನು ಮಾಡಿದನು. (ಅವನು ಪರುಶುರಾಮನನ್ನು ಕರೆದು ಶತ್ರುಗಳನ್ನು ಸಂಹರಿಸೆಂದು ಹೇಳಿದನು.)

## ೩೯. ಶಿಖಂಡಿ ಭೀಷ್ಮ/೮೫

ಭೀಷ್ಮನು ಯುದ್ಧದಲ್ಲಿ ಶಿಖಂಡಿಯ ಬಿಲ್ಲನ್ನು ಮುರಿದುಬಿಟ್ಟನು. ಆದಕ್ಕೆ ಯುಧಿಷ್ಠಿರ ಕೆರಳಿದನು. ಅವನು ಶಿಖಂಡಿಗೆ ಪಣವನ್ನು ನೆನಪು ಮಾಡಿಕೊಟ್ಟನು. ಅವನಂದದ್ದು—

ಉಕ್ತ್ವಾ ತಥಾ ತ್ವಂ ಪಿತುರಗ್ರತೋ ಮಾಮಹಂ ಹನಿಷ್ಯಾಮಿ ಮಹಾವ್ರತಂ ತಮ್ ।
ಭೀಷ್ಮಂ ಶರೌಘೈರ್ವಿಮಲಾರ್ಕವರ್ಣೈಃ ಸತ್ಯಂ ವದಾಮೀತಿ ಕೃತಾ ಪ್ರತಿಜ್ಞಾ ॥ ೨೦ ॥
ತ್ವಯಾ ಚ ನೈನಾಂ ಸಫಲಾಂ ಕರೋಷಿ ದೇವವ್ರತಂ ಯನ್ನ ನಿಹಂಸಿ ಯುದ್ಧೇ ।
ಮಿಥ್ಯಾಪ್ರತಿಜ್ಞೋ ಭವ ಮಾತ್ರ ವೀರ ರಕ್ಷ ಸ್ವಧರ್ಮಂ ಸ್ವಕುಲಂ ಯಶಶ್ಚ ॥ ೨೧ ॥

ಎಲೈ ವೀರನೇ ! ನೀನು ತಂದೆಯ ಎದುರು ನನಗೆ, 'ನಿರ್ಮಲವಾದ ಸೂರ್ಯನಂತಹ ತೇಜಸ್ವಿಯಾದ ಬಾಣಗಳಿಂದ ಭೀಷ್ಮನನ್ನು ಕೊಲ್ಲುವೆನು. ನಾನು ಸತ್ಯವಾದುದನ್ನೇ ಹೇಳುತ್ತಲಿದ್ದೇನೆ' ಎಂದು ಪಣತೊಟ್ಟಿರುವುದಾಗಿ ಹೇಳಿದ್ದೆ. ನೀನೀಗ ಅದನ್ನು ಪೂರ್ತಿ

ಗೊಳಿಸುತ್ತಿಲ್ಲವೇಕೆ ? (ಈಗಲೂ) ನಿನ್ನ ಕೈಯಿಂದ ದೇವವ್ರತನ ಕೊಲೆಯಾಗುತ್ತಿಲ್ಲವಲ್ಲ ? ನಿನ್ನ ಪಣ ಸುಳ್ಳಾಗಬಾರದಲ್ಲ ! ಧರ್ಮ, ಕುಲ ಹಾಗು ಯಶಸ್ಸುಗಳನ್ನು ಕಾಪಾಡು.

## ೪೦. ಶೂರಸೇನ ವನ/೩೦೩

ಒಬ್ಬ ಮಹಾಬ್ರಾಹ್ಮಣನು ಕುಂತಿಭೋಜನಲ್ಲಿ ಕೆಲವು ಕಾಲದ ವರೆಗೆ ತಂಗಿರಲೆಂದು ಬಂದಿದ್ದನು. ರಾಜನು ಅವನನ್ನು ಆದರದಿಂದ ಬರಮಾಡಿಕೊಂಡನು. ಅತಿಥಿಯ ಸೇವೆ, ಪೂಜೆಗಳ ಕೆಲಸವನ್ನೆಲ್ಲ ತನ್ನ ದತ್ತುಮಗಳಿಗೆ ಒಪ್ಪಿಸಿದನು. ಕುಂತಿಭೋಜನು ತನ್ನ ದತ್ತುಮಗಳಿಗೆ ಒಪ್ಪಿಸುವಾಗ ಅವಳು ತನಗೆ ದತ್ತುಮಗಳು ಹೇಗಾದಳೆಂಬುದನ್ನು ಹೇಳುತ್ತಾನೆ. ಅಲ್ಲಿ ಈ ಪಣದ ಉಲ್ಲೇಖವು ಬರುತ್ತದೆ. ಕುಂತಿಭೋಜ ಅವಳಿಗೆ ಹೀಗೆಂದನು—

ವೃಷ್ಣೀನಾಂ ಚ ಕುಲೇ ಜಾತಾ ಶೂರಸ್ಯ ದಯಿತಾ ಸುತಾ ।
ದತ್ತಾ ಪ್ರೀತಿಮತಾ ಮಹ್ಯಂ ಪಿತ್ರಾ ಬಾಲಾ ಪುರಾ ಸ್ವಯಮ್ ॥ ೨೩ ॥
ವಸುದೇವಸ್ಯ ಭಗಿನೀ ಸುತಾನಾಂ ಪ್ರವರಾ ಮಮ ।
ಅಗ್ರ್ಯಮಗ್ರೇ ಪ್ರತಿಜ್ಞಾಯ ತೇನಾಸಿ ದುಹಿತಾ ಮಮ ॥ ೨೪ ॥

'ಮಗಳೇ ! ನೀನು ಹುಟ್ಟಿದುದು ವೃಷ್ಣಿಕುಲದಲ್ಲಿ. ಶೂರಸೇನನ ಮುದ್ದುಮಗಳು ನೀನು. ನೀನಿನ್ನೂ ಚಿಕ್ಕವಳಿರುವಾಗಲೇ ಶೂರಸೇನನು ನಿನ್ನನ್ನು ನನಗೊಪ್ಪಿಸಿದನು. ನೀನು ವಾಸುದೇವನಿಗೆ ಅಕ್ಕ. ನನ್ನ ಮಕ್ಕಳಲ್ಲೆಲ್ಲ ಹಿರಿಯಳು. ನಿನ್ನ ಅಪ್ಪ ಶೂರಸೇನ ತನಗೆ ಹುಟ್ಟುವ ಮೊದಲ ಮಗುವನ್ನು ನನಗೆ ಕೊಡುವುದಾಗಿ ಪಣತೊಟ್ಟಿದ್ದನು. ಆ ರೀತಿಯಾಗಿ ಅವನು ನಿನ್ನನ್ನು ನನ್ನಲ್ಲಿಗೆ ಕಳಿಸಿಕೊಟ್ಟನು. ಹೀಗಾಗಿ ನೀನು ನನ್ನ ದತ್ತು ಕನ್ಯೆಯಾಗಿರುವೆ.

## ೪೧. ಶ್ರೀಕೃಷ್ಣ ವನ/೧೨

### ೧

### ದ್ರೌಪದಿಯ ದುಃಖವಿಮೋಚನೆ

ಪಾಂಡವರು ಜೂಜಾಟದಲ್ಲಿ ಸೋತರು. ವನವಾಸಕ್ಕೆ ಹೋದರು. ಶ್ರೀಕೃಷ್ಣ ಈ ವಾರ್ತೆಯನ್ನು ತಿಳಿದು ಅವರನ್ನು ಕಾಣಲೆಂದು ಅಲ್ಲಿಗೆ ಹೋದನು. ಕೌರವರು ಮಾಡಿದ ತನ್ನ ಮಾನಭಂಗವನ್ನು ಕುರಿತು ದ್ರೌಪದಿಯು ಕಣ್ಣೀರು ಸುರಿಸುತ್ತ ಅವನೆದುರು ತೋಡಿಕೊಂಡಳು. ಅದನ್ನು ಕೇಳಿ ಶ್ರೀಕೃಷ್ಣನಿಗೆ ಬಲು ಕೆಡಕೆನ್ನಿಸಿತು. ಅವಳನ್ನು ರಮಿಸುತ್ತ ಅವನು ಹೀಗೆಂದನು—

ರೋದಿಷ್ಯಂತಿ ಸ್ತ್ರಿಯೋ ಹ್ಯೇವಂ ಯೇಷಾಂ ಕ್ರುದ್ಧಾಸಿ ಭಾಮಿನಿ ।
ಬೀಭತ್ಸುಶರಸಂಛನ್ನಾಂಛೋಣಿತೌಘಪರಿಪ್ಲುತಾನ್ ॥ ೧೨೮ ॥
ನಿಹತಾನ್ ವಲ್ಲಭಾನ್ ವೀಕ್ಷ್ಯ ಶಯಾನಾನ್ ವಸುಧಾತಲೇ ।
ಯತ್ ಸಮರ್ಥಂ ಪಾಂಡವಾನಾಂ ತತ್ ಕರಿಷ್ಯಾಮಿ ಮಾ ಶುಚಃ ॥ ೧೨೯ ॥

ಸತ್ಯಂ ತೇ ಪ್ರತಿಜಾನಾಮಿ ರಾಜ್ಞಾಂ ರಾಜ್ಞೀ ಭವಿಷ್ಯಸಿ ।
ಪತೇದ್ ದ್ಯೌರ್ಹಿಮವಾಂಛೀರ್ಯೇತ್ ಪೃಥಿವೀ ಶಕಲೀಭವೇತ್ ॥ ೧೩೦ ॥
ಶುಷ್ಯೇತ್ ತೋಯನಿಧಿಃ ಕೃಷ್ಣೇ ನ ಮೇ ಮೋಘಂ ವಚೋ
ಭವೇತ್ ॥ ೧೩೧ ॥

'ಅರ್ಜುನನ ಬಾಣಗಳಿಂದ ಛಿನ್ನವಿಚ್ಛಿನ್ನವಾಗಿ, ನೆತ್ತರಿನಲ್ಲಿ ನೆನೆದುಬಿದ್ದಿರುವ ಹೆಣಗಳನ್ನು ಕಂಡು ಆ ವೀರರ ಪ್ರಿಯತಮೆಯರು ನಿನ್ನಂತೆಯೇ ದೊಡ್ಡ ದನಿಯಲ್ಲಿ ಅಳುವರು. ನಿನಗಿಂದು ಆ ಯೋದ್ಧರ ಮೇಲೆ ಎಲ್ಲಿಲ್ಲದ ಕೋಪ. ಪಾಂಡವರಿಗೆ ಒಳ್ಳೆಯದಾಗಲೆಂದು ನನ್ನ ಕೈಲಾದುದನ್ನೆಲ್ಲ ತಪ್ಪದೆ ಮಾಡುವೆನು. ನೀನು ದುಃಖಿಸದಿರು. ನೀನು (ಖಂಡಿತವಾಗಿಯೂ) ಅರಸನಿಗೆ ಅರಸಿಯಾಗಲಿರುವೆ. (ಒಂದು ವೇಳೆ) ಮುಗಿಲು ಹರಿದೀತು, ಹಿಮಾಲಯ ಕರಗೀತು, ನೆಲ ಒಡೆದು ಹೋಳುಗಳಾದೀತು, ಕಡಲು ಬತ್ತೀತು, ಆದರೆ ನನ್ನ ಮಾತು ಆದೆಂದಿಗೂ ಸುಳ್ಳಾಗದು.'

+ ಪುನರುಲ್ಲೇಖ : ಉದ್ಯೋಗ—೮೩/೪೪-೪೯.

## ಉದ್ಯೋಗ/೭

೨

ದುರ್ಯೋಧನ ಹಾಗೂ ಅರ್ಜುನರು ಯುದ್ಧಕ್ಕಾಗಿ ನೆರವು ಕೇಳಲೆಂದು ಶ್ರೀಕೃಷ್ಣನ ಬಳಿಗೆ ಹೋಗಿದ್ದರು. ಆಗ ಶ್ರೀಕೃಷ್ಣನು ದುರ್ಯೋಧನನಿಗೆ ಹೀಗೆಂದನು : 'ನೀನು ನನ್ನನ್ನು ಮೊದಲು ಭೆಟ್ಟಿಯಾದೆ ಎನ್ನುವುದೇನೋ ನಿಜವೇ. ಆದರೆ ನಾನು ಮೊದಲಿಗೆ ಕಂಡುದು ಅರ್ಜುನನನ್ನು. ನಿನ್ನನ್ನು ಆಮೇಲೆ ಕಂಡೆ. ಅಲ್ಲದೆ ಅವನು ನಿನಗಿಂತ ಕಿರಿಯ ಬೇರೆ. ಆದುದರಿಂದ ನಾನು ನಿಮ್ಮಿರ್ವರಿಗೂ ನೆರವಾಗುವೆನು. ಒಂದು ಬದಿಗೆ ನನ್ನ ಇಡಿಯ ಸುಸಜ್ಜಿತವಾದ ಸೈನ್ಯವಾದರೆ ಇನ್ನೊಂದು ಬದಿಗೆ ನಾನೊಬ್ಬನೇ—

ಅಯುಧ್ಯಮಾನಃ ಸಂಗ್ರಾಮೇ ನ್ಯಸ್ತಶಸ್ತ್ರೋಽಹಮೇಕತಃ ॥ ೧೯ ॥

ನಾನು ಯುದ್ಧವನ್ನು ಮಾಡುವವನಲ್ಲ. ಕೈಯಲ್ಲಿ ಶಸ್ತ್ರವನ್ನು ಹಿಡಿಯುವವನಲ್ಲ. ನಾನು ಇಂಥವ—ಇವುಗಳಲ್ಲಿ ನಿನಗೆ ಬೇಕಿದ್ದುದನ್ನು ನೀನೇ ಆಯ್ದುಕೋ. ನಿನಗದನ್ನು ಕೊಡುವೆ.'

## ದ್ರೋಣ/೨೯

ಭಗದತ್ತನು ಅರ್ಜುನನ ಮೇಲೆ ವೈಷ್ಣವಾಸ್ತ್ರವನ್ನು ಎಸೆದನು. ಆಗ ಶ್ರೀಕೃಷ್ಣನು ಅರ್ಜುನನನ್ನು ಮುಚ್ಚಿಬಿಟ್ಟು ಅದನ್ನು ತನ್ನೆದೆಯ ಮೇಲೆ ತೆಗೆದುಕೊಂಡನು. ಶ್ರೀಕೃಷ್ಣನ ಈ ನಡತೆ ಅರ್ಜುನನಿಗೆ ಇಷ್ಟವಾಗಲಿಲ್ಲ. ಅವನು ಶ್ರೀಕೃಷ್ಣನಿಗೆ ಆತನ ಪಣವನ್ನು ನೆನಪು ಮಾಡಿಕೊಡುತ್ತ ಹೀಗೆಂದನು—

ಅಯುಧ್ಯಮಾನಸ್ತುರಗಾನ್ ಸಂಯಂತಾಸ್ಮೀತಿ ಚಾನಘ ।
ಇತ್ಯುಕ್ತ್ವಾ ಪುಂಡರೀಕಾಕ್ಷ ಪ್ರತಿಜ್ಞಾಂ ಸ್ವಾಂ ನ ರಕ್ಷಸಿ ॥ ೨೨ ॥

'ಎಲೋ ಪುಂಡರೀಕಾಕ್ಷನೇ ! ನೀನು ಯುದ್ಧಕ್ಕಿಳಿಯಲಾರೆ, ಬರಿ ಸಾರಥ್ಯವನ್ನಷ್ಟು ಮಾಡುವೆನೆಂದು ನಿನ್ನ ಪ್ರಮಾಣವಚನ ಇರುವಾಗ ನೀನು (ಮಾತ್ರ) ನಿನ್ನ ಪಣವನ್ನು ಪಾಲಿಸುತ್ತಿಲ್ಲವಲ್ಲ !'

**ದ್ರೋಣ/೧೮೧**

**೩**

## ಅಧರ್ಮದ ಲೋಪ ಹಾಗೂ ಧರ್ಮಸಂಸ್ಥಾಪನೆ

ಅರ್ಜುನನು ಶ್ರೀಕೃಷ್ಣನಿಗೆ ಈ ಪ್ರಶ್ನೆಯನ್ನು ಕೇಳಿದನು : 'ನನ್ನ ಕಲ್ಯಾಣಕ್ಕಾಗಿ ನೀನು ಯಾವ ಯಾವ ರಾಜರುಗಳನ್ನು ಯಾವ ಹಂಚಿಕೆಗಳಿಂದ ಕೊಂದೆ ಎನ್ನುವುದನ್ನು ನನಗೆ ಹೇಳು.' ಶ್ರೀಕೃಷ್ಣನು ಜರಾಸಂಧ, ಏಕಲವ್ಯ, ಚೇದಿರಾಜ ಮೊದಲಾದವರ ಕೊಲೆಗಳ ಬಗೆಗೆ ಹೇಳಿ, ಮುಂದೆ—

ಯೇ ಹಿ ಧರ್ಮಸ್ಯ ಲೋಪ್ತಾರೋ ವಧ್ಯಾಸ್ತೇ ಮಮ ಪಾಂಡವ ॥ ೨೮ ॥
ಧರ್ಮಸಂಸ್ಥಾಪನಾರ್ಥಂ ಹಿ ಪ್ರತಿಜ್ಞೈಷಾ ಮಮಾವ್ಯಯಾ ।
ಬ್ರಹ್ಮ ಸತ್ಯಂ ದಮಃ ಶೌಚಂ ಧರ್ಮೋ ಹ್ರೀಃ ಶ್ರೀರ್ಧೃತಿಃ ಕ್ಷಮಾ ॥ ೨೯ ॥
ಯತ್ರ ತತ್ರ ರಮೇ ನಿತ್ಯಮಹಂ ಸತ್ಯೇನ ತೇ ಶಪೇ ॥ ೩೦ ॥

'ಎಲೈ ಪಾಂಡವನೇ ! ಯಾರ ಕೈಯಿಂದ ಧರ್ಮಲೋಪ ಆಗುವುದೋ ಅವರು ನನ್ನಿಂದ ವಧ್ಯರು. ಧರ್ಮಸಂಸ್ಥಾಪನೆಗಾಗಿ ನಾನು ಈ ರೀತಿಯಾಗಿ ಖಡಾಖಂಡಿತವಾದ ಪಣವನ್ನು ತೊಟ್ಟಿದ್ದೇನೆ. ಬ್ರಹ್ಮ (ವೇದ), ಸತ್ಯ, ದಮ, ಶುಚಿ, ಧರ್ಮ, ವಿನಯ, ಲಕ್ಷ್ಮಿ, ಸಾಹಸ ಹಾಗೂ ಕ್ಷಮೆಗಳಿರುವಲ್ಲಿ ವಾಸವಾಗಿರಲು ನನಗೆ ಬಲು ಇಷ್ಟ. ನಾನು ಈ ಮಾತನ್ನು ನಿನಗೆ ಆಣೆಮಾಡಿ ಹೇಳುತ್ತಲಿದ್ದೇನೆ.

+ ಆಣೆಯು ಖಚಿತವಾದ ಪ್ರಸ್ತಾಪ.

**ಅಶ್ವಮೇಧಿಕ/೬೬**

**೪**

## ಉತ್ತರೆಯು ಸತ್ತ ಮಗುವನ್ನು ಬದುಕಿಸುವುದನ್ನು ಕುರಿತು

(ಈ ಪಣವು ಶಾಪವನ್ನು ಒಳಗೊಂಡಿರುವಂಥದು. ನೋಡಿ : ಶಾಪ—ಶ್ರೀಕೃಷ್ಣ> ಅಶ್ವತ್ಥಾಮ. ಸೌಪ್ತಿಕ/೧೬)

ಅಶ್ವತ್ಥಾಮನು ಉತ್ತರೆಯ ಬಸಿರಿನ ಮೇಲೆ ಬ್ರಹ್ಮಾಸ್ತ್ರವನ್ನು ಒಳಸಿದ್ದರಿಂದ ಅವಳ ಹೊಟ್ಟೆಯಿಂದ ಸತ್ತ ಮಗು ಹುಟ್ಟಿತು. ಪಾಂಡವಸ್ತ್ರೀಯರೆಲ್ಲ ಶೋಕಕ್ಕೀಡಾದರು. ಆಗ ಕುಂತಿಯು ಶ್ರೀಕೃಷ್ಣನಿಗೆ ಹೀಗೆ ಅಂದಳು—

ಯದುಪ್ರವೀರ ಯೋಽಯಂ ತೇ ಸ್ವಸ್ರೀಯಸ್ಯಾತ್ಮಜಃ ಪ್ರಭೋ ।
ಅಶ್ವತ್ಥಾಮ್ನಾ ಹತೋ ಜಾತಸ್ತಮುಜ್ಜೀವಯ ಕೇಶವ ॥ ೧೬ ॥

ತ್ವಯಾ ಹ್ಯೇತತ್ ಪ್ರತಿಜ್ಞಾತಮೈಷೀಕೇ ಯದುನಂದನ ।
ಅಹಂ ಸಂಜೀವಯಿಷ್ಯಾಮಿ ಮೃತಂ ಜಾತಮಿತಿ ಪ್ರಭೋ ॥ ೧೭ ॥

'ಎಲೈ ಯದುವೀರನೇ ! ಅಶ್ವತ್ಥಾಮನ ಅಸ್ತ್ರಪ್ರಯೋಗದಿಂದಾಗಿ ನಿನ್ನ ಸೋದರ ಅಳಿಯನ ಮಗು ಮೃತಾವಸ್ಥೆಯಲ್ಲಿ ಹುಟ್ಟಿಬಂದಿದೆ. ನೀನು ಅದನ್ನು ಜೀವ ಬರುವಂತೆ ಮಾಡು. ಅಶ್ವತ್ಥಾಮನು ಈ ಅಸ್ತ್ರವನ್ನೆಸೆದಾಗಲೇ ಈ ಬಾಲಕನನ್ನು ಬದುಕಿಸುವೆನೆಂದು ನೀನು ಪಣತೊಟ್ಟಿರುವೆ.'

ಆಶ್ವಮೇಧಿಕ/೬೯

ಶೋಕಗ್ರಸ್ತರಾದ ಮಹಿಳೆಯರ ವಿಲಾಪವನ್ನು ಕೇಳಿ ಶ್ರೀಕೃಷ್ಣ—

ಉಪಸ್ಪೃಶ್ಯ ತತಃ ಕೃಷ್ಣೋ ಬ್ರಹ್ಮಾಸ್ತ್ರಂ ಪ್ರತ್ಯಸಂಹರತ್ ॥ ೧೬ ॥
ಪ್ರತಿಜಜ್ಞೇ ಚ ದಾಶಾರ್ಹಸ್ತಸ್ಯ ಜೀವಿತಮಚ್ಯುತಃ ॥ ೧೭ ॥

ಆಚಮನವನ್ನು ಮಾಡಿ ಬ್ರಹ್ಮಾಸ್ತ್ರವನ್ನು ಶಾಂತಗೊಳಿಸಿದನು. ಆಮೇಲೆ ಶ್ರೀಕೃಷ್ಣನು ಆ ಮಗುವನ್ನು ಬದುಕಿಸಲೆಂದು ಹೀಗೆ ಪಣತೊಟ್ಟನು—

ನ ಬ್ರವೀಮ್ಯುತ್ತರೇ ಮಿಥ್ಯಾ ಸತ್ಯಮೇತದ್ ಭವಿಷ್ಯತಿ ।
ಏಷ ಸಂಜೀವಯಾಮ್ಯೇನಂ ಪಶ್ಯತಾಂ ಸರ್ವದೇಹಿನಾಮ್ ॥ ೧೮ ॥

'ಎಲೆ ಉತ್ತರೆ ! ನಾನೆಂದಿಗೂ ಸುಳ್ಳಾಡುವವನಲ್ಲ. ನಾನು ತೊಟ್ಟ ಪಣ ನಿಜವಾಗಲೇಬೇಕು. ನಾನು ಈ ದೇಹಧಾರಿಗಳೆಲ್ಲರ ಎದುರಿನಲ್ಲಿಯೇ ಈ ಮಗುವನ್ನು ಜೀವಂತವಾಗಿ ಮಾಡುತ್ತೇನೆ.'

ಹೀಗೆ ನುಡಿದು ಶ್ರೀಕೃಷ್ಣನು ಸತ್ಯಕ್ರಿಯೆಯನ್ನು ಮಾಡಿದನು. ನೋಡಿ : ಶ್ರೀಕೃಷ್ಣನ ಸತ್ಯಕ್ರಿಯೆ. ಆಶ್ವಮೇಧ—೬೯/೧೯–೨೩.

+ ಪುನರುಲ್ಲೇಖ : ಆಶ್ವಮೇಧ—೬೭/೧೧, ೧೨.

## ೪೨. ಶ್ರೀರಾಮ ವನ/೨೮೦

೧

### ವಾಲಿಯ ವಧೆ

ರಾವಣನು ಸೀತೆಯನ್ನು ಅಪಹರಿಸಿದ ವಾರ್ತೆ ನಂಬಲರ್ಹವಾದ ಮೂಲಗಳಿಂದ ಶ್ರೀರಾಮನಿಗೆ ತಲುಪಿತು. ಶ್ರೀರಾಮನು ಸುಗ್ರೀವನಿಗೆ ವಾನರರ ಸಮ್ರಾಟನೆಂದು ಅಭಿಷೇಕಮಾಡಿ ಪಟ್ಟಗಟ್ಟಿದನು. ಆಗಲೇ—

ಪ್ರತಿಜಜ್ಞೇ ಚ ಕಾಕುತ್ಸ್ಥಃ ಸಮರೇ ವಾಲಿನೋ ವಧಮ್ ॥ ೧೪ ॥

ಯುದ್ಧದ ಕಾಲಕ್ಕೆ ವಾಲಿಯನ್ನು ಕೊಲ್ಲುವುದಾಗಿ ಪಣತೊಟ್ಟನು.

+ ಒಂದು ಉಲ್ಲೇಖ ಮಾತ್ರ.

ವನ/೨೭೩

೨

## ಕಡಲನ್ನು ದಾಟುವುದು

ಶ್ರೀರಾಮನು ಲಂಕೆಗೆ ನಾವೆಗಳಲ್ಲಿ ಕಡಲನ್ನು ದಾಟಿಹೋಗಲು ಒಪ್ಪಲಿಲ್ಲ. ಅದರಿಂದಾಗಿ ಸೈನ್ಯ ಹರಿದುಹಂಚಿಹೋಗಿ ಹಗೆಗಳಿಗೆ ಒಳ್ಳೆಯ ಅವಕಾಶ ಸಿಕ್ಕೀತೆಂಬ ಹೆದರಿಕೆ. ಶ್ರೀರಾಮನು ಕಡಲನ್ನು ಉಪಾಸನೆಗೈದು ಅದನ್ನು ಒಲಿಸಿಕೊಳ್ಳಲು ನಿರ್ಧರಿಸಿದನು. ಆಗ ಅವನು ಹೀಗೆಂದನು—

ಅಹಂ ತ್ವಿಮಂ ಜಲನಿಧಿಂ ಸಮಾರಪ್ಸ್ಯಾಮ್ಯುಪಾಯತಃ ।
ಪ್ರತಿಶೇಷ್ಯಾಮ್ಯುಪವಸನ್ ದರ್ಶಯಿಷ್ಯತಿ ಮಾಂ ತತಃ ॥ ೩೦ ॥

ನ ಚೇದ್ ದರ್ಶಯಿತಾ ಮಾರ್ಗಂ ಧಕ್ಷ್ಯಾಮ್ಯೇನಮಹಂ ತತಃ ।
ಮಹಾಸ್ತ್ರೈರಪ್ರತಿಹತೈರತ್ಯಗ್ನಿಪವನೋಜ್ಜ್ವಲೈಃ ॥ ೩೧ ॥

'ನಾನು ಹೇಗಾದರೂ ಮಾಡಿ ಕಡಲನ್ನು ಸಂತುಷ್ಟಗೊಳಿಸಲು ಯತ್ನಿಸುವೆನು. ಅನ್ನ ಸತ್ಯಾಗ್ರಹವನ್ನು ಹೂಡಿ ಪಟಹಿಡಿದು ಕುಳಿತೇನು. ಅದರಿಂದಾಗಿ ನಮ್ಮೀರ್ವರ ಭೆಟ್ಟಿಯಿಂದಾಗಿ ಯಾವುದಾದರೂ ದಾರಿಯನ್ನು ಕಂಡುಕೊಳ್ಳಲು ಸಾಧ್ಯ. ಈ ಕಡಲು ದರ್ಶನವನ್ನಿತ್ತು ನನಗೆ ಯಾವುದಾದರೂ ಹಂಚಿಕೆಯನ್ನು ಸೂಚಿಸದೆ ಹೋದರೆ ನಾನು ಅಗ್ನಿಗಿಂತಲೂ ತೇಜಸ್ಸಿನದೂ, ವಾಯುವಿಗಿಂತ ವೇಗದ್ದೂ ಆದ ಅಮೋಘವೂ ಆದ ಅಸ್ತ್ರಗಳಿಂದ ಈ ಜಲಾಶಯವನ್ನು ಸುಟ್ಟುಬಿಡುವೆ.'

+ ಶ್ರೀರಾಮನ ಈ ಮಾತುಗಳು ಪಣದಂತೆಯೇ ಇವೆ.

## ೪೩. ಸಹದೇವ

ಸಭಾ/೭೭

ಮೊದಲ ಸಂದರ್ಭ : ನೋಡಿ : ಅರ್ಜುನನ ಕರ್ಣವಧೆಯ ಬಗೆಗಿನ ಪಣ. ಸಭಾ—೭೭/೩೨-೩೬.

ಅರ್ಜುನನ ಮಾತು ಕೇಳಿ ಸಹದೇವ ಸಿಟ್ಟಿಗೆದ್ದನು. ಅವನು ಶಕುನಿಯನ್ನು ಉದ್ದೇಶಿಸಿ ಹೀಗೆ ಪಣತೊಟ್ಟನು—

ಅಕ್ಷಾನ್ ಯಾನ್ ಮನ್ಯಸೇ ಮೂಢ ಗಾಂಧಾರಾಣಾಂ ಯಶೋಹರ ।
ನೈತೇಽಕ್ಷಾ ನಿಶಿತಾ ಬಾಣಾಸ್ತ್ವಯೈತೇ ಸಮರೇ ವೃತಾಃ ॥ ೩೯ ॥
ಯಥಾ ಚೈವೋಕ್ತವಾನ್ ಭೀಮಸ್ತ್ವಾಮುದ್ದಿಶ್ಯ ಸಬಾಂಧವಮ್ ।
ಕರ್ತಾಹಂ ಕರ್ಮಣಸ್ತಸ್ಯ ಕುರು ಕಾರ್ಯಾಣಿ ಸರ್ವಶಃ ॥ ೪೦ ॥
ಹಂತಾಸ್ಮಿ ತರಸಾ ಯುದ್ಧೇ ತ್ವಾಮೇವೇಹ ಸಬಾಂಧವಮ್ ।
ಯದಿ ಸ್ಥಾಸ್ಯಸಿ ಸಂಗ್ರಾಮೇ ಕ್ಷತ್ರಧರ್ಮೇಣ ಸೌಬಲ ॥ ೪೧ ॥

ಗಾಂಧಾರವಂಶವನ್ನು ಮಾನಗೇಡಿಯನ್ನಾಗಿ ಮಾಡುವ ಶಕುನಿಯೇ! ನೀನು ದಾಳಗಳೆಂದು ತಿಳಿದ (ವಸ್ತುಗಳು) ದಾಳಗಳಾಗಿಯೇ ಇರಲಿಲ್ಲ. ಅವೆಂದರೆ ಕಾಳಗದಲ್ಲಿ ನೀನಾಗಿ ಬರಮಾಡಿಕೊಂಡ ಬಾಣಗಳೇ ಅಹುದು. ಭೀಮನು ನಿನ್ನ ಬಗೆಗೂ, ನಿನ್ನ ಬಳಗದವರ ಬಗೆಗೂ ಆಡಿದುದು ನಿಜವಾಗದೇ ಇರದು. ನೀನು ನಿನ್ನ ದಾರಿಯನ್ನು ಹಿಡಿ. ಎಲೋ ಶಕುನಿಯೇ! ಯುದ್ಧಕಾಲಕ್ಕೆ ನೀನು ನನ್ನೆದುರು ಬಂದೆಯಾದರೆ ನಿನ್ನನ್ನು ನಿನ್ನ ಪರಿವಾರದೊಂದಿಗೆ ಕೊಲ್ಲುವೆ (ಎಂಬುದನ್ನು ಮರೆಯುದಿರು).

## ೪೪. ಸಂಶಪ್ತಕರು ಉದ್ಯೋಗ/೫೫

ಯುದ್ಧದಲ್ಲಿ ಪಾಂಡವರಿಗೆ ಗೆಲವಾಗಲಿದೆಯೆಂದು ಧೃತರಾಷ್ಟ್ರನಿಗೆ ಒಳಗೊಳಗೆ ಅನ್ನಿಸ ಹತ್ತಿತ್ತು. ಹಾಗೆಂದು ಅವನು ಆಡಿಯೂ ತೋರಿದನು. ಸಂಜಯನಿಗೂ ಇದು ಒಪ್ಪಿಗೆಯಾಗಿತ್ತು. ಧೃತರಾಷ್ಟ್ರ ಪಾಂಡವರೊಂದಿಗೆ ಸರಿಯಾಗಿ ನಡೆದುಕೊಳ್ಳಲಿಲ್ಲವೆಂಬುದನ್ನು ಅವನಿಗೆ ಖಂಡಿತವಾಗಿ ಹೇಳಿದನು. ದುರ್ಯೋಧನನಿಗಾದರೋ ತನ್ನ ಸಾಮರ್ಥ್ಯದ ಬಗೆಗೆ ಬಲು ಹೆಮ್ಮೆ. ಪಾಂಡವರಿಗಿಂತಲೂ ತಾನು ಹೇಗೆ ಹೆಚ್ಚಿನವ, ಬಲಶಾಲಿ, ಅಂದ ಬಳಿಕ ಗೆಲವು ತನಗೇ ಖಂಡಿತ ಎಂದೆಲ್ಲ ಅವನು ಧೃತರಾಷ್ಟ್ರನಿಗೆ ಮನಗಾಣಿಸುತ್ತಲಿದ್ದಾನೆ. ಅವನು ಸಂಶಪ್ತಕರನ್ನು ಕುರಿತು ಈ ಮುಂದಿನ ಪ್ರಸ್ತಾಪವನ್ನು ಮಾಡಿದ್ದಾನೆ—

> ಸಂಶಪ್ತಕಾನಾಂ ವೃಂದಾನಿ ಕ್ಷತ್ರಿಯಾಣಾಂ ಪರಂತಪ ॥ ೫೮ ॥
> ಅರ್ಜುನಂ ವಯಮಸ್ಮಾನ್ ವಾ ನಿಹನ್ಯಾತ್ ಕಪಿಕೇತನಃ ।
> ತಂ ಕಾಲಮಿತಿ ಮನ್ಯಂತೇ ಸವ್ಯಸಾಚಿವಧೇ ಧೃತಾಃ ॥ ೫೯ ॥

'ನಾವಾದರೂ ಅರ್ಜುನನನ್ನು ಕೊಲ್ಲುವೆವು, ಇಲ್ಲವಾದರೆ ಅವನಾದರೂ ನಮ್ಮನ್ನು ಕೊಲ್ಲುವನೆಂದು ಪಣತೊಟ್ಟು ಯುದ್ಧಕ್ಕೆ ಸಿದ್ಧರಾಗಿದ್ದೇವೆ. (ಅಂದಮೇಲೆ ಗೆಲವಿನ ಬಗೆಗೆ ಸಂದೇಹವೇಕೆ?)'

## ೪೫. ಸಾತ್ಯಕಿ ಭೀಷ್ಮ/೫೯

### ೧
### ಸೈನಿಕರಿಗೆ ಪಣದ ನೆನಪು

ಭೀಷ್ಮನು ಪಾಂಡವಸೇನೆಗೆ ಅಪರಿಮಿತವಾದ ಹಾನಿಯನ್ನುಂಟುಮಾಡಿದನು. ಆನೆಗಳು, ಕುದುರೆಗಳು, ರಥಗಳು, ಧ್ವಜಗಳನ್ನೆಲ್ಲ ಹಾಳುಮಾಡಿದನು. ಯೋದ್ಧರು ಭಯಭೀತರಾದರು. ಹೀಗಾಗಿ ಸೈನಿಕರು ಹಿಂದೇಟುಹಾಕಿ ಓಟಕಿತ್ತರು. ಸಾತ್ಯಕಿ ಅವರನ್ನು ಉದ್ದೇಶಿಸಿ ಹೀಗೆಂದನು—

> ಕ್ವ ಕ್ಷತ್ರಿಯಾ ಯಾಸ್ಯಥ ನೈವ ಧರ್ಮಃ ಸತಾಂ ಪುರಸ್ತಾತ್ ಕಥಿತಃ ಪುರಾಣೈಃ ।
> ಮಾ ಸ್ವಾಂ ಪ್ರತಿಜ್ಞಾಂ ತ್ಯಜತ ಪ್ರವೀರಾಃ ಸ್ವಂ ವೀರಧರ್ಮಂ
> ಪರಿಪಾಲಯಧ್ವಮ್ ॥ ೮೧ ॥

'ಎಲೈ ಕ್ಷಾತ್ರವೀರರೇ! ನೀವೆಲ್ಲಿಗೆ ಹೊರಟಿರಿ? (ರಣಭೂಮಿಗೆ ಹೀಗೆ ಬೆನ್ನು ತೋರಿಸಿ) ಓಡಿಹೋಗುವುದು ಕ್ಷಾತ್ರಧರ್ಮವೆಂದು ಹಿಂದಿನ ಕಾಲದ ವೀರರು ಹೇಳ ಲಿಲ್ಲ. ನಿಮ್ಮ ಪಣವನ್ನು ಹೀಗೆಲ್ಲ ತಳ್ಳಿಹಾಕದಿರಿ. ವೀರಪುರುಷರಿಗೆ ತಕ್ಕಂತೆ ನಡೆದು ಕೊಳ್ಳಿ.'

+ ಪಣದ ಉಲ್ಲೇಖ ಮಾತ್ರವಿದೆ.

ದ್ರೋಣ/೧೧೯

೨

## ಕಂಬೋಜರ ಸಂಹಾರ

ಸಾತ್ಯಕಿಯು ಸುದರ್ಶನನನ್ನು ಕೊಂದ ತರುವಾಯ ತನ್ನ ಸಾರಥಿಯ ಎದುರು ಕಂಬೋಜರನ್ನು ಕೊಲ್ಲುವುದಾಗಿ ತೊಟ್ಟ ಪಣದ ಪ್ರಸ್ತಾಪ ಹೀಗಿದೆ—

ಮುಂಡಾನೇತಾನ್ ಹನಿಷ್ಯಾಮಿ ದಾನವಾನಿವ ವಾಸವಃ ॥ ೩೭ ॥
ಪ್ರತಿಜ್ಞಾಂ ಪಾರಯಿಷ್ಯಾಮಿ ಕಾಂಬೋಜಾನೇವ ಮಾಂ ವಹ ॥ ೨೭ ॥

'ಇಂದ್ರನು ದಾನವರನ್ನು ನಾಶಪಡಿಸಿದಂತೆಯೇ ನಾನು ತಲೆ ಬೋಳಿಸಿದ ಕಂಬೋಜ ರನ್ನು ನಾಶಪಡಿಸಿ ನನ್ನ ಪಣವನ್ನು ಸಾರ್ಥಕಗೊಳಿಸುವೆನು.'

ದ್ರೋಣ/೧೪೩

೩

## ಅವಮಾನದ ಸೇಡು

ಅರ್ಜುನನು ಭೂರಿಶ್ರವನ ತೋಳನ್ನು ಕತ್ತರಿಸಿಬಿಟ್ಟನು. ಸಾತ್ಯಕಿಯು ಅವನ ತಲೆ ಯನ್ನು ದೇಹದಿಂದ ಬೇರ್ಪಡಿಸಿದನು. ಜನ ಸಾತ್ಯಕಿಯನ್ನು ಟೀಕೆಗೆ ಗುರಿಮಾಡಿದರು. ಆಗ ಅವನು ಹೀಗೆಂದನು: 'ದೈವವೇ ಭೂರಿಶ್ರವನ ಸಾವನ್ನು ನಿರ್ಧರಿಸಿತ್ತು. ನಾನು ಬರಿ ನಿಮಿತ್ತಮಾತ್ರನಾದೆನಷ್ಟೆ. ಧರ್ಮದ ಹೆಸರಿನಲ್ಲಿ ನನ್ನನ್ನು ತಪ್ಪಿತಸ್ಥನನ್ನಾಗಿ ಮಾಡುತ್ತಿರುವಿರಿ. ಅಂದಮೇಲೆ, ಅಭಿಮನ್ಯುವನ್ನು ನಿಶ್ಶಸ್ತ್ರನನ್ನಾಗಿ ಮಾಡಿದ ಕಾಲಕ್ಕೆ ನಿಮಗೆಲ್ಲ ಧರ್ಮದ ನೆನಪಾಗಲಿಲ್ಲವೇಕೆ? ಅಲ್ಲದೆ,

ಮಯಾ ತ್ವೇತತ್ ಪ್ರತಿಜ್ಞಾತಂ ಕ್ಷೇಪೇ ಕಸ್ಮಿಂಶ್ಚಿದೇವ ಹಿ ।
ಯೋ ಮಾಂ ನಿಷ್ಪಿಷ್ಯ ಸಂಗ್ರಾಮೇ ಜೀವನ್ ಹನ್ಯಾತ್ ಪದಾ ರುಷಾ ॥ ೬೨ ॥
ಸ ಮೇ ವಧ್ಯೋ ಭವೇಚ್ಛತ್ರುರ್ಯದ್ಯಪಿ ಸ್ಯಾನ್ಮುನಿವ್ರತಃ ।
ಚೇಷ್ಟಮಾನಂ ಪ್ರತಿಘಾತೇ ಸಭುಜಂ ಮಾಂ ಸಚಕ್ಷುಷಃ ॥ ೬೩ ॥
ಮನ್ಯಧ್ವಂ ಮೃತ ಇತ್ಯೇವಮೇತದ್ ವೋ ಬುದ್ಧಿಲಾಘವಮ್ ।
ಯುಕ್ತೋ ಹ್ಯಸ್ಯ ಪ್ರತೀಘಾತಃ ಕೃತೋ ಮೇ ಕುರುಪುಂಗವಾಃ ॥ ೬೪ ॥

"ಹಿಂದೆಂದೋ ಒಂದು ಸಲ ನನ್ನನ್ನು ನಿಂದಿಸಲಾಗಿ, 'ನಾನು ಬದುಕಿರುವವರೆಗೆ ಯುದ್ಧದಲ್ಲಿ ನನ್ನನ್ನು ಹಿಂಸಿಸಿ ನನ್ನನ್ನು ಕಾಲಿನಿಂದ ಒದೆಯುವವನು ಒಬ್ಬ ಮುನಿಯಂತೆ ಮೌನವ್ರತವನ್ನು ಸ್ವೀಕರಿಸಿದ್ದರೂ ನಾನವನನ್ನು ಕೊಂದೇ ತೀರುವೆನೆಂದು' ಪಣತೊಟ್ಟಿದ್ದೆನು. ನನ್ನ ತೋಳುಗಳು ಗಟ್ಟಿಯಾಗಿರುವಾಗಲೂ, ಅಲ್ಲದೆ ನಾನು ಮಾರುತ್ತರವನ್ನು ನೀಡುತ್ತಿರುವಾಗಲೂ ನಾನು ಸತ್ತೆನೆಂದೇ ನೀವೆಲ್ಲ ತಿಳಿಯುತ್ತಿರುವುದು ಬಲು ಸೋಜಿಗದ ಸಂಗತಿಯಾಗಿದೆ. ನಿಮ್ಮ ಬುದ್ಧಿವುತ್ತೆಯನ್ನು ಅದೆಷ್ಟು ಹೊಗಳಿದರೂ ಸಾಲದು. ನಾನು ಭೂರಿಶ್ರವನನ್ನು ಕೊಂದುದು (ಎಲ್ಲ ರೀತಿಯಿಂದಲೂ) ಸರಿಯಾದುದೇ ಆಗಿದೆ."

ದ್ರೋಣ/೧೫೬

೪

ಭೂರಿಶ್ರವನ ಕೊಲೆಯಿಂದಾಗಿ ಸಂತಪ್ತನಾದ ಸೋಮದತ್ತನು ಸಾತ್ಯಕಿಯನ್ನು ಅವನ ಮಕ್ಕಳು–ಬಂಧುಗಳೊಂದಿಗೆ ಕೊಲ್ಲಲು ಪಣತೊಟ್ಟನು. ಆಗ ಸಾತ್ಯಕಿಯು ಅವನಿಗೆ ಪ್ರತಿಜ್ಞಾಪೂರ್ವಕವಾಗಿಯೇ ಮಾರುತ್ತರವನ್ನಿತ್ತನು—

ಶಪೇಽಹಂ ಕೃಷ್ಣಚರಣೈರಿಷ್ಟಾಪೂರ್ತೇನ ಚೈವ ಹ ।
ಯದಿ ತ್ವಾಂ ಸಸುತಂ ಪಾಪಂ ನ ಹನ್ಯಾಂ ಯುಧಿ ರೋಷಿತಃ ॥ ೧೯ ॥
ಅಪಯಾಸ್ಯಸಿ ಚೇತ್ತ್ಯಕ್ತ್ವಾ ರಣಂ ಮುಕ್ತೋ ಭವಿಷ್ಯಸಿ ॥ ೨೦ ॥

'ನಾನು ಇಂದಿನ ಯುದ್ಧದಲ್ಲಿ ಸಂತಪ್ತನಾಗಿ ನಿನ್ನನ್ನು ನಿನ್ನ ಮಕ್ಕಳುಗಳೊಂದಿಗೆ ಕೊಲ್ಲುವೆನು. ಇದನ್ನು ಕೃಷ್ಣನ ಪಾದದಡಿಗಳಲ್ಲಿ ನಾನು ಕೈಕೊಂಡ ಇಷ್ಟಾಪೂರ್ತಿಯ ಮೇಲೆ ಆಣೆಯಿಟ್ಟು ಪ್ರತಿಜ್ಞಾಪೂರ್ವಕವಾಗಿ ಹೇಳುತ್ತಲಿದ್ದೇನೆ. ರಣರಂಗದಿಂದ ಓಟ ಕಿತ್ತರೆ ಮಾತ್ರ ನೀನಿಂದು ಬದುಕುವೆಯೆಂಬುದನ್ನು ತಿಳಿ.'

+ ಎದುರು ಪಣ.

## ೪೬. ಸಾವಿತ್ರಿ

ವನ/೨೯೬

ಸತ್ಯವಾನನ ಸಾವಿನ ಬಗೆಗೆ ತನ್ನ ಮದುವೆಯ ಮೊದಲೇ ಸಾವಿತ್ರಿಗೆ ನಾರದನಿಂದ ತಿಳಿದಿತ್ತು. ಆದರೂ ಅವಳು ತನ್ನ ನಿರ್ಧಾರದಿಂದ ಕದಲಿರಲಿಲ್ಲ. ಅವಳು ಸತ್ಯವಾನನನ್ನೇ ಮದುವೆಯಾಗಿ ಅವನೊಂದಿಗೆ ನಿಷ್ಠಳಾಗಿ ನಡೆದುಕೊಂಡಳು. ಅವನ ಸಾವಿನ ತಿಥಿ ಇನ್ನು ನಾಲ್ಕು ದಿನಗಳ ತರುವಾಯ ಇದೆ ಎನ್ನುವಾಗಲೇ ಅವಳು ಮೂರು ರಾತ್ರಿಗಳ ಕಾಲ ಕಠೋರವಾದ ವ್ರತವನ್ನು ಸ್ವೀಕರಿಸಿದಳು. ಅವಳು ಆ ಮೂರು ಇರುಳುಗಳಲ್ಲಿ ಎದ್ದು ನಿಂತು ಉಪವಾಸವನ್ನು ಕೈಕೊಂಡಳು. ಅನ್ನವನ್ನು ಮುಟ್ಟಲಿಲ್ಲ. ಮೂರು ರಾತ್ರಿಗಳ ತರುವಾಯ ಅವಳ ಅತ್ತೆ–ಮಾವಂದಿರು ಅವಳಿಗೆ ವ್ರತವು ಪೂರ್ತಿಯಾಗಿದ್ದು ಇನ್ನು ಪಾರಣೆಯನ್ನು ಮಾಡಬಹುದೆಂದು ಹೇಳಿದರು. ಆಗ ಅವಳು ಅವರಿಗೆ ಹೀಗೆಂದಳು—

ಅಸ್ತಂ ಗತೇ ಮಯಾಽಽದಿತ್ಯೇ ಭೋಕ್ತವ್ಯಂ ಕೃತಕಾಮಯಾ ।
ಏಷ ಮೇ ಹೃದಿ ಸಂಕಲ್ಪಃ ಸಮಯಶ್ಚ ಕೃತೋ ಮಯಾ ॥ ೧೭ ॥

ಸೂರ್ಯಾಸ್ತದ ತರುವಾಯ ನನ್ನ ಮನೋರಥ ಕೈಗೂಡಲಿದೆ. ಆಗಲೇ ಉಣ್ಣುವುದೆಂದು ನಿರ್ಧರಿಸಿದ್ದೇನೆ. ಹಾಗೆಂದು ಪಣವನ್ನು ತೊಟ್ಟದ್ದೇನೆ.

## ೪೭. ಸುಗ್ರೀವ ವನ/೨೮೦

ಮೊದಲ ಸಂದರ್ಭ : ನೋಡಿ : ಶ್ರೀರಾಮನು ಮಾಡಿದ ವಾಲಿವಧೆಯ ಪಣ. ವನ—೨೮೦/೧೪.

ಶ್ರೀರಾಮನ ಪಣದ ಬೆನ್ನಿಗೇನೆ ಸುಗ್ರೀವನೂ ಕೂಡ ತಾನು ಸೀತೆಯನ್ನು ಹುಡುಕಿ ತರುವುದಾಗಿ ಪಣತೊಟ್ಟನು. ಅದು ಹೀಗಿತ್ತು—

ಸುಗ್ರೀವಶ್ಚಾಪಿ ವೈದೇಹ್ಯಾಃ ಪುನರಾನಯನಂ ನೃಪ ॥ ೧೪ ॥

+ ಇಲ್ಲಿರುವುದು ಬರಿ ಒಂದು ಉಲ್ಲೇಖ ಮಾತ್ರ.

## ೪೮. ಸುದರ್ಶನ ಅನುಶಾಸನ/೨

ಯುಧಿಷ್ಠಿರನು ಭೀಷ್ಮನಿಗೆ ಗೃಹಸ್ಥಧರ್ಮದಲ್ಲಿದ್ದುಕೊಂಡು ಸಾವನ್ನು ಗೆಲ್ಲುವುದು ಹೇಗೆಂದು ಕೇಳುತ್ತಾನೆ. ಆಗ ಭೀಷ್ಮನು ಅವನಿಗೆ ಸುದರ್ಶನ ದೊರೆಯ ಕಥೆಯನ್ನು ಹೇಳುತ್ತಾನೆ :

ಓಘವಾನ ದೊರೆಗೆ ಓಘವತಿ ಎಂಬ ಬಲು ಚೆಂದದ ಮಗಳಿದ್ದಳು. ಅವನು ಅವಳನ್ನು ಸುದರ್ಶನನೆಂಬ ಒಬ್ಬ ವಿದ್ವಾಂಸನಾದ ದೊರೆಗೆ ಮದುವೆ ಮಾಡಿಕೊಟ್ಟನು. ಓಘವತಿ ಒಬ್ಬ ಶ್ರೇಷ್ಠಳಾದ ಪತಿವ್ರತೆಯಾಗಿದ್ದಳು. ಅವಳು ಬಲು ನಿಷ್ಠೆಯಿಂದ ತನ್ನ ಗಂಡನನ್ನು ಸೇವೆಗೈಯುತ್ತಿದ್ದಳು. ಸುದರ್ಶನ ದೊರೆ ಕೂಡ ಗೃಹಸ್ಥಧರ್ಮವನ್ನು ಪಾಲಿಸುತ್ತ ಅವಳೊಂದಿಗೆ ಸುಖದಿಂದ ಸಂಸಾರವನ್ನು ಸಾಗಿಸಿಕೊಂಡಿದ್ದನು.

ಗೃಹಸ್ಥಶ್ಚಾವಜೇಷ್ಯಾಮಿ ಮೃತ್ಯುಮಿತ್ಯೇವ ಸ ಪ್ರಭೋ ।
ಪ್ರತಿಜ್ಞಾಮಕರೋದ್ ಧೀಮಾನ್ ದೀಪ್ತತೇಜಾ ವಿಶಾಂಪತೇ ॥ ೪೧ ॥

'ಗೃಹಸ್ಥಧರ್ಮವನ್ನು ಪಾಲಿಸುತ್ತಲೇ ನಾನು ಸಾವನ್ನು ಗೆಲ್ಲುವೆ' ಎಂದು ಆ ತೇಜಸ್ವಿಯೂ, ಬುದ್ಧಿವಂತನೂ ಆದ ಸುದರ್ಶನನು ಪಣವನ್ನು ತೊಟ್ಟನು.

ಓಘವತಿಯು ಅತಿಥಿಧರ್ಮದ ಬಗೆಗೆ ಅತಿ ತತ್ಪರಳಾಗಿರತಕ್ಕದ್ದು. ಅತಿಥಿಯು ಕೇಳಿದುದನ್ನು ಅವನಿಗೆ ಕೊಡತಕ್ಕದ್ದು, ಅವನ ಬಯಕೆಯನ್ನು ಈಡೇರಿಸತಕ್ಕದ್ದು (ಅವನನ್ನು ಅತೃಪ್ತನನ್ನಾಗಿ ಇಡಕೂಡದು)—ಎಂದು ಅವನು ಅವಳಿಗೆ ಹೇಳಿದ್ದನು. ಆ ಪ್ರಕಾರವಾಗಿ ಅವಳು ಅತಿಥಿಗಳಿಗೆ ಯಾವುದೇ ಬಗೆಯ ಕೊರತೆ ಉಂಟಾಗದ ಹಾಗೆ ನೋಡಿಕೊಳ್ಳುತ್ತಿದ್ದಳು. ಮೃತ್ಯುವು (ಯಮಧರ್ಮನು) ಒಂದು ಸಲ ಅವನನ್ನು

ಪರೀಕ್ಷೆಗೆ ಒಡ್ಡಲು ನಿರ್ಧರಿಸಿದನು. ಸುದರ್ಶನನು ಸಮಿಧೆಯನ್ನು ತರಲೆಂದು ಹೊರಗೆ ಹೋದಾಗ ಅತಿಥಿಯಾಗಿ ಬ್ರಾಹ್ಮಣವೇಷ ತೊಟ್ಟು ಯಮಧರ್ಮನು ಅರಮನೆಗೆ ಬಂದನು. ಗಂಡನಿಲ್ಲದ ವೇಳೆಯಲ್ಲೂ ಓಘವತಿಯು ಬಂದ ಅತಿಥಿಯನ್ನು ಚೆನ್ನಾಗಿ ಬರ ಮಾಡಿಕೊಂಡಳು. ಅವನಿಗೆ ಸರಿಯಾದ ಆತಿಥ್ಯವನ್ನು ನೀಡಿ ಅವನ ಮನದ ಬಯಕೆ ಏನೆಂದು ಕೇಳಿದಳು. ಅದಕ್ಕೆ ಯಮನು, 'ನನಗೆ ನೀನೇ ಬೇಕು' ಎಂದನು. ಗಂಡನೇ ಅತಿಥಿಯ ಬಯಕೆಯನ್ನು ಈಡೇರಿಸಲು ಹೇಳಿದ್ದರಿಂದ (ಪತಿವ್ರತೆಗೆ ಕಷ್ಟದ್ದಾಗಿಯೂ) ಅವಳು ಅವನ ಕೋರಿಕೆಯನ್ನು ಮನ್ನಿಸಿದಳು. ಅವರಿಬ್ಬರೂ ಏಕಾಂತದಲ್ಲಿರುವಾಗ ಸುದರ್ಶನ ಸಮಿಧೆಯೊಂದಿಗೆ ಮನೆಗೆ ಹಿಂತಿರುಗಿ ಬಂದನು. ಓಘವತಿಯು ತಾನು ಭ್ರಷ್ಟಳಾದೆನೆಂದು ಕೊಂಡು ನಾಚಿಕೆಯಿಂದ ಮೂಕಳಂತಾದಳು. ಆಗ ಯಮಧರ್ಮನೇ ನಡೆದುದನ್ನೆಲ್ಲ ಹೇಳಿ ತನಗೆ ತಕ್ಕ ಶಾಸ್ತಿಯಾಗಲೆಂದು ಕೋರಿದನು. ಸುದರ್ಶನನ ಪಣ ಮುರಿದರೆ ಅವನನ್ನು ಕೊಲ್ಲಲು ಸುಲಭ ಎಂಬುದು ಯಮನ ಲೆಕ್ಕ. ಆದರೆ ಸುದರ್ಶನನು ಬಲು ಶಾಂತವಾದ ರೀತಿಯಲ್ಲಿ ಹೀಗೆಂದನು : 'ಅತಿಥಿಯ ಸಂತೋಷವೇ ನಿಜವಾದ ಗೃಹಸ್ಥಧರ್ಮ. ನೀನು ಬಯಸಿದ್ದುದನ್ನೆಲ್ಲ ಪಡೆದೆ ತಾನೆ! ನಾನು, ನನ್ನ ಮಡದಿ ಹಾಗೂ ಸರ್ವಸ್ವವೂ ನಿನ್ನ ಅಧೀನರು. ಅತಿಥಿ ಕೇಳಿದುದನ್ನೆಲ್ಲ ಕೊಡುವುದು ನಮ್ಮ ವ್ರತವು. ನಿಜವಿದ್ದುದನ್ನೇ ಹೇಳುತ್ತಿದ್ದೇನೆ. ದೇವತೆಗಳೇ ಬೇಕಿದ್ದರೆ ನನ್ನನ್ನು ಕಾಯಲಿ ಇಲ್ಲವೆ ಕೊಲ್ಲಲಿ.'

ಸುದರ್ಶನನ ಮಾತುಗಳನ್ನು ಕೇಳಿ ಬ್ರಾಹ್ಮಣನ ವೇಷವನ್ನು ತೊಟ್ಟು ಬಂದಿದ್ದ ಯಮಧರ್ಮನು ಸಂತೋಷದಿಂದ ಅವನಿಗೆ ಕಲ್ಯಾಣವನ್ನು ಬಯಸುತ್ತ ಹೀಗೆಂದನು—

ಧರ್ಮೋऽಹಮಸ್ಮಿ ಭದ್ರಂ ತೇ ಜಿಜ್ಞಾಸಾರ್ಥಂ ತವಾನಘ ।
ಪ್ರಾಪ್ತಃ ಸತ್ಯಂ ಚ ತೇ ಜ್ಞಾತ್ವಾ ಪ್ರೀತಿರ್ಮೇ ಪರಮಾ ತ್ವಯಿ ॥ ೭೯ ॥
ವಿಜಿತಶ್ಚ ತ್ವಯಾ ಮೃತ್ಯುರ್ಯೋऽಯಂ ತ್ವಾಮನುಗಚ್ಛತಿ ।
ರಂಧ್ರಾನ್ವೇಷೀ ತವ ಸದಾ ತ್ವಯಾ ಧೃತ್ಯಾ ವಶೀಕೃತಃ ॥ ೮೦ ॥

'ಎಲೈ ನಿಷ್ಪಾಪಿಯಾದ ಸುದರ್ಶನನೇ! ನಾನು ಯಮಧರ್ಮ. ನಿನ್ನನ್ನು ಪರೀಕ್ಷಿಸ ಲೆಂದು ಇಲ್ಲಿಗೆ ಬಂದೆ. ನಿನ್ನ ಸತ್ಯವನ್ನು ಕಂಡು ಬಲುಸಂತುಷ್ಟನಾದೆ. ನಿನ್ನಲ್ಲಿಯ ಕುಂದು ಕೊರತೆಗಳನ್ನು ಕಂಡುಹಿಡಿಯಲೆಂದು ಬಂದೆ. ಮೃತ್ಯು ಯಾವಾಗಲೂ ನಿನ್ನನ್ನು ಬೆಂಬತ್ತಿ ದ್ದರೂ ನೀನು ನಿನ್ನ ಸನ್ನಡತೆಯಿಂದ ಅದನ್ನು ಮೆಟ್ಟಿನಿಂತಿರುವೆ. ನೀನದನ್ನು ವಶಪಡಿಸಿ ಕೊಂಡಿರುವೆ. ನಿನ್ನ ಮಡದಿ ಒಬ್ಬ ಶ್ರೇಷ್ಠ ಪತಿವ್ರತೆ. ಯಾರಿಗೂ ಅವಳತ್ತ ಕಣ್ಣೆತ್ತಿ ನೋಡುವ ಸಾಹಸವಾಗದು. ನಿನ್ನ ಸದ್ಗುಣಗಳು ಹಾಗೂ ಆಕೆಯ ಪತಿನಿಷ್ಠೆಗಳೇ ಅವಳನ್ನು ಕಾಪಾಡುತ್ತಲಿವೆ.' ಅವನು ಸಂತುಷ್ಟಮನದಿಂದ ಅವರಿಬ್ಬರನ್ನೂ ಹರಸಿದನು. ಅವರಿಗೆ ವರಗಳನ್ನಿತ್ತನು.

## ೪೯. ಸೋಮದತ್ತ ದ್ರೋಣ/೧೪೩

ಅರ್ಜುನನು ಸೋಮದತ್ತನ ಮಗ ಭೂರಿಶ್ರವನ ತೋಳುಗಳನ್ನು ಕಡಿದು ಚೆಲ್ಲಿದನು. ಅವನು ಪ್ರಾಯೋಪವೇಶನಕ್ಕೆ ಕುಳಿತಾಗ ಸಾತ್ಯಕಿಯು ಅವನ ರುಂಡವನ್ನು ಕಡಿದನು.

ಆದರಿಂದಾಗಿ ಸೋಮದತ್ತ ಬಲು ಕೆರಳಿದನು. ಅವನು ಈ ರೀತಿಯಾಗಿ ಆಣೆಯಿಂದ ಕೂಡಿದ ಪಣವನ್ನು ತೊಟ್ಟನು—

ಕರ್ಮಣಸ್ತಸ್ಯ ದುರ್ವೃತ್ತಫಲಂ ಪ್ರಾಪ್ನುಹಿ ಸಂಯುಗೇ ।
ಅದ್ಯ ಛೇತ್ಸ್ಯಾಮಿ ತೇ ಮೂಢ ಶಿರೋ ವಿಕ್ರಮ್ಯ ಪತ್ರಿಣಾ ॥ ೬ ॥
ಶಪೇ ಸಾತ್ವತ ಪುತ್ರಾಭ್ಯಾಮಿಷ್ಟೇನ ಸುಕೃತೇನ ಚ ।
ಅನತೀತಾಮಿಮಾಂ ರಾತ್ರಿಂ ಯದಿ ತ್ವಾಂ ವೀರಮಾನಿನಮ್ ॥ ೭ ॥
ಅರಕ್ಷ್ಯಮಾಣಂ ಪಾರ್ಥೇನ ಜಿಷ್ಣುನಾ ಸಸುತಾನುಜಮ್ ।
ನ ಹನ್ಯಾಂ ನರಕೇ ಘೋರೇ ಪತೇಯಂ ವೃಷ್ಣಿಪಾಂಸನ ॥ ೮ ॥

'ಎಲೋ ದುರಾಚಾರಿಯಾದ ಮೂರ್ಖನೇ! ನಿನ್ನ ದುಷ್ಕೃತ್ಯದ ಫಲ ಯುದ್ಧದಲ್ಲಿ ನಿನಗೆ ಸಿಕ್ಕೀತು. ನನ್ನ ಸಾಮರ್ಥ್ಯದಿಂದ ನಾನಿಂದು ಒಂದೇ ಒಂದು ಬಾಣದಿಂದ ನಿನ್ನ ತಲೆಯನ್ನು ಹಾರಿಸಬಲ್ಲೆ. ಎಲೋ ಸಾತ್ವತೇ! ನಿನಗೆ ಅರ್ಜುನನ ರಕ್ಷೆ ಸಿಕ್ಕದೆಹೋದರೆ ಈ ಇರುಳು ಕಳೆಯುವ ಮುನ್ನವೇ ಸ್ವಂತಕ್ಕೆ ಬಲುದೊಡ್ಡವನೆಂದುಕೊಳ್ಳುವ (ಸೊಕ್ಕಿನ) ನಿನ್ನನ್ನು, ನಿನ್ನ ಮಕ್ಕಳು-ಬಂಧುಗಳೊಂದಿಗೆ ಯಮಲೋಕಕ್ಕೆ ಅಟ್ಟದಿದ್ದರೆ ನನಗೆ ಘೋರವಾದ ನರಕ ಪ್ರಾಪ್ತವಾದೀತು.' ನಾನು ಈ ಪ್ರತಿಜ್ಞೆಯನ್ನು ಕೈಕೊಳ್ಳುತ್ತಿರುವುದು ನನ್ನಿಬ್ಬರೂ ಮಕ್ಕಳು ಹಾಗೂ ಈವರೆಗೆ ಕೈಕೊಂಡ ಇಷ್ಟಾದಿ ಸತ್ಕೃತ್ಯಗಳ ಮೇಲೆ ಆಣೆಯಿಟ್ಟು ಪಣತೊಡುತ್ತಲಿದ್ದೇನೆ.

+ ಈ ಪ್ರತಿಜ್ಞೆ ಸೋಲನ್ನು ಕಂಡಿತು. ಸಾತ್ಯಕಿಯು ಸೋಮದತ್ತನನ್ನು ಕೊಂದನು (ದ್ರೋಣ—೧೬೨/೩೩). ಸತ್ಕ್ರಿಯೆ ಕೂಡ ಈ ಪಣದಲ್ಲಿ ಅಡಕಗೊಂಡಿದೆ.

೧

ಅಭಿಮನ್ಯುವಿನ ಸಾವಿನ ದುಷ್ಟವಾರ್ತೆಯನ್ನು ಕೇಳಿ ಅರ್ಜುನ ಮೂರ್ಛೆಹೋದನು. ಎಚ್ಚರ ತಿಳಿದೆದ್ದಬಳಿಕ ಅವನು ಸಂತಪ್ತನಾದನು. ಜಯದ್ರಥನನ್ನು ಕೊಲ್ಲುವುದಾಗಿ ಪಣತೊಟ್ಟನು. ತನ್ನ ಪಣದ ಯಥಾರ್ಥತೆಯನ್ನು ಮನಗಾಣಿಸಲೆಂದು ಅವನೆಂದನು—

ಯದ್ಯೇತದೇವಂ ಸಂಗ್ರಾಮೇ ನ ಕುರ್ಯಾಂ ಪುರುಷರ್ಷಭಾಃ ।
ಮಾ ಸ್ಮ ಪುಣ್ಯಕೃತಾಂ ಲೋಕಾನ್ ಪ್ರಾಪ್ನುಯಾಂ ಶೂರಸಂಮತಾನ್ ॥ ೨೪ ॥

'ಪುರುಷಶ್ರೇಷ್ಠರಾದ ವೀರರೇ ! (ಆಡಿದ ಮಾತಿನಂತೆ) ನಾನು ಯುದ್ಧದಲ್ಲಿ ಕೃತಿಯನ್ನು ಮಾಡಲಿಲ್ಲವಾದರೆ ಪುಣ್ಯಕೃತರಿಗೆ ಸಿಕ್ಕುವ ಗತಿ ನನಗೆ ಸಿಕ್ಕಲಾರದು. ನನ್ನ ಕೈಯಿಂದ ಜಯದ್ರಥನ ವಧೆ ನಡೆಯದೆ ಹೋದರೆ—

ಯೇ ಲೋಕಾ ಮಾತೃಹಂತೄಣಾಂ ಯೇ ಚಾಪಿ ಪಿತೃಘಾತಿನಾಮ್ ।
ಗುರುದಾರಗತಾನಾಂ ಯೇ ಪಿಶುನಾನಾಂ ಚ ಯೇ ಸದಾ ॥ ೨೫ ॥
ಸಾಧೂನಸೂಯತಾಂ ಯೇ ಚ ಯೇ ಚಾಪಿ ಪರಿವಾದಿನಾಮ್ ।
ಯೇ ಚ ನಿಕ್ಷೇಪಹರ್ತೄಣಾಂ ಯೇ ಚ ವಿಶ್ವಾಸಘಾತಿನಾಮ್ ॥ ೨೬ ॥
ಭುಕ್ತಪೂರ್ವಾಂ ಸ್ತ್ರಿಯಂ ಯೇ ಚ ವಿಂದತಾಮಘಶಂಸಿನಾಮ್ ।
ಬ್ರಹ್ಮಘ್ನಾನಾಂ ಚ ಯೇ ಲೋಕಾ ಯೇ ಚ ಗೋಘಾತಿನಾಮಪಿ ॥ ೨೭ ॥
ಪಾಯಸಂ ವಾ ಯವಾನ್ನಂ ವಾ ಶಾಕಂ ಕೃಸರಮೇವ ವಾ ।
ಸಂಯಾವಾಪೂಪಮಾಂಸಾನಿ ಯೇ ಚ ಲೋಕಾ ವೃಥಾಶ್ನತಾಮ್ ॥ ೨೮ ॥

ತಾಯಿ-ತಂದೆಗಳನ್ನು ಕೊಲ್ಲುವವನು, ಗುರುಪತ್ನಿಯೊಂದಿಗೆ ವ್ಯಭಿಚಾರವನ್ನು ಮಾಡುವವನು, ನೀಚನು, ಸಜ್ಜನರನ್ನು ಕಂಡು ಅಸೂಯೆಪಡುವವನು, ನಿಂದೆಗೈಯುವವನು, (ಇನ್ನೊಬ್ಬರು ನಂಬಿ ಒಪ್ಪಿಸಿದ) ಇಡುಗಂಟನ್ನು ನುಂಗಿಹಾಕುವವನು, ನಂಬಿಕೆಗೆ ದ್ರೋಹಬಗೆಯುವವನು, ಬೇರೊಬ್ಬರು ಉಪಭೋಗಿಸಿದ ಹೆಣ್ಣನ್ನು ಹತ್ತಿರ ಮಾಡುವವನು, ಪಾಪಕರ್ಮಗಳನ್ನು ಆಚರಿಸುವವನು, ಗೋ-ಬ್ರಾಹ್ಮಣರನ್ನು ಕೊಲ್ಲುವವನು, (ವೈಶ್ವದೇವವನ್ನು ಮಾಡಿ ದೇವರಿಗೆ ಅರ್ಪಿಸುವ ಮೊದಲೇ ಬೇಯಿಸಿದ) ಯವಾನ್ನ, ಪಾಯಸ, ಪಲ್ಯಗಳು, ಕಿಚಡಿ, ಗಾರಿಗೆ, ಅನಾರಸು, ಮಾಂಸ ಮೊದಲಾದವುಗಳನ್ನು ತಿನ್ನುವವನು—ಇಂತಹ ಜನರಿಗೆ (ಸಾವಿನ ನಂತರ) ಪ್ರಾಪ್ತವಾಗುವ ಸ್ಥಿತಿ ನನಗೂ ಪ್ರಾಪ್ತವಾಗಲಿ.'

ತಾನನ್ಹಾಯಾಧಿಗಚ್ಛೇಯಂ ನ ಚೇದ್ಧನ್ಯಾಂ ಜಯದ್ರಥಮ್ ।
ವೇದಾಧ್ಯಾಯಿನಮತ್ಯರ್ಥಂ ಸಂಶಿತಂ ವಾ ದ್ವಿಜೋತ್ತಮಮ್ ॥ ೨೯ ॥

ಅವಮನ್ಯಮಾನೋ ಯಾನ್ ಯಾತಿ ವೃದ್ಧಾನ್ ಸಾಧೂನ್ ಗುರೂಂಸ್ತಥಾ ।
ಸ್ಪೃಶತೋ ಬ್ರಾಹ್ಮಣಂ ಗಾಂ ಚ ಪಾದೇನಾಗ್ನಿಂ ಚ ಯಾ ಭವೇತ್ ॥ ೩೦ ॥
ಯಾಽಪ್ಸು ಶ್ಲೇಷ್ಮಪುರೀಷಂ ಚ ಮೂತ್ರಂ ಚ ಮುಂಚತಾಂ ಗತಿಃ ।
ತಾಂ ಗಚ್ಛೇಯಂ ಗತಿಂ ಕಷ್ಟಾಂ ನ ಚೇದ್ಧನ್ಯಾಂ ಜಯದ್ರಥಮ್ ॥ ೩೧ ॥

ವೇದಾಧ್ಯಯನ, ವ್ರತಗಳನ್ನು ಕಠೋರವಾಗಿ ಪಾಲಿಸುವವನಾದ ಬ್ರಾಹ್ಮಣ, ಸಜ್ಜನ, ವೃದ್ಧ ಹಾಗೂ ಗುರುಜನರನ್ನು ಅವಹೇಳನೆಗೆ ಗುರಿಮಾಡುವ ಮನುಷ್ಯನು ಬೀಳ ಬಹುದಾದಂತಹ ಘೋರವಾದ ನರಕ, ಬ್ರಾಹ್ಮಣ, ಗೋವು ಹಾಗೂ ಅಗ್ನಿಗಳನ್ನು ಒದೆಯುವವನು, ನೀರಿನಲ್ಲಿ ಉಗುಳುವವನು, ಅದರಲ್ಲಿ ಮಲಮೂತ್ರಗಳನ್ನು ವಿಸರ್ಜಿಸು ವವನು—ಮೊದಲಾದವರಿಗೆಲ್ಲ ಪ್ರಾಪ್ತವಾಗುವ ಅವಸ್ಥೆಯು ನಾಳೆಯವರೆಗೆ ನಾನು ಜಯದ್ರಥನನ್ನು ಕೊಲ್ಲದಿದ್ದರೆ ನನಗೂ ಪ್ರಾಪ್ತವಾದೀತು.

ನಗ್ನಸ್ಯ ಸ್ನಾಯಮಾನಸ್ಯ ಯಾ ಚ ವಂಧ್ಯಾತಿಥೇರ್ಗತಿಃ ।
ಉತ್ಕೋಚಿನಾಂ ಮೃಷೋಕ್ತೀನಾಂ ವಂಚಕಾನಾಂ ಚ ಯಾ ಗತಿಃ ॥ ೩೨ ॥
ಆತ್ಮಾಪಹಾರಿಣಾಂ ಯಾ ಚ ಯಾ ಚ ಮಿಥ್ಯಾಭಿಶಂಸಿನಾಮ್ ।
ಭೃತ್ಯೈಃ ಸಂದಿಶ್ಯಮಾನಾನಾಂ ಪುತ್ರದಾರಾಶ್ರಿತೈಸ್ತಥಾ ॥ ೩೩ ॥
ಅಸಂವಿಭಜ್ಯ ಕ್ಷುದ್ರಾಣಾಂ ಯಾ ಗತಿರ್ಮಿಷ್ಟಮಶ್ನತಾಮ್ ।
ತಾಂ ಗಚ್ಛೇಯಂ ಗತಿಂ ಘೋರಾಂ ನ ಚೇದ್ಧನ್ಯಾಂ ಜಯದ್ರಥಮ್ ॥ ೩೪ ॥

ಬೆತ್ತಲಾಗಿ ಸ್ನಾನಮಾಡುವವನು, ಅತಿಥಿಯನ್ನು ಹಿಂದಿರುಗಿ ಕಳುಹಿಸಿಬಿಡುವವನು, ಲಂಚಕೋರ, ಸುಳ್ಳುಗಾರ, ಮೋಸಗಾರ, ತನ್ನನ್ನು ಕುರಿತು ಸುಳ್ಳುಪಳ್ಳು ಕೊಚ್ಚಿ ಕೊಳ್ಳುವವನು, (ಇನ್ನೊಬ್ಬರಲ್ಲಿ) ಇಲ್ಲದ ಕುಂದುಗಳನ್ನು ಎತ್ತಿ ತೋರಿಸುವವನು. ನಿಂದಕನು, ಆಳುಕಾಳುಗಳು, ಆಶ್ರಿತರು, ಮಕ್ಕಳು-ಮರಿಗಳು, ಮಡದಿಯ ಅಪ್ಪಣೆಯನ್ನು ಪಾಲಿಸುವವನು, (ಇನ್ನೊಬ್ಬರಿಗೆ ಇಕ್ಕದೆ) ಮೃಷ್ಟಾನ್ನವನ್ನೆಲ್ಲ ತಾನೊಬ್ಬನೇ ಕಬಳಿಸು ವವನು—ಇಂಥವರೆಲ್ಲರಿಗೆ (ಸಾವಿನ ತರುವಾಯ) ಪ್ರಾಪ್ತವಾಗುವ ದುರವಸ್ಥೆ ಜಯದ್ರಥನನ್ನು ಕೊಲ್ಲದಿದ್ದರೆ ನನಗೂ ಬಾರದಿರದು.

ಸಂಶ್ರಿತಂ ಚಾಪಿ ಯಸ್ತ್ಯಕ್ತ್ವಾ ಸಾಧುಂ ತದ್ವಚನೇ ರತಮ್ ।
ನ ಬಿಭರ್ತಿ ನೃಶಂಸಾತ್ಮಾ ನಿಂದತೇ ಚೋಪಕಾರಿಣಮ್ ॥ ೩೫ ॥
ಅರ್ಹತೇ ಪ್ರಾತಿವೇಶ್ಯಾಯ ಶ್ರಾದ್ಧಂ ಯೋ ನ ದದಾತಿ ಚ ।
ಅನರ್ಹೇಭ್ಯಶ್ಚ ಯೋ ದದ್ಯಾದ್ ವೃಷಲೀಪತಯೇ ತಥಾ ॥ ೩೬ ॥
ಮದ್ಯಪೋ ಭಿನ್ನಮರ್ಯಾದಃ ಕೃತಘ್ನೋ ಭರ್ತೃನಿಂದಕಃ ।
ತೇಷಾಂ ಗತಿಮಿಯಾಂ ಕ್ಷಿಪ್ರಂ ನ ಚೇದ್ಧನ್ಯಾಂ ಜಯದ್ರಥಮ್ ॥ ೩೭ ॥

ನಾನು ಜಯದ್ರಥನನ್ನು ಕೊಲ್ಲದಿದ್ದರೆ, ಆಶ್ರಯಾರ್ಥಿಗಳು, ಸಜ್ಜನರು ಹಾಗೂ ಅಪ್ಪಣೆಯನ್ನು ಪಾಲಿಸುವಲ್ಲಿ ಚಾಚೂ ತಪ್ಪದವರನ್ನು ಬಿಟ್ಟುಕೊಡುವವನು, ಅವರನ್ನು (ಪಾಲನೆ) ಪೋಷಿಸದ ಮರುಳನು, ಉಪಕಾರವನ್ನೆಸಗಿದವನನ್ನು ನಿಂದೆಗೈಯುವವನು,

ಸತ್ಪಾತ್ರನಾದ ನೆರೆಯವನಿಗೆ ಶ್ರಾದ್ಧದ ದಾನವನ್ನು ನೀಡದಿರುವವನು, ಅಯೋಗ್ಯನು ಹಾಗೂ ವೃಷಲೀಪತಿಗೆ ದಾನವನ್ನು ನೀಡುವವನು, ಕುಡುಕ. ಅಂಕೆಯಿಲ್ಲದ ನಡತೆಯುವನು, ಕೃತಘ್ನ ಹಾಗೂ ಒಡೆಯನನ್ನು ನಿಂದಿಸುವವನು—ಇಂಥ ವ್ಯಕ್ತಿಗಳಿಗೆ ಪ್ರಾಪ್ತವಾಗುವ ಗತಿಯು ನನಗೂ ತಡಮಾಡದೆ ಬಂದೀತು.

ಭುಂಜಾನಾನಾಂ ತು ಸವ್ಯೇನ ಉತ್ಸಂಗೇ ಚಾಪಿ ಖಾದತಾಮ್ ।
ಪಾಲಾಶಮಾಸನಂ ಚೈವ ತಿಂದುಕೈರ್ದಂತಧಾವನಮ್ ॥ ೩೮ ॥
ಯೇ ಚಾವರ್ಜಯುತಾಂ ಲೋಕಾಃ ಸ್ವಪತಾಂ ಚ ತಥೋಷಸಿ ।
ಶೀತಭೀತಾಶ್ಚ ಯೇ ವಿಪ್ರಾ ರಣಭೀತಾಶ್ಚ ಕ್ಷತ್ರಿಯಾಃ ॥ ೩೯ ॥
ಏಕಕೂಪೋದಕಗ್ರಾಮೇ ವೇದಧ್ವನಿವಿವರ್ಜಿತೇ ।
ಷಣ್ಮಾಸಂ ತತ್ರ ವಸತಾಂ ತಥಾ ಶಾಸ್ತ್ರಂ ವಿನಿಂದತಾಮ್ ॥ ೪೦ ॥
ದಿವಾಮೈಥುನಿನಾಂ ಚಾಪಿ ದಿವಸೇಷು ಚ ಶೇರತೇ ।
ಅಗಾರದಾಹಿನಾಂ ಚೈವ ಗರದಾನಾಂ ಚ ಯೇ ಮತಾಃ ॥ ೪೧ ॥
ಅಗ್ನ್ಯಾತಿಥ್ಯವಿಹೀನಾಶ್ಚ ಗೋಪಾನೇಷು ಚ ವಿಘ್ನದಾಃ ।
ರಜಸ್ವಲಾಂ ಸೇವಯಂತಃ ಕನ್ಯಾಂ ಶುಲ್ಕೇನ ದಾಯಿನಃ ॥ ೪೨ ॥
ಯಾ ಚ ವೈ ಬಹುಯಾಜಿನಾಂ ಬ್ರಾಹ್ಮಣಾನಾಂ ಶ್ವವೃತ್ತಿನಾಮ್ ।
ಆಸ್ಯಮೈಥುನಿಕಾನಾಂ ಚ ಯೇ ದಿವಾ ಮೈಥುನೇ ರತಾಃ ॥ ೪೩ ॥
ಬ್ರಾಹ್ಮಣಸ್ಯ ಪ್ರತಿಶ್ರುತ್ಯ ಯೋ ವೈ ಲೋಭಾದ್ ದದಾತಿ ನ ।
ತೇಷಾಂ ಗತಿಂ ಗಮಿಷ್ಯಾಮಿ ಶ್ವೋ ನ ಹನ್ಯಾಂ ಜಯದ್ರಥಮ್ ॥ ೪೪ ॥

ಎಡಗೈಯಿಂದ ಉಣ್ಣುವವನು, ತೊಡೆಯ ಮೇಲೆ (ತಟ್ಟೆಯಿಟ್ಟು) ತಿನ್ನುವವನು, ಮುತ್ತುಲ ಮರದ ಕಟ್ಟಿಗೆಯನ್ನು ಆಸನಕ್ಕಾಗಿ ಬಳಸುವವನು, ತಿಂದುಕದ ಕಡ್ಡಿಗಳನ್ನು ಹಲ್ಲುಜ್ಜಲು ಬಳಸುವವನು ಹಾಗೂ ಬೆಳಗಾದಮೇಲೂ ನಿದ್ದೆಯಲ್ಲಿರುವವನು (ಸಾವಿನ ತರುವಾಯ) ಪಡೆಯಲಿದ್ದ ಗತಿಯನ್ನೇ (ನಾನು ಜಯದ್ರಥನನ್ನು ಕೊಲ್ಲದಿದ್ದರೆ ಪಡೆಯುವೆನು). ಬ್ರಾಹ್ಮಣನಾಗಿಯೂ ಚಳಿಗೆ ಹೆದರುವವನು, ಕ್ಷತ್ರಿಯನಾಗಿಯೂ ಕಾಳಗಕ್ಕೆ ಹೆದರುವವನು, ಒಂದೇ ಬಾವಿಯಿರುವ (ಎಲ್ಲ ಜಾತಿಯವರು ಅಲ್ಲಿಂದಲೇ ನೀರು ತುಂಬುವ) ಹಾಗೂ ವೇದಘೋಷಗಳ ಕೊರತೆಯಿರುವ ಊರಲ್ಲಿ ಆರು ತಿಂಗಳು (ಗಿಂತ ಹೆಚ್ಚು ಕಾಲ) ವಾಸಿಸುವವನು, ಶಾಸ್ತ್ರಗಳ ನಿಂದಕನು, ಹಗಲುಹೊತ್ತಿನಲ್ಲಿ ಮಲಗುವವನು ಹಾಗೂ ಸಂಭೋಗಿಸುವವನು, ಅಗ್ನಿಹೋತ್ರವನ್ನು ಹಾಳುಮಾಡುವವನು, ಇನ್ನೊಬ್ಬರಿಗೆ ವಿಷಬಾಧೆಯನ್ನು ಉಂಟುಮಾಡುವವನು, ಅಗ್ನಿಹೋತ್ರಗಳಿಗೆ ಹಾಗೂ ಅತಿಥಿಗಳಿಗೆ ಅಗೌರವ ತೋರುವವನು, ಅಲಕ್ಷ್ಯ ತೋರುವವನು, ಹಾಲು ಕುಡಿವಲ್ಲಿ ತಡೆಯನ್ನು ತಂದೊಡ್ಡುವವನು, ಮುಟ್ಟಾದವಳನ್ನು ಕೂಡಿಕೊಳ್ಳುವವನು, ಶುಲ್ಕವನ್ನು ಪಡೆದು ಕನ್ಯೆಯನ್ನು ದಾನಮಾಡುವವನು, ಹಲವರ ಪೌರೋಹಿತ್ಯವನ್ನು ಕೈಗೊಂಡು ನಾಯಿಯಂತೆ (ದುಡ್ಡಿಗಾಗಿ) ಬಾಯಿಬಿಡುವವನಾದ ಬ್ರಾಹ್ಮಣನು, ಬಾಯಿಮೈಥುನ ಇಲ್ಲವೆ ಹಗಲುಮೈಥುನವನ್ನು ಮಾಡುವವನು, ಬ್ರಾಹ್ಮಣನಿಗೆ ದಾನವನ್ನು ಕೊಡಲೊಪ್ಪಿ

(ದುರಾಶೆಯಿಂದಾಗಿ) ಅದನ್ನು ತಪ್ಪಿಸುವವನು—ಮೊದಲಾದವರಿಗೆ (ಸಾವಿನ ತರು ವಾಯ) ಪ್ರಾಪ್ತವಾಗುವ ಗತಿಯು ನಾಳೆಗೆ ಜಯದ್ರಥ ನನ್ನ ಕೈಯಿಂದ ಸಾಯದಿದ್ದರೆ ನನಗೂ ಪ್ರಾಪ್ತವಾದೀತು.

ಧರ್ಮಾದಪೇತಾ ಯೇ ಚಾನ್ಯೇ ಮಯಾ ನಾತ್ರಾನುಕೀರ್ತಿತಾಃ ।
ಯೇ ಚಾನುಕೀರ್ತಿತಾಸ್ತೇಷಾಂ ಗತಿಂ ಕ್ಷಿಪ್ರಮವಾಪ್ನುಯಾಮ್ ॥ ೪೫ ॥

ಧರ್ಮದಿಂದ ದೂರ ಹೋಗಿರುವವರು ಇನ್ನಾರಾದರೂ ಇದ್ದರೆ ಹಾಗೂ ಮೇಲ್ಗಡೆ ಯಲ್ಲಿ ಅಂಥವರ ಬಗೆಗೆ ನಾನು ಹೇಳಿರದಿದ್ದರೆ (ಸಾವಿನ ನಂತರ) ಅವರಿಗೆ ಬಂದೊದ ಗುವ ಗತಿಯು ನಾಳೆಯವರೆಗೆ ನಾನು ಜಯದ್ರಥನನ್ನು ಕೊಲ್ಲದಿದ್ದರೆ ನನಗೂ ಬಂದೊದಗಲಿ.

ಕರ್ಣ/೯೧

೨

ಕರ್ಣನ ರಥದ ಗಾಲಿ ನೆಲದಲ್ಲಿ ಹೂತುಕೊಂಡಿತ್ತು. ಹೀಗಾಗಿ ಅವನು ಕೆಳಗಿಳಿದು ಬಂದನು. ಗಾಲಿಯನ್ನು ಹೊರಕ್ಕೆತ್ತಲು ಯತ್ನಿಸಹತ್ತಿದನು. ಆಗ ಶ್ರೀಕೃಷ್ಣನು ಅರ್ಜುನನಿಗೆ ಕರ್ಣ ರಥವನ್ನೇರುವ ಮುನ್ನವೇ ಅವನ ಶಿರಚ್ಛೇದವನ್ನು ಮಾಡೆಂದನು. ಅರ್ಜುನನು ಯಮದಂಡದಂತೆ ಬಲುಸಾಮರ್ಥ್ಯವುಳ್ಳ ಆಂಜಲಿಕ ಬಾಣವನ್ನು ಬಿಲ್ಲಿಗೆ ಹಚ್ಚಿ ಹೆದೆಯೇರಿಸಿದನು. ಆಗ ಹೀಗೆಂದನು—

ಅಯಂ ಮಹಾಸ್ತ್ರಪ್ರಹಿತೋ ಮಹಾಶರಃ ಶರೀರಹೃಚ್ಚಾಸುಹರಶ್ಚ ದುರ್ಹೃದಃ ।
ತಪೋಽಸ್ತಿ ತಪ್ತಂ ಗುರವಶ್ಚ ತೋಷಿತಾ ಮಯಾ ಯದೀಷ್ಟಂ ಸುಹೃದಾಂ ಶ್ರುತಂ ತಥಾ ॥ ೪೬ ॥
ಅನೇನ ಸತ್ಯೇನ ನಿಹಂತ್ವಯಂ ಶರಃ ಸುಸಂಹಿತಃ ಕರ್ಣಮರಿಂ ಮಮೋರ್ಜಿತಮ್ ।
ಇತ್ಯೂಚಿವಾಂಸ್ತಂ ಪ್ರಮುಮೋಚ ಬಾಣಂ ಧನಂಜಯಃ ಕರ್ಣವಧಾಯ ಘೋರಮ್ ॥ ೪೭ ॥

ದಿವ್ಯಾಸ್ತ್ರದಿಂದ ಪ್ರೇರಿತವಾದ ಈ ಮಹಾಬಾಣವು ಶತ್ರುವಿನ ಹೃದಯ, ದೇಹ ಹಾಗೂ ಪ್ರಾಣಗಳನ್ನು ನಾಶಗೊಳಿಸಲು ಸಮರ್ಥವಿದೆ. ನಾನು ತಪಸ್ಸನ್ನು ಕೈಕೊಂಡಿದ್ದರೆ, ಗುರುಜನರನ್ನು ಪೂಜಿಸಿ ಅವರನ್ನು ಸಂತುಷ್ಟರನ್ನಾಗಿ ಮಾಡಿದ್ದರೆ, ಯಜ್ಞಯಾಗಗಳನ್ನು ಮಾಡಿದ್ದರೆ, ಹಿತಚಿಂತಕರಾದ ಮಿತ್ರರ ಮಾತುಗಳನ್ನು ಗೌರವಿಸಿದ್ದರೆ, ಇಂಥ ಸಾಮರ್ಥ್ಯವನ್ನು ಒಳಗೊಂಡು ನಾನು ಹೂಡಿದ ಈ ಸಾಮರ್ಥ್ಯಶಾಲಿಯಾದ ಬಾಣವು ನನ್ನ ಶತ್ರುವಾದ ಕರ್ಣನನ್ನು ಕೊಲ್ಲಲಿ.

## ೨. ಇಂದ್ರಾಣಿ (ಶಚಿ) ಉದ್ಯೋಗ/೧೩

ಬ್ರಹ್ಮಹತ್ಯೆಯ ಪಾಪದಿಂದಾಗಿ ಹೆದರಿದ ಇಂದ್ರ ಒಂದು ಅಜ್ಞಾತವಾದ ತಾಣಕ್ಕೆ ಹೋಗಿಬಿಟ್ಟನು. ನಹುಷನು ಇಂದ್ರಪದವನ್ನು ಪಡೆದನು. ಅವನ ಕಣ್ಣು ಬೇರೆ

ಸುಖೋಪಭೋಗಗಳಂತೆಯೇ ಇಂದ್ರಾಣಿಯುತ್ತಲೂ ಹೊರಳಿತು. ಅವನು ಅವಳನ್ನು ಕೇಳಿದನು. ಇಂದ್ರಾಣಿ ಬಲುದುಃಖಿತಳಾದಳು. ಅವಳು ಒಂದು ಅವಧಿಯನ್ನು ಕೇಳಿ ಕೊಂಡಳು. ಅಷ್ಟರಲ್ಲಿ ಇಂದ್ರನ ಗೊತ್ತುಗುರಿ ತಿಳಿಯದಿದ್ದಲ್ಲಿ ನಹುಷನ ಬಯಕೆಯನ್ನು ಮನ್ನಿಸುವುದಾಗಿ ಹೇಳಿದಳು. ಅವಳು ಬೃಹಸ್ಪತಿಯನ್ನು ಮೊರೆಹೊಕ್ಕಳು. ನಡೆದು ದನ್ನೆಲ್ಲ ಅವನಿಗೆ ಅರುಹಿದಳು. ಅವನು ಅವಳಿಗೆ ಅಭಯವನ್ನಿತ್ತನು. ಅವಳಿಗೆ ಇಂದ್ರ ನನ್ನು ಭೆಟ್ಟಿಮಾಡಿಸುವುದಾಗಿ ಮಾತುಕೊಟ್ಟನು. ಇಂದ್ರ ಪಾಪಮುಕ್ತನಾಗಲೆಂದು ವಿಷ್ಣುವು ದೇವತೆಗಳಿಗೆ ಅಶ್ವಮೇಧ ಮೊದಲಾದ ಯಜ್ಞಗಳನ್ನು ಮಾಡಲು ಹೇಳಿದನು. ಅವರು ಹಾಗೆ ಮಾಡಿ ಅವನನ್ನು ಪಾಪದಿಂದ ಬಿಡುಗಡೆಗೊಳಿಸಿದರು. ಆದರೆ ದೇವತೆ ಗಳ ವರದಾನದಿಂದಾಗಿಯೇ ಸಮರ್ಥನಾದ ನಹುಷ ಇಂದ್ರಪದದ ಮೇಲಿದ್ದುದನ್ನು ಕಂಡು ಇಂದ್ರ ಮತ್ತೆ ಅಜ್ಞಾತವಾಸಕ್ಕೆ ತೆರಳಿದನು. ಹೀಗಾಗಿ ಇಂದ್ರಾಣಿ ಬಹಳೇ ದುಃಖಿತಳಾದಳು. ಅವಳ ವಿಲಾಪದಲ್ಲಿ ಸತ್ಯಕ್ರಿಯೆ ಇದೆ.

ಯದಿ ದತ್ತಂ ಯದಿ ಹುತಂ ಗುರವಸ್ತೋಷಿತಾ ಯದಿ ।
ಏಕಭರ್ತೃತ್ವಮೇವಾಸ್ತು ಸತ್ಯಂ ಯದ್ಯಸ್ತಿ ವಾ ಮಯಿ ॥ ೨೪ ॥
ಪುಣ್ಯಾಂ ಚೇಮಾಮಹಂ ದಿವ್ಯಾಂ ಪ್ರವೃತ್ತಾಮುತ್ತರಾಯಣೇ ।
ದೇವೀಂ ರಾತ್ರಿಂ ನಮಸ್ಯಾಮಿ ಸಿಧ್ಯತಾಂ ಮೇ ಮನೋರಥಃ ॥ ೨೫ ॥

'ನನ್ನ ಕೈಯಿಂದ ದಾನಧರ್ಮಗಳು ನಡೆದದ್ದಿದ್ದರೆ, ಹವನಗಳು ನಡೆಸಲ್ಪಟ್ಟಿದ್ದರೆ, ಸೇವೆಯಿಂದ ಗುರುಜನರನ್ನು ಸಂತುಷ್ಟನನ್ನಾಗಿ ಮಾಡಿದ್ದಿದ್ದರೆ, ನಾನು ಸತ್ಯವನ್ನು ಪಾಲಿಸುತ್ತ ಬಂದಿದ್ದರೆ ನನ್ನ ಪಾತಿವ್ರತ್ಯಕ್ಕೆ ಧಕ್ಕೆ ತಗಲದಿರಲಿ. ಉತ್ತರಾಯಣದಲ್ಲಿ ಬಂದ ದಿವ್ಯವಾದ ಹಾಗೂ ಪುಣ್ಯಪ್ರದವಾದ ಈ ಇರುಳಲ್ಲಿ ಅವರ ಅಧಿಷ್ಠಾತ್ರಿದೇವತೆ ಯಾದ ಉಪಶ್ರುತಿಗೆ ನನ್ನ ನಮಸ್ಕಾರಗಳು. ಅವಳ ಕೃಪಾಪ್ರಸಾದದಿಂದಾಗಿ ನನ್ನ ಬಯಕೆ ಈಡೇರಲಿ.'

ಅವಳು ತನ್ನ ಸತ್ಯ ಹಾಗೂ ಪಾತಿವ್ರತ್ಯದ ಪುಣ್ಯ ಇವುಗಳ ಮೂಲಕ ಉಪಶ್ರುತಿ ದೇವಿಯನ್ನು ಆವಾಹಿಸಿದಳು. ಅವಳನ್ನು ಪೂಜಿಸಿದಳು. ಅವಳೆಂದಳು—

ಯತ್ರಾಸ್ತೇ ದೇವರಾಜೋಽಸೌ ತಂ ದೇಶಂ ದರ್ಶಯಸ್ವ ಮೇ ।
ಇತ್ಯಾಹೋಪಶ್ರುತಿಂ ದೇವೀಂ ಸತ್ಯಂ ಸತ್ಯೇನ ದೃಶ್ಯತೇ ॥ ೨೭ ॥

'ಎಲೈ ದೇವಿಯೇ ! ನನ್ನ ಗಂಡನಿರುವ ತಾಣವನ್ನು ನನಗೆ ತೋರಿಸು. ಸತ್ಯದ ಪ್ರಭಾವದಿಂದಲೇ ನನಗೆ ಸತ್ಯದ ದರ್ಶನವಾಗಲಿ.'

## ೩. ಗಾಂಧಾರಿ

ಆದಿ/೧೧೫

೧

ಮಹರ್ಷಿಗಳಾದ ವ್ಯಾಸರ ಕೃಪಾಪ್ರಸಾದದಿಂದಾಗಿ ತನ್ನ ಹೊಟ್ಟೆಯಲ್ಲಿ ನೂರು ಜನ ಗಂಡುಮಕ್ಕಳು ತಪ್ಪದೆ ಹುಟ್ಟಿಯೇ ಹುಟ್ಟುವರೆಂಬ ಬಗೆಗೆ ಗಾಂಧಾರಿಗೆ ಸಂದೇಹವಿರ

ಲಿಲ್ಲ. ಹೆಣ್ಣುಹೃದಯವಾದ್ದರಿಂದ ತನಗೆ ಒಬ್ಬಳಾದರೂ ಮಗಳು ಬೇಕೇಬೇಕೆಂದು ಬಯಸಿದ್ದಳು. ತನ್ನ ಅಳಿಯ-ಮಗಳಿಂದ ತನಗೊಂದು ಮೊಮ್ಮಗು ಬೇಕೆಂದು ಹೆಣ್ಣು ಜಾತಿ ಬಯಸುವುದು ಸಹಜ. ಹೀಗಾಗಿ ಅವಳು ತನ್ನ ಬಯಕೆಯನ್ನು ಈಡೇರಿಸಿಕೊಳ್ಳಲೆಂದು ಈ ಮುಂದಿನಂತೆ ಸತ್ಯಕ್ರಿಯೆಯನ್ನು ಉಚ್ಚರಿಸಿದಳು—

ಯದಿ ಸತ್ಯಂ ತಪಸ್ತಪ್ತಂ ದತ್ತಂ ವಾಪ್ಯಥವಾ ಹುತಮ್ ॥ ೧೩ ॥
ಗುರವಸ್ತೋಷಿತಾ ವಾಽಪಿ ತಥಾಸ್ತು ದುಹಿತಾ ಮಮ ॥ ೧೪ ॥

'ನನ್ನಿಂದ ಯಾವುದಾದರೂ ಮನಗೊಟ್ಟು ಕೈಕೊಳ್ಳಲಾದ ತಪಸ್ಸು, ಮನದಿಂದ ಕೊಡಲಾದ ದಾನವಿದ್ದರೆ, ಅಗ್ನಿಯ ಪೂಜೆಯಾಗಿದ್ದರೆ, (ಸೇವೆಗೈದು) ಗುರುಗಳನ್ನು ಪ್ರಸನ್ನಗೊಳಿಸಲಾಗಿದ್ದರೆ (ಆ ಪುಣ್ಯದಿಂದ) ನನಗೆ ಕನ್ಯಾಲಾಭ ಆಗಲಿ.'

ಸ್ತ್ರೀ/೧೭

೨

ಗಾಂಧಾರಿ ದುರ್ಯೋಧನನ ಹೆಣವನ್ನು ಕಂಡು ತೀವ್ರದುಃಖಿತಳಾದಳು. ಅವಳು ಹೆಣದ ಮೇಲೆ ಕಣ್ಣೀರು ಸುರಿಸುತ್ತ ಶ್ರೀಕೃಷ್ಣನಿಗೆಂದಳು—

ಯದಿ ಸತ್ಯಾಗಮಾಃ ಸಂತಿ ಯದಿ ವೈ ಶ್ರುತಯಸ್ತಥಾ ।
ಧ್ರುವಲೋಕಾನವಾಪ್ತೋಽಯಂ ನೃಪೋ ಬಾಹುಬಲಾರ್ಜಿತಾನ್ ॥ ೩೨ ॥

ವೇದ ಹಾಗೂ ಶಾಸ್ತ್ರಗಳು ನಿಜವಿದ್ದರೆ ನನ್ನ ಮಗ ದುರ್ಯೋಧನನಿಗೆ ಅವನ ಬಾಹುಬಲದಿಂದಲೇ ಪುಣ್ಯಲೋಕವು ಪ್ರಾಪ್ತವಾಗಿರಬೇಕು.

+ ಸಾಮಾನ್ಯವಾಗಿ ಸತ್ಯಕ್ರಿಯೆಯನ್ನು ಉಚ್ಚರಿಸುವಾಗ ತಮ್ಮ ಬಳಿಯಲ್ಲಿ ಇದ್ದ ಸದ್ಗುಣಗಳು, ಪುಣ್ಯ, ಸತ್ಕೃತ್ಯಗಳನ್ನು ಪ್ರಸ್ತಾಪಿಸಲಾಗುತ್ತದೆ. ಗಾಂಧಾರಿಯಾದರೋ ವೇದ ಹಾಗೂ ಶಾಸ್ತ್ರಗಳ ಸತ್ಯವಂತಿಕೆಯನ್ನೇ ಉಚ್ಚರಿಸಿದ್ದಾಳೆ. ಗಾಂಧಾರಿಯ ಈ ಮಾತುಗಳೆಂದರೆ ಸತ್ಯಕ್ರಿಯೆಗಿಂತಲೂ ಹೆಚ್ಚಾಗಿ ಅವಳ ಮನಸ್ಸಿನ ಸಮಾಧಾನಕ್ಕೆ ಸಂಬಂಧಪಟ್ಟವುಗಳಾಗಿವೆ.

## ೪. ದಮಯಂತಿ

ವನ/೫೭

೧

ದಮಯಂತಿಯು ವರಮಾಲೆಯನ್ನು ಹಿಡಿದು ಸ್ವಯಂವರಮಂಟಪದಲ್ಲಿ ನಿಂತಿದ್ದಳು. ಆಗ ಅವಳಿಗೆ ಒಂದೇ ರೂಪದ ಐವರು ಪುರುಷರು ಸಾಲಾಗಿ ವಿರಾಜಮಾನರಾಗಿದ್ದುದು ಕಂಡಿತು. ಅವರೆಲ್ಲರೂ ನಲನಂತೆಯೇ ಕಂಡದ್ದರಿಂದ ಅವಳು ಗೊಂದಲಕ್ಕೀಡಾದಳು. ನಿಷಧಪತಿಯಾದ ನಲನು ಯಾರೆಂಬುದನ್ನು ಗುರುತಿಸಲು ಬಾರದಂತಾಯಿತು. ಹೀಗಾಗಿ ಅವಳು ಕಷ್ಟದಲ್ಲಿ ಸಿಲುಕಿಕೊಂಡಳು. ಅವಳು ದೇವತೆಗಳನ್ನು ಮೊರೆಹೊಕ್ಕು ತನ್ನ ಕೈಜೋಡಿಸಿ ಇಂತೆಂದಳು—

ಹಂಸಾನಾಂ ವಚನಂ ಶ್ರುತ್ವಾ ಯಥಾ ಮೇ ನೈಷಧೋ ವೃತಃ ।
ಪತಿತ್ವೇ ತೇನ ಸತ್ಯೇನ ದೇವಾಸ್ತಂ ಪ್ರದಿಶಂತು ಮೇ ॥ ೧೭ ॥
ಮನಸಾ ವಚಸಾ ಚೈವ ಯಥಾ ನಾಭಿಚರಾಮ್ಯಹಮ್ ।
ತೇನ ಸತ್ಯೇನ ವಿಬುಧಾಸ್ತಮೇವ ಪ್ರದಿಶಂತು ಮೇ ॥ ೧೮ ॥
ಯಥಾ ದೇವೈಃ ಸ ಮೇ ಭರ್ತಾ ವಿಹಿತೋ ನಿಷಧಾಧಿಪಃ ।
ತೇನ ಸತ್ಯೇನ ಮೇ ದೇವಾಸ್ತಮೇವ ಪ್ರದಿಶಂತು ಮೇ ॥ ೧೯ ॥
ಯಥೇದಂ ವ್ರತಮಾರಬ್ಧಂ ನಲಸ್ಯಾರಾಧನೇ ಮಯಾ ।
ತೇನ ಸತ್ಯೇನ ಮೇ ದೇವಾಸ್ತಮೇವ ಪ್ರದಿಶಂತು ಮೇ ॥ ೨೦ ॥
ಸ್ವಂ ಚೈವ ರೂಪಂ ಕುರ್ವಂತು ಲೋಕಪಾಲಾ ಮಹೇಶ್ವರಾಃ ।
ಯಥಾಹಮಭಿಜಾನೀಯಾಂ ಪುಣ್ಯಶ್ಲೋಕಂ ನರಾಧಿಪಮ್ ॥ ೨೧ ॥

ಹಂಸನ ಹೇಳಿಕೆಯನ್ನು ನಂಬಿ ನಾನು ನಲರಾಜನಿಗೆ ಒಲಿದುದು ನಿಜವಿದ್ದರೆ ಅದರ ಸಾಮರ್ಥ್ಯದಿಂದಲೇ ದೇವತೆಗಳು ನನಗೆ ನಿಜವಾದ ನಿಷಧಾಧಿಪತಿಯನ್ನು ಗುರುತು ಮಾಡಿ ಕೊಡಲಿ. ಮಾತು, ಮನಸ್ಸು ಹಾಗೂ ಕೃತಿಗಳ ಮೂಲಕ ನನ್ನಿಂದ ಸದಾಚರಣೆಯನ್ನು ತೊರೆದು ಆಚರಣೆಯಾಗಿರದಿದ್ದರೆ ಆ ಪುಣ್ಯದಿಂದ ದೇವತೆಗಳೇ ನನಗೆ ನಿಜವಾದ ನಲನ ಗುರುತು ಹತ್ತುವಂತೆ ಮಾಡಲಿ. ನೈಷಧನೇ ನನಗೆ ಗಂಡನಾಗಲಿ ಎಂದು ದೇವತೆಗಳೇ ಯೋಜಿಸಿದ್ದರೆ ಸತ್ಯದ ಸಾಮರ್ಥ್ಯದಿಂದಾಗಿ ದೇವತೆಗಳಿಂದಲೇ ನನಗೆ ನಿಜವಾದ ನಲನನ್ನು ಗುರುತು ಮಾಡಿಕೊಡುವಂತಾಗಲಿ. ನಾನು ನಲನನ್ನು ಪಡೆಯಲೆಂದೇ ಈ ವ್ರತವನ್ನು ಆರಂಭಿಸಿರುವೆನಾದರೆ ಆ ಸತ್ಯಕ್ಕಾಗಿ ದೇವತೆಗಳೇ ನನಗೆ ನಿಜವಾದ ನಲನನ್ನು ಕಂಡುಹಿಡಿಯುವಲ್ಲಿ ನೆರವಾಗಲಿ. ಮಹೇಶ್ವರ ಲೋಕಪಾಲರೇ ತಮ್ಮ ರೂಪವನ್ನು ಪ್ರಕಟಿಸಿದರೆ ಪುಣ್ಯಶ್ಲೋಕನಾದ ನಲನ ಗುರುತು ಸಹಜವಾಗಿಯೇ ನನಗಾದೀತು.

ದಮಯಂತಿಯು ದೇವತೆಗಳ ಕೃಪೆಯಿಂದಾಗಿ ನಿಜವಾದ ನಲನ ಕೊರಳಿಗೆ ವರಮಾಲೆಯನ್ನು ಹಾಕಿದಳು.

+ ಮನಸ್ಸು, ಮಾತು, ಕೃತಿ, ಸದಾಚಾರ, ಏಕನಿಷ್ಠೆ, ವ್ರತಾಚರಣೆ ಮೊದಲಾದ ಉಲ್ಲೇಖಗಳು ಮುಖ್ಯವಾದವುಗಳು.

**ವನ/೯೩**

**೨**

ದಮಯಂತಿಯು ವ್ಯಾಧನಿಗಿತ್ತ ಶಾಪದಲ್ಲಿ ಸತ್ಯಕ್ರಿಯೆಯೂ ಇದೆ. (ನೋಡಿ : ಶಾಪ–ದಮಯಂತಿ > ಬೇಡ)

**ವನ/೬೩**

**೩**

ಸಂಳ್ಳ ಸ್ವಯಂವರದ ವಾರ್ತೆಯನ್ನು ಕೇಳಿ ಋತುಪರ್ಣ ರಾಜನನ್ನು ಅದಕ್ಕೆಂದು ಒಂದೇ ದಿನದಲ್ಲಿ ಅಷ್ಟೊಂದು ದೂರದ ಅಂತರವನ್ನು ಕ್ರಮಿಸಿ ಕರೆತಂದ ಸಾರಥಿ ಬಾಹುಕನೆಂದರೆ ನಲನೇ ಆಗಿರಬಹುದೆಂದು ದಮಯಂತಿಗೆ ಒಳಗೊಳಗೇ ಅನ್ನಿಸುತ್ತಿತ್ತು. ಆದರೂ ಅವಳು ದಾಸಿಯ ಮೂಲಕ ಅವನನ್ನು ಹಲವು ಬಗೆಗಳಿಂದ ಪರೀಕ್ಷಿಸಿ ನೋಡಿ

ದಳು. ತನಗೆ ಮನದಟ್ಟಾದಬಳಿಕ ಅವಳು ತನ್ನ ತಾಯಿ-ತಂದೆಗಳ ಒಪ್ಪಿಗೆಯನ್ನು ಪಡೆದು ಅವನನ್ನು ಗುಟ್ಟಾಗಿ ಕಂಡಳು. ಅವರಿಬ್ಬರೂ ಬಿಚ್ಚುಮನದಿಂದ ಮಾತನಾಡಿಕೊಂಡರು. ಅದೆಂಥ ಸನ್ನಿವೇಶದಲ್ಲಿ ತಾನು ಋತುಪರ್ಣನನ್ನು ಅಲ್ಲಿಗೆ ಕರೆತಂದೆನು ಎಂಬುದನ್ನು ನಲನು ಸವಿಸ್ತರವಾಗಿ ಹೇಳಿದನು. ಅದನ್ನು ಆಲಿಸಿ ದಮಯಂತಿ ನಲನಿಗೆ ಸಂಳ್ಳುಸ್ವಯಂವರದ ಗುರಿಯೇ ಅವನನ್ನು ಕಂಡುಹಿಡಿಯುವುದಾಗಿತ್ತು ಎಂದು ಹೇಳಿದಳು. ಇಷ್ಟಾಗಿಯೂ ಅವನ ಮನದಲ್ಲಿ ತನ್ನ ಶೀಲವನ್ನು ಕುರಿತು ಯಾವುದೇ ಸಂದೇಹ ಉಳಿಯದಿರಲೆಂದು ಅವಳು ಹೀಗೆಂದಳು—

ಅಯಂ ಚರತಿ ಲೋಕೇಽಸ್ಮಿನ್ ಭೂತಸಾಕ್ಷೀ ಸದಾಗತಿಃ ।
ಏಷ ಮೇ ಮುಂಚತು ಪ್ರಾಣಾನ್ ಯದಿ ಪಾಪಂ ಚರಾಮ್ಯಹಮ್ ॥ ೩೨ ॥
ಯಥಾ ಚರತಿ ತಿಗ್ಮಾಂಶುಃ ಪರೇಣ ಭುವನಂ ಸದಾ ।
ಸ ಮುಂಚತು ಮಮ ಪ್ರಾಣಾನ್ ಯದಿ ಪಾಪಂ ಚರಾಮ್ಯಹಮ್ ॥ ೩೩ ॥
ಚಂದ್ರಮಾಃ ಸರ್ವಭೂತಾನಾಮಂತಶ್ಚರತಿ ಸಾಕ್ಷಿವತ್ ।
ಸ ಮುಂಚತು ಮಮ ಪ್ರಾಣಾನ್ ಯದಿ ಪಾಪಂ ಚರಾಮ್ಯಹಮ್ ॥ ೩೪ ॥
ಏತೇ ದೇವಾಸ್ತ್ರಯಃ ಕೃತ್ಸ್ನಂ ತ್ರೈಲೋಕ್ಯಂ ಧಾರಯಂತಿ ವೈ ।
ವಿಬ್ರುವಂತು ಯಥಾ ಸತ್ಯಮೇತದ್ ದೇವಾಸ್ತ್ಯಜಂತು ಮಾಮ್ ॥ ೩೫ ॥

ಪ್ರಾಣಿಮಾತ್ರರೆಲ್ಲರಿಗೂ ಸಾಕ್ಷಿಯಾಗಿ ಇರುವ ವಾಯುವು (ಎಲ್ಲೆಡೆಯಲ್ಲೂ) ಸಂಚರಿಸುತ್ತಿರುತ್ತಾನೆ. ನನ್ನ ಕೈಯಿಂದ ಯಾವುದಾದರೂ ಪಾಪಾಚರಣೆ ನಡೆದಿದ್ದರೆ ಅವನು ನನ್ನ ಪ್ರಾಣವನ್ನು ಕಸಿದುಕೊಳ್ಳಲಿ. ಚಂಡಕಿರಣನಾದ ಸೂರ್ಯನ ಸಂಚಾರ ಪ್ರಪಂಚದ ತುಂಬೆಲ್ಲ ಇದೆ. ನಾನೇನಾದರೂ ಪಾಪವನ್ನು ಎಸಗಿದ್ದರೆ (ಅವನದನ್ನು ಕಂಡಿರಲು ಸಾಕು) ಅವನು ನನ್ನ ಪ್ರಾಣವನ್ನು ಕಸಿದುಕೊಳ್ಳಲಿ. ಚಂದ್ರನು ಯಾವಾಗಲೂ ಪ್ರಾಣಿಮಾತ್ರರೆಲ್ಲರ ಮನಗಳಲ್ಲಿ ವಾಸಿಸುವವನು. ನಾನೇನಾದರೂ ಪಾಪವನ್ನು ಎಸಗಿದ್ದರೆ (ಅವನಿಗದು ತಿಳಿಯದಿರದು) ಅವನು ನನ್ನ ಪ್ರಾಣವನ್ನು ಕಸಿದುಕೊಳ್ಳಲಿ. ಮೂವರು ದೇವತೆಗಳು ಕೂಡಿ ಈ ತ್ರೈಲೋಕ್ಯಗಳನ್ನು ಧರಿಸುತ್ತಾರೆ. ಹೀಗಾಗಿ ನನ್ನ ಹೇಳಿಕೆಯ ನೈಜತೆಯನ್ನು ಅವರೇ (ನಲನಿಗೆ) ಸ್ಪಷ್ಟಗೊಳಿಸಲಿ. ನಾನು ಸುಳ್ಳು ಹೇಳುತ್ತಿದ್ದರೆ ಅವರು ನನ್ನನ್ನು ತೊರೆದುಬಿಡಲಿ.

ವಾಯು, ಸೂರ್ಯ, ಚಂದಿರರೇ ತನ್ನ ಶೀಲವನ್ನು (ನಲನಿಗೆ) ಮನಗಾಣಿಸಲೆಂಬ ಆವಾಹನೆ ಇಲ್ಲಿದೆ.

## ೫. ಧೃಷ್ಟದ್ಯುಮ್ನ

ದ್ರೋಣ/೧೮೬

ದ್ರೋಣನು ವಿರಾಟ, ದ್ರುಪದ ಹಾಗೂ ಕೇಕಯರನ್ನು ಕೊಂದನು. ಚೇದಿ, ಮತ್ಸ್ಯ ಹಾಗೂ ಪಾಂಚಾಲರಲ್ಲದೆ ದ್ರುಪದನ ಮೊಮ್ಮಕ್ಕಳನ್ನೂ ಕೂಡ ಯಮಸದನಕ್ಕೆ ಕಳಿಸಿದನು. ದ್ರೋಣನ ಈ ಕ್ರೂರ ಕೃತ್ಯದಿಂದಾಗಿ ಧೃಷ್ಟದ್ಯುಮ್ನನು ಸಂತಪ್ತನಾದನು. ಯೋದ್ಧರೆಲ್ಲರ ಎದುರಿನಲ್ಲಿಯೇ ಅವನು ಪ್ರತಿಜ್ಞಾಪೂರ್ವಕವಾಗಿ ಹೀಗೆಂದನು—

ಶಶಾಪ ರಥಿನಾಂ ಮಧ್ಯೇ ಧೃಷ್ಟದ್ಯುಮ್ನೋ ಮಹಾಮನಾಃ ॥ ೪೫ ॥
ಇಷ್ಟಾಪೂರ್ತಾತ್ ತಥಾ ಕ್ಷಾತ್ರಾದ್ ಬ್ರಾಹ್ಮಣ್ಯಾಚ್ಚ ಸ ನಶ್ಯತು ।
ದ್ರೋಣೋ ಯಸ್ಮಾದ್ಯ ಮುಚ್ಯೇತ ಯಂ ವಾ ದ್ರೋಣಃ ಪರಾಭವೇತ್ ॥
॥ ೪೬ ॥

'ಈ ದಿನ ದ್ರೋಣ ನನ್ನಿಂದ (ಜೀವದೊಂದಿಗೆ) ಪಾರಾದನೆಂದರೆ ಇಲ್ಲವೆ ಅವನು ನನ್ನನ್ನು ಸೋಲಿಸಿದನಾದರೆ ನನ್ನಿಂದ (ಇಂದಿನವರೆಗೆ) ನಡೆದ ಇಷ್ಟಗಳು, ಆಪೂರ್ತಗಳು ನನ್ನ ಕ್ಷತ್ರಿಯತ್ವ ಹಾಗೂ ಬ್ರಾಹ್ಮಣ್ಯಗಳೆಲ್ಲವುಗಳೂ ನಾಶಹೊಂದಿಯಾವು.'*

## ೯. ನಾಗರಿಕರು ಆದಿ/೨೦೬

ಪಾಂಡವರು ದ್ರೌಪದಿಯನ್ನು ಮದುವೆಯಾಗಿ ದ್ರುಪದನ ಒಪ್ಪಿಗೆಯನ್ನು ಪಡೆದು ಹಸ್ತಿನಾಪುರಕ್ಕೆ ಬರಲು ನಿರ್ಧರಿಸಿದರು. ಈ ವಾರ್ತೆ ರಾಜಧಾನಿಯನ್ನು ತಲುಪಿತು. ಪ್ರಜೆಗಳಿಗೆಲ್ಲ ಬಲು ಸಂತೋಷವಾಯಿತು. ಪಾಂಡವರ ಬಗೆಗೆ ಅವರಲ್ಲಿದ್ದ ಪ್ರೇಮ ಗೌರವಗಳು ಅವರ ಮಾತುಗಳಲ್ಲಿ ವ್ಯಕ್ತಗೊಳ್ಳುತ್ತಿದ್ದವು. ಕೆಲವು ಜನ ನಾಗರಿಕರು ಹೀಗೆಂದರು—

ಯದಿ ದತ್ತಂ ಯದಿ ಹುತಂ ವಿದ್ಯತೇ ಯದಿ ನಸ್ತಪಃ ।
ತೇನ ತಿಷ್ಠಂತು ನಗರೇ ಪಾಂಡವಾಃ ಶರದಾಂ ಶತಮ್ ॥ ೨೦ ॥

ನಾವೇನಾದರೂ ದಾನಧರ್ಮಗಳನ್ನು ಮಾಡಿದ್ದರೆ, ಹೋಮಹವನಗಳಿಂದ (ಅಗ್ನಿಯನ್ನು) ಸಂತುಷ್ಟಪಡಿಸಿದ್ದರೆ, ನಮ್ಮಿಂದೇನಾದರೂ ತಪಸ್ಸು ಆಚರಿಸಲ್ಪಟ್ಟಿದ್ದರೆ, (ಆ ಪುಣ್ಯದಿಂದಾಗಿ) ಪಾಂಡವರಿಗೆ ಈ ರಾಜಧಾನಿಯಲ್ಲಿ ಶತಾಯುಷ್ಯ ಲಭಿಸಲಿ.

ಆಶೀರ್ವಾದ ಹಾಗೂ ಸದಿಚ್ಛೆಗಳೆರಡೂ ಈ ಸತ್ಕ್ರಿಯೆಯಲ್ಲಿ ವ್ಯಕ್ತಗೊಂಡಿವೆ.

## ೭. ಪಾಂಡವರ ಪಾಳೆಯದ ಕೆಲವು ಜನ ದ್ರೋಣ/೭೯

ಅಭಿಮನ್ಯುವಿನ ನಿರ್ದಯವಾದ ಕೊಲೆಯಿಂದಾಗಿ ಅರ್ಜುನ ಬಲು ವ್ಯಥಿತನಾದನು. ಅವನು ಜಯದ್ರಥನನ್ನು ಕೊಲ್ಲಲು ಪಣ ತೊಟ್ಟನು. ಅರ್ಜುನನ ಕೈಯಿಂದ

* ನೀಲಕಂಠನು ತನ್ನ ಟೀಕೆಯಲ್ಲಿ ಇಷ್ಟ, ಆಪೂರ್ತ, ಕ್ಷತ್ರಿಯತ್ವ ಹಾಗೂ ಬ್ರಾಹ್ಮಣ್ಯಗಳನ್ನು ವಿಶದಪಡಿಸಿದ್ದಾನೆ. ಅದು ಹೀಗೆ—

ಇಷ್ಟಂ ಯಾಗಹೋಮಾದಿ । ಆಪೂರ್ತಂ ಕ್ಷೇತ್ರಾರಾಮಾದಿ । ಕ್ಷಾತ್ರಂ ದ್ರುಪದಕುಲೋತ್ಪನ್ನತ್ವಾತ್ । ಬ್ರಾಹ್ಮಣ್ಯಂ ಯಾಜೋಪಯಾಜಯೋರ್ಬ್ರಾಹ್ಮಣಯೋಸ್ತಪಸಾ ಬ್ರಾಹ್ಮಣರೂಪಾದಗ್ನೇಶ್ಚ ಜಾತತ್ವಾತ್ । ಏತತ್ಸರ್ವಂ ತಸ್ಯ ನಶ್ಯತು ।

ಇಷ್ಟಂ ಅಂದರೆ ಯಾಗ, ಹೋಮಾದಿಗಳು. ಆಪೂರ್ತಂ ಅಂದರೆ ಕ್ಷೇತ್ರ, ಉದ್ಯಾನ ಮೊದಲಾದವುಗಳು. ಕ್ಷಾತ್ರಮ್–ದ್ರುಪದಮನೆತನದಲ್ಲಿ ಹುಟ್ಟಿಬರುವುದು. ಋತ್ವಿಜರ ಯಾಜ, ಉಪಯಾಜಗಳೆಂಬ (ಎರಡು ಬಗೆಯ) ತಪಸ್ಸುಗಳಿಂದಲೂ, ಬ್ರಾಹ್ಮಣರೂಪದ ಅಗ್ನಿಯಿಂದ ಹುಟ್ಟಿಬಂದುದರಿಂದ ದೊರೆತ ಬ್ರಾಹ್ಮಣ್ಯಗಳೆಲ್ಲ ನಾಶಹೊಂದಲಿ.

ಜಯದ್ರಥನ ಕೊಲೆಯಾಗಲಿದೆಯೆಂಬುದು ಪಾಂಡವರ ಪಾಳೆಯದವರೆಲ್ಲರಿಗೂ ಖಂಡಿತ ವಾಗಿ ಗೊತ್ತಿತ್ತು. ತಪ್ಪಿ ಹಾಗಾಗದೆ ಹೋದರೆ ಅರ್ಜುನ ಬೆಂಕಿಗೆ ಹಾರಿಕೊಳ್ಳುವನೆಂಬ ಹೆದರಿಕೆ ಅವರಿಗಿತ್ತು. ಹೀಗಾಗಿ ಅಲ್ಲಿಯ ಕೆಲವು ಜನ ಈ ರೀತಿಯಾಗಿ ಸತ್ಯಕ್ರಿಯೆಯನ್ನು ಕೈಕೊಂಡರು—

ಯದಿ ನೋऽಸ್ತಿ ಕೃತಂ ಕಿಂಚಿದ್ ಯದಿ ದತ್ತಂ ಹುತಂ ಯದಿ ॥ ೧೮ ॥
ಫಲೇನ ತಸ್ಯ ಸರ್ವಸ್ಯ ಸವ್ಯಸಾಚೀ ಜಯತ್ವರೀನ್ ॥ ೧೯ ॥

ನಮ್ಮಿಂದ ಯಾವುದಾದರೂ ಸತ್ಕರ್ಮ ಜರುಗಿದ್ದರೆ, ದಾನವನ್ನು ಕೊಡಲಾಗಿದ್ದರೆ, ಯಜ್ಞಗಳಾಗಿದ್ದರೆ, ಅವೆಲ್ಲ (ಸತ್ಕೃತ್ಯಗಳ) ಫಲ ನೀಡಿ ಅರ್ಜುನನ ಕೊರಳಿಗೆ ವಿಜಯ ಶ್ರೀಯ ಮಾಲೆಯನ್ನು ಹಾಕುವಂತಾಗಲಿ.

## ೮. ಭೀಮ

ಸಭಾ/೬೮

ಜೂಜಾಟದ ಕಾಲಕ್ಕೆ ಯುಧಿಷ್ಠಿರನು ತನ್ನ ರಾಜ್ಯ, ಐಶ್ವರ್ಯ, ಸೋದರರು ಹಾಗೂ ಮಡದಿಯನ್ನು ಕೂಡ ಪಣಕ್ಕೊಡ್ಡಿ ಎಲ್ಲವನ್ನೂ ಕಳೆದುಕೊಂಡು ಕುಳಿತನು. ದ್ರೌಪದಿ ಮುಟ್ಟಾಗಿದ್ದಳು. ದುಶ್ಶಾಸನನು ಅವಳನ್ನು ಅಂಥ ಅವಸ್ಥೆಯಲ್ಲಿಯೇ ತುಂಬುಸಭೆಗೆ ಎಳೆತಂದನು. ಅವಳನ್ನು ಅವಮಾನಕ್ಕೀಡುಮಾಡಿದನು. ಕರ್ಣನಂತೂ ಬಾಯಿಗೆ ಬಂದಂತೆ ಹೊಲಸುಹೊಲಸಾಗಿ ಬಡಬಡಿಸಹತ್ತಿದನು. ಇದೆಲ್ಲವನ್ನು ಕಂಡು ಭೀಮನಿಗೆ ಸಹಿಸಿಕೊಳ್ಳಲಾಗಲಿಲ್ಲ. ಅವನು ಕೆರಳಿ ಕಿಡಿಕಿಡಿಯಾದನು. ಮತ್ತೆ—

ಶಶಾಪ ತತ್ರ ಭೀಮಸ್ತು ರಾಜಮಧ್ಯೇ ಬೃಹತ್ಸ್ವನಃ ॥ ೨೦ ॥

ಅವನು ಎಲ್ಲರೆದುರಲ್ಲಿ ಈ ರೀತಿಯಾಗಿ ಉದ್ಗರಿಸಿದನು—

ಇದಂ ಮೇ ವಾಕ್ಯಮಾದಧ್ವಂ ಕ್ಷತ್ರಿಯಾ ಲೋಕವಾಸಿನಃ ।
ನೋಕ್ತಪೂರ್ವಂ ನರೈರನ್ಯೈರ್ನ ಚಾನ್ಯೋ ಯದ್ ವದಿಷ್ಯತಿ ॥ ೨೧ ॥
ಯದ್ಯೇತದೇವಮುಕ್ತ್ವಾಹಂ ನ ಕುರ್ಯಾಂ ಪೃಥಿವೀಶ್ವರಾಃ ।
ಪಿತಾಮಹಾನಾಂ ಪೂರ್ವೇಷಾಂ ನಾಹಂ ಗತಿಮವಾಪ್ನುಯಾಮ್ ॥ ೨೨ ॥
ಅಸ್ಯ ಪಾಪಸ್ಯ ದುರ್ಬುದ್ಧೇರ್ಭಾರತಾಪಸದಸ್ಯ ಚ ।
ನ ಪಿಬೇಯಂ ಬಲಾದ್ ವಕ್ಷೋ ಭಿತ್ತ್ವಾ ಚೇದ್ ರುಧಿರಂ ಯುಧಿ ॥ ೨೩ ॥

ಎಲವೋ ಭೂನಿವಾಸಿಗಳಾದ ಕ್ಷತ್ರಿಯರುಗಳಿರಾ! ನನ್ನ ಮಾತನ್ನು ಕಿವಿಗೊಟ್ಟು ಕೇಳಿ. ಹಿಂದೆಂದೂ ಯಾರೂ ಈ ರೀತಿಯಾಗಿ ನುಡಿದಿರಲಿಕ್ಕಿಲ್ಲ. ಮುಂದೆಂದೂ ಯಾರೂ ಈ ರೀತಿ ಮಾತನಾಡುವ ಸಾಹಸವನ್ನು ತೋರಲಿಕ್ಕಿಲ್ಲ. ಭರತವಂಶಕ್ಕೆ ಕಲಂಕಭೂತನಾದ ಈ ದುಶ್ಶಾಸನನ ಎದೆ ಸೀಳಿ ನಾನಿವನ ನೆತ್ತರನ್ನು ಹೀರಲಿದ್ದೇನೆ. (ಆಡಿದಂತೆ) ನಾನು ನೆತ್ತರನ್ನು ಕುಡಿಯದೇ ಹೋದರೆ ನನ್ನ ಪೂರ್ವಜರಿಗೆ ದೊರೆತ ಸದ್ಗತಿ ನನಗೆ ಸಿಕ್ಕದೇ ಹೋಗಲಿ.

+ 'ಶಶಾಪ' ಎಂಬ ಪದವನ್ನು ಗಮನಿಸಿದರೆ ಇದೊಂದು ಶಾಪ ಎನ್ನಿಸಿದರೂ ಇದರಲ್ಲಿ ಸತ್ಯಕ್ರಿಯೆ ಒಳಗೊಂಡಿದೆ.

## ೯. ಮರುತ್ತ

ಆಶ್ವಮೇಧಿಕ/೭

ಮರುತ್ತನು ಬಲಕಡುಗಲಿಯಾದ ದೊರೆಯಾಗಿದ್ದನು. ಇಂದ್ರನು ಯಾವಾಗಲೂ ಅವನೊಂದಿಗೆ ಸ್ಪರ್ಧೆಹೂಡುತ್ತಿದ್ದನು. ಆದರೆ ಅವನನ್ನು ಆದೆಂದಿಗೂ ಸೋಲಿಸಲಾಗಲಿಲ್ಲ. ಬೃಹಸ್ಪತಿ ಹಾಗೂ ಸಂವರ್ತರು ಮಹರ್ಷಿ ಅಂಗಿರನ ಮಕ್ಕಳು. ಇವರಿಬ್ಬರಲ್ಲೂ ಮೇಲಾಟ ಇದ್ದೇ ಇತ್ತು. ಬೃಹಸ್ಪತಿಯು ಮಾನವರ ಯಜ್ಞಗಳಲ್ಲಿ ಪೌರೋಹಿತ್ಯವನ್ನು ಮಾಡತಕ್ಕದ್ದಲ್ಲ ಎಂಬ ಕೋರಿಕೆಯೊಂದಿಗೆ ಇಂದ್ರನು ಅವನಿಗೆ ತನ್ನ ಪೌರೋಹಿತ್ಯವನ್ನು ಒಪ್ಪಿಸಿದನು. ಒಂದು ಬಾರಿ ಮರುತ್ತನು ಅವನನ್ನು ತನ್ನ ಯಜ್ಞದ ಪೌರೋಹಿತ್ಯವನ್ನು ನಡೆಸಿಕೊಡಲು ಕೇಳಿಕೊಂಡನು. ಬೃಹಸ್ಪತಿಯು ಅದನ್ನು ನಿರಾಕರಿಸಿಬಿಟ್ಟನು. ಮರುತ್ತನು ನಾರದನ ಹೇಳಿಕೆಯ ಮೇರೆಗೆ ಸಂವರ್ತನನ್ನು ಕೋರಿಕೊಂಡನು. ಮೊದಲು ಅವನೂ ಕೂಡ ಒಪ್ಪಿಕೊಳ್ಳಲಿಲ್ಲ. ತರುವಾಯ ಶರತ್ತಿನೊಂದಿಗೆ ಒಪ್ಪಿಕೊಂಡನು. ಮರುತ್ತನು ಸಂವರ್ತನ ಶರತ್ತನ್ನು ಒಪ್ಪಿಕೊಂಡನು. ಅವನಲ್ಲಿ ನಂಬಿಕೆಯನ್ನು ಹುಟ್ಟಿಸಲೆಂದು ಹೀಗೆಂದನು—

> ಯಾವತ್ ತಪೇತ್ ಸಹಸ್ರಾಂಶುಸ್ತಿಷ್ಠೇರಂಶ್ಚಾಪಿ ಪರ್ವತಾಃ ।
> ತಾವಲ್ಲೋಕಾನ್ನ ಲಭೇಯಂ ತ್ಯಜೇಯಂ ಸಂಗತಂ ಯದಿ ॥ ೨೨ ॥
>
> ಮಾ ಚಾಪಿ ಶುಭಬುದ್ಧಿತ್ವಂ ಲಭೇಯಮಿಹ ಕರ್ಹಿಚಿತ್ ।
> ವಿಷಯೈಃ ಸಂಗತಂ ಚಾಸ್ತು ತ್ಯಜೇಯಂ ಸಂಗತಂ ಯದಿ ॥ ೨೩ ॥

'ಎಲೈ ಬ್ರಹ್ಮನ್! ನಾನು ಖಂಡಿತವಾಗಿಯೂ ನಿನ್ನೊಂದಿಗೆ ಸಹಕರಿಸುವೆನು. ಸೂರ್ಯನು ತನ್ನ ಪ್ರಖರವಾದ ಪ್ರಕಾಶದಿಂದ ಹೊಳೆಯುತ್ತಲಿರುವವರೆಗೆ, ಪರ್ವತಗಳು ಅವಿಚಲಿತವಾಗಿರುವವರೆಗೆ, (ನಾನು ನಿನಗೆ ಸಹಕಾರವನ್ನು ನೀಡದಿದ್ದರೆ) ನನಗೆ ಉತ್ತಮವಾದ ಲೋಕಗಳು ದೊರಕಲಾರವು. ನಾನು ನಿನಗೆ ಸಹಕಾರವನ್ನು ನಿರಾಕರಿಸಿದೆನಾದರೆ ನನ್ನ ಮನಸ್ಸು ಯಾವಾಗಲೂ ವಿಷಯಮಗ್ನವಾಗಿಯೇ ಉಳಿದೀತಲ್ಲದೆ ನನಗೆ ಅದೆಂದಿಗೂ ಒಳ್ಳೆಯ ಬುದ್ಧಿ ಬಾರದು.

## ೧೦. ರುರು

ಆದಿ/೯

ಪ್ರಮದ್ವರೆಯು ಘೃತಾಚಿಯ ಮಗ ರುರುವಿನ ಮಡದಿ. ಅವನು ಅವಳನ್ನು ತುಂಬ ಪ್ರೀತಿಸುತ್ತಿದ್ದನು. ಅವಳು ಹಾವು ಕಚ್ಚಿ ಮರಣಹೊಂದಿದಳು. ಅವನು ಬಲುದುಃಖಿತನಾದನು. ಅವನ ವಿಲಾಪದಲ್ಲಿ ಸತ್ಯಕ್ರಿಯೆ ಇದೆ.

ಯದಿ ದತ್ತಂ ತಪಸ್ತಪ್ತಂ ಗುರವೋ ವಾ ಮಯಾ ಯದಿ ।
ಸಮ್ಯಗಾರಾಧಿತಾಸ್ತೇನ ಸಂಜೀವತು ಮಮ ಪ್ರಿಯಾ ॥ ೪ ॥
ಯಥಾ ಚ ಜನ್ಮಪ್ರಭೃತಿ ಯತಾತ್ಮಾಹಂ ಧೃತವ್ರತಃ ।
ಪ್ರಮದ್ವರಾ ತಥಾ ಹ್ಯೇಷಾ ಸಮುತ್ತಿಷ್ಠತು ಭಾಮಿನೀ ॥ ೫ ॥

ನಾನೇನಾದರೂ ದಾನವನ್ನು ನೀಡಿದ್ದರೆ, ತಪವನ್ನಾಚರಿಸಿದ್ದರೆ, ಗುರುಸೇವೆಯನ್ನು ಮಾಡಿದ್ದರೆ (ಅದರ ಪುಣ್ಯದಿಂದಾಗಿ) ನನ್ನ ಮಡದಿ ಜೀವತಳೆಯುವಂತಾಗಲಿ. ನಾನು ಬಾಳಿಡೀ ಸಂಯಮದಿಂದ ನಡೆದುಕೊಂಡು ಕಠೋರವಾದ ವ್ರತವನ್ನು ಆಚರಿಸಿರುವೆನು. ನನ್ನ ಈ ಸಾಮರ್ಥ್ಯದಿಂದಾಗಿ ನನ್ನ ಮಡದಿ ಜೀವತಳೆಯಲಿ.

## ೧೧. ಶಿಬಿ ಉದ್ಯೋಗ/೧೨೨

ಯಯಾತಿಗೆ ಅವನ ಸಾವಿನ ತರುವಾಯ ಸ್ವರ್ಗ ಸಿಕ್ಕಿತು. ಅಲ್ಲಿಯ ಸುಖೋಪಭೋಗಗಳೆಲ್ಲವೂ ಅವನಿಗೆ ದೊರೆತವು. ಅವನಿಗೆ ಮದವೇರಿತು. ಹಲವು ಜನ ರಾಜರ್ಷಿಗಳ ಎದುರಿನಲ್ಲಿಯೇ ಅವನು ದೇವತೆಗಳು, ಋಷಿಗಳು ಹಾಗೂ ಮಾನವರನ್ನು ಅವಮಾನಗೊಳಿಸಿದನು. ಹೀಗಾಗಿ ಇಂದ್ರ ಮೊದಲಾದವರೆಲ್ಲ ಅವನನ್ನು ಧಿಕ್ಕರಿಸಿದರು. ಯಯಾತಿಯ ಪುಣ್ಯ ಮುಗಿಯುತ್ತಲೂ ಅವನನ್ನು ಭೂಮಿಗೆ ದೂಡಲಾಯಿತು. ಕೆಳಗೆ ಬೀಳುವಾಗ ಅವನು ಸಜ್ಜನರ ನಡುವೆ ಬಂದು ಬೀಳುವಂತೆ ಕೋರಿದನು. ಆ ಕಾಲಕ್ಕೆ (ಯಯಾತಿಯ ಮಗಳು) ಮಾಧವಿಯ ಮಕ್ಕಳಾದ ವಸುಮನಾ, ಪ್ರತರ್ದನ, ಶಿಬಿ, ಅಷ್ಟಕ—ಈ ನಾಲ್ಕು ಜನ ವಾಜಪೇಯ ಯಜ್ಞವನ್ನು ಕೈಕೊಂಡು ಇಂದ್ರನನ್ನು ಪ್ರಸನ್ನಗೊಳಿಸಿದ್ದರು. ಯಯಾತಿಯು ಅವರ ನಡುವೆ ಬಂದು ಬಿದ್ದನು. ರಾಜರುಗಳು ಅವನ ಕುಶಲೋಪರಿಗಳನ್ನು ಕೇಳಿಕೊಂಡರು. ದೊರೆಯು ನಡೆದುದನ್ನೆಲ್ಲ ಅವರಿಗೆ ಹೇಳಿದನು. ಅದನ್ನು ಕೇಳಿ ಆ ರಾಜರು ತಾವು ಗಳಿಸಿದ ಪುಣ್ಯವನ್ನೆಲ್ಲ ಹಾಗೂ ಯಜ್ಞದ ಫಲವನ್ನೆಲ್ಲ ನೀಡಿ ಯಯಾತಿಯು ಒಯಕೆ ಈಡೇರಲಿ ಎಂದರು. ಮಾಧವಿ ಕೂಡ ಅವನಿಗೆ ಅವರೆಲ್ಲ ಅವನ ಮೊಮ್ಮಕ್ಕಳೇ ಆದುದರಿಂದ ಅವರ ಪುಣ್ಯದಿಂದ ಇನ್ನೊಮ್ಮೆ ಸ್ವರ್ಗಕ್ಕೆ ಹೋಗುವಂತೆ ಹೇಳಿದಳು. ಯಯಾತಿಯು ಸ್ವರ್ಗಾರೋಹಣದ ಕಾಲಕ್ಕೆ ಆ ಮೊಮ್ಮಕ್ಕಳು ಉದ್ಗರಿಸಿದ್ದರಲ್ಲಿ ಉಶೀನರನ ಮಗ ಶಿಬಿ ಕೈಕೊಂಡ ಸತ್ಯಕ್ರಿಯೆ ಹೀಗಿದೆ—

ಯಥಾ ಬಾಲೇಷು ನಾರೀಷು ವೈಹಾರ್ಯೇಷು ತಥೈವ ಚ ॥ ೮ ॥
ಸಂಗರೇಷು ನಿಪಾತೇಷು ತಥಾ ತದ್ವ್ಯಸನೇಷು ಚ ।
ಅನೃತಂ ನೋಕ್ತಪೂರ್ವಂ ಮೇ ತೇನ ಸತ್ಯೇನ ಖಂ ವ್ರಜ ॥ ೯ ॥
ಯಥಾ ಪ್ರಾಣಾಂಶ್ಚ ರಾಜ್ಯಂ ಚ ರಾಜನ್ ಕಾಮಸುಖಾನಿ ಚ ।
ತ್ಯಜೇಯಂ ನ ಪುನಃ ಸತ್ಯಂ ತೇನ ಸತ್ಯೇನ ಖಂ ವ್ರಜ ॥ ೧೦ ॥
ಯಥಾ ಸತ್ಯೇನ ಮೇ ಧರ್ಮೋ ಯಥಾ ಸತ್ಯೇನ ಪಾವಕಃ ।
ಪ್ರೀತಃ ಶತಕ್ರತುಶ್ಚೈವ ತೇನ ಸತ್ಯೇನ ಖಂ ವ್ರಜ ॥ ೧೧ ॥

ಚಿಕ್ಕ ಮಕ್ಕಳಿಗೆ ಹಾಗೂ ಮಹಿಳೆಯರಿಗೆ, ಓರಗೆಯ ಸ್ನೇಹಿತರಿಗೆ, ವಿಪತ್ತುಗಳಲ್ಲಿ, ಯುದ್ಧಗಳಲ್ಲಿ ಹಾಗೂ ಸಂಕಟ ಸಮಯಗಳಲ್ಲಿ ನಾನು ಆದೆಂದಿಗೂ ಸುಳ್ಳಾಡಿರದೆ ಇದ್ದರೆ ಅಂಥ ಸತ್ಯದ ಪುಣ್ಯದಿಂದಾಗಿ ನೀವು ಸ್ವರ್ಗಕ್ಕೆ ಹೋಗಿ. ನಾನು ಒಂದುವೇಳೆ ಜೀವವನ್ನು ತ್ಯಜಿಸೇನು, ರಾಜ್ಯ ಹಾಗೂ ಸುಖೋಪಭೋಗಗಳನ್ನು ಬಿಟ್ಟುಕೊಟ್ಟೇನು. ಆದರೆ ಸತ್ಯವನ್ನು ಆದೆಂದಿಗೂ ಕೈಬಿಡಲಾರೆ. ನನ್ನೀ ಮಾತು ನಿಜವಿದ್ದರೆ ಈ ಸತ್ಯದ ಸಾಮರ್ಥ್ಯದಿಂದ ನೀವು ಸ್ವರ್ಗಕ್ಕೆ ಹೋಗಿ. ನನ್ನ ಸತ್ಯವಚನದಿಂದಾಗಿ ಧರ್ಮವು ಸಂತುಷ್ಟಗೊಳ್ಳಲಿದ್ದರೆ, ಅಗ್ನಿಗೆ ಆನಂದವಾಗಲಿದ್ದರೆ, ಇಂದ್ರನಿಗೆ ನೆಮ್ಮದಿ ದೊರಕಲಿದ್ದರೆ ಇಂಥ ಸತ್ಯದ ಪ್ರಭಾವವು ನಿಮಗೆ ಸ್ವರ್ಗವನ್ನು ದೊರಕಿಸಿಕೊಡಲಿ.

## ೧೨. ಶ್ರೀಕೃಷ್ಣ — ಅಶ್ವಮೇಧಿಕ/೬೯

ಅಶ್ವತ್ಥಾಮನು ಬಲುನಿರ್ದಯನಾಗಿ ಉತ್ತರೆಯ ಬಸಿರಿನ ಮೇಲೆ ಬ್ರಹ್ಮಾಸ್ತ್ರವನ್ನು ಬಳಸಿದ್ದನು. ಆದರಿಂದಾಗಿ ಅವಳು ಸತ್ತ ಮಗುವನ್ನು ಹೆತ್ತಳು. ಅವಳಿಗೆ ದುಃಖ ಒತ್ತರಿಸಿಬಂದಿತು. ಅವಳ ದುಃಖ-ಅಳುವುಗಳನ್ನು ಕಂಡು ಶ್ರೀಕೃಷ್ಣನು ಆ ಮಗುವನ್ನು ಜೀವಂತಗೊಳಿಸಲು ಪಣತೊಟ್ಟನು. ಅದು ಸತ್ಯಕ್ರಿಯೆಯನ್ನೂ ಒಳಗೊಂಡಿರುವಂಥದು. ಅವನು ಹೀಗೆಂದನು—

ನೋಕ್ತಪೂರ್ವಂ ಮಯಾ ಮಿಥ್ಯಾ ಸ್ವೈರೇಷ್ವಪಿ ಕದಾಚನ ।
ನ ಚ ಯುದ್ಧಾತ್ ಪರಾವೃತ್ತಸ್ತಥಾ ಸಂಜೀವತಾಮಯಮ್ ॥ ೧೯ ॥
ಯಥಾ ಮೇ ದಯಿತೋ ಧರ್ಮೋ ಬ್ರಾಹ್ಮಣಶ್ಚ ವಿಶೇಷತಃ ।
ಅಭಿಮನ್ಯೋಃ ಸುತೋ ಜಾತೋ ಮೃತೋ ಜೀವತ್ವಯಂ ತಥಾ ॥ ೨೦ ॥
ಯಥಾಽಹಂ ನಾಭಿಜಾನಾಮಿ ವಿಜಯೇ ತು ಕದಾಚನ ।
ವಿರೋಧಂ ತೇನ ಸತ್ಯೇನ ಮೃತೋ ಜೀವತ್ವಯಂ ಶಿಶುಃ ॥ ೨೧ ॥
ಯಥಾ ಸತ್ಯಂ ಚ ಧರ್ಮಶ್ಚ ಮಯಿ ನಿತ್ಯಂ ಪ್ರತಿಷ್ಠಿತೌ ।
ತಥಾ ಮೃತಃ ಶಿಶುರಯಂ ಜೀವತಾದಭಿಮನ್ಯುಜಃ ॥ ೨೨ ॥
ಯಥಾ ಕಂಸಶ್ಚ ಕೇಶೀ ಚ ಧರ್ಮೇಣ ನಿಹತೌ ಮಯಾ ।
ತೇನ ಸತ್ಯೇನ ಬಾಲೋಽಯಂ ಪುನಃ ಸಂಜೀವತಾಮಯಮ್ ॥ ೨೩ ॥

'ನಾನು (ಇಂದಿನವರೆಗೂ) ಚೇಷ್ಟೆಗಾಗಿ ಕೂಡ ಸುಳ್ಳು ಹೇಳಿಲ್ಲ. ಯುದ್ಧಕ್ಕೆ ಬೆನ್ನು ತೋರಿಲ್ಲ. ಈ ಮಾತು ನಿಜವಾಗಿದ್ದರೆ ಈ ಸಾಮರ್ಥ್ಯದಿಂದ ಈ ಮಗು ಜೀವತಳೆಯಲಿ. ನನ್ನಲ್ಲಿ ಧರ್ಮ ಹಾಗೂ ಬ್ರಾಹ್ಮಣರ ಬಗೆಗೆ ಪೂಜ್ಯಭಾವನೆ ಇದ್ದರೆ ಆದರಿಂದಾಗಿ ಅಭಿಮನ್ಯುವಿನ ಮರಣಹೊಂದಿದ ಈ ಮಗು ಜೀವತಳೆದೀತು. ನಾನು ಇಂದಿನವರೆಗೂ ಅರ್ಜುನನಿಗೆ ದ್ರೋಹ ಬಗೆದಿರದೆ ಇದ್ದರೆ ಅಂಥ ಸತ್ಯದ ಪ್ರಭಾವದಿಂದಾಗಿಯೇ ಅಭಿಮನ್ಯುವಿನ ಮರಣಹೊಂದಿದ ಈ ಮಗು ಜೀವತಳೆಯಲಿದೆ. ನಾನು ಕಂಸ, ಕೇಶಿಯರನ್ನು ಕೊಂದುದು ಧರ್ಮವನ್ನನುಸರಿಸಿ ಆಗಿದ್ದರೆ ಆದರಿಂದಾಗಿ ಈ ಸತ್ತ ಮಗು ಜೀವತಳೆದೀತು.'

## ೧೩. ಸಾವಿತ್ರಿ ವನ/೨೯೭

ಪುನರ್ಜನ್ಮವನ್ನು ಪಡೆದ ಸತ್ಯವಾನ ನಿದ್ದೆ ತಿಳಿದೆದ್ದವನಂತೆ ಎದ್ದು ಕುಳಿತನು. ಮನೆಗೆ ಮರಳಿ ಹೋಗಲು ತಡವಾಯಿತೆಂಬ ಚಿಂತೆ ಶುರುವಾಯಿತು. ತನ್ನ ಮುಪ್ಪಿನ ತಾಯಿತಂದೆಗಳು ಕಾದು ಕುಳಿತಿರಲು ಸಾಕು. ಮನೆ ತಲಪಲು ತಡವಾದರೆ ತುಂಬ ಚಿಂತೆಗೀಡಾದಾರು—ಎಂಬ ಹೆದರಿಕೆ ಅವನದು. ಇರುಳಾಗಿತ್ತು. ದಟ್ಟವಾದ ಕಾಡು, ದುರ್ಗಮವಾದ ದಾರಿ, ಕಾಡುಮೃಗಗಳ ಹೆದರಿಕೆ ಬೇರೆ. ಆದರೂ ಅವನು ಸಾವಿತ್ರಿಯೊಂದಿಗೆ ಹೊರಡಲು ನಿರ್ಧರಿಸಿದನು. ಆಗ ಯಾವುದೇ ಸಂಕಟಗಳೆರಗದೆ ತಾವು ಮನೆಯನ್ನು ತಲಪುವಂತಾಗಲೆಂದು ಸಾವಿತ್ರಿ ಈ ರೀತಿಯಾಗಿ ಸತ್ಯಕ್ರಿಯೆಯನ್ನು ಕೈಕೊಂಡಳು—

> ಯದಿ ಮೇಽಸ್ತಿ ತಪಸ್ತಪ್ತಂ ಯದಿ ದತ್ತಂ ಹುತಂ ಯದಿ ॥ ೯೮ ॥
> ಶ್ವಶ್ರೂಶ್ವಶುರಭರ್ತೄಣಾಂ ಮಮ ಪುಣ್ಯಾಸ್ತು ಶರ್ವರೀ ।
> ನ ಸ್ಮರಾಮ್ಯುಕ್ತಪೂರ್ವಂ ವೈ ಸ್ವೈರೇಷ್ವಪ್ಯನೃತಾಂ ಗಿರಮ್ ॥ ೯೯ ॥
> ತೇನ ಸತ್ಯೇನ ತಾವದ್ಯ ಧ್ರಿಯೇತಾಂ ಶ್ವಶುರೌ ಮಮ ॥ ೧೦೦ ॥

(ತಾಯಿ-ತಂದೆಗಳ ಚಿಂತೆಯಿಂದ ಕಣ್ಣೀರು ಹರಿಯುತ್ತಿದ್ದ ತನ್ನ ಗಂಡನನ್ನು ಕಂಡು ಅವಳು ಹೀಗೆಂದಳು—) ನನ್ನ ಕೈಯಿಂದ ತಪಸ್ಸೇನಾದರೂ ಆಗಿದ್ದರೆ, ದಾನಧರ್ಮ ನಡೆದಿದ್ದರೆ, ಹೋಮಹವನಗಳು (ಶುಭಕರ್ಮ) ಕೈಕೊಳ್ಳಲ್ಪಟ್ಟಿದ್ದರೆ, ಈ ರಾತ್ರಿಯು ನನ್ನ ಅತ್ತೆ-ಮಾವ ಹಾಗೂ ಗಂಡನಿಗೆ ಶುಭದಾಯಕವಾದೀತು. ಚೇಷ್ಟೆಗೆಂದು ಕೂಡ ನಾನಿಂದಿನವರೆಗೆ ಸುಳ್ಳಾಡಿದವಳಲ್ಲ. (ಈ ಮಾತು ನಿಜವಿದ್ದಲ್ಲಿ) ಈ ಸತ್ಯದ ಪ್ರಭಾವದಿಂದಾಗಿ ನನ್ನ ಅತ್ತೆ, ಮಾವ ಆಯುಷ್ಮಂತರಾಗಲಿ.

## ೧೪. ಸೀತೆ ವನ/೨೯೧

ಮಾರ್ಕಂಡೇಯ ಮಹರ್ಷಿಯು ಯುಧಿಷ್ಠಿರನಿಗೆ ರಾಮನ ಕಥೆಯನ್ನು ಹೇಳುತ್ತಲಿದ್ದಾನೆ. ರಾವಣನ ವಧೆಯಾದಬಳಿಕ ರಾಮ—ಸೀತೆಯರ ಮೊದಲ ಭೆಟ್ಟಿ. ಸೀತೆ ಬಹಳ ದಿನಗಳ ಕಾಲ ಇನ್ನೊಬ್ಬರ ಮನೆಯಲ್ಲಿದ್ದು ಬಂದವಳು. ಅವಳು ಅಶುದ್ಧಳಾದ್ದರಿಂದ ರಾಮು ಅವಳನ್ನು ಸ್ವೀಕರಿಸಲು ಒಪ್ಪಲಿಲ್ಲ. ಕೇವಲ ತನ್ನದೊಂದು ಕರ್ತವ್ಯವೆಂದು ತಾನು ಅವಳನ್ನು ರಾಕ್ಷಸರ ಸೆರೆಯಿಂದ ಬಿಡಿಸಿರುವುದಾಗಿಯೂ ಇನ್ನು ಅವಳು ಮನಬಂದತ್ತ ಹೊರಟುಹೋಗಬಹುದೆಂದೂ ಅವಳಿಗೆ ಹೇಳಿಬಿಟ್ಟನು. ಶ್ರೀರಾಮನ ಈ ನುಡಿಗಳನ್ನು ಕೇಳಿ ಸೀತೆ ಬಲುದುಃಖಿತಳಾದಳು. ಅವಳು ಹೀಗೆಂದಳು—

> ಅಂತಶ್ಚರತಿ ಭೂತಾನಾಂ ಮಾತರಿಶ್ವಾ ಸದಾಗತಿಃ ।
> ಸ ಮೇ ವಿಮುಂಚತು ಪ್ರಾಣಾನ್ ಯದಿ ಪಾಪಂ ಚರಾಮ್ಯಹಮ್ ॥ ೨೩ ॥
> ಅಗ್ನಿರಾಪಸ್ತಥಾಽಽಕಾಶಂ ಪೃಥಿವೀ ವಾಯುರೇವ ಚ ।
> ವಿಮುಂಚತು ಮಮ ಪ್ರಾಣಾನ್ ಯದಿ ಪಾಪಂ ಚರಾಮ್ಯಹಮ್ ॥ ೨೪ ॥
> ಯಥಾಹಂ ತ್ವದೃತೇ ವೀರ ನಾನ್ಯಂ ಸ್ವಪ್ನೇಽಪ್ಯಚಿಂತಯಮ್ ।
> ತಥಾ ಮೇ ದೇವನಿರ್ದಿಷ್ಟಸ್ತ್ವಮೇವ ಹಿ ಪತಿರ್ಭವ ॥ ೨೫ ॥

ಎಲ್ಲೆಡೆಗಳಲ್ಲಿಯೂ ಸಂಚರಿಸುವಂತಹದಾದ ವಾಯುವು ಪ್ರಾಣಿಮಾತ್ರರಲ್ಲೂ ಸಂಚರಿಸುತ್ತಿರುತ್ತದೆ. ನನ್ನಿಂದೇನಾದರೂ ತಪ್ಪಾಗಿರದೆ ಇದ್ದರೆ ಆ ವಾಯುವು ನನ್ನ ಪ್ರಾಣಗಳನ್ನು ಒಯ್ಯದಿರಲಿ. ನನ್ನಿಂದ ಪಾಪಾಚರಣೆಯಾಗಿದ್ದರೆ ಅಗ್ನಿ, ಜಲ, ಆಕಾಶ, ಪೃಥ್ವಿ ಹಾಗೂ ವಾಯುಗಳು (ಈ ಪಂಚಮಹಾಭೂತಗಳು) ಒಟ್ಟಾಗಿ ನನ್ನ ಪ್ರಾಣಗಳನ್ನು ಕಿತ್ತೊಯ್ಯಲಿ. ಎಲೈ ಶ್ರೀರಾಮನೇ ! ನೀನಲ್ಲದೆ ಇನ್ನಾವನಾದರೂ ಗಂಡಸನ್ನು ನಾನು ಕನಸಿನಲ್ಲಿ ಕೂಡ ಬಯಸಿರದಿದ್ದರೆ (ದೇವ-ಬ್ರಾಹ್ಮಣರ ಸಾಕ್ಷಿಯಿಂದ ದೊರೆತವನಾದ) ನೀನೇ ನನಗೆ ಗಂಡನಾಗು.

## ೧೫. ಸೈರಂಧ್ರಿ ವಿರಾಟ/೧೫

೧

ವಿರಾಟನ ಮಡದಿ ಸುಧೇಷ್ಣೆಯು ಸೈರಂಧ್ರಿಗೆ ಕೀಚಕನಲ್ಲಿಗೆ ಮದ್ಯವನ್ನು ಒಯ್ಯಲು ಹೇಳಿದಳು. ಆದರೆ ಸೈರಂಧ್ರಿಯು ಅದನ್ನು ಖಡಾಖಂಡಿತವಾಗಿ ನಿರಾಕರಿಸಿಬಿಟ್ಟಳು. ಕೀಚಕನೊಂದಿಗಿನ ಮೊದಲ ಭೆಟ್ಟಿಯಲ್ಲಿಯೇ ಅವಳು ಅವನ ಮನದ ಉದ್ದೇಶವನ್ನು ಅರಿತಿದ್ದಳು. ಅವನೂ ಕೂಡ ತನ್ನ ಕಾಮವಾಸನೆಯನ್ನು ವ್ಯಕ್ತಪಡಿಸಿದ್ದನು. ಹೀಗಾಗಿ ಅವನ ಮಹಲಿಗೆ ಮದ್ಯವನ್ನು ಕೊಂಡೊಯ್ಯುವುದೆಂದರೆ ಎಂತಹ ಸಂಕಟವನ್ನು ಬರಮಾಡಿಕೊಂಡಂತೆ ಎಂಬುದನ್ನು ಕಂಡುಕೊಂಡಿದ್ದಳು. ಸುಧೇಷ್ಣೆಯಾದರೋ ಕೀಚಕನಿಂದ ಅವಳಿಗೆ ಅದಾವ ತೊಂದರೆಯೂ ಆಗದೆಂದು ಭರವಸೆ ನೀಡಹತ್ತಿದಳು. ಅಜ್ಞಾತವಾಸದ ಕಾಲಾವಧಿಯೂ ಕೊನೆಗೊಳ್ಳುತ್ತ ಬಂದಿತ್ತು. ಹೀಗಾಗಿ ಎಚ್ಚರದಿಂದಿರುವುದು ಅಗತ್ಯದ್ದಾಗಿತ್ತು. ಆದರೂ ಸೈರಂಧ್ರಿಗೆ ಅವನಲ್ಲಿಗೆ ಹೋಗಲೇಬೇಕಾಯಿತು. ಅವಳು ಹೆದರಿಕೊಂಡ ಕಾರಣ ಸರ್ವಸಾಕ್ಷಿಯಾದ ಸೂರ್ಯನನ್ನು ಮೊರೆಹೊಕ್ಕಳು.

ಯಥಾಹಮನ್ಯಂ ಭರ್ತೃಭ್ಯೋ ನಾಭಿಜಾನಾಮಿ ಕಂಚನ ।
ತೇನ ಸತ್ಯೇನ ಮಾಂ ಪ್ರಾಪ್ತಾಂ ಮಾ ಕುರ್ಯಾತ್ ಕೀಚಕೋ ವಶೇ ॥ ೧೮ ॥

ಎಲೈ ದೇವರೇ ! ನಾನು (ಇಂದಿನವರೆಗೆ) ನನ್ನ ಗಂಡಂದಿರನ್ನುಳಿದು ಬೇರೆ ಇನ್ನಾರನ್ನಾದರೂ ಬಯಸದೆ ಇದ್ದರೆ ಆ ಸತ್ಯದ ಪ್ರಭಾವದಿಂದಾಗಿ ಕೀಚಕ ನನ್ನ ಮೈಗೆ ಕೈಹಚ್ಚಲಾರ.

+ ಸೈರಂಧ್ರಿಯ ಈ ನುಡಿಗಳು ಸತ್ಯಕ್ರಿಯೆಯಂತೆ ತೋರುತ್ತವೆ. ಅವಳ ಮೊರೆಯನ್ನು ಆಲಿಸಿ ಸೂರ್ಯನು ಅವಳ ರಕ್ಷಣೆಗೆಂದು ಒಬ್ಬ ರಾಕ್ಷಸನನ್ನು ನೇಮಿಸಿರುತ್ತಾನೆ. ಅವನು ಅದೃಶ್ಯನಾಗಿದ್ದುಕೊಂಡೇ ಅವಳನ್ನು ಕಾಪಾಡುತ್ತಲಿದ್ದನು—ಎಂಬ ಸ್ಪಷ್ಟವಾದ ಉಲ್ಲೇಖವಿದೆ.

ಅಂತರ್ಹಿತಂ ತತಸ್ತಸ್ಯಾ ರಕ್ಷೋ ರಕ್ಷಾರ್ಥಮಾದಿಶತ್ ।
ತಚ್ಚೈನಾಂ ನಾಜಹಾತ್ ತತ್ರ ಸರ್ವಾವಸ್ಥಾಸ್ವನಿಂದಿತಾಮ್ ॥ ೨೦ ॥

ಹೀಗಾಗಿ ಕೀಚಕನು ಅತಿಪ್ರಸಂಗವನ್ನು ತೋರುತ್ತಲೇ ಅವಳು ಅವನನ್ನು ದೂಡಿಬಿಟ್ಟು ವಿರಾಟನ ಆಸ್ಥಾನಕ್ಕೆ ಹೋದಳು. ಕೀಚಕನು ಅವಳನ್ನು ಬೆನ್ನಟ್ಟಿ ಅವಳ ತಲೆ

ಗೂದಲುಗಳನ್ನು ಹಿಡಿದೆಳೆದನು. ವಿರಾಟನ ಕಣ್ಣೆದುರಿನಲ್ಲಿಯೇ ಅವಳನ್ನು ಕಾಲಿನಿಂದ ಒದ್ದನು. ಆಗ ಅವಳ ರಕ್ಷಣೆಗೆಂದು ಇದ್ದ ರಾಕ್ಷಸನು—

ಸ ಕೀಚಕಮಪೋವಾಹ ವಾತವೇಗೇನ ಭಾರತ ॥ ೧೧ ॥
ಸ ಪಪಾತ ತದಾ ಭೂಮೌ ರಕ್ಷೋಬಲಸಮಾಹತಃ ।
ವಿಘೂರ್ಣಮಾನೋ ನಿಶ್ಚೇಷ್ಟಶ್ಛಿನ್ನಮೂಲ ಇವ ದ್ರುಮಃ ॥ ೧೨ ॥

ವಾಯುವೇಗದಿಂದ ಧಾವಿಸಿಬಂದು ಕೀಚಕನನ್ನು ನೆಲಕ್ಕಪ್ಪಳಿಸಿದನು. ಅವನು ಬೇರು ಕಿತ್ತ ಮರದಂತೆ ಉರುಳಿದನು.

+ ಕೀಚಕನಿಂದ ಸೈರಂಧ್ರಿಯನ್ನು ಕಾಪಾಡಿದ ಶ್ರೇಯಸ್ಸೆಲ್ಲವೂ ಆ ರಾಕ್ಷಸನದು. ಸೂರ್ಯನು ರಾಕ್ಷಸನನ್ನು ಕಳಿಸದೆ ಸೈರಂಧ್ರಿಯು ತನ್ನ ಸಾಮರ್ಥ್ಯದಿಂದಲೇ ಸಂಕಟವನ್ನು ಎದುರಿಸಿದ್ದಳಾದರೆ ಮಾತ್ರ ಮೇಲಿನ ಅವಳ ನುಡಿಗಳಿಗೆ ಸತ್ಯಕ್ರಿಯೆಯ ಪ್ರತಿಷ್ಠೆ ದೊರಕಬಹುದಿತ್ತು.

**ವಿರಾಟ/೧೬**

೨

ಸೈರಂಧ್ರಿ ಮದ್ಯವನ್ನು ಹಿಡಿದು ಕೀಚಕನ ಮಹಲನ್ನು ಹೊಕ್ಕು ಅವನಿಗೆ ಹೀಗೆಂದಳು—

ಯಥೈವಾಹಂ ನಾಭಿಚರೇ ಕದಾಚಿತ್ ಪತೀನ್ ಮದಾದ್ ವೈ ಮನಸಾಪಿ ಜಾತು ।
ತೇನೈವ ಸತ್ಯೇನ ವಶೀಕೃತಂ ತ್ವಾಂ ದ್ರಷ್ಟಾಸ್ಮಿ ಪಾಪಂ ಪರಿಕೃಷ್ಯಮಾಣಮ್ ॥ ೬ ॥

'ನಾನು ಎಚ್ಚರಗೇಡಿತನದಿಂದ ತಪ್ಪಿ ಕೂಡ ನನ್ನ ಗಂಡಂದಿರೊಂದಿಗೆ ಅದೆಂದಿಗೂ ವ್ಯಭಿಚಾರವನ್ನು ಮಾಡಿದವಳಲ್ಲ. ಈ ಸತ್ಯದ ಸಾಮರ್ಥ್ಯದಿಂದ ನಿನ್ನನ್ನು ಮೆಟ್ಟಿನಿಂತು ನನಗೆ ಫಜೀತಿಗಿಟ್ಟುಕೊಳ್ಳುವಂತೆ ಮಾಡುವೆನು.'

+ ಸೈರಂಧ್ರಿಯ ಈ ಮಾತುಗಳು ಸತ್ಯಕ್ರಿಯೆಗಿಂತ ಅವಳ ಮಮ್ಮಲಮರುಗುವಿಕೆಯನ್ನು ಎತ್ತಿತೋರುವಂಥವುಗಳು. ಅವಳಿಗೆ ಬಂದೊದಗಿದ ಈ ವಿಪತ್ತಿನಿಂದ ಅವಳನ್ನು ಪೂರ್ತಿಯಾಗಿ ಪಾರುಮಾಡಿದ ಶ್ರೇಯಸ್ಸು ಭೀಮನದು. ಆತನ ಶಕ್ತಿ, ಯುಕ್ತಿಗಳೇ ಅವಳನ್ನು ಕಾಪಾಡಲು ನೆರವಾದವು. ಅವನ ಸೂಚನೆಯ ಮೇರೆಗೆ ಸೈರಂಧ್ರಿಯು ಕೀಚಕನನ್ನು ನೃತ್ಯಶಾಲೆಗೆ ಬರುವಂತೆ ಹೇಳುತ್ತಾಳೆ. ಈತ ಮೊದಲೇ ಅಲ್ಲಿ ಅಡಗಿ ಕುಳಿತಿದ್ದನು. ತಾನು ಕೀಚಕನನ್ನು ಕೊಂದುಬಿಡುವುದಾಗಿ ಮಾತುಕೊಟ್ಟಿದ್ದನು. ತಾನು ಹೇಳಿದಂತೆಯೇ ಅವನು ನಡೆದುಕೊಂಡನು. ಹೀಗಾಗಿ ಸೈರಂಧ್ರಿಯ ಪತಿನಿಷ್ಠೆಯ ನುಡಿಗಳಿಗೆ ಹೆಚ್ಚಿನ ಅರ್ಥವೇನೂ ಇಲ್ಲ. ವಿರಾಟಪರ್ವದ ೨೨ನೆಯ ಅಧ್ಯಾಯದಲ್ಲಿ ಈ ಪ್ರಸಂಗವನ್ನು ವಿಸ್ತಾರದಿಂದ ಬಣ್ಣಿಸಲಾಗಿದೆ. ಸೂರ್ಯನಿಂದ ಕಳಿಸಲ್ಪಟ್ಟ ರಾಕ್ಷಸ ಹಾಗೂ ಭೀಮ ಇವರ ನೆರವಿಲ್ಲದೆ ಸೈರಂಧ್ರಿಯು ಕೀಚಕನ ಕಪಿಮುಷ್ಟಿಯಿಂದ ನುಣುಚಿಕೊಳ್ಳುವುದಾಗಲಿ, ಇಲ್ಲವೆ ಅವನನ್ನು ಮಣ್ಣುಗೂಡಿಸುವುದಾಗಲಿ ಅಸಾಧ್ಯದ ಮಾತಾಗಿತ್ತು. ಹೀಗಾಗಿ ಸೈರಂಧ್ರಿಯ ಈ ನುಡಿಗಳನ್ನು ಸತ್ಯಕ್ರಿಯೆ ಎಂದೆನ್ನುವುದು ಕಷ್ಟದ್ದು.

**ಅಗಸ್ತ್ಯ :** ಊರ್ವಶಿಯು ವರುಣನಿಗೆ ಸಮಾಗಮವನ್ನು ನೀಡಲು ನಿರಾಕರಿಸಿದಳು. ಆಗ ಅವನು ಅವಳನ್ನು ಉದ್ದೇಶಿಸಿ ತನ್ನ ವೀರ್ಯವನ್ನು ಒಂದು ಕೊಡದಲ್ಲಿ ಚೆಲ್ಲಿದನು. ಈ ವಾರ್ತೆ ಮಿತ್ರನಿಗೆ ತಿಳಿಯಿತು. ಅವನೂ ಕೂಡ ಊರ್ವಶಿಯನ್ನು ಶಪಿಸಿ ತನ್ನ ತೇಜಸ್ಸನ್ನು ಅದೇ ಕೊಡದಲ್ಲಿ ವಿಸರ್ಜಿಸಿದನು. ಆ ಕೊಡದಿಂದ ಮಹಾತೇಜಸ್ವಿಗಳಾದ ಇಬ್ಬರು ಮಹರ್ಷಿಗಳು ಹುಟ್ಟಿಬಂದರು. ಒಬ್ಬ ವಸಿಷ್ಠ, ಇನ್ನೊಬ್ಬ ಅಗಸ್ತ್ಯ. ಅಗಸ್ತ್ಯನ ಮಡದಿ ಲೋಪಾಮುದ್ರೆಯು ಒಬ್ಬ ಅರಸುಕುವರಿಯಾಗಿದ್ದಳು. ಅವಳ ಸೆಳವೆಲ್ಲ ಸಿರಿಸಂಪತ್ತಿನೆಡೆಗಿತ್ತು. ಅವನು ತಾನು ವಿರಕ್ತನಾಗಿದ್ದರೂ ತನ್ನ ಮನದನ್ನೆಯ ಮನದಿಚ್ಛೆಯನ್ನು ಈಡೇರಿಸಲೆಂದು ಇಲ್ವಲನಿಂದ ಸಂಪತ್ತನ್ನು ಪಡೆದನು. ಕಡಲಿನಲ್ಲಿರುವ ಕಾಲಕೇಯನು ಜನರನ್ನು ಪೀಡಿಸುತ್ತಿದ್ದರಿಂದ ಅಗಸ್ತ್ಯನು ಕಡಲ ನೀರನ್ನೆಲ್ಲ ಕುಡಿದು ಬಿಟ್ಟನು. ನಹುಷನು ಈತನನ್ನು ತನ್ನ ವಾಹಕನನ್ನಾಗಿ ಮಾಡಿಕೊಂಡನು. ಈತನ ಜತೆಯಲ್ಲಿ ಅಡಗಿ ಕುಳಿತಿದ್ದ ಭೃಗುವಿನ ಶಾಪದಿಂದಾಗಿ ನಹುಷ ಹತ್ತು ಸಾವಿರ ವರ್ಷಗಳ ಕಾಲ ಹಾವಾಗಿ ಬಿದ್ದನು. ಮರುತರಿಗೆಂದು ತರಲಾದ ಪಶುಗಳನ್ನು ಇಂದ್ರನು ಕದ್ದೊಯ್ದನು. ಹೀಗಾಗಿ ಮರುತರು ಇಂದ್ರನನ್ನು ಕೊಲ್ಲಲು ಸಿದ್ಧರಾದರು. ಅಗಸ್ತ್ಯನು ಅವರನ್ನು ಶಾಂತಗೊಳಿಸಿ ಅವರು ಹಾಗೂ ಇಂದ್ರನಲ್ಲಿ ಗೆಳೆತನವನ್ನು ಬೆಳೆಯಿಸಲು ನೆರವಾದನು. ದಶವಾರ್ಷಿಕ ಸತ್ರವನ್ನು ಆರಂಭಿಸಿ ಪಶುಹಿಂಸೆಯಾಗದೆಯೇ ಅವರು ಇಂದ್ರನಿಗೆ ಮಳೆಗರೆಯುಹಚ್ಚಿದರು. ಅಗಸ್ತ್ಯನಿಗೆ ದಕ್ಷಿಣದ ಸಂಬಂಧ ಹೆಚ್ಚಾಗಿ ಇರುವ ಕಾರಣ ಅವನನ್ನು 'ದಕ್ಷಿಣದ ಸ್ವಾಮಿ' ಎಂದೆನ್ನಲಾಗುತ್ತದೆ. ಅವನಿಗಾಗಿ ಹಲವಾರು ಹೊತ್ತಗೆಗಳನ್ನು ಬರೆಯಲಾಗಿದೆ. ಅವನ ಹೆಸರಿನಿಂದ ಒಂದು ಗೋತ್ರವೂ ಉಂಟು.

**ಅಗ್ನಿ :** ಅಗ್ನಿಯು ಬ್ರಹ್ಮದೇವನ ಮಾನಸಪುತ್ರನು. ಪಂಚಮಹಾಭೂತಗಳಲ್ಲಿ ಈತನೂ ಒಬ್ಬ ದೇವತೆ. ದಕ್ಷಪ್ರಜಾಪತಿಯ ಮಗಳಾದ ಸ್ವಾಹಾ ಹಾಗೂ ಇಕ್ಷ್ವಾಕು ವಂಶದ ದುರ್ಯೋಧನನ ಮಗಳಾದ ಸುದರ್ಶನೆಯರು ಈತನ ಮಡದಿಯರು. ಜೈಮಿನಿ ಮಹಾಭಾರತದ ಹೇಳಿಕೆಯಂತೆ ಸ್ವಾಹಾ ಇವಳು ನೀಲಧ್ವಜ ರಾಜನ ಕನ್ಯೆಯಾಗಿದ್ದಾಳೆ. ಮದುವೆಯ ತರುವಾಯ ಅಗ್ನಿಯು ಅವರ ಮಾಹಿಷ್ಮತಿ ನಗರದಲ್ಲಿಯೇ ಉಳಿದುಕೊಂಡು ಶತ್ರುಗಳ ಸೇನೆಯನ್ನು ಸುಟ್ಟುಹಾಕಬೇಕೆಂಬ ಶರತ್ತಿನಿಂದಲೇ ಅವನಿಗೆ ಕನ್ಯಾದಾನವನ್ನು ಮಾಡಲಾಗಿತ್ತು. ಅರ್ಜುನನು ನೀಲಧ್ವಜನ ಮೇಲೆ ದಂಡೆತ್ತಿಬಂದಾಗ ಅಗ್ನಿಯೇ ಅವನ ಸೈನ್ಯವನ್ನು ಸುಟ್ಟುಹಾಕಿದನು. ಸಹದೇವನ ಸೈನ್ಯವೂ ದಂಡೆತ್ತಿ ಬಂದು ಅಗ್ನಿಗೆ ತುತ್ತಾಗುತ್ತಿರುವಾಗಲೇ ಅವನು ಸ್ತುತಿಯನ್ನು ಮಾಡಿದ್ದರಿಂದ ಅಗ್ನಿ ಹಿಮ್ಮೆಟ್ಟಿದನು. ಅಗ್ನಿಯು ಸಪ್ತರ್ಷಿಗಳ ಹವಿರ್ಭಾಗವನ್ನು ದೇವತೆಗಳಿಗೆ ಒಪ್ಪಿಸಿ ಹಿಂದಿರುಗುತ್ತಿರುವಾಗ ಅವರ ಸ್ತ್ರೀಯರ ಸೌಂದರ್ಯವನ್ನು ಕಂಡು ಅಗ್ನಿಯ ಕಾಮವಾಸನೆ ಕೆರಳಿತು. ಆದರೆ ಅವರಾರೂ ಈತನಿಗೆ ವಶರಾಗಲಿಲ್ಲ. ಹೀಗಾಗಿ ಅಗ್ನಿ ಆತ್ಮಹತ್ಯೆಯನ್ನು ಕೈಕೊಳ್ಳಬೇಕೆಂದುಕೊಂಡನು. ಸ್ವಾಹೆಯು ಆ ಏಳು ಜನ ಮಹರ್ಷಿಗಳ ಮಡದಿಯರ ರೂಪಗಳನ್ನು ಹೊತ್ತು ಅವನಿಗೆ ಸಮಾಗಮಸುಖವನ್ನು ನೀಡಿದಳು.

ಅವಳಿಗೆ ಅರುಂಧತಿಯ ರೂಪವನ್ನು ಮಾತ್ರ ಹೊಂದಲಾಗಲಿಲ್ಲ. ಅವಳು ಆಯಾ ರೂಪದಲ್ಲಿ ಬಸಿರಾಗುತ್ತಿದ್ದಳು. ಆ ಬಸಿರನ್ನು ಅವಳು ಒಂದು ಚಿನ್ನದ ಕುಂಡದಲ್ಲಿ ಬಿಡುತ್ತಿದ್ದಳು. ಅವಳ ಆರು ಬಸಿರುಗಳು ಕೂಡಿ ಸ್ಕಂದನ ಹುಟ್ಟಾಯಿತು.

ಅಗ್ನಿಯು ಪುಲೋಮ ರಾಕ್ಷಸನಿಗೆ ಭೃಗುವಿನ ಮಡದಿಯ ಬಗೆಗೆ ನಿಜವಿದ್ದುದನ್ನು ಹೇಳಿದನು. ಹೀಗಾಗಿ ಭೃಗುವು ಅವನಿಗೆ ಶಾಪವಿತ್ತನು. ಅದರಿಂದಾಗಿ ಈತ ಸರ್ವಭಕ್ಷಕನಾದನು. ಶಾಪಿತನಾದ ಅಗ್ನಿ ಕುಪಿತನಾಗಿ ಕಡಲಿನಲ್ಲಿ ಅಡಗಿಕೊಂಡು ಕುಳಿತುಬಿಟ್ಟನು. ದೇವತೆಗಳಿಗೆ ಹವಿರ್ಭಾಗ ದೊರಕದಂತಾಯಿತು. ಯಜ್ಞಯಾಗಗಳು ಕುಂಠಿತವಾದವು. ಕಪ್ಪೆ, ಆನೆ ಹಾಗೂ ಗಿಳಿಗಳು ದೇವತೆಗಳಿಗೆ ಅಗ್ನಿಯು ಅಡಗಿಕೊಂಡಿರುವ ತಾಣದ ಬಗೆಗೆ ಹೇಳಿದವು. ಹೀಗಾಗಿ ಅಗ್ನಿಯು ಅವೆಲ್ಲ ಪ್ರಾಣಿಗಳನ್ನು ಶಪಿಸಿದನು. ದೇವತೆಗಳನ್ನು ಸ್ತುತಿಸಲಾಗಿ ಅವನು ಮೊದಲಿನಂತೆ ನಡೆದುಕೊಳ್ಳಹತ್ತಿದನು. ಬ್ರಹ್ಮದೇವನು ಅವನಿಗೆ ಆಶ್ವಾಸನೆಯನ್ನಿತ್ತು ಭೃಗುವಿನ ಶಾಪದ ತೀವ್ರತೆಯನ್ನು ಕಡಿಮೆಗೊಳಿಸಿದನು. ಬ್ರಹ್ಮದೇವನ ಹೇಳಿಕೆಯ ಮೇರೆಗೆ ಈತ ಖಾಂಡವ ವನವನ್ನು ಸುಟ್ಟುಬಿಟ್ಟನು. ಈತ ದಮಯಂತಿಯ ಸ್ವಯಂವರಕ್ಕೆ ಉಪಸ್ಥಿತನಾಗಿದ್ದನು. ಈತ ನಲನಿಗೆ ವರವಿತ್ತನು. ಸೀತೆ ಶುದ್ಧಶೀಲದವಳೆಂಬುದನ್ನು ಶ್ರೀರಾಮನಿಗೆ ಮನವರಿಕೆ ಮಾಡಿಕೊಟ್ಟನು. ಈತ ಅಂಗಿರನ ಕೋರಿಕೆಯ ಮೇರೆಗೆ ಅವನಿಗೆ ಬೃಹಸ್ಪತಿ ಎಂಬ ಮಗನನ್ನು ಕೊಟ್ಟನು. ಅಗ್ನಿಯು ವರುಣನಿಂದ ಅರ್ಜುನನಿಗೆ ಬೆಳ್ಳನೆಯ ಕುದುರೆಗಳನ್ನು ಹೂಡಿದ ಒಂದು ದಿವ್ಯವಾದ ರಥ, ಗಾಂಡಿವ ಧನುಷ್ಯ ಹಾಗೂ ಅಕ್ಷಯವಾದ ಬತ್ತಳಿಕೆಗಳನ್ನು ಕೊಡಿಸಿದನು. ಕೃಷ್ಣನಿಗೆ ಸುದರ್ಶನ ಚಕ್ರ ಹಾಗೂ ಕೌಮೋದಕಿ ಗದೆಯನ್ನು ಕೊಡಿಸಿದನು. ಇಂದ್ರನನ್ನು ಬೆನ್ನಟ್ಟಿದ ಬ್ರಹ್ಮಹತ್ಯೆಯಿಂದ ಅವನನ್ನು ಬಿಡುಗಡೆ ಮಾಡಲೆಂದು ಅದರ ನಾಲ್ಕರಲ್ಲಿಯ ಒಂದು ಪಾಲನ್ನು ಅಗ್ನಿಯು ಪಡೆದನು. ಅಗ್ನಿ ಬಲು ಪವಿತ್ರನೆಂದು ತಿಳಿಯಲ್ಪಡುತ್ತಾನೆ.

**ಅಂಗಿರ:** ಬ್ರಹ್ಮದೇವನ ಮಾನಸಪುತ್ರರಲ್ಲಿ ಒಬ್ಬ. ಈತನ ಹುಟ್ಟು ಬ್ರಹ್ಮದೇವನ ತಲೆಯಿಂದ ಸ್ವಾಯಂಭುವ ಮನ್ವಂತರದಲ್ಲಿ ಆಯಿತೆಂದು ಬ್ರಹ್ಮಾಂಡಪುರಾಣದಲ್ಲಿ ಬಣ್ಣಿಸಲಾಗಿದೆ. ಈತ ಧಾರ್ಮಿಕಮನೋಭಾವದ ಒಬ್ಬ ಮಹಾತಪಸ್ವಿಯಾಗಿದ್ದನು. ದಕ್ಷಕನ್ಯೆಯಾದ ಸ್ಮೃತಿಯು ಈತನ ಮಡದಿ. ಅವಳಿಗೆ ಇಬ್ಬರು ಗಂಡು ಹಾಗೂ ನಾಲ್ವರು ಹೆಣ್ಣುಮಕ್ಕಳು. ವೈವಸ್ವತ ಮನ್ವಂತರದಲ್ಲಿ ಶಂಕರನ ವರದಿಂದಾಗಿ ಇವನು ಹುಟ್ಟಿದನು. ಈತ ಪ್ರಜಾಪತಿಯಾಗಿದ್ದನು. ಅಗ್ನಿಯು ಈತನನ್ನು ತನ್ನ ಮಗನೆಂದು ಸ್ವೀಕರಿಸಿದನು. ಅಗ್ನಿಯ ಕೃಪೆಯಿಂದಾಗಿ ಈತನಿಗೆ ಬೃಹಸ್ಪತಿ ಎಂಬ ಮಗ ಹುಟ್ಟಿದನು. ಇವನಲ್ಲದೆ ಸಂವರ್ತ ಹಾಗೂ ಉತಥ್ಯರೆಂಬ ಇನ್ನಿಬ್ಬರು ಮಕ್ಕಳಾದರು. ಬೇರೆ ಬೇರೆ ಹೊತ್ತಿಗೆಗಳಲ್ಲಿ ಈತನ ಹಲವು ಜನ ಹೆಂಡಂದಿರ ಹೆಸರುಗಳು ಹಾಗೂ ಮಕ್ಕಳ ಹೆಸರುಗಳು ಬಂದಿವೆ. ಭಾಗವತದಲ್ಲಿ ಈತ ಸುದರ್ಶನನೆಂಬ ವಿದ್ಯಾಧರನಿಗೆ ಶಾಪವನ್ನಿತ್ತ ಪ್ರಸ್ತಾಪವಿದೆ. ಈತ ಅಗ್ನಿಗೆ ಶಾಪವಿತ್ತ ಉಲ್ಲೇಖವೊಂದು ಮಹಾಭಾರತದಲ್ಲಿ ಇದೆ. ಈ ಶಾಪದಿಂದಾಗಿ ಅಗ್ನಿಯ ಹೊನ್ನಕಾಂತಿ ಹಾಗೂ ನಿರ್ಧೂಮತೆ, ಊರ್ಧ್ವಶಿಖೆ ಮುಂತಾದ ಗುಣಗಳು ನಾಶಹೊಂದಿದವು. (ನೋಡಿ : ಕ್ರ, ೧೪೦. ಅಂಗಿರ >ಅಗ್ನಿ)

ಅಂಗಿರ ಯಾವಾಗಲೂ ಅಲಕನಂದೆಯ ದಡದಲ್ಲಿ ಸ್ವಾಧ್ಯಾಯ, ಜಪತಪಗಳಲ್ಲಿ ಮೈಮರೆತವನು. ಇಂದ್ರನ ವರದಾನದಿಂದಾಗಿ ಈತನಿಗೆ ಯಜ್ಞಗಳ ಹವಿರ್ಭಾಗ ದೊರಕ ಹತ್ತಿತು. ಅಲ್ಲದೆ ಅಥರ್ವಾಂಗಿರಸ ಎಂಬ ಹೆಸರಿನಿಂದ ಕೀರ್ತಿ ಬಂದಿತು. ಕಮಲ ಹೂವಿನ ಕಳವಿನ ಸಂದರ್ಭದಲ್ಲಿ ಆಣೆಮಾಡಿದ ಹಲವು ಜನ ಋಷಿಗಳು ಹಾಗೂ ರಾಜರುಗಳಲ್ಲಿ ಈತನೂ ಒಬ್ಬ. ಈತನಿಂದ ಭೀಷ್ಮನಿಗೆ ಉಪವಾಸದ ಮಹಿಮೆ ತಿಳಿಯಿತು. ಈತನು ಅವಿಕ್ಷಿತ ರಾಜನ ಯಜ್ಞವನ್ನು ಮಾಡಿದ ಉಲ್ಲೇಖವು ಆಶ್ವಮೇಧಿಕ ಪರ್ವದಲ್ಲಿದೆ. ಈತ ಶರಪಂಜರದ ಮೇಲಿದ್ದ ಭೀಷ್ಮನನ್ನು ಕಾಣಲು ಹೋಗಿದ್ದನು. ಈತ ಅಥರ್ವನೆಂಬ ಹೆಸರಿನಿಂದಲೂ ಗುರುತಿಸಲ್ಪಡುತ್ತಾನೆ.

**ಅತ್ರಿ :** ಸ್ವಾಯಂಭುವ ಹಾಗೂ ವೈವಸ್ವತ ಮನ್ವಂತರದ ಸಪ್ತರ್ಷಿಗಳಲ್ಲಿ ಒಬ್ಬ. ಈತನ ಹುಟ್ಟಿನ ಬಗೆಗೆ ಬೇರೆ ಬೇರೆ ಪುರಾಣಗಳಲ್ಲಿ ಮಾಹಿತಿ ದೊರಕುತ್ತದೆ. ಬ್ರಹ್ಮ ದೇವನು ಪ್ರಜೋತ್ಪಾದನೆಗೆಂದು ಸ್ವಾಯಂಭುವ ಮನ್ವಂತರದಲ್ಲಿ ಹತ್ತು ಜನ ಮಾನಸ ಪುತ್ರರನ್ನು ನಿರ್ಮಿಸಿದನು. ಅವರಲ್ಲಿ ಅತ್ರಿಯೂ ಒಬ್ಬನೆಂಬ ಉಲ್ಲೇಖ ವಾಯು ಪುರಾಣದಲ್ಲಿದೆ. ಈತ ಬ್ರಹ್ಮದೇವನ ತಲೆ ಇಲ್ಲವೆ ಕಣ್ಣಿನಿಂದ ಹುಟ್ಟಿಬಂದವನೆಂದು ಭಾಗವತ ಹಾಗೂ ಮತ್ಸ್ಯಪುರಾಣಗಳಲ್ಲಿ ಬಣ್ಣಿಸಲಾಗಿದೆ. ಬ್ರಹ್ಮಾಂಡಪುರಾಣದಂತೆ ಈತನ ಹುಟ್ಟು ಬ್ರಹ್ಮದೇವನ ಕಿವಿಯಿಂದ ಆಯಿತು. ದಕ್ಷನ ಮಗಳು ಅನಸೂಯೆಯು ಈತನ ಮಡದಿ. ಈತನಿಗೆ ಸ್ವಾಯಂಭುವ ಮನ್ವಂತರದಲ್ಲಿ ಐವರು ಗಂಡುಮಕ್ಕಳು ಹುಟ್ಟಿದರು. ಸತಿಯು ತನ್ನನ್ನು ಸುಟ್ಟುಕೊಳ್ಳುತ್ತಲೇ ಸಿಡಿದೆದ್ದ ಶಂಕರನು ಎಲ್ಲರನ್ನೂ ಸುಟ್ಟುಬಿಟ್ಟನು. ಆಗ ಅತ್ರಿಯೂ ಮರಣಹೊಂದಿದನು. ಮತ್ತೆ ಶಂಕರನ ವರದಿಂದಾಗಿ ಈತ ವೈವಸ್ವತ ಮನ್ವಂತರದಲ್ಲಿ ಹುಟ್ಟಿಬಂದನು. ಈತ ಜನತಂತ್ರದ ಆಡಳಿತೆಯ ಪುರಸ್ಕರ್ತನಾಗಿದ್ದರಿಂದ ರಾಜನ ಕೋಪಕ್ಕೆ ಗುರಿಯಾಗಿ ಸೆರೆಮನೆಯಲ್ಲಿರಬೇಕಾಯಿತು. ಈತ ಅಗ್ನಿಕುಂಡದಲ್ಲಿ ಬಿದ್ದಾಗ ಅಶ್ವಿನಿಗಳು ಈತನನ್ನು ಉಳಿಸಿದ ಉಲ್ಲೇಖ ಋಗ್ವೇದ ದಲ್ಲಿದೆ. ಅತ್ರಿಸಂಹಿತೆ ಹಾಗೂ ಅತ್ರಿಸ್ಮೃತಿ ಎಂಬ ಈತನ ಹೊತ್ತಿಗೆಗಳು ಹೆಸರಾದವುಗಳು. ಈತನಿಂದ ಅನಸೂಯೆಗೆ ದತ್ತ, ದುರ್ವಾಸ ಹಾಗೂ ಸೋಮರೆಂಬ ಮೂವರು ಗಂಡು ಮಕ್ಕಳಾದರೆಂದು ಹಲವು ಪುರಾಣಗಳು ಹೇಳುತ್ತವೆ. ಮಹಾಭಾರತದಲ್ಲಿ ಮಾತ್ರ ಸೋಮ ಹಾಗೂ ಆರ್ಯಮಾ ಎಂಬಿಬ್ಬರು ಮಕ್ಕಳ ಉಲ್ಲೇಖವಿದೆ.

**ಅದಿತಿ :** ಇವಳೊಬ್ಬ ವೈದಿಕ ದೇವತೆ. ಹನ್ನೆರಡು ಜನ ಆದಿತ್ಯರ ತಾಯಿ. ಋಗ್ವೇದ ದಲ್ಲಿ ಇವಳನ್ನು ವಿಶ್ವದ ತಾಯಿ ಎಂದು ಸಂಬೋಧಿಸಲಾಗಿದೆ. ಈಕೆ ಆದಿತ್ಯರ ತಾಯಿ ಯಾದ್ದರಿಂದ ಇವಳ ತೇಜಸ್ಸನ್ನು ಗೌರವಿಸಲಾಗಿದೆ.

ಪ್ರಾಚೇತಸ ದಕ್ಷ ಹಾಗೂ ಅಸಿಕ್ನಿಯರ ಮಗಳು, ಕಶ್ಯಪನ ಮಡದಿ, ಮಿತ್ರ-ವರುಣರ ತಾಯಿ. ಇವಳಿಗೆ ಬಲು ಬಲಾಢ್ಯವಾದ ಎಂಟು ಜನ ಗಂಡುಮಕ್ಕಳು ಹುಟ್ಟಿದರು. ವೇದದಲ್ಲಿ ಇವಳನ್ನು ವಿಷ್ಣುಪತ್ನಿ ಎಂದು ಉಲ್ಲೇಖಿಸಲಾಗಿದೆ. ಇವಳನ್ನು ದ್ಯಾವಾ ಪೃಥಿವಿಗಳೊಂದಿಗೆ ಒಂದಾದವಳೆಂದು ತಿಳಿಯಲಾಗುತ್ತದೆ. ಗಂಡುಮಗುವನ್ನು ಪಡೆಯ ಲೆಂದು ಒಕ್ಕಾಲ ಮೇಲೆ ನಿಂತು ತಪಗೈದಳು. ಅದರಿಂದಾಗಿ ಇವಳ ಹೊಟ್ಟೆಯಿಂದ

ವಿಷ್ಣು ಹುಟ್ಟಿದನು. ಇವಳಿಗೆ ಎಂಟು ಜನ ಗಂಡುಮಕ್ಕಳಿದ್ದ ಉಲ್ಲೇಖ ತೈತ್ತಿರೀಯ ಸಂಹಿತೆಯಲ್ಲಿದೆ. ಇವಳಿಗೆ ಏಳು ಜನ ಮಕ್ಕಳು ಮಾತ್ರ ಬೇಕಾಗಿದ್ದವಾದ್ದರಿಂದ ಎಂಟನೆಯ ಬಸಿರನ್ನು ಒಡೆದುಹಾಕಿದಳು. ಅದರಿಂದ ಮಾರ್ತಾಂಡ ಇಲ್ಲವೆ ವಿವಸ್ವಾನ್ ಹುಟ್ಟಿ ಬಂದನು. ನರಕಾಸುರನು ಇವಳ ಕುಂಡಲುಗಳನ್ನು ಕದ್ದನು. ಕೃಷ್ಣನು ಅವನನ್ನು ಸೋಲಿಸಿ ಅವುಗಳನ್ನು ಅವಳಿಗೆ ಮರಳಿ ದೊರಕಿಸಿಕೊಟ್ಟನೆಂಬ ಸಂಗತಿಯನ್ನು ಮಹಾಭಾರತದ ಉದ್ಯೋಗಪರ್ವದಲ್ಲಿ ನಮೂದಿಸಲಾಗಿದೆ.

**ಅದೃಶ್ಯಂತಿ :** ವಸಿಷ್ಠನ ಸೊಸೆ; ಶಕ್ತಿಯ ಪತ್ನಿ; ಪರಾಶರ ಋಷಿಯ ಮಾತೆ. ಗಂಡುಮಕ್ಕಳ ಸಂಹಾರದಿಂದಾಗಿ ಕುಲಕ್ಷಯವನ್ನು ಕಾಣುವ ದೌರ್ಭಾಗ್ಯ ವಸಿಷ್ಠನನ್ನು ಒಳಗೊಳಗೇ ಕೊರೆಯತೊಡಗಿತು. ಅದನ್ನು ತಡೆದುಕೊಳ್ಳಲಾಗದೆ ಅವನು ಮನೆ ಬಿಟ್ಟು ಸಾವನ್ನು ಬರಮಾಡಿಕೊಳ್ಳಲೆಂದು ಹೊರಟನು. ಅವನನ್ನು ಸಾವಿನಿಂದ ದೂರವಿರಿಸಲೆಂದು ಅದೃಶ್ಯಂತಿಯು ಅವನ ಹಿಂದೆ ಹಿಂದೆ ಹೊರಟಳು. ದಾರಿಯಲ್ಲಿ ವಸಿಷ್ಠನಿಗೆ ವೇದಧ್ವನಿ ಕೇಳಬರಹತ್ತಿತು. ಅದು ಅದೃಶ್ಯಂತಿಯ ಹೊಟ್ಟೆಯಿಂದ ಬರುತ್ತಿತ್ತು. ತನ್ನ ವಂಶವೃದ್ಧಿಯ ಆಸೆ ಅವಳ ಬಸಿರಲ್ಲಿ ಮೊಳೆತುದನ್ನು ಕಂಡು ನೆಮ್ಮದಿಯೆನ್ನಿಸಿತು. ಹೀಗಾಗಿ ಅವನು ಮನೆಗೆ ಮರಳಿ ಬಂದನು. ಇವಳಿಗೆ ಕಲ್ಮಾಷಪಾದನ ಬಗೆಗೆ ಹೆದರಿಕೆ ಎನ್ನಿಸುತ್ತಿತ್ತು. ವಸಿಷ್ಠನು ಅವಳನ್ನು ಅವನಿಂದ ಕಾಪಾಡಿದನು. ಪರಾಶರನು ವಸಿಷ್ಠನನ್ನೇ ತನ್ನ ತಂದೆಯೆಂದು ತಿಳಿಯುತ್ತಿದ್ದನು. ಆದರೆ ಅದೃಶ್ಯಂತಿಯು ನಡೆದುದೆಲ್ಲವನ್ನು ಅವನಿಗೆ ತಿಳಿಸಿ ಹೇಳಿ ಅವನ ಸಂದೇಹವನ್ನು ದೂರಗೊಳಿಸಿದಳು.

**ಅದ್ರಿಕೆ :** ಒಬ್ಬಳು ಅಪ್ಸರೆ; ಕಶ್ಯಪ ಮುನಿಯ ಪತ್ನಿ. ಬ್ರಹ್ಮದೇವನ ಶಾಪದಿಂದಾಗಿ ಇವಳಿಗೆ ಮೀನು ಜನ್ಮ ಬಂದಿತು. ಈಕೆ ಯಮುನಾ ನದಿಯಲ್ಲಿ ಇರುತ್ತಿದ್ದಳು. ಒಂದು ಸಲ ಉಪರಿಚರ ರಾಜ ಬೇಟೆಗೆಂದು ಹೋದಾಗ ಅವನಲ್ಲಿ ಕಾಮವಾಸನೆ ಕೆರಳಿ ವೀರ್ಯಸ್ಖಲನ ನಡೆಯಿತು. ಅವನು ಅದನ್ನು ಒಂದು ದೊನ್ನೆಯಲ್ಲಿ ಹಿಡಿದಿಟ್ಟು ಒಂದು ಗಿಡುಗನ ಮೂಲಕ ತನ್ನ ಮಡದಿಗೆ ಕಳಿಸಿಕೊಟ್ಟನು. ಆ ಗಿಡುಗವು ಹಾರುತ್ತ ಹೊರಟಾಗ ಇನ್ನೊಂದು ಗಿಡುಗವು ಬಂದೆರಗಿದ್ದರಿಂದ ಆ ವೀರ್ಯವು ಯಮುನೆಯಲ್ಲಿ ಬಿದ್ದಿತು. ಅದ್ರಿಕೆಯು ಅದನ್ನು ಸೇವಿಸಿದಳು. ಅವಳು ಬಸಿರಾದಳು. ಒಂದು ಸಲ ಒಬ್ಬ ಮೀನುಗಾರನು ಈ ಮೀನನ್ನು ತನ್ನ ಜಾಲದಲ್ಲಿ ಹಿಡಿದನು. ಅದನ್ನು ಮನೆಗೊಯ್ದು ಕೊಯ್ಯುತ್ತಲೇ ಆ ಮೀನಿನ ಹೊಟ್ಟೆಯಿಂದ ಒಂದು ಹೆಣ್ಣು ಹಾಗೂ ಒಂದು ಗಂಡು ಮಾನವ ಅವಳಿಗಳು ಹೊರಬಂದವು. ಮೀನುಗಾರನು ಅವೆರಡೂ ಮಕ್ಕಳನ್ನು ದೊರೆಯಲ್ಲಿಗೆ ಕೊಂಡೊಯ್ದನು. ನಡೆದ ವಿಸ್ಮಯವನ್ನೆಲ್ಲ ಅರುಹಿದನು. ದೊರೆಯು ಗಂಡುಮಗುವನ್ನು ತನ್ನ ಬಳಿ ಇರಿಸಿಕೊಂಡು ಹೆಣ್ಣುಮಗುವನ್ನು ಮೀನುಗಾರನಿಗೆ ಮರಳಿ ಒಪ್ಪಿಸಿದನು. ಅದನ್ನು ಸಾಕಿ ಸಲಹೆಂದು ಹೇಳಿದನು. ಆ ಮಗು ಬಲುಮುದ್ದಾಗಿತ್ತು, ಅಂದವಾಗಿತ್ತು. ಅವಳ ಮೈಗೆ ಮೀನಿನ ವಾಸನೆ ಬರುತ್ತಿತ್ತಾದ ಕಾರಣ ಅವಳಿಗೆ 'ಮತ್ಸ್ಯಗಂಧೆ' ಎಂಬ ಹೆಸರು ಬಂದಿತು.

ಮಾನವ ಅವಳಿಗಳು ಹುಟ್ಟುತ್ತಲೇ ಆ ಹೆಣ್ಣುಮೀನಿಗೆ ಶಾಪಮುಕ್ತಿ ದೊರೆಯಿತು.

**ಅಭಿಮನ್ಯು :** ಅರ್ಜುನ-ಸುಭದ್ರೆಯರ ಮಗ. ಹುಟ್ಟಿನಿಂದಲೇ ಎದೆಗಾರ. ಉಳಿದವರಲ್ಲಿ ಭಯವನ್ನುಂಟುಮಾಡುವವನಾಗಿದ್ದನು. ದೈತ್ಯರ ಪೀಡೆಗೊಳಪಟ್ಟ ಪೃಥ್ವಿಯನ್ನು ಮುಕ್ತಗೊಳಿಸಲೆಂದು ದೇವತೆಗಳೆಲ್ಲ ಕೂಡಿ ತಮ್ಮ ಅಂಶಗಳನ್ನಿತ್ತು ಆತನನ್ನು ಪೃಥ್ವಿಗೆ ಕಳಿಸಿದ್ದರು. ವರ್ಚನು ಈತನಿಗೆ ತುಂಬ ಬೇಕಾದವನಾಗಿದ್ದನು. ಈತ ಭೂಮಿಯಲ್ಲಿ ಬರಿ ಹದಿನಾರು ವರ್ಷಗಳ ಕಾಲ ಮಾತ್ರ ಇರಲಿರುವನೆಂದು ದೇವತೆಗಳಿಗೆ ಶರತ್ತನ್ನು ಒಡ್ಡಿದ್ದನು. ಹೀಗಾಗಿ ಅಲ್ಪಾಯುಷಿ ಎನ್ನಿಸಿದನು. ಅರ್ಜುನನಿಂದ ಪಾಠ ಹೇಳಿಸಿಕೊಂಡು ಶಸ್ತ್ರಾಸ್ತ್ರವಿದ್ಯೆಗಳಲ್ಲಿ ಪಳಗಿದನು. ಇವನ ನೈಪುಣ್ಯವನ್ನು ಕಂಡು ಬಲರಾಮನು ಇವನಿಗೆ ರೌದ್ರ ಎಂಬ ಒಂದು ಬಿಲ್ಲನ್ನು ಕೊಟ್ಟನು. ದ್ರೋಣನು ಭೀಮಾರ್ಜುನಾದಿ ಪಾಂಡವರನ್ನು ಬೇರ್ಪಡಿಸಿ ಬೇರೆಡೆಯಲ್ಲಿ ತೊಡಗಿಸಿದ ಕಾಲಕ್ಕೆ ಯುಧಿಷ್ಠಿರ ಒಬ್ಬಂಟಿಗನಾದನು. ಆಗ ಚಕ್ರವ್ಯೂಹವನ್ನು ಭೇದಿಸುವ ಹೊಣೆಗಾರಿಕೆಯನ್ನು ಹೊತ್ತವನು ಅಭಿಮನ್ಯು. ಈತ ಚಕ್ರವ್ಯೂಹವನ್ನು ಹೊಕ್ಕು ಹೋಗುವ ವಿದ್ಯೆ ತಿಳಿದಿತ್ತಾದರೂ ಅದರಲ್ಲಿಂದ ಹೊರಬರುವುದು ಮಾತ್ರ ತಿಳಿದಿರಲಿಲ್ಲ. ಅವನು ತನ್ನ ಕಡುಗಲಿತನವನ್ನು ಮೆರೆಯುತ್ತ ವ್ಯೂಹವನ್ನು ಒಳಹೊಕ್ಕನೇನೋ ನಿಜ. ಅವನು ಕೌರವರ ಹಲವು ಜನ ಯೋಧರನ್ನು ಯಮಲೋಕಕ್ಕೆ ಅಟ್ಟಿದನು. ಅವನು ಭೀಮ ಮೊದಲಾದವರ ನೆರವನ್ನು ನಿರೀಕ್ಷಿಸಿದ್ದನು. ಆದರೆ ಜಯದ್ರಥನು ಅವರೆಲ್ಲರನ್ನು ತಡೆಹಿಡಿದಿದ್ದನು. ಅವನು ಒಂಟಿಯಾಗಿದ್ದ ಕಾರಣ ಹಲವು ಜನ ಯೋಧರು ಕೂಡಿ ಅವನನ್ನು ಸುತ್ತುವರಿದರು. ದುಶ್ಶಾಸನನ ಮಗನ ಗದೆಯೇಟಿನಿಂದಾಗಿ ಅವನಿಗೆ ವೀರಗತಿಯು ಪ್ರಾಪ್ತವಾಯಿತು.

ಶೌರ್ಯ, ವೀರ್ಯ ಹಾಗೂ ರೂಪಗಳ ಸಂದರ್ಭದಲ್ಲಿ ಈತನ ಹೋಲಿಕೆ ಶ್ರೀಕೃಷ್ಣನೊಂದಿಗೆ ಮಾತ್ರ ಆಗಲು ಸಾಧ್ಯ. ವಿರಾಟರಾಜನ ಮಗಳು ಉತ್ತರೆ ಈತನ ಮಡದಿ. ಈತನ ಸಾವಿನ ಕಾಲಕ್ಕೆ ಆಕೆ ಬಸಿರಾಗಿದ್ದಳು. ಅವಳ ಮಗ ಪರೀಕ್ಷಿತ.

**ಅಂಬರೀಷ :** ತ್ರಿಶಂಕುವಿನ ಇಬ್ಬರು ಗಂಡುಮಕ್ಕಳಲ್ಲಿ ಕಿರಿಯ. ಈತನಿಗೆ ಶ್ರೀಮತಿ ಎಂಬ ಒಬ್ಬಳು ಮಗಳಿದ್ದಳು. ವಿಷ್ಣುವು ನಾರದ ಹಾಗೂ ಪರ್ವತರ ವಾದದಲ್ಲಿ ಅವಳನ್ನು ಪಡೆದನೆಂದು ಅದ್ಭುತರಾಮಾಯಣದಲ್ಲಿ ಹೇಳಲಾಗಿದೆ. ಕಾರ್ತಿಕ ಮಾಸದಲ್ಲಿ ಒಂದು ಸಲ ಏಕಾದಶಿಯ ವ್ರತವನ್ನು ಕೈಕೊಂಡಾಗ ದುರ್ವಾಸ ಋಷಿಯು ದ್ವಾದಶಿಯಂದು ಅತಿಥಿಯಾಗಿ ಬಂದನು. ಹೊಳೆಯಲ್ಲಿ ಮಿಂದು ಆಹ್ನಿಕಗಳನ್ನು ಮುಗಿಸುವವರೆಗೆಂದರೆ ದ್ವಾದಶಿಯು ಮುಗಿಯುತ್ತಲಿದ್ದ ಕಾರಣ ನೈವೇದ್ಯವನ್ನು ತೋರಿಸಿ, ತೀರ್ಥವನ್ನು ತೆಗೆದುಕೊಂಡು ಪಾರಣೆಯನ್ನು ಮಾಡಲಾಯಿತು. ಆಗ ದುರ್ವಾಸನು ತನ್ನ ಜಡೆಯ ಕೂದಲುಗಳಿಂದ ಕೃತ್ಯೆಯನ್ನು ತಯಾರಿಸಿ ಅಂಬರೀಷನ ಮೇಲೆ ಎಸೆದನು. ವಿಷ್ಣುವಿನ ಸುದರ್ಶನವು ಅದನ್ನು ನಾಶಪಡಿಸಿತು. ಆಗ ಅದು ದುರ್ವಾಸನನ್ನು ಬೆನ್ನಟ್ಟಿತು. ವಿಷ್ಣುವು ಅವನನ್ನು ಕಾಪಾಡಲು ನಿರಾಕರಿಸಿ ಅವನಿಗೆ ಅಂಬರೀಷನ ಬಳಿಗೆ ಹೋಗೆಂದನು. ಅವನಿಗೆ ಅಂಬರೀಷನ ಬಳಿಗೆ ಬಂದು ತಲುಪಲು ಒಂದು ವರ್ಷ ಹಿಡಿಯಿತು. ಅವರೆಗೂ ಅಂಬರೀಷ ಉಪವಾಸದಿಂದ ಇದ್ದನು, ಅವನು ದುರ್ವಾಸನನ್ನು ಬರಮಾಡಿಕೊಂಡನು. ಚಕ್ರವನ್ನು ಹೊಗಳಿ ಅದನ್ನು ಹಿಂದಿರುಗಿಸಿದನು. ಋಷಿಗೆ ಉತ್ತಮವಾದ ಭೋಜನವನ್ನಿಕ್ಕಿದನು. ಈ ಕಥೆ ಭಾಗವತದ್ದು. ಈತನು ಪಕ್ಷವರ್ಧನೀ ವ್ರತವನ್ನು ಕೈಕೊಂಡಿ

ದ್ದನು. ಸರಿಯಾದ ಸಮಯಕ್ಕೆ ದ್ವಾದಶಿಯನ್ನು ಆಚರಿಸಿ ವಿಷ್ಣುವಿನ ಕೃಪೆಗೆ ಪಾತ್ರ. ನಾದನು. ಇದು ಪದ್ಮಪುರಾಣದಲ್ಲಿ ಬಂದ ಸಂಗತಿ. ಈತನಿಗೆ ಮೋಕ್ಷ ಸಿಕ್ಕಿತು.

**ಅಂಬೆ:** ಕಾಶಿರಾಜನು ತನ್ನ ಮೂವರು ಹೆಣ್ಣುಮಕ್ಕಳನ್ನು ಮಣಕೊಡ್ಡದೆ ಸ್ವಯಂವರವನ್ನು ನಿಯೋಜಿಸಿದನು. ಆಗ ಭೀಷ್ಮನು ಅವರನ್ನು ವಿಚಿತ್ರವೀರ್ಯನಿಗಾಗಿ ಅಪಹರಿಸಿದನು. ಅಂಬೆ ಅವರೆಲ್ಲರಲ್ಲಿ ಹಿರಿಯಳು. ಅವಳು ಮದುವೆಯ ಕಾಲಕ್ಕೆ ಭೀಷ್ಮನಿಗೆ ತಾನು ಶಾಲ್ವ ರಾಜನನ್ನು ಮನದಲ್ಲಿಯೇ ವರಿಸಿರುವುದಾಗಿ ಹೇಳಿದಳು, ಅವಳ ಕೋರಿಕೆಯ ಮೇರೆಗೆ ಭೀಷ್ಮನು ಅವಳನ್ನು ಶಾಲ್ವನಲ್ಲಿಗೆ ಕಳುಹಿಸಿಕೊಟ್ಟನು. ಆದರೆ ಶಾಲ್ವನು ಅವಳನ್ನು ಸ್ವೀಕರಿಸಲಿಲ್ಲ. ಆಗ ಅವಳು ತನ್ನನ್ನು ಮದುವೆಯಾಗು ಮಂತೆ ಭೀಷ್ಮನನ್ನು ಕೇಳಿಕೊಂಡಳು. ಬ್ರಹ್ಮಚರ್ಯೆಯ ವ್ರತವನ್ನು ತೊಟ್ಟ ಕಾರಣ ಅವನು ಅವಳನ್ನು ಮದುವೆಯಾಗಲು ನಿರಾಕರಿಸಿದನು. ಅಂಬೆ ಬಲು ದೊಡ್ಡ ಪೇಚಿಗೆ ಸಿಲುಕಿ ಹಾಕಿಕೊಂಡಳು. ಇದೆಲ್ಲಕ್ಕೆ ಭೀಷ್ಮನೇ ಕಾರಣನೆಂದು ಅವಳಿಗೆ ಮನದಟ್ಟಾಯಿತು. ಅವನ ಮೇಲೆ ಸೇಡುತೀರಿಸಿಕೊಳ್ಳಲೆಂದು ಅವಳು ತಪಸ್ಸನ್ನು ಕೈಕೊಂಡಳು. ಪರಶು ರಾಮನ ನೆರವಿನಿಂದ ಭೀಷ್ಮನನ್ನು ಕೊಲ್ಲಲು ಹವಣಿಸಿ ಸೋತಳು. ಅದರಿಂದಾಗಿ ಅವಳು ಇನ್ನಷ್ಟು ಕೆರಳಿಬಿಟ್ಟಳು. ಸೇಡಿನ ಭಾವನೆ ಇನ್ನಷ್ಟು ಭುಗಿಲ್ಲೆಂದಿತು. ಭೀಷ್ಮನ ತಾಯಿ ಗಂಗೆಯು ಅವಳನ್ನು ತಪಸ್ಸಿನಿಂದ ಹಿಂತಿರುಗಿಸಲೆಂದು ಅವಳಿಗೆ ಉಪದೇಶ ವನ್ನು ಮಾಡಿದಳು. ಆದರೆ ಅದು ಅಂಬೆಗೆ ಒಪ್ಪಿಗೆಯಾಗಲೇ ಇಲ್ಲ. ಅವಳು ಭೀಷ್ಮ ನನ್ನು ಕೊಲ್ಲಲೆಂದು ಇನ್ನಷ್ಟು ಉಗ್ರವಾದ ತಪಸ್ಸನ್ನಾಚರಿಸಿದಳು. ಗಂಗೆಯು ಅವಳಿಗೆ ಶಾಪವನ್ನಿತ್ತರೂ ಅಂಬೆಯು ಅದನ್ನು ಲೆಕ್ಕಿಸಲಿಲ್ಲ.

ಅವಳ ತಪಸ್ಸಿಗೆ ಶಂಕರ ಸಂತುಷ್ಟನಾದನು. 'ಮುಂದಿನ ಜನ್ಮದಲ್ಲಿ ನೀನು ದ್ರುಪದನ ಹೊಟ್ಟೆಯ ಚೊಚ್ಚಿಲ ಕನ್ಯೆಯಾಗಿ ಹುಟ್ಟಿ ಬರುವೆ. ಮುಂದೆ ನಿನಗೆ ಗಂಡಸುತನ ದೊರೆಯಲಿದೆ. ಆಗ ನೀನೇ ಭೀಷ್ಮನನ್ನು ಕೊಲ್ಲುವೆ' ಎಂದು ವರವನ್ನಿತ್ತನು. ವರ ಸಿಕ್ಕ ಕೂಡಲೇ ಅವಳು ಧಗಧಗಿಸುವ ಬೆಂಕಿಗೆ ತನ್ನ ದೇಹವನ್ನು ಅರ್ಪಿಸಿಬಿಟ್ಟಳು.

ಮಹಾಭಾರತದ ಕುಂಭಕೋಣಂ ಪ್ರತಿಯಲ್ಲಿ ತುಸು ಭಿನ್ನವಾದ ಕಥೆ ಕಂಡು ಬರುತ್ತದೆ. ಅಂಬೆಯ ತಪಸ್ಸಿನಿಂದ ಸಂತುಷ್ಟನಾಗಿ ಷಣ್ಮುಗನು ಅವಳಿಗೆ ಪ್ರಾಸಾದಿಕ ವಾದ ದಿವ್ಯಮಾಲೆಯೊಂದನ್ನು ಕೊಟ್ಟನು. ಅದನ್ನು ಕೊರಳಿಗೆ ಹಾಕಿಕೊಳ್ಳುವವರು ಭೀಷ್ಮನನ್ನು ಕೊಲ್ಲುವರೆಂದು ಹೇಳಿದನು. ಅವಳು ಆ ಮಾಲೆಯನ್ನು ಸ್ವೀಕರಿಸು ಮತೆ ಹಲವು ಜನರನ್ನು ಕೇಳಿಕೊಂಡಳು. ಆದರೆ ಭೀಷ್ಮನನ್ನು ಕೊಲ್ಲಲು ಯಾರೂ ಸಿದ್ಧರಾಗಲಿಲ್ಲ. ಕೊನೆಗೆ ಅವಳು ದ್ರುಪದನಲ್ಲಿಗೆ ಹೋಗಿ ಅವನನ್ನೂ ಕೋರಿದಳು. ಆದರೆ ಅವನು ಒಪ್ಪಲಿಲ್ಲ. ಆಗ ಅವಳು ಆ ಮಾಲೆಯನ್ನು ಅವನ ಅರಮನೆಯಲ್ಲಿ ಎಸೆದು ಅಲ್ಲಿಂದ ಹೊರಟುಹೋದಳು. ದ್ರುಪದನು ಅದನ್ನೆತ್ತಿ ಒಂದು ಕಡೆ ಇಟ್ಟು ಬಿಟ್ಟನು. ಈ ಮಾಲೆಯಿಂದಾಗಿಯೇ ಶಿಖಂಡಿಯು ಭೀಷ್ಮನನ್ನು ಕೊಲ್ಲಲು ಸಾಧ್ಯ ವಾಯಿತು.

**ಅಂಬಾಲಿಕೆ:** ಕಾಶಿಯ ರಾಜನ ಕಿರಿಯ ಮಗಳು. ವಿಚಿತ್ರವೀರ್ಯನ ಮಡದಿ. ಮಗುವಾಗುವ ಮೊದಲೇ ಗಂಡ ತೀರಿಕೊಂಡನು. ಅತ್ತೆಯ (ಸತ್ಯವತಿಯ) ಹೇಳಿಕೆಯ

ಮೇರೆಗೆ ವಂಶವೃದ್ಧಿಗಾಗಿ ಇವಳು ನಿಯೋಗಕ್ಕೆ ಒಪ್ಪಿಕೊಂಡಳು. ವ್ಯಾಸನ ವಿಚಿತ್ರವೂ ಹೆದರಿಕೆಯನ್ನು ಹುಟ್ಟಿಸುವಂತಹ ಭಯಂಕರವಾದ ರೂಪವನ್ನು ಕಂಡು ಹೆದರಿ ಹೋದ ಅಂಬಾಲಿಕೆಯು ಸಮಾಗಮದ ಕಾಲಕ್ಕೆ ಬಿಳುಚಿಕೊಂಡಳು. ಹೀಗಾಗಿ ಅವಳ ಹೊಟ್ಟೆಯಲ್ಲಿ ಹುಟ್ಟಿಬಂದ ಪಾಂಡು ಪಾಂಡುರೋಗಿಯಾಗಿದ್ದನು. ಈತನೇ ಪಾಂಡವರ ತಂದೆ ಪಾಂಡು.

**ಅಂಬಿಕೆ :** ಕಾಶಿಯ ರಾಜನ ಎರಡನೆಯ ಮಗಳು. ವಿಚಿತ್ರವೀರ್ಯನ ಮಗಳು. ಮಗುವನ್ನು ಪಡೆವ ಮೊದಲೇ ಗಂಡ ಮಡಿದನು. ಹೀಗಾಗಿ ತನ್ನ ಅತ್ತೆಯು (ಸತ್ಯವತಿಯು) ಹೇಳಿಕೆಯ ಮೇರೆಗೆ ವಂಶವೃದ್ಧಿಗೆಂದು ಇವಳು ನಿಯೋಗಕ್ಕೆ ಒಪ್ಪಿಕೊಂಡಳು. ಸಮಾಗಮದ ಕಾಲಕ್ಕೆ ವ್ಯಾಸನ ಭಯಂಕರವಾದ ರೂಪವನ್ನು ಕಂಡು ಹೆದರಿ ಕಣ್ಣು ಮುಚ್ಚಿಕೊಂಡಳು. ಹೀಗಾಗಿ ಅವಳ ಹೊಟ್ಟೆಯಿಂದ ಕುರುಡು ಮಗ ಹುಟ್ಟಿ ಬಂದನು. ಅವನೇ ಧೃತರಾಷ್ಟ್ರ. ರಾಜ್ಯವನ್ನಾಳಲು ಕುರುಡನಿಂದ ಆಗುವಂತಿರಲಿಲ್ಲ. ಹೀಗಾಗಿ ಸತ್ಯವತಿಯು ಅವಳಿಗೆ ಇನ್ನೊಂದು ಸಲ ನಿಯೋಗವನ್ನು ಕೈಕೊಳ್ಳಲು ಹೇಳಿದಳು. ಅವಳು ಅತ್ತೆಯ ಮಾತಿಗೆ ಒಪ್ಪಿಗೆಯನ್ನೇನೋ ಇತ್ತಳು. ಆದರೆ ಇನ್ನೊಮ್ಮೆ ವ್ಯಾಸರೊಂದಿಗೆ ಕೂಡಿಕೊಳ್ಳುವುದು ಅವಳಿಗೆ ಬೇಡವಾಗಿತ್ತು. ಹೀಗಾಗಿ ಅವಳು ಇದಕ್ಕಾಗಿ ಒಬ್ಬ ಚೆಲುವೆಯಾದ ದಾಸಿಯನ್ನು ಒಪ್ಪಿಸಿದಳು. ಈ ದಾಸಿಯಿಂದ ಹುಟ್ಟಿ ಬಂದವನೇ ವಿದುರ.

**ಅರುಣ :** ಕಶ್ಯಪ ಋಷಿ ಹಾಗೂ ವಿನತೆಯ ಮಗ. ವಿನತೆಯ ಸವತಿ ಕದ್ರುವಿಗೆ ಮಕ್ಕಳಾಗಿ ಅವು ಆಟವಾಡಹತ್ತಿದ್ದವು. ಅವಳೊಂದಿಗೇನೆ ಬಸಿರಾಗಿದ್ದರೂ ಇವಳಿಗೆ ಮಾತ್ರ ಮಕ್ಕಳಾಗಲಿಲ್ಲ. ಹೀಗಾಗಿ ಇವಳಿಗೆ ಸಂಕಟಕ್ಕಿಟ್ಟುಕೊಂಡಿತ್ತು. ಇವಳು ಎರಡು ಮೊಟ್ಟೆಗಳನ್ನಿಟ್ಟಿದ್ದಳು, ಅವು ಮಾಗಿರಲಿಲ್ಲ. ಹೀಗಾಗಿ ಅವಳು ಅವಸರದಿಂದ ಅವುಗಳಲ್ಲಿ ಒಂದನ್ನು ಒಡೆದುಹಾಕಿದಳು. ಅದರೊಳಗಿಂದ ಒಂದು ಗಂಡು ಮಗು ಹೊರಬಂದಿತು, ಆ ಮಗುವಿಗೆ ಟೊಂಕದವರೆಗೆ ಮಾತ್ರ ದೇಹವಿತ್ತು. ತೊಡೆ, ಮೊಣಕಾಲುಗಳಿರಲಿಲ್ಲ. ಹೀಗಾಗಿ ಅವನ ಹೆಸರು ಅನೂರು—ಅರುಣ—ಎಂದಾಯಿತು. ಈತ ವಿಪಾದ (ಕಾಲಿಲ್ಲದವ) ಎಂದೂ ಹೆಸರಾದವನು. ತನ್ನ ತಾಯಿಯ ಗಡಿಬಿಡಿಯಿಂದಾಗಿ ತನಗಿಂಥ ಹೆಳವನ ಜೀವನ ಬಂದಿತೆಂದು ಅವನು ಅವಳ ಮೇಲೆ ಬಲು ಸಿಟ್ಟಿಗೆದ್ದನು. 'ನೀನು ಐದುನೂರು ವರ್ಷಗಳ ಕಾಲ ನಿನ್ನ ಸವತಿಗೆ ದಾಸಿಯಾಗು' ಎಂದು ಅವಳನ್ನು ಶಪಿಸಿದನು. ಎರಡನೆಯ ಮೊಟ್ಟೆ ತಾನಾಗಿಯೇ ಮಾಗುವವರೆಗೆ ಕಾದರೆ ಅದರಿಂದ ಹುಟ್ಟಿಬರುವ ಮಗನು ಅವಳನ್ನು ದಾಸ್ಯದಿಂದ ಬಿಡುಗಡೆಗೊಳಿಸುವನೆಂದೂ ಹೇಳಿದನು. ಗರುಡನು ವಿನತೆಯ ಎರಡನೆಯ ಮಗ. ಸೂರ್ಯನು ಅರುಣನನ್ನು ತನ್ನ ಸಾರಥಿಯನ್ನಾಗಿ ನೇಮಿಸಿಕೊಂಡನು. ಇವನ ಮಡದಿಯ ಹೆಸರು ಶ್ಯೇನಿ. ಅವಳ ಹೊಟ್ಟೆಯಿಂದ ಸಂಪಾತಿ, ಜಟಾಯು ಹಾಗೂ ಶ್ಯೇನರು ಹುಟ್ಟಿಬಂದರೆಂದು ಮಹಾಭಾರತದ ಆದಿಪರ್ವದಲ್ಲಿ ಹೇಳಲಾಗಿದೆ.

**ಅರುಂಧತಿ :** ಕರ್ದಮ ಪ್ರಜಾಪತಿ ಹಾಗೂ ಆತನ ಮಡದಿ ದೇವಹೂತಿಯ ಮಗಳು; ವಸಿಷ್ಠ ಋಷಿಯ ಮಡದಿ. ಇವಳು ಎಂದಿಗೂ ವಸಿಷ್ಠನನ್ನು ಬಿಟ್ಟು ಇದ್ದವ

ಳಲ್ಲ; ಆತನನ್ನು ವಿರೋಧಿಸಿದವಳಲ್ಲ ಎಂಬುದರಿಂದಾಗಿ ಇವಳ ಹೆಸರು ಅರುಂಧತಿ ಎಂದಾಯಿತು—ಎಂದು ಮಹಾಭಾರತದ ಅನುಶಾಸನಪರ್ವದಲ್ಲಿ ಹೇಳಲಾಗಿದೆ. ಇವಳ ಗಂಡನ ಸೇವೆ ಹಾಗೂ ತಪಸ್ಸುಗಳು ಬಲು ಶ್ರೇಷ್ಠವಾದವುಗಳು. ಹೀಗಾಗಿ ಸ್ವಾಹಾ ದೇವಿಯು ಇವಳ ರೂಪವನ್ನು ಹೊರಲು ಸಾಧ್ಯವಾಗಲಿಲ್ಲ. ಇವಳ ತಪಸ್ಸಿಗೆ ಶಂಕರ ಸಂತುಷ್ಟನಾದನು. ಇವಳಿಗೆ ದರ್ಶನವನ್ನಿತ್ತು ವರವನ್ನೂ ಇತ್ತನು. ಈಕೆ ತಪಸ್ಸನ್ನು ಕೈಕೊಂಡ ತಾಣ 'ಬದರಪಾಚನ' ಎಂಬ ಹೆಸರಿನ ಪವಿತ್ರವಾದ ತೀರ್ಥಕ್ಷೇತ್ರ ಎನ್ನಿಸಿತು. ಇಲ್ಲಿ ಮೂರು ಇರುಳುಗಳನ್ನು ಕಳೆಯುವವನಿಗೆ ಹನ್ನೆರಡು ವರ್ಷಗಳ ಉಪವಾಸದ ಫಲ ದೊರಕುತ್ತದೆಂದು ಇದರ ಸ್ಥಲಮಹಿಮೆಯನ್ನು ಕೊಂಡಾಡಲಾಗುತ್ತದೆ. ಸಪ್ತರ್ಷಿಗಳಲ್ಲಿ ಈಕೆ ವಸಿಷ್ಠನ ಬಳಿಯಲ್ಲಿ ಕಾಣುತ್ತಾಳೆ. ಅರುಂಧತಿಯು ಋಷಿ, ಪಿತೃ ಹಾಗು ದೇವತೆ ಗಳಿಗೆ ಧರ್ಮದ ಗುಟ್ಟನ್ನು ಬಿಡಿಸಿ ಹೇಳಿದ್ದರಿಂದ ಅವರು ಸಂತುಷ್ಟರಾಗಿ 'ನಿನ್ನ ತಪಸ್ಸು ವೃದ್ಧಿಂಗತವಾಗಲಿ' ಎಂದು ವರ ನೀಡಿದರು. ಶಕ್ತಿಯು ಅರುಂಧತಿ ಹಾಗೂ ವಸಿಷ್ಠರ ಮಗನು.

**ಅರ್ಜುನ:** ದುರ್ವಾಸನ ಮಂತ್ರದ ಪ್ರಭಾವದಿಂದಾಗಿ ಇಂದ್ರನಿಂದ ನಿಯೋಗ ಪದ್ಧತಿಯಿಂದ ಹುಟ್ಟಿದ ಮಗ. ಈತನ ಹುಟ್ಟಿನ ಕಾಲಕ್ಕೆ ಭಾರೀ ಪರಾಕ್ರಮವನ್ನು ಸೂಚಿಸುವಂತೆ ಆಕಾಶವಾಣಿ ಕೇಳಿಬಂದಿತು. ಈತನ ಹುಟ್ಟು ಹಾಗೂ ಉಳಿದ ಸಂಸ್ಕಾರ ಗಳು ಹಿಮಾಲಯದ ಶತಶೃಗ ಎಂಬಲ್ಲಿ ನಡೆದವು. ಈತನ ಮುಂಜಿವೆಯಾದದ್ದು ಪಾಂಡುವಿನ ಮರಣಾನಂತರ ಹಸ್ತಿನಾಪುರದಲ್ಲಿ. ದ್ರೋಣಾಚಾರ್ಯನಿಂದ ಶಸ್ತ್ರಾಸ್ತ್ರಗಳ ತರಬೇತಿ. ಇವನ ನಿಪುಣತೆಯಿಂದಾಗಿ ಗುರುಗಳ ಕೃಪೆಗೆ ಪಾತ್ರನಾದವನು. ಈತ ಬಿಲ್ಲು ವಿದ್ಯೆಯಲ್ಲಿ ತುಂಬ ನುರಿತವನು. ಕತ್ತಲಲ್ಲಿ ಬಾಣ ಹೊಡೆಯುವ ಲಕ್ಷ್ಯವೇಧವನ್ನು ಅಭ್ಯಾಸಮಾಡಿದವನು. ಅರ್ಜುನನಿಗೆ ಬೇರೊಬ್ಬ ಎದುರಾಳಿ ಬೇಡವೆಂದೇ ಗುರು ದ್ರೋಣನು ಏಕಲವ್ಯನ ಒಂದು ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಕೇಳಿ ಪಡೆದು ಆತನ ವಿದ್ಯೆಯನ್ನು ಹಾಳುಮಾಡಿದನು. ಈತ ಸರಿಯಾಗಿ ಗುರಿಯಿಟ್ಟು ಬಾಣ ಬಿಟ್ಟು ಗುರು ದ್ರೋಣನನ್ನು ಮೊಸಳೆಯ ಬಾಯಿಂದ ಬಿಡಿಸಿದನು. ಕರ್ಣನೂ ಕೂಡ ಒಬ್ಬ ಒಳ್ಳೆಯ ಧನುರ್ಧಾರಿಯಾಗಿದ್ದನೆಂಬುದು ಕಾಲಕಾಲಕ್ಕೆ ಏರ್ಪಟ್ಟ ಪಂದ್ಯಗಳಲ್ಲಿ ಸಿದ್ಧವಾಗಿತ್ತು. ದ್ರೋಣನು ತನಗೆ ಗುರುದಕ್ಷಿಣೆಯಾಗಿ ದ್ರುಪದರಾಜನನ್ನು ಸೆರೆಹಿಡಿದು ತರಲು ತನ್ನ ಶಿಷ್ಯರಿಗೆಲ್ಲ ಹೇಳಿದನು. ಅರ್ಜುನನೊಬ್ಬನೇ ಇದನ್ನು ಮಾಡಲು ಸಮರ್ಥನೆನ್ನಿಸಿದನು. ಅದನ್ನು ಪೂರೈಸಿದನು. ಅರ್ಜುನನ ಮತ್ಸ್ಯಭೇದದ ಕೌಶಲ್ಯದಿಂದಾಗಿಯೇ ದ್ರೌಪದಿ ಪಾಂಡವರಿಗೆ ದಕ್ಕುವಂತಾದಳು. ಬ್ರಾಹ್ಮಣರ ಯಜ್ಞಧೇನುಗಳನ್ನು ರಕ್ಷಿಸಲೆಂದು ಅರ್ಜುನ ಹನ್ನೆರಡು ತಿಂಗಳ ಕಾಲದ ಶಿಕ್ಷೆಗೊಳಪಟ್ಟು ತೀರ್ಥಯಾತ್ರೆಯನ್ನು ಕೈಕೊಂಡನು. ಈ ಅಲೆದಾಟದ ಕಾಲದಲ್ಲಿಯೇ ಅವನಿಗೆ ಉಲೂಪಿಯೊಂದಿಗೆ ನಂಟಾಯಿತು. ಚಿತ್ರಾಂಗದೆ ಯೊಂದಿಗೆ ಮದುವೆಯಾದನು. ಸುಭದ್ರೆಯನ್ನು ಓಡಿಸಿಕೊಂಡು ಹೋದನು. ಶಾಪ ಭ್ರಷ್ಟರಾದ ಅಪ್ಸರೆಯರು ಮೊಸಳೆಗಳಾಗಿದ್ದರು. ಅರ್ಜುನನಿಂದಾಗಿ ಅವರು ಶಾಪ ಮುಕ್ತರಾದರು. ಅವರು ವಾಸವಾಗಿದ್ದ ಸರೋವರಕ್ಕೆ ತೀರ್ಥಕ್ಷೇತ್ರದ ಹಿರಿಮೆ ಬಂದಿತು. ಮಯನಿಂದ ದೇವದತ್ತ ಶಂಖ, ಅಗ್ನಿಯಿಂದ ಗಾಂಡೀವ ಧನುಷ್ಯ, ಎರಡು ಅಕ್ಷಯವಾದ

ಬತ್ತಳಿಕೆಗಳು, ಬಿಳಿಗುದುರೆಗಳುಳ್ಳ ಹಾಗೂ ಕಪಿಧ್ವಜದ ರಥ, ಇಂದ್ರನಿಂದ ಕವಚ ಕುಂಡಲುಗಳು, ಹಲವು ಬಗೆಯ ಅಸ್ತ್ರಗಳು, ಶಂಕರನಿಂದ ಪಾಶುಪತಾಸ್ತ್ರಗಳೆಲ್ಲ ಅರ್ಜುನ ನಿಗೆ ದೊರೆತವು.

ಅರ್ಜುನನು ರಾಜಸೂಯ ಯಜ್ಞದ ನಿಮಿತ್ತದಿಂದ ತುಂಬ ವಿಜಯಸಂಪಾದನೆ ಯನ್ನು ಮಾಡಿದನು. ಈತನು ಆನರ್ತ, ಕಾಲಕೂಟ, ಶಾಕಲ ದ್ವೀಪ, ಪ್ರಾಗ್‌ಜ್ಯೋತಿಷ, ಉಲೂಕ, ಪಂಚಗಣ ಮೊದಲಾದ ಹಲವು ದೇಶಗಳನ್ನು ಗೆದ್ದುಕೊಂಡನು. ಕಿರಾತ ರೂಪದ ಶಂಕರನೊಂದಿಗೆ ಸೆಣಸಾಡಿ ತನ್ನ ಯುದ್ಧಕೌಶಲ್ಯವನ್ನು ಮೆರೆದನು. ಇಂದ್ರನ ಅರ್ಧ ಆಸನದ ಮೇಲೆ ಕುಳಿತುಕೊಳ್ಳುವ ಗೌರವವನ್ನು ಪಡೆದನು. ಅರ್ಜುನ ಹಾಡು-ಕುಣಿತಗಳಲ್ಲಿ ಪಳಗಿದ್ದನು. ಈಗ ಊರ್ವಶಿಯ ಶಾಪದಿಂದಾಗಿ ಷಂಡನಾದನು. ಇವೆರಡೂ ಸಂಗತಿಗಳು ಈತನಿಗೆ ಅಜ್ಞಾತವಾಸದ ಕಾಲಕ್ಕೆ ನೆರವಿಗೆ ಬಂದವು, ಬೃಹನ್ನಳೆ ಎಂಬ ಹೆಸರುಪಡೆದು ಅಜ್ಞಾತವಾಸದ ಅವಧಿಯಲ್ಲಿ ವಿರಾಟರಾಜನಲ್ಲಿ ಆಶ್ರಯಹೊಂದಲು ನೆರವಾದುದರ ಶ್ರೇಯಸ್ಸು ಊರ್ವಶಿಯ ಶಾಪಕ್ಕೆ ಸಲ್ಲತಕ್ಕದ್ದು. ಗೋಗ್ರಹಣದ ಸಂಕಟ ಬಂದೆರಗಿದಾಗ ಉತ್ತರನ ಸಾರಥಿಯಾಗಿ ಈತ ದುರ್ಯೋಧನನನ್ನು ಗೋಳಾಡುವಂತೆ ಮಾಡಿದನು. ದುರ್ಯೋಧನನನ್ನು ಚಿತ್ರಸೇನ ಗಂಧರ್ವನಿಂದ ಬಿಡಿಸಿ ತಂದು ಆತ ನಾಚಿ ತಲೆ ಕೆಳಹಾಕುವಂತೆ ಮಾಡಿದನು.

ಭಾರತ ಯುದ್ಧದ ಕಾಲಕ್ಕೆ ಅರ್ಜುನನಲ್ಲಿ ವಿಷಣ್ಣತೆ ತಲೆದೋರಿತು. ಆತ ಶಸ್ತ್ರ ಸನ್ಯಾಸವನ್ನು ಪಡೆಯಲಿಚ್ಛಿಸಿದನು. ಶ್ರೀಕೃಷ್ಣನ ಗೀತೋಪದೇಶದಿಂದ ಮತ್ತೆ ಹುರುಪು ತುಂಬಿತು, ತರುವಾಯದಲ್ಲಿ ಮಾತ್ರ ಅತುಲನೀಯವಾದ ಪರಾಕ್ರಮವನ್ನು ಮೆರೆದನು. ಯುದ್ಧದಲ್ಲಿ ಈತನಿಗೆ ಭೀಷ್ಮನನ್ನು ಸೋಲಿಸಲಾಗಲಿಲ್ಲವಾದರೂ ತನ್ನ ಯುದ್ಧಕೌಶಲ ವನ್ನು ಚೆನ್ನಾಗಿ ತೋರಿದನು. ಭೀಷ್ಮನೇ ತನ್ನ ಸಾವಿನ ಉಪಾಯವನ್ನು ಹೇಳುತ್ತಲೇ ಈತ ಶಿಖಂಡಿಯನ್ನು ಮುಂದೆ ಮಾಡಿ ಬಾಣಗಳನ್ನೆಸೆದನು. ಅರ್ಜುನನು ಶರಪಂಜರದ ಮೇಲಿದ್ದ ಭೀಷ್ಮನಿಗೆ ಬಾಣಗಳ ತಲೆದಿಂಬನ್ನು ಪೂರೈಸಿದನು. ಅಭಿಮನ್ಯು ಸಾವಿಗೀಡಾದ ಬಗೆ, ಜಯದ್ರಥನು ಆಮೇಲೂ ಆತನನ್ನು ಕಾಲಿನಿಂದ ಒದೆದ ಬಗೆಗಳನ್ನು ಕೇಳಿ ಅರ್ಜುನನ ಕೋಪವುಕ್ಕಿ ಬಂದಿತು. ತಾನು ಜಯದ್ರಥನನ್ನು ಕೊಲ್ಲುವುದಾಗಿ ಪಣತೊಟ್ಟು ಅವ ನನ್ನು ಕೊಂದುಬಿಟ್ಟನು. ಕರ್ಣಾರ್ಜುನರ ಕಾಳಗದಲ್ಲಿ ಇಬ್ಬಗೆಯಿಂದಲೂ ಯುದ್ಧಕೌಶಲ ಎದ್ದುಕಂಡಿತು. ಅಶ್ವತ್ಥಾಮನು ಬಳಸಿದ ಬ್ರಹ್ಮಾಸ್ತ್ರಕ್ಕೆ ಅರ್ಜುನ ಅದೇ ಅಸ್ತ್ರದಿಂದ ಮಾರುತ್ತರವನ್ನಿತ್ತನು. ಅಶ್ವಮೇಧಯುದ್ಧದ ನಿಮಿತ್ತದಿಂದ ಹಲವು ಜನ ರಾಜರು ಗಳೊಡನೆ ಹೋರಾಡಿ ರಾಜ್ಯವನ್ನು ವಿಸ್ತರಿಸಿದನು. ಮಣಿಪುರ ರಾಜ್ಯದಲ್ಲಿ ತನ್ನ ಮಗ ಬಭ್ರುವಾಹನನೊಂದಿಗೆಯೇ ಈತ ಯುದ್ಧವನ್ನು ಮಾಡಬೇಕಾಯಿತು. ಅರ್ಜುನನಿಗೆ ತನ್ನ ಗಾಂಡೀವ ಧನುಷ್ಯದ ಮೇಲೆ ಎಲ್ಲಿಲ್ಲದ ಜೀವ. ಒಂದು ಸಲ ಯುಧಿಷ್ಠಿರನು ಗಾಂಡೀವದ ಬಗೆಗೆ ಕೇಡಿನ ಮಾತುಗಳನ್ನಿಡುತ್ತಲೇ ಅರ್ಜುನ ತನ್ನ ಕತ್ತಿಯನ್ನು ಹಿರಿದು ಆವನ ಮೇಲೇರಿಹೋದನು.

ಶ್ರೀಕೃಷ್ಣನು ಅರ್ಜುನನ ಗೆಳೆಯ, ಸಾರಥಿ, ಗುರು, ಬೆಂಬಲಿಗನಲ್ಲದೆ ಅರ್ಜುನನನ್ನು ತುಂಬ ಇಷ್ಟಪಡುವವನಾಗಿದ್ದನು. ಶ್ರೀಕೃಷ್ಣನ ಸಲಹೆಗಳಿಂದಾಗಿಯೇ ಈತ ಎಲ್ಲ

ಬಗೆಯ ಸಂಕಟಗಳನ್ನು ಮೆಟ್ಟಿನಿಲ್ಲಲು ಸಾಧ್ಯವಾಯಿತು. ಯಾದವರ ಸಂಹಾರದ ವಾರ್ತೆ ಅರ್ಜುನನಿಗೆ ವಸುದೇವನಿಂದ ಬಂದ ಸಂದೇಶದಿಂದ ತಿಳಿಯಿತು. ಆಗ ಅರ್ಜುನನು ಅವರ ಹೆಂಗಳೆಯರಿಗೆಲ್ಲ ಧೈರ್ಯ ಹೇಳಿ ಅವರನ್ನು ಕಾಪಾಡಿದನು. ಉಳಿದ ಪಾಂಡವರೊಂದಿಗೆ ಇವನೂ ಪತನಹೊಂದಿದನು. ಸಾವಿನ ಕಾಲಕ್ಕೆ ಇವನ ವಯಸ್ಸು ೧೦೬ ವರ್ಷಗಳು. ಈತನಿಗೆ ದ್ರೌಪದಿಯಿಂದ ಶ್ರುತಕೀರ್ತಿ, ಸುಭದ್ರೆಯಿಂದ ಅಭಿಮನ್ಯು, ಚಿತ್ರಾಂಗದೆ ಯಿಂದ ಬಭ್ರುವಾಹನ ಹಾಗೂ ಉಲೂಪಿಯಿಂದ ಇರಾವಾನ ಎಂಬ ನಾಲ್ಕು ಜನ ಗಂಡು ಮಕ್ಕಳು ಹುಟ್ಟಿದರು. ರಾಜ ಪರೀಕ್ಷಿತನು ಅರ್ಜುನನ ಮೊಮ್ಮಗ.

**ಅಲಾಯುಧ :** ಭೀಮನು ಕೊಂದ ಬಕಾಸುರನ ತಮ್ಮನೇ ಘಟೋತ್ಕಚ. ಈತ ಹಾಗೂ ಕರ್ಣರಲ್ಲಿ ಕಾಳಗ ಶುರುವಾಯಿತು. ಕರ್ಣ ಈತನನ್ನು ಎದುರಿಸಲಾರದೆ ಹೋದನು. ಆಗ ಹಲಾಯುಧನು ದುರ್ಯೋಧನನ ಅಪ್ಪಣೆಯನ್ನು ಪಡೆದು ಪಾಂಡವ ರೊಂದಿಗೆ ಘಟೋತ್ಕಚನನ್ನೂ ನಾಶಪಡಿಸಲೆಂದು ಮುನ್ನುಗ್ಗಿದನು. ಭೀಮನೊಂದಿಗೆ ಘನಘೋರವಾದ ಕಾಳಗ ನಡೆಯಿತು. ಭೀಮ ತ್ರಸ್ತನಾದುದನ್ನು ಕಂಡು ಶ್ರೀಕೃಷ್ಣನು ಘಟೋತ್ಕಚನನ್ನು ಆತನ ನೆರವಿಗೆ ಕಳಿಸಿದನು. ಘಟೋತ್ಕಚನು ಈತನನ್ನು ಕೊಂದು ಬಿಟ್ಟನು.

**ಅಶ್ವತ್ಥಾಮ :** ದ್ರೋಣ–ಕೃಪಿಯರ ಒಬ್ಬನೇ ಒಬ್ಬ ಮಗ. ಈತ ಹುಟ್ಟಿದ ಕೂಡಲೇ ಉಚ್ಚೈಃಶ್ರವಃ ಕುದುರೆಯು ಹಾಗೆ ಕೆನೆದದ್ದರಿಂದ ಆಕಾಶವಾಣಿ ಆಯಿತು. ಹೀಗಾಗಿ ಈತನ ಹೆಸರನ್ನು 'ಅಶ್ವತ್ಥಾಮ'ನೆಂದು ಇಡಲಾಯಿತು. ಈತನ ಉತ್ಪತ್ತಿ ಯಾದುದು ರುದ್ರನ ಅಂಶದಿಂದ. ಆದುದರಿಂದ ಈತ ಶೂರ-ವೀರನಾಗಿರುವಂತೆಯೇ ಮುಂಗೋಪಿಯೂ ಆಗಿದ್ದನು. ತನ್ನ ತಂದೆಯಿಂದಲೇ ಶಸ್ತ್ರಾಸ್ತ್ರವಿದ್ಯೆಯನ್ನು ಸಂಪಾದಿ ಸಿದನು. ಈತನ ಬಾಲ್ಯವೆಲ್ಲ ಕೌರವ-ಪಾಂಡವರ ಮಕ್ಕಳೊಂದಿಗೆ ಕಳೆಯಿತು. ಹೀಗಾಗಿ ಹುಟ್ಟುಬ್ರಾಹ್ಮಣನಾದರೂ ಕ್ಷಾತ್ರವೃತ್ತಿಯುವನಾದನು. ಈತ ದುರ್ಯೋಧನನ ಸಾವಿನ ತರುವಾಯ ಕೌರವಸೇನೆಗೆ ದಂಡನಾಯಕನಾದನು. ಕೂಡಲೇ ಪಾಂಡವರ ವಧೆಯ ಪಣತೊಟ್ಟನು. ಧೃಷ್ಟದ್ಯುಮ್ನನು ದ್ರೋಣನನ್ನು ಕೊಂದ ಸುದ್ದಿ ಬರುತ್ತಲೇ ಅವನನ್ನು ತಾನು ಕೊಲ್ಲುವುದಾಗಿಯೂ ಪಣತೊಟ್ಟನು. ಆದರೆ ಅವುಗಳಲ್ಲಿ ಯಶ ದೊರಕಲಿಲ್ಲ. ಭಾರತಯುದ್ಧದ ಕಾಲಕ್ಕೆ ಈತನು ಅತುಲನೀಯವಾದ ಪರಾಕ್ರಮವನ್ನು ಮೆರೆದನು. ಪಾಂಡವರ ಒಂದು ಅಕ್ಷೋಹಿಣಿ ಸೈನ್ಯವನ್ನು ಮಣ್ಣುಮುಕ್ಕಿಸಿದನು. ಗೂಗೆಯು ಕಾಗೆ ಗಳನ್ನು ಸಂಹರಿಸಿದ್ದನ್ನು ಕಂಡು ಈತನು ಇರುಳಲ್ಲಿ ಧೃಷ್ಟದ್ಯುಮ್ನ, ದ್ರೌಪದಿಯ ಮಕ್ಕಳು ಹಾಗೂ ಪಾಂಡವರ ಬಳಗದವರನ್ನೆಲ್ಲ ಅವರು ನಿದ್ರೆಯಲ್ಲಿದ್ದಾಗ ಬಲು ನಿರ್ದಯತೆಯಿಂದ ಕೊಲೆಗೈದನು. ಈತನು ಪಾಂಡವರ ಸೇನೆಯ ಮೇಲೆ ನಾರಾಯಣಾಸ್ತ್ರ ವನ್ನು ಎಸೆದಾಗ ಶ್ರೀಕೃಷ್ಣನು ಯುಕ್ತಿಯಿಂದ ಅದನ್ನು ಶಾಂತಗೊಳಿಸಿದನು. ತನ್ನ ಮಕ್ಕಳ ವಧೆಯ ಸೇಡೆಂದು ದ್ರೌಪದಿಯು ಈತನ ಹಣೆಯ ಮೇಲಿನ ಮಣಿಗಾಗಿ ತನ್ನ ಬೇಡಿಕೆ ಯನ್ನು ಮುಂದೊಡ್ಡಿದಳು. ಆಗ ವ್ಯಾಸರ ಅಪ್ಪಣೆಯ ಮೇರೆಗೆ ಈತ ಪಾಂಡವರಿಗೆ ಶರಣುಹೋಗಿ ಅವರಿಗೆ ತನ್ನ ಮಣಿಯನ್ನು ಒಪ್ಪಿಸಬೇಕಾಯಿತು. ಈತ ಬ್ರಹ್ಮಶಿವ ಎಂಬ ಅಸ್ತ್ರವನ್ನೆಸೆಯುತ್ತಲೇ ಅದಕ್ಕೆ ಪ್ರತ್ಯುತ್ತರವೆಂದು ಅರ್ಜುನನು ಅಂಥದೇ ಅಸ್ತ್ರ

ವನ್ನು ಬಳಸಿದನು. ಆದರೆ ಪೃಥ್ವಿಯ ನಾಶವನ್ನು ತಪ್ಪಿಸಲೆಂದು ವ್ಯಾಸರ ಹೇಳಿಕೆಯ ಮೇರೆಗೆ ಆದನ್ನು ಮರಳಿ ಪಡೆದನು. ಅಶ್ವತ್ಥಾಮನು ಮಾತ್ರ ಅದನ್ನು ಹಿಂತೆಗೆದು ಕೊಳ್ಳಲಿಲ್ಲ. ಅದು ಉತ್ತರೆಯ ಬಸಿರಿನ ಮೇಲೆರಗಿತು. ಅವಳು ಸತ್ತ ಮಗುವನ್ನು ಹೆತ್ತಳು. ಶ್ರೀಕೃಷ್ಣನ ಕೃಪೆಯಿಂದಾಗಿ ಆ ಮಗು ಮರುಜೀವ ತಳೆಯಿತು. ಶ್ರೀಕೃಷ್ಣನ ಶಾಪದಿಂದಾಗಿ ಈತನಿಗೆ ಮೂರುಸಾವಿರ ವರುಷಗಳ ಕಾಲ ದುರ್ಗಂಧದಿಂದ ಕೂಡಿದ, ಹೇಸಿಗೆ ಹುಟ್ಟಿಸುವ ದೇಹವನ್ನು ಹೊತ್ತು ಕಾಡಿನಲ್ಲಿ ಅಲೆದಾಡುವಂತಾಯಿತು.

ಏಳು ಜನ ಚಿರಂಜೀವಿಗಳಲ್ಲಿ ಈತನೊಬ್ಬ.

**ಅಶ್ವಸೇನ :** ತಕ್ಷಕನ ಮಗ. ಖಾಂಡವ ವನವನ್ನು ಸುಡುವ ಕಾಲಕ್ಕೆ ತಕ್ಷಕ ಅಲ್ಲಿಲ್ಲದ ಕಾರಣ ಆತ ಬದುಕಿಕೊಂಡನು. ಅಶ್ವಸೇನನ ತಾಯಿಯು ಅವನನ್ನು ಬಾಯಲ್ಲಿ ಹಿಡಿದುಕೊಂಡು ಹೊರಹೋಗಲು ಯತ್ನಿಸಿದಾಗ ಅರ್ಜುನ ಅವಳ ತಲೆಯನ್ನು ಕಡಿದು ಉರುಳಿಸಿಬಿಟ್ಟನು. ಆದರೆ ಅದೇ ಕಾಲಕ್ಕೆ ಬಿರುಗಾಳಿ ಬೀಸಿದ್ದರಿಂದ ಅವಳ ದೇಹ ಬೆಂಕಿಯ ಹೊರಬದಿಗೆ ಬಿದ್ದಿತು. ಹೀಗಾಗಿ ಅಶ್ವಸೇನ ಬದುಕಿಕೊಂಡನು. ಅದರಿಂದಾಗಿ ಅರ್ಜುನನಿಗೆ ಈತನ ಮೇಲೆ ಎಲ್ಲಿಲ್ಲದ ಕೋಪ. ಈತ ಅವನ ಮೇಲೆ ಸೇಡು ತೀರಿಸಿ ಕೊಳ್ಳಲೆಂದು ಕರ್ಣನ ಬಾಣಗಳ ಮೇಲೆ ಆರೂಢನಾದನು. ಆದರೆ ಅರ್ಜುನ ತಲೆ ಬಾಗಿಸಿದ್ದರಿಂದ ಬಾಣ ಬರೀ ಆತನ ಕಿರೀಟಕ್ಕಷ್ಟೇ ತಗುಲಿತು. ಅರ್ಜುನ ಉಳಿದುಕೊಂಡ. ಆತನ ಕಿರೀಟ ಮಾತ್ರ ಹಾಳಾಯಿತು. ಅರ್ಜುನನಿಂದ ಈತನ ವಧೆಯಾಯಿತು.

**ಅಷ್ಟಕ :** ಯಯಾತಿಯ ಮಗಳಾದ ಮಾಧವಿಗೆ ವಿಶ್ವಾಮಿತ್ರನಿಂದ ಹುಟ್ಟಿದ ಮಗನೀತ. ಬಲು ದೊಡ್ಡ ವಿದ್ವಾಂಸನಾಗಿದ್ದನು. ಈತನು ಅಶ್ವಮೇಧ, ವಾಜಪೇಯ ಮೊದಲಾದ ಯಜ್ಞಗಳು ಹಾಗೂ ಗೋಪ್ರದಾನ ಮುಂತಾದವುಗಳಿಂದಾಗಿ ತುಂಬ ಪುಣ್ಯ ಸಂಪಾದನೆ ಮಾಡಿದ್ದನು. ಯಯಾತಿಯು ಸ್ವರ್ಗಚ್ಯುತನಾಗುತ್ತಲೇ ಅಷ್ಟಕನು ತನ್ನ ಪುಣ್ಯವನ್ನೆಲ್ಲ ಅವನಿಗೆ ನೀಡಿ ಅವನಿಗೆ ಮತ್ತೆ ಸ್ವರ್ಗವನ್ನು ದೊರಕಿಸಿಕೊಟ್ಟನು. ಈತನಿಗೆ ತನ್ನ ಬಗೆಗೆ ಎಲ್ಲಿಲ್ಲದ ಹೆಮ್ಮೆ. ಒಂದು ಸಲ ಈತ ತನ್ನ ಸೋದರರಾದ ವಸುಮನ, ಪ್ರತರ್ದನ ಹಾಗೂ ಶಿಬಿ ಇವರೊಂದಿಗೆ ಹೊರಟಿದ್ದನು. ದಾರಿಯಲ್ಲಿ ನಾರದನ ಭೆಟ್ಟಿ ಯಾಯಿತು. ಅಷ್ಟಕನ ಪ್ರಶ್ನೆಯ ಮೇರೆಗೆ ನಾರದನು ಈತನ ಪತನ ಎಲ್ಲರಿಗಿಂತಲೂ ಮೊದಲಾಗಲಿದೆ ಎಂದು ಹೇಳಿದ್ದನು.

**ಅಷ್ಟವಸುಗಳು :** ಅಷ್ಟವಸುಗಳೆಂದರೆ ಗಣದೇವತೆಗಳು. ಅವರ ಹೆಸರುಗಳು ಧರ, ಧ್ರುವ, ಸೋಮ, ಅಹ, ಅನಲ, ಅನಿಲ, ಪ್ರತ್ಯೂಷ ಹಾಗೂ ಪ್ರಭಾಸರೆಂದು. ವಸುಗಳು ಹಾಗೂ ಅವರ ತಾಯಿತಂದೆಗಳ ಹೆಸರುಗಳ ಬಗೆಗೆ ಬೇರೆ ಬೇರೆ ಹೊತ್ತಗೆ ಗಳಲ್ಲಿ ಬೇರೆಬೇರೆಯಾದ ಮಾಹಿತಿಗಳಿವೆ. ಒಂದು ವ್ಯಕ್ತಿಗೆ ಹಲವು ಹೆಸರುಗಳಿದ್ದ ಕಾರಣ ಈ ವ್ಯತ್ಯಾಸ ಉಂಟಾಗಿರಲು ಸಾಕು. ಇವರೆಲ್ಲರ ಹುಟ್ಟು ದಕ್ಷಕನ್ಯೆಯರಿಂದಾದುದು. ಇವರು ವಸಿಷ್ಠನ ಕಾಮಧೇನುವನ್ನು ಕದ್ದಿದ್ದರು. ಅವನ ಶಾಪದಿಂದಾಗಿ ಇವರು ಗಂಗೆ-ಶಂತನುವಿನ ಹೊಟ್ಟೆಯಲ್ಲಿ ಮಾನವರಾಗಿ ಹುಟ್ಟಬರಬೇಕಾಯಿತು. ಅವರ ಕೋರಿಕೆಯ ಮೇರೆಗೆ ಅವರು ಹುಟ್ಟುತ್ತಲೇ ಅವರನ್ನು ನೀರಿಗೆ ಬಿಡುವುದಾಗಿ ಗಂಗೆ ಒಪ್ಪಿಕೊಂಡಳು. ಇದೇ ರೀತಿಯಾಗಿ ವಸಿಷ್ಠನಾದರೂ (ದ್ಯೌ) ಒಬ್ಬನನ್ನುಳಿದು ಎಲ್ಲರಿಗೂ ವರ್ಷಕ್ಕೊಬ್ಬ

ರಂತೆ ಮುಕ್ತಿಪಡೆಯುವರೆಂದು ಉಃಶಾಪವನ್ನು ನೀಡಿದ್ದನು. ಈ ಕಳವಿನಲ್ಲಿ ದ್ಯೌ ಈತನು ಮುಂದಾಳುತನವನ್ನು ವಹಿಸಿದ್ದರಿಂದ ಈತನಿಗೆ ಹೆಚ್ಚು ಕಾಲ ಮಾನವರಲ್ಲಿಯೇ ಕಳೆಯ ಬೇಕಾಯಿತಲ್ಲದೆ ರಾಜ್ಯ ಹಾಗೂ ಹೆಣ್ಣಿನ ಸುಖಗಳಿಂದ ವಂಚಿತನಾಗಿರಬೇಕಾಯಿತು. ಇವನೇ ದೇವವ್ರತ ಭೀಷ್ಮ. ಭೀಷ್ಮ-ಪರಶುರಾಮರ ಯುದ್ಧದ ಕಾಲಕ್ಕೆ ಏಳು ಜನ ವಸುಗಳು ಭೀಷ್ಮನಿಗೆ ಪ್ರಸ್ವಾಪನಾಸ್ತ್ರವನ್ನು ನೀಡಿದ್ದರು. ಹಾಗೆಯೇ ಈ ವಸುಗಳು ಭೀಷ್ಮನ ಇಚ್ಛಾಮರಣವನ್ನು ಸಮರ್ಥಿಸಿದ್ದರು.

(ನೋಡಿ : ಶಾಪ ಕ್ರ. ೨೬—ವಸಿಷ್ಠ >ಅಷ್ಟವಸು.)

**ಅಷ್ಟಾವಕ್ರ:** ಧೌಮ್ಯನ ಶಿಷ್ಯನಾದ ಉದ್ದಾಲಕನ ಮಗಳು ಸುಜಾತೆಗೆ ಕಹೋಡ ಋಷಿಯಿಂದ ಹುಟ್ಟಿದ ಮಗನು. ಬಸಿರಲ್ಲಿರುವಾಗಲೇ ಈತನಿಗೆ ವೇದವೇದಾಂಗಗಳ ಜ್ಞಾನ ಇತ್ತು. ಅವನು ತನ್ನ ತಾಯಿಯ ಹೊಟ್ಟೆಯಲ್ಲಿರುವಾಗಲೇ ತನ್ನ ತಂದೆಯ ಪಠಣದಲ್ಲಿಯ ತಪ್ಪುಗಳನ್ನು ಹೇಳಿದನು. ಅದನ್ನು ಕೇಳಿ ಕಹೋಡನು ಕೆರಳಿದನು. 'ನಿನ್ನ ದೇಹ ಎಂಟು ಕಡೆಗಳಲ್ಲಿ ಡೊಂಕಾಗಲಿ' ಎಂದು ಆ ಮಗುವಿಗೆ ಶಾಪವನ್ನಿತ್ತನು. ಹೀಗಾಗಿ ಅವನ ಹೆಸರು 'ಅಷ್ಟಾವಕ್ರ' ಎಂದಾಯಿತು. ಜನಕರಾಜನ ಕೈದಿಯು ಕಹೋಡನನ್ನು ವಾದವಿವಾದದಲ್ಲಿ ಗೆದ್ದು ಅವನನ್ನು ನೀರಿನಲ್ಲಿ ಮುಳುಗಿಸಿಬಿಟ್ಟನು. ಈತನನ್ನು ಹುಟ್ಟಿ ನಿಂದಲೇ ಉದ್ದಾಲಕನು ಬೆಳೆಯಿಸಿದ್ದರಿಂದ ಅವನನ್ನೇ ತನ್ನ ತಂದೆಯೆಂದು ಬಗೆದನು. ಒಂದು ಸಲ ಈತನ ಸೋದರಮಾವ ಶ್ವೇತಕೇತು ಇವನನ್ನು ಅವಮಾನಗೊಳಿಸಿದನು. ಆಗ ಇವನಿಗೆ ತಾಯಿಯಿಂದ ತಂದೆಯ ಸಾವಿನ ಗುಟ್ಟು ತಿಳಿಯಿತು. ಹೀಗಾಗಿ ಈತನು ಆ ಕೈದಿಯ ಸೊಕ್ಕು ಮುರಿಯಲೆಂದು ಹಾಗೂ ತಂದೆಯ ಸಾವಿನ ಸೇಡು ತೀರಿಸಿಕೊಳ್ಳ ಲೆಂದು ಜನಕನಲ್ಲಿಗೆ ಹೋದನು. ಆ ಕೈದಿಯನ್ನು ವಾದದಲ್ಲಿ ಸೋಲಿಸಿ ಅವನನ್ನು ನೀರಲ್ಲಿ ಮುಳುಗಿಸಿಬಿಟ್ಟನು.

ಈತ ವದಾನ್ಯ ಎಂಬ ಋಷಿಯ ಕನ್ಯೆ ಸುಪ್ರಭೆಗೆ ಮನಸೋತಿದ್ದನು. ಋಷಿಯನ್ನು ಕೇಳಲಾಗಿ ಆತನು ಉತ್ತರ ದಿಕ್ಕಿಗೆ ಹೋಗಿ ಬರಲು ಇವನಿಗೆ ಹೇಳಿದನು. ಅವನು ಅಲ್ಲಿಗೆ ಹೋದಾಗ ಮುದುಕಿಯೊಬ್ಬಳು ಯೌವನೆಯ ರೂಪತಾಳಿ ಇವನನ್ನು ಮೋಹಿತ ನನ್ನಾಗಿ ಮಾಡಲು ಯತ್ನಿಸಿದಳು. ಆದರೆ ಈತ ಮರುಳಾಗಲಿಲ್ಲ. ಇವನ ಅವಿಚಲವಾದ ನಿಷ್ಠೆಯನ್ನು ಕಂಡು ಋಷಿ ತನ್ನ ಮಗಳನ್ನು ಇವನೊಂದಿಗೆ ಮದುವೆ ಮಾಡಿ ಕೊಟ್ಟನು. ಸಮಂಗ ಹೊಳೆಯಲ್ಲಿ ಮೀಯುತ್ತಲೇ ಈತನ ದೇಹದ ಡೊಂಕುತನ ಇಲ್ಲವಾಯಿತು. ಈತ 'ಅಷ್ಟಾವಕ್ರಗೀತಾ' ಎಂಬ ಒಂದು ಹೊತ್ತಗೆಯನ್ನು ಬರೆದಿದ್ದಾನೆ. ಈತ ಅಪ್ಸರೆ ಯರಿಗೆ ವಿಷ್ಣು ಅವರ ಗಂಡನಾಗಿ ದೊರಕುವನೆಂದು ವರವನ್ನಿತ್ತನು. ಆದರೆ ಅವರು ಇವನನ್ನು ಅಪಹಾಸ್ಯಕ್ಕೆ ಗುರಿಮಾಡಿದ್ದರಿಂದ ಆಭೀರರಿಂದ ಅವರ ಅಪಹರಣ ನಡೆಯು ಲಿದೆ ಎಂದು ಶಾಪವನ್ನು ನೀಡಿದನು—ಎಂದು ಬ್ರಹ್ಮಪುರಾಣದಲ್ಲಿ ಬಣ್ಣಿಸಲಾಗಿದೆ.

**ಅಹಲ್ಯೆ :** ಈಕೆ ಬ್ರಹ್ಮದೇವನ ಮಾನಸಕನ್ಯೆ. ಇವಳಲ್ಲಿ ಕೊಂಚವಾದರೂ ಹಲ್ಯ (ವಿರೂಪತೆ) ಇಲ್ಲದ್ದರಿಂದ ಬ್ರಹ್ಮದೇವನು ಇವಳಿಗೆ 'ಅಹಲ್ಯೆ' ಎಂದು ಹೆಸರಿ ಟ್ಟನು. ಇವಳು ಬಲು ಚೆಲುವೆಯಾಗಿದ್ದಳು. ಭೂಮಿಯನ್ನು ಸುತ್ತುಹಾಕಿ ಮೊದಲಿಗೆ ಬಂದು ತಲಪುವವನಿಗೆ ಈಕೆಯನ್ನು ಮದುವೆ ಮಾಡಿಕೊಡಲು ನಿರ್ಧರಿಸಿದ್ದನು.

ಉಳಿದ ದೇವತೆಗಳೊಂದಿಗೆ ಇಂದ್ರನೂ ಕೂಡ ಪೃಥ್ವಿಗೆ ಪ್ರದಕ್ಷಿಣೆಯನ್ನು ಹಾಕತೊಡಗಿದನು, ಅರೆಹೆರಿಗೆಯಾದ ಹಸುವೆಂದರೆ ಪೃಥ್ವಿಗೆ ಸರಿಸಮಾನ ಎಂದು ತಿಳಿಯಲಾಗುತ್ತಿದ್ದ ಕಾರಣ ಗೌತಮನು ಇಂಥ ಆಕಳನ್ನು ಸುತ್ತಿಬಂದು ಬ್ರಹ್ಮದೇವನ ಶರತ್ತನ್ನು ಪೂರ್ತಿಗೊಳಿಸಿದನು. ಅಹಲ್ಯೆಯೊಂದಿಗೆ ಅವನ ಮದುವೆ ಆಯಿತು. ಪೃಥ್ವಿಯ ಪ್ರದಕ್ಷಿಣೆಯನ್ನು ಪೂರೈಸಿಬಂದ ದೇವತೆಗಳಿಗೆ ಅಹಲ್ಯೆ-ಗೌತಮರ ಮದುವೆ ನಡೆದದ್ದನ್ನು ಕೇಳಿ ಬಲು ಕೆಡಕೆನಿಸಿತು. ಇಂದ್ರನಿಗಾದ ದುಃಖವನ್ನಂತೂ ಹೇಳಲಾಗದು. ಅವನು ಇವಳಿಗಾಗಿ ಬಲು ಆಸೆಪಟ್ಟಿದ್ದನು. ಇಂದ್ರನು ಅಹಲ್ಯೆಯೊಂದಿಗೆ ಸಮಾಗಮವನ್ನು ಮಾಡಿದನು. ಗೌತಮನು ಅವನಿಗೆ 'ನೀನು ಯಾರ ಕಣ್ಣಿಗೂ ಕಾಣಲಾರೆ. ಬರಿ ಹವೆಯನ್ನು ಕುಡಿದು ಬಾಳುವೆ. ನಿನ್ನ ರೂಪ ವಿಭಜಿಸಲ್ಪಡಲಿ' ಎಂದು ಶಾಪವನ್ನಿತ್ತನು. ಹೀಗೆ ವಾಲ್ಮೀಕಿರಾಮಾಯಣದಲ್ಲಿ ಇದೆ. 'ನಿನ್ನ ದೇಹದಲ್ಲಿ ಎಲುಬು–ತೊಗಲುಗಳಷ್ಟೇ ಉಳಿದಾವು. ಮಾಂಸ–ಉಗುರುಗಳಿರಲಾರವು. ನಿನ್ನ ರೂಪವನ್ನು ಕಂಡು ಸ್ತ್ರೀಯರು ಹೆದರಿಕೊಂಡಾರು' ಎಂದು ಪದ್ಮಪುರಾಣದಲ್ಲಿ ಹೇಳಲಾಗಿದೆ. ಗೌತಮನು ಇವಳ ಮುಕ್ತಿಗಾಗಿ ಕೋಟಿತೀರ್ಥದಲ್ಲಿ ತಪವನ್ನಾಚರಿಸಿದನು. ಅಲ್ಲಿ ಹುಟ್ಟಿಕೊಂಡ ಸರೋವರಕ್ಕೆ 'ಅಹಲ್ಯಾ–ಸರೋವರ' ಎಂದು ಹೆಸರು ಬಂದಿತು.

ಗೌತಮನಿಂದ ಇವಳಿಗೆ ಶತಾನಂದನೆಂಬ ಮಗನಾದನು.

**ಆಯು :** ಆಯುವು ಮಂಡೂಕರ ರಾಜನು. ಇವನ ಮಗಳು ಸುಶೋಭನೆಯು ಇಕ್ಷ್ವಾಕುಕುಲೋತ್ಪನ್ನನಾದ ಪರೀಕ್ಷಿತರಾಜನ ಮಡದಿ.

**ಆಸ್ತಿಕ :** ಭೃಗುಕುಲದಲ್ಲಿ ಹುಟ್ಟಿದ ಜರತ್ಕಾರು ಋಷಿ ಹಾಗೂ ತಕ್ಷಕನ ಸೋದರಿ ಜನತ್ಕಾರು ಇವರ ಮಗ. ಬಸಿರಲ್ಲಿರುವಾಗಲೇ ಶಂಕರನ ಉಪದೇಶವನ್ನು ಗ್ರಹಿಸಿದನೆಂದು 'ಆಸ್ತಿಕ'ನೆಂದು ಹೆಸರನ್ನು ಇಡಲಾಯಿತು. ಚ್ಯವನಭಾರ್ಗವನಿಂದ ಸಾಂಗವೇದಾಧ್ಯಯನವನ್ನು ಮಾಡಿದನು. ಶಂಕರನು ಈತನ ಉಪನಯನವನ್ನು ಮಾಡಿ ಮೃತ್ಯುಂಜಯ ಮಂತ್ರವನ್ನು ನೀಡಿದನು. ಹಾವು ಕಚ್ಚಿದ್ದರಿಂದ ಪರೀಕ್ಷಿತನಿಗೆ ಸಾವು ಬಂದಿತ್ತು. ಹೀಗಾಗಿ ಅವನ ಮಗ ಜನಮೇಜಯನು ಸರ್ಪಯಜ್ಞವನ್ನು ಆರಂಭಿಸಿದನು, ಹಲವಾರು ಹಾವುಗಳು ಸಾಯಹತ್ತಿದವು. ತನ್ನ ಕುಲವನ್ನು ಕಾಯ್ದುಕೊಳ್ಳಲೆಂದು ಈತ ಜನಮೇಜಯನ ಯಜ್ಞಮಂಟಪಕ್ಕೆ ಹೋದನು. ತಕ್ಷಕನು ಹೆದರಿ ಇಂದ್ರನಿಗೆ ಶರಣುಹೋಗಿದ್ದನು. ಅವನಿಂದ ಅಭಯವನ್ನು ಪಡೆದಿದ್ದನು. ಆಸ್ತಿಕನು ಬಲು ಚಾತುರ್ಯದಿಂದ ಜನಮೇಜಯನ ಮನವನ್ನು ಗೆದ್ದನು. ಜನಮೇಜಯ ಸಂತುಷ್ಟನಾಗಿ ಈತನಿಗೆ ಇಚ್ಛಾಪೂರ್ತಿಯ ಮಾತುಕೊಟ್ಟನು. ಪುರೋಹಿತರು ಬ್ರಾಹ್ಮಣರಿಗೆ ಇಂದ್ರನೊಂದಿಗೆ ತಕ್ಷಕನನ್ನೂ ಆವಾಹನೆ ಮಾಡಲು ಹೇಳಿದರು. ಆಗ ಅವರು 'ಇಂದ್ರಾಯ ಸ್ವಾಹಾ ತಕ್ಷಕಾಯ ಸ್ವಾಹಾ' ಎಂದಂದರು. ಕೂಡಲೇ ಇಂದ್ರನು ತಕ್ಷಕನನ್ನು ಬಿಟ್ಟುಕೊಟ್ಟನು. ತಕ್ಷಕ ತುಂಬ ಹೊತ್ತಾದರೂ ಬರಲೇ ಇಲ್ಲ. ಆದರೆ ಬ್ರಾಹ್ಮಣರು ಮಂತ್ರಶಕ್ತಿಯಿಂದ ಅವನನ್ನು ಯಜ್ಞಕುಂಡದ ಒಳಗೆ ಬರುವಂತೆ ಮಾಡುತ್ತಲೇ ಆಸ್ತಿಕನು ಅವನನ್ನು ತಡೆಹಿಡಿದನು. ಸರ್ಪಸತ್ರವನ್ನು ನಿಲ್ಲಿಸಲು ಜನಮೇಜಯನಿಗೆ ಹೇಳಿದನು. ಜನಮೇಜಯನು ಕೊಟ್ಟ ಮಾತಿಗೆ ತಪ್ಪಲಾರದೆ ಯಜ್ಞವನ್ನು ನಿಲ್ಲಿಸಲೇಬೇಕಾಯಿತು.

ರಾಜನಂತೆಯೇ ಹಾವುಗಳೂ ಕೂಡ ಆಸ್ತಿಕನನ್ನು ಗೌರವಿಸಿದರು. ಆಸ್ತಿಕಾಖ್ಯಾನವನ್ನು ಪಠಿಸುವವರಿಗೆ ಹಾವು ಕಡಿತದ ಬಾಧೆ ತಟ್ಟದಿರಲೆಂದು ಈತನು ವರವನ್ನು ಪಡೆದನು. ಶ್ರಾವಣ ಶುದ್ಧ ಪಂಚಮಿಯೆಂದು ಸರ್ಪಸತ್ರವನ್ನು ನಿಲ್ಲಿಸಲಾದ್ದರಿಂದ ಆ ದಿನ—ನಾಗ ಪಂಚಮಿ—ನಾಗಗಳಿಗೆ ಬಲು ಪೂಜ್ಯವಾದುದು.

**ಇಕ್ಷ್ವಾಕು :** ವೈವಸ್ವತ ಮನುವಿನ ಹತ್ತು ಜನ ಗಂಡುಮಕ್ಕಳಲ್ಲಿ ಹಿರಿಯವ. ಈತನ ಹುಟ್ಟು ಮನುವಿನ ಸೀನಿನಿಂದಾಗಿ ಆಯಿತೆಂದು ಹಲವು ಹೊತ್ತಗೆಗಳಲ್ಲಿದೆ. ಮನುವು ಇಕ್ಷ್ವಾಕುವಿಗೆ ಕೊನೆಯ ಕರ್ತವ್ಯಗಳನ್ನು ಕುರಿತು ಮಾರ್ಗದರ್ಶನಪರವಾದ ಉಪದೇಶವನ್ನು ಮಾಡಿದನು. ವಸಿಷ್ಠಋಷಿಯು ಇಕ್ಷ್ವಾಕು ವಂಶದ ಪುರೋಹಿತ ನಾಗಿದ್ದನು. ಇಕ್ಷ್ವಾಕುವು ಅಯೋಧ್ಯೆಯ ಮೊದಲನೆಯ ದೊರೆ. ಈತ ಹಿಮಾಲಯದಲ್ಲಿ ಯಾತ್ರೆಗೆಂದು ಹೋದಾಗ ಕೌಶಿಕನೆಂಬ ಜಪಕರ್ತನಾದ ಬ್ರಾಹ್ಮಣನ ಯಮ, ಬ್ರಾಹ್ಮಣ, ಕಾಲ ಹಾಗೂ ಮೃತ್ಯು ಇವರುಗಳೊಂದಿಗೆ ಜಪವನ್ನು ಕುರಿತಾದ ಸಂಭಾಷಣೆಯನ್ನು ಆಲಿಸಿದ್ದನು. ಈತನಿಗೆ ಒಂದು ನೂರು ಜನ ಮಕ್ಕಳಿದ್ದರೆಂಬ ಉಲ್ಲೇಖ ಮಹಾಭಾರತ, ಹರಿವಂಶಾದಿ ಗ್ರಂಥಗಳಲ್ಲಿದೆ. ವಿಷ್ಣುಪುರಾಣದ ಈ ಸಂಖ್ಯೆ ಒಂದುನೂರಾ ಒಂದು. ಇಕ್ಷ್ವಾಕುವು ತನ್ನ ಐವತ್ತು ಜನ ಮಕ್ಕಳಿಗೆ ಉತ್ತರ ಹಾಗೂ ಐವತ್ತು ಜನ ಗಂಡುಮಕ್ಕಳಿಗೆ ದಕ್ಷಿಣ ಹಿಂದುಸ್ಥಾನದ ಐವತ್ತು ರಾಜ್ಯಗಳನ್ನು ಪಾಲುಮಾಡಿಕೊಟ್ಟನು. ಈತನ ಕಾಲ ಇ. ಸ. ಪೂ. ೨೬೦೧ರಿಂದ ೨೧೦೧ ಎಂದು ನಿರ್ಧರಿಸಲಾಗಿದೆ.

ಇಕ್ಷ್ವಾಕುವು ಮಾಂಸಭಕ್ಷಣವನ್ನು ನಿಷೇಧಿಸಿದ್ದಾನೆ.

**ಇಂದ್ರ :** ಇದೊಂದು ಪದವಿ. ನೂರು ಯಜ್ಞಗಳನ್ನು ಮಾಡಿ ಈ ಪದವಿಯನ್ನು ಪಡೆಯಬಹುದು. ಪ್ರಜೆಗಳ ರಕ್ಷಣೆ ಇದರ ಮುಖ್ಯ ಕಾರ್ಯ. ಬೇರೆ ಬೇರೆ ಮನ್ವಂತರ ಗಳಲ್ಲಿ ಬೇರೆಬೇರೆಯವರು ಇಂದ್ರರಾಗಿದ್ದರೂ ಅವರ ಗುಣ ಹಾಗೂ ಕಾರ್ಯಗಳು ಒಂದೇ ಆದವುಗಳು. ಸಪ್ತರ್ಷಿಗಳು ಈತನಿಗೆ ಸಲಹೆಗಾರರು. ಗಂಧರ್ವ, ಅಪ್ಸರೆಯರು ಈತನ ಐಸಿರಿಯೆನ್ನಿಸುತ್ತಾರೆ. ಈತ ವಜ್ರಪಾಣಿ, ಸಹಸ್ರಾಕ್ಷ, ಪುರಂದರ ಹಾಗೂ ಮಘವಾನ ನಾಗಿರುತ್ತಾನೆ. ನಹುಷ, ಹಿರಣ್ಯಕಶ್ಯಪು, ಬಲಿ, ಪ್ರಹ್ಲಾದ ಇವರೂ ಕೆಲಕಾಲ ಇಂದ್ರ ರಾಗಿದ್ದರು. ಇಂದ್ರ ಮಳೆಯ ದೇವತೆ.

ರಾಮಾಯಣ–ಮಹಾಭಾರತಗಳಲ್ಲಿ ಬರುವ ಇಂದ್ರನ ಪ್ರಸ್ತಾಪ ಅದಿತಿಯ ಮಗ ನಾದ ಶಕ್ರನನ್ನು ಕುರಿತಾದದ್ದು. ಈತ ದೇವತೆಗಳ ದೊರೆ. ಇಂದ್ರಾಣಿ–ಶಚಿ ಈತನ ಮಡದಿ. ನೂರು ಯಜ್ಞಗಳನ್ನು ಪೂರ್ತಿಗೊಳಿಸಿದವನಿಗೆ ಈ ಪದವಿ ದೊರಕುತ್ತಿರುವ ಕಾರಣ ಅವು ಪೂರ್ತಿಯಾಗುವ ಮೊದಲೇ ಈತ ಅಶ್ವಮೇಧದ ಕುದುರೆಯನ್ನು ಓಡಿಸಿ ವಿಘ್ನವನ್ನು ತಂದೊಡ್ಡುತ್ತಿದ್ದನು. ಹಾಗೆಯೇ ಯಾರಾದರೂ ಉಗ್ರತಪಸ್ಸಿಗೆ ಕುಳಿತರೆ ಈತ ಅಪ್ಸರೆಯರನ್ನು ಕಳುಹಿಸಿ ಅವರ ತಪಸ್ಸಿನಲ್ಲಿ ಬಾಧೆಯನ್ನುಂಟುಮಾಡು ತ್ತಿದ್ದನು. ವಿಶ್ವಾಮಿತ್ರನ ತಪಸ್ಸನ್ನು ಭಂಗಗೊಳಿಸಲೆಂದು ರಂಭೆಯನ್ನು ಕಳಿಸಿದ್ದನು. ಈತ ಗೌತಮನ ವೇಷ ತೊಟ್ಟು ಅಹಲ್ಯೆಯನ್ನು ಉಪಭೋಗಿಸಿದನು. ಇಂದ್ರನು ಹಿರಣ್ಯಾಕ್ಷ, ಹಿರಣ್ಯಕಶ್ಯಪು ಇವರನ್ನು ಕೊಲ್ಲಿಸಿದ್ದರಿಂದ ದಿತಿಯು ಇಂದ್ರನನ್ನು ಕೊಲ್ಲ ಬಹುದಾದ ಮಗನಿಗಾಗಿ ಬೇಡಿಕೊಂಡಳು. ಕಶ್ಯಪನು ಅವಳಿಗೊಂದು ವಿಶಿಷ್ಟವಾದ

ಶರತ್ತನ್ನು ಮುಂದಿಟ್ಟನು. ಅವಳು ಅದನ್ನು ಪಾಲಿಸಲಿಲ್ಲ. ಹೀಗಾಗಿ ಇಂದ್ರ ಅವಳ ಬಸಿರನ್ನು ಹೊಕ್ಕು ಅದನ್ನು ಏಳು ತುಣುಕುಗಳನ್ನಾಗಿ ಮಾಡಿದನು. ದುರ್ವಾಸ ಋಷಿಯು ಇವನಿಗೊಂದು ಮಾಲೆಯನ್ನು ನೀಡಿದ್ದನು. ಇಂದ್ರನು ಅದಕ್ಕೆ ಅನಾದರ ವನ್ನು ತೋರಿದ್ದರಿಂದ ದುರ್ವಾಸನು ಅವನಿಗೆ ಶಾಪವನ್ನಿತ್ತನು. ಮೇಘನಾದನು ಈತ ನನ್ನು ಗೆದ್ದುಕೊಂಡು ಲಂಕೆಗೆ ಕರೆದೊಯ್ದಿದ್ದನು. ಈತನನ್ನು ಬಿಡಿಸಲೆಂದು ಬ್ರಹ್ಮ ದೇವನು ಈತನಿಗೆ ಮರ್ಯಾದಿತವಾದ ಅವಧ್ಯತ್ವದ ವರ ಹಾಗೂ ಅಗ್ನಿಯು ಕುದುರೆ ಗಳೊಂದಿಗಿನ ರಥವನ್ನು ಕೊಟ್ಟನು. ಬ್ರಹ್ಮದೇವನ ಹೇಳಿಕೆಯಂತೆ ಇವನು ವೈಷ್ಣವ ಯಾಗವನ್ನು ಮಾಡಿದನು. ಅವನ ವಜ್ರಪ್ರಹಾರದಿಂದಾಗಿ ವಾಯುಪುತ್ರನ ಹನು (ಗದ್ದ) ಒಡೆದು ಆತ 'ಹನುಮಾನ'ನೆನ್ನಿಸಿದನು.

ಶುನಃಶೇಪನ ಸ್ತುತಿಗೆ ಸಂತುಷ್ಟನಾಗಿ ಇಂದ್ರನು ಅವನಿಗೆ ದೀರ್ಘಾಯುಷ್ಯವನ್ನು ದಯಪಾಲಿಸಿದನು.

ಕಶ್ಯಪನು ವಿಷ್ಣುವಿಗೆ ಅದಿತಿಯ ಹೊಟ್ಟೆಯಿಂದ ಹುಟ್ಟಿ ಬರುವಂತೆ ಕೋರಿದನು. ಅದನ್ನೊಪ್ಪಿ ವಿಷ್ಣುವು ವಾಮನಾವತಾರವನ್ನು ಧರಿಸಿದನು. ಬಲಿಯನ್ನು ಸೋಲಿಸಿ ಇಂದ್ರನಿಗೆ ಮತ್ತೆ ತ್ರೈಲೋಕ್ಯಗಳನ್ನು ದೊರಕಿಸಿಕೊಟ್ಟನು.

**ಇಂದ್ರೋತ :** ಭೃಗುಕುಲದಲ್ಲಿ ಹುಟ್ಟಿದವನು. ಶುನಕ ವಂಶದ ಋಷಿಯು. ಜನಮೇಜಯನ ಪುರೋಹಿತ. ಜನಮೇಜಯನಿಂದ ತಪ್ಪಿ ಬ್ರಹ್ಮಹತ್ಯೆ ನಡೆದಿತ್ತು. ಆಗ ಬ್ರಾಹ್ಮಣರೆಲ್ಲರೂ ಪುರೋಹಿತನೊಂದಿಗೆ ರಾಜನನ್ನು ಬಿಟ್ಟುಕೊಟ್ಟರು. ಅದರಿಂದಾಗಿ ರಾಜನು ದುಃಖಿತನಾಗಿ ಕಾಡಿಗೆ ಹೋಗಿ ತಪಸ್ಸಿಗೆ ಕುಳಿತನು. ಬ್ರಹ್ಮಹತ್ಯೆಯ ಪಾಪದಿಂದ ಬಿಡುಗಡೆಹೊಂದುವ ಬಗೆಯೆಂತು ?—ಎಂದು ಕಂಡಕಂಡವರನ್ನೆಲ್ಲ ಕೇಳಿದನು. ಅವನಿಗೆ ಇಂದ್ರೋತನ ಭೆಟ್ಟಿಯಾಯಿತು. ಅವನು ಯಮಲೋಕಕ್ಕೆ ಹೋಗಿ ಶಂಕೆಗೆ ಸಮಾಧಾನ ವನ್ನು ಪಡೆಯಲು ಜನಮೇಜಯನಿಗೆ ಹೇಳಿದನು. ಅಲ್ಲದೆ ಉಪದೇಶವನ್ನೂ ನೀಡಿದನು. ಅವನಿಗೆ ಅಘಮರ್ಷಣ ಎಂಬ ಮಂತ್ರವನ್ನು ಜಪಿಸಲು ಹೇಳಿ ಮಹಾಸರಸ್ ಹೆಸರಿನ ತೀರ್ಥಕ್ಷೇತ್ರದ ಮಹಾತ್ಮೆಯನ್ನು ಹೇಳಿದನು. ಇಂದ್ರೋತನು ಜನಮೇಜಯನಿಂದ ವಿಧಿವತ್ತಾಗಿ ಯಜ್ಞವನ್ನು ಮಾಡಿಸಿದನು.

**ಉತಥ್ಯ:** ಅಂಗಿರಸನ ಮಗ. ಬೃಹಸ್ಪತಿಯ ಸೋದರ. ಇವನ ಮಡದಿಯ ಹೆಸರು ಮಮತಾ. ದೀರ್ಘತಮನು ಈತನ ಮಗನು. ಮಮತೆ ಬಸಿರಾಗಿದ್ದಾಗ ಬೃಹಸ್ಪತಿ ಅವಳ ಮೇಲೆ ಅತ್ಯಾಚಾರವನ್ನು ಕೈಕೊಂಡನು. ಬಸಿರಲ್ಲಿದ್ದ ದೀರ್ಘತಮನು ಬೃಹಸ್ಪತಿ ಯನ್ನು ನಿಷೇಧಿಸಿದನು. ಸೋಮನ ಮಗಳಾದ ಭದ್ರೆಯು ಈತನ ಎರಡನೆಯ ಮಡದಿ. ವರುಣನು ಅವಳನ್ನು ಓಡಿಸಿಕೊಂಡು ಹೋದನು. ಆಗ ಉತಥ್ಯನು ಕಡಲನ್ನು ಕುಡಿದು ಬಿಟ್ಟನು.

ಈತ ಯಾವಾಗಲೂ ನಿಜವನ್ನೇ ಆಡುವವನು. ಸತ್ಯತಪಸ್, ಸತ್ಯವ್ರತ ಎಂಬು ದಾಗಿಯೂ ಹೆಸರಾದವನು.

**ಉತ್ತಂಕ :** ೧. ವೇದಋಷಿಯ ಶಿಷ್ಯ. ಗುರುಸೇವೆಯಲ್ಲಿ ಬಲುತತ್ಪರನು. ವೇದ ಮುನಿಯು ತಾನಿಲ್ಲದಾಗ ಮನೆಯ ಉಸ್ತುವಾರಿಗಳನ್ನೆಲ್ಲ ಈತನಿಗೆ ಒಪ್ಪಿಸುತ್ತಿದ್ದನು.

ಈತ ಅವೆಲ್ಲವುಗಳನ್ನು ಸರಿಯಾಗಿ ನೋಡಿಕೊಳ್ಳುತ್ತಿದ್ದನು. ಒಂದು ಸಲ ಋಷಿಯು ಊರಲ್ಲಿರಲಿಲ್ಲ. ಅವನ ಮಡದಿ ಋತುಮತಿಯಾದಳು. ಮನೆಯ ಹಿರಿಯ ಹೆಂಗಳೆಯರೆಲ್ಲ ಅವಳಿಗೆ ತನ್ನ ಋತುವನ್ನು ಸಾರ್ಥಕಗೊಳಿಸುವಂತೆ ಕೇಳಿಕೊಂಡರು. ಆದರೆ ಅವಳು ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡು ಅವರ ಕೇಳಿಕೆಯನ್ನು ತಳ್ಳಿಹಾಕಿದಳು. ಗುರುಪತ್ನಿಯೊಂದಿಗೆ ಅವೈಧಾನಿಕವಾದ ನಂಟು ಪಾಪವೆಂದು ಆತನೂ ಬಗೆದಿದ್ದನು. ಗುರುವು ಅವನ ಈ ನಡತೆಯನ್ನು ಕೊಂಡಾಡಿದನು. ಗುರುಪತ್ನಿಯ ಬಯಕೆಯಮೇಲೆ ಈತನು ಗುರುದಕ್ಷಿಣೆಯಾಗಿ ಪೌಷ್ಯ ರಾಜನ ಮಡದಿಯರ ಕಂಡಲುಗಳನ್ನು ಬಲುಕಷ್ಟದಿಂದ ಸಂಪಾದಿಸಿ ತಂದನು. ಈ ಕೆಲಸದಲ್ಲಿ ತಕ್ಷಕನು ತುಂಬ ತೊಂದರೆಯನ್ನು ಉಂಟುಮಾಡಿದನು. ಈತ ಅವೆಲ್ಲವುಗಳನ್ನು ಮೆಟ್ಟಿನಿಂತನು. ಪೌಷ್ಯನು ದೂಷಿತವಾದ ಊಟವನ್ನು ನೀಡಿದ್ದರಿಂದ ಅವನನ್ನು ಶಪಿಸಿದನು. ಪೌಷ್ಯನೂ ಈತನಿಗೆ ಮರುಶಾಪವನ್ನಿತ್ತನು. ತಕ್ಷಕನ ನಾಶಕ್ಕಾಗಿ ಜನಮೇಜಯರಾಜನಿಗೆ ಸರ್ಪಯಜ್ಞವನ್ನು ಮಾಡಲು ಸಲಹೆ ನೀಡಿದನು.

೨. ಆಶ್ವಮೇಧಿಕಪರ್ವದಲ್ಲಿ ಉತ್ತಂಕನನ್ನು ಕುರಿತು ಒಂದು ಕಥೆಯಿದೆ. ಆತ ಬೇರೆ ಉತ್ತಂಕನೇ ಆಗಿರಲು ಸಾಧ್ಯ. ನೀರಿಲ್ಲದ ಮಾರವಾಡದಲ್ಲಿ ತಪಸ್ಸನ್ನು ಆಚರಿಸುತ್ತಿದ್ದ ಈ ಉತ್ತಂಕನು ಗೌತಮನ ಶಿಷ್ಯನಾಗಿದ್ದನೆಂದು 'ಮಹಾಭಾರತ ಕೀ ನಾಮಾನು ಕ್ರಮಣಿಕಾ'ದಲ್ಲಿ ಕೊಡಲಾಗಿದೆ. ಈತ ಹಾಗೂ ಶ್ರೀಕೃಷ್ಣರಲ್ಲಿ ಭೆಟ್ಟಿಯಾಗಿತ್ತು. ಭಾರತಯುದ್ಧದಲ್ಲಿ ಕೌರವಪಾಂಡವರು ನಾಶವಾದುದನ್ನು ಕೇಳಿ ಈತ ಶ್ರೀಕೃಷ್ಣನಿಗೆ ಶಾಪವನ್ನೀಯಲು ಸಿದ್ಧನಾದನು. ಆಗ ಶ್ರೀಕೃಷ್ಣನು ನಡೆದುದೆಲ್ಲವನ್ನು ವಿವರವಾಗಿ ಇವನಿಗೆ ಅರುಹಿದನಲ್ಲದೆ ಅದರಿಂದಾಗಿ ಇವನನ್ನು ಶಾಪವನ್ನು ಕೊಡುವುದರಿಂದ ಪರಾವೃತ್ತನನ್ನಾಗಿ ಮಾಡಿದನು (ನೋಡಿ : ಶಾಪ—ಕ್ರ. ೧೪೫). ಇಷ್ಟೇ ಅಲ್ಲದೆ ಶ್ರೀಕೃಷ್ಣನು ಉತ್ತಂಕನಿಗೆ ವರವನ್ನಿತ್ತನು. ಹೀಗಾಗಿ ಅಗತ್ಯ ಕಂಡಾಗಲೆಲ್ಲ ಮಳಲು ಗಾಡಿನಲ್ಲಿ ನೀರು ದೊರಕುವಂತಾಯಿತು. ಇವನು ಕುವಲಾಶ್ವನಿಗೆ ಧುಂಧು ಎಂಬ ರಾಕ್ಷಸನನ್ನು ಕೊಲ್ಲಲು ನೆರವಾದನು.

**ಉತ್ತಮೌಜ :** ಯುಧಾಮನ್ಯುವಿನ ಸೋದರ; ಪಾಂಚಾಲ ದೇಶದ ರಾಜ. ಭಾರತಯುದ್ಧದಲ್ಲಿ ಪಾಂಡವರ ಬದಿಯಿಂದ ಹೋರಾಡಿದವನು. ಈತನ ಕಾಳಗ ಕೃತವರ್ಮನೊಂದಿಗೆ ಸಾಗಿದಾಗ ಇವನು ಅವನನ್ನು ಬಾಣಗಳ ಮಳೆಗರೆದು ಮುಚ್ಚಿ ಹಾಕಿದನು. ಆದರೆ ಕೃತವರ್ಮನು ಈತನನ್ನು ಸೋಲಿಸಿದನು. ಇವನು ಸುಷೇಣನೊಂದಿಗೆ ಕಾದು ಅವನನ್ನು ಕೊಂದನು. ಅಶ್ವತ್ಥಾಮನು ಈತನನ್ನು ಕೊಂದನು.

**ಉತ್ತರೆ :** ವಿರಾಟರಾಜನ ಮಗಳು. ಅರ್ಜುನನ ಮಗ ಅಭಿಮನ್ಯುವಿನ ಮಡದಿ. ಅಜ್ಞಾತವಾಸದ ಕಾಲಕ್ಕೆ ಅರ್ಜುನ ವಿರಾಟನಗರದಲ್ಲಿ ಬೃಹನ್ನಳೆಯಾಗಿ ಇದ್ದನು. ಆಗ ಅವನಿಂದ ಕುಣಿತವನ್ನು ಕಲಿತಳು. ಗೋಗ್ರಹಣ ಪ್ರಸಂಗದ ಕಾಲಕ್ಕೆ ಅರ್ಜುನನು ಅತುಲನೀಯವಾದ ಶೌರ್ಯವನ್ನು ತೋರಿದನು. ಅದರಿಂದ ಸಂತುಷ್ಟನಾದ ವಿರಾಟರಾಜನು ಉತ್ತರೆಯನ್ನು ಮಡದಿಯನ್ನಾಗಿ ಸ್ವೀಕರಿಸುವಂತೆ ಅರ್ಜುನನನ್ನು ಕೇಳಿಕೊಂಡನು. ಆಗ ಅವನು ಇವಳನ್ನು ಮಡದಿಯನ್ನಾಗಿ ಸ್ವೀಕರಿಸದೆ ಸೊಸೆಯನ್ನಾಗಿ ಸ್ವೀಕರಿಸಿದನು. ಈಕೆ ಬಸಿರಾಗಿದ್ದಾಗ ಅಭಿಮನ್ಯುವಿನ ಕೊಲೆಯಾಯಿತು. ಇಷ್ಟೇ ಅಲ್ಲದೆ

ಪಾಂಡವರ ಕುಲವನ್ನೇ ಮಣ್ಣುಗೂಡಿಸಲೆಂದು ಅಶ್ವತ್ಥಾಮನು ಇವಳ ಬಸಿರಿನ ಮೇಲೆ ಬ್ರಹ್ಮಾಸ್ತ್ರವನ್ನೆಸೆದನು. ಹೀಗಾಗಿ ಇವಳು ಸತ್ತ ಮಗುವನ್ನು ಹೆರುವಂತಾಯಿತು. ಶ್ರೀಕೃಷ್ಣನು ಮಗು ಮರುಜೀವ ಪಡೆಯುವಂತೆ ಮಾಡಿದನು. ಆ ಮಗುವೆಂದರೇನೆ ಪರೀಕ್ಷಿತ.

**ಉದ್ದಾಲಕ :** ಈತ ಅರುಣ–ಔಪವೇಶಿಯರ ಮಗನು. 'ಉದ್ದಾಲಕ ಆರುಣಿ' ಎಂದು ಹೆಸರಾದವನು. ಆಪೋದ ಧೌಮ್ಯ ಋಷಿಯ ಶಿಷ್ಯನು. ಒಂದು ಸಲ ಗುರುವು ಇವನಿಗೆ ಗದ್ದೆಯ ನೀರಿಗೆ ಒಡ್ಡು ಹಾಕಲು ಹೇಳಿದನು. ಆಗ ಇವನು ಅಡ್ಡವಾಗಿ ಬಿದ್ದು ಕೊಂಡು ಆ ಪ್ರವಾಹವನ್ನು ತಡೆಗಟ್ಟಿದನು. ಈತ ಅಧ್ಯಾತ್ಮವಿದ್ಯೆಯ ಒಬ್ಬ ಶ್ರೇಷ್ಠ ನಾದ ಗುರುವಾಗಿದ್ದನು, ಆಚಾರ್ಯನೆನ್ನಿಸಿದ್ದನು. ಈತನು ಈ ವಿದ್ಯೆಯನ್ನು ಕುರಿತು ಯಾಜ್ಞವಲ್ಕ್ಯ ಋಷಿಯೊಂದಿಗೆ ಮಾತನಾಡಿದ್ದನು. ಶ್ವೇತಕೇತು ಹಾಗೂ ನಚಿಕೇತರು ಈತನ ಮಕ್ಕಳು. ಈತನು ಶ್ವೇತಕೇತುವನ್ನು ನಿರ್ವಾಸಿತನನ್ನಾಗಿ ಮಾಡಿ ನಚಿಕೇತನಿಗೆ 'ಯಮನಲ್ಲಿಗೆ ಹೋಗು' ಎಂದು ಶಾಪವನ್ನಿತ್ತನು. ಈತನ ಮಗಳು ಸುಜಾತೆಯು ಕಹೋಡಋಷಿಯ ಮಡದಿ. ಈತ ಸೂರ್ಯನ ಕಿರಣಗಳಿಂದ ತನ್ನ ದೇಹವನ್ನು ಒಣ ಗಿಸಿಕೊಂಡು ಬ್ರಹ್ಮಲೋಕದತ್ತ ತೆರಳಿದನು.

**ಉಪರಿಚರ ವಸು :** ಈ ಕುರುವಂಶದ ದೊರೆಯು ಚೇದಿ ದೇಶಕ್ಕೆ ದೊರೆ ಯಾಗಿದ್ದನು. ಇಂದ್ರನು ಈತನಿಗೆ ಒಂದು ಸ್ಫಟಿಕಮಣಿಮಯವಾದ ವಿಮಾನವನ್ನು ಕೊಟ್ಟಿದ್ದನು. ಅದರಲ್ಲಿ ಕುಳಿತು ಈತ ಆಕಾಶದಲ್ಲೆಲ್ಲ ಸಂಚರಿಸುತ್ತಿದ್ದನು. ಹೀಗಾಗಿ ಈತನ ಹೆಸರಿಗೆ 'ಉಪರಿಚರ' ಎಂಬ ಉಪಾಧಿ ಬಂದಿರಲು ಸಾಕು. ಇಂದ್ರನು ಈತನಿಗೆ 'ಇಂದ್ರಮಾಲೆ' ಎಂಬ ಒಂದು ವೈಜಯಂತಿಯನ್ನು ಕೊಟ್ಟಿದ್ದನು. ಅದರ ಹೂವುಗಳು ಅದೆಂದಿಗೂ ಬಾಡುತ್ತಿರಲಿಲ್ಲ. ಅಲ್ಲದೆ ಇದರಿಂದಾಗಿ ದೇಹದ ಮೇಲಿನ ಗಾಯದ ಕಲೆ ಗಳು ಉಳಿಯುತ್ತಿರಲಿಲ್ಲ. ಇದಲ್ಲದೆ ಅವನು ಇವನಿಗೊಂದು ಕೋಲನ್ನು ಕೂಡ ಕೊಟ್ಟಿ ದ್ದನು. ಅದರಿಂದಾಗಿ ಸುಜನರ ರಕ್ಷಣೆ ಸಾಗುತ್ತಿತ್ತು. ಈ ಕೋಲಿನಿಂದಾಗಿಯೇ ವರ್ಷ ಪ್ರತಿಪದೆಯೆಂದು ಪತಾಕೆಯನ್ನು ನಿಲ್ಲಿಸುವುದು, ಅದನ್ನು ಪೂಜಿಸುವುದೆಲ್ಲ ಶುರು ವಾಯಿತು. ರಾಜಧಾನಿಯ ಬಳಿಯ ಶುಕ್ತಿಮತಿ ನದಿಗೆ ಒಂದು ಬೆಟ್ಟವು ಅಡ್ಡಬರು ತ್ತಿತ್ತು. ದೊರೆಯು ಒಂದು ಒದೆತದಿಂದ ಬೆಟ್ಟದಲ್ಲಿ ಕೊರಕಲನ್ನುಂಟುಮಾಡಿ ಹೊಳೆ ಸರಾಗವಾಗಿ ಹರಿಮಂತೆ ಮಾಡಿದನು. ಪರ್ವತದೊಂದಿಗೆ ಕೂಟವಾದ್ದರಿಂದ ಆ ಹೊಳೆಗೆ ಅವಳಿಗಳು ಹುಟ್ಟಿದವು. ಆ ಹೊಳೆಯು ಅವುಗಳನ್ನು ರಾಜನಿಗರ್ಪಿಸಿತು. ಆತ ಗಂಡು ಮಗುವನ್ನು ಸ್ವೀಕರಿಸಿದನು. ಮುಂದೆ ಅವನೇ ದಂಡನಾಯಕನಾದನು. ಹೆಣ್ಣುಮಗು ವಿನ ಹೆಸರು ಗಿರಿಕಾ. ಮುಂದೆ ವಸುವು ಇವಳನ್ನು ಮದುವೆಯಾದನು. ಇವಳ ಋತು ದಾನದ ದಿನವೇ ವಸುವು ತಂದೆಯ ಅಪ್ಪಣೆಯ ಮೇರೆಗೆ ಬೇಟೆಗೆ ಹೋದನು. ಅಲ್ಲಿ ಮಡದಿ ನೆನಪಾಗಿ ವೀರ್ಯಸ್ಖಲನವಾಯಿತು. ಅವನು ಅದನ್ನು ದೊನ್ನೆಯಲ್ಲಿ ಹಿಡಿದಿಟ್ಟು ಶ್ಯೇನ ಹಕ್ಕಿಯ ಕೈಲಿ ತನ್ನ ಮಡದಿಗೆ ಕಳಿಸಲು ಯತ್ನಿಸಿದನು. ದಾರಿಯಲ್ಲಿ ಇನ್ನೊಂದು ಶ್ಯೇನವು ಈ ದೊನ್ನೆಯ ಮೇಲೆ ಎರಗಿತು. ದೊನ್ನೆ ಹೊಳೆಗೆ ಬಿದ್ದಿತು. ಅಲ್ಲೊಬ್ಬಳು ಶಾಪಭ್ರಷ್ಟಳಾದ ಅಪ್ಸರೆ ಅದ್ರಿಕಾ ಎನ್ನುವವಳಿದ್ದಳು. ಅವಳು ಆ ವೀರ್ಯವನ್ನು

ಸೇವಿಸಿಬಿಟ್ಟಳು. ಆದರಿಂದಾಗಿ ಅವಳಿಗೆ ಅವಳಿಮಕ್ಕಳು ಹುಟ್ಟಿದವು. ಅವುಗಳಲ್ಲಿಯ ಹೆಣ್ಣೆಂದರೆ ಸತ್ಯವತಿ (ಮತ್ಸ್ಯಗಂಧಿ). ದೊರೆಯು ಗಂಡುಮಗುವನ್ನು ಸ್ವೀಕರಿಸಿದನು.

ಒಂದು ಸಲ ಇಂದ್ರ ಹಾಗೂ ಋಷಿಗಳ ನಡುವೆ ಯಜ್ಞದ ಕಾಲಕ್ಕೆ ಆಡನ್ನು ಬಲಿ ಕೊಡುವುದನ್ನು ಕುರಿತು ವಾದಕ್ಕಿಟ್ಟುಕೊಂಡಿತು. ಆಗ ವಸುವು ಇಂದ್ರನ ಪರವಾಗಿ ತನ್ನ ಮತವನ್ನಿತ್ತನು. ಇದರಿಂದ ಋಷಿಗಳು ಕೋಪಗೊಂಡು 'ನೀನು ಪೃಥ್ವಿಯಲ್ಲಿ ಹೋಗುವೆ' ಎಂದು ಶಾಪವನ್ನಿತ್ತನು. ಆದರೆ ವಿಷ್ಣುವು ಗರುಡನ ಮೂಲಕ ಅವನನ್ನು ಶಾಪದಿಂದ ಬಿಡಿಸಿದನು. (ನೋಡಿ : ಶಾಪ, ಕ್ರ. ೧೧೮—ಬ್ರಾಹ್ಮಣ > ಉಪರಿಚರ ವಸು.

**ಉಪಶ್ರುತಿ :** ಉತ್ತರಾಯಣದ ಅಧಿಷ್ಠಾತ್ರಿ ದೇವತೆ. ನಹುಷನ ಹೆದರಿಕೆಯಿಂದಾಗಿ ವ್ಯಾಕುಲಳಾದ ಶಚಿಯು ಬೃಹಸ್ಪತಿಯ ಬಳಿಗೆ ಹೋದಳು. ಅವನು ಅವಳಿಗೆ ಉಪಶ್ರುತಿಯನ್ನು ಉಪಾಸನೆ ಗೈಯಲು ಹೇಳಿದನು. ಶಚಿಯು ಅವಳನ್ನು ಪ್ರಸನ್ನಗೊಳಿಸಿಕೊಂಡಳು. ಇವಳು ಒಂದು ಸರೋವರದಲ್ಲಿ ಅರಳಿದ ಕಮಲದ ದೇಟಿನ ಗಂಟಿನಲ್ಲಿ ಅಡಗಿಕೊಂಡು ಕುಳಿತಿದ್ದ ಇಂದ್ರನೊಡನೆ ಶಚಿಯನ್ನು ಭೆಟ್ಟಿಮಾಡಿಸಿದಳು.

**ಉಮಾ :** ಈಕೆ ಹಿಮಾಲಯ ಹಾಗೂ ಮೈನಾ ಇವರ ಎರಡನೆಯ ಮಗಳು. ಶಂಕರನ ಮಡದಿ. ಪಾರ್ವತಿಯ ಒಂದು ಸೌಮ್ಯರೂಪ. ಇವಳೊಬ್ಬ ಶಕ್ತಿದೇವತೆ. ಇವಳ ಮೊದಲ ಗೌರವರ್ಣವು ನಿಶಾದೇವಿಯ ಸ್ಪರ್ಶದಿಂದಾಗಿ ಕಪ್ಪಾಯಿತು. ಹೀಗಾಗಿ ಈಕೆ ಗಂಡನಿಗೆ ಹಿಡಿಸದಂತಾದಳು. ಇಬ್ಬರಲ್ಲೂ ಜಗಳಕ್ಕಿಟ್ಟುಕೊಂಡಿತು. ಇವಳು ಮತ್ತೆ ಗೌರವರ್ಣವನ್ನು ಹೊಂದಲೆಂದು ತಪಸ್ಸನ್ನು ಆಚರಿಸಿದಳು. ಅದು ದೊರೆಕಿತು. ಇವಳಿಗೆ ಗಂಡನಿಂದ ಮಕ್ಕಳಾಗಲಿಲ್ಲ. ಶಿವನಿಂದ ಆಕಾಶಗಂಗೆಯಲ್ಲಿ ಹುಟ್ಟುವ ಮಗನು ಗಂಗೆ ಹಾಗೂ ಉಮೆ ಇವರಿಬ್ಬರಿಗೂ ಒಪ್ಪಿಗೆಯಾಗುವನೆಂದು ಬ್ರಹ್ಮದೇವನು ಹೇಳಿದನು.

**ಊರ್ವಶಿ :** ಋಗ್ವೇದದಲ್ಲಿ ಹಲವೆಡೆಗಳಲ್ಲಿ ಇವಳ ಉಲ್ಲೇಖವು ಬಂದಿದೆ. ನಾರಾಯಣನ ತೊಡೆಯಿಂದ ಹದಿನಾರುಸಾವಿರ ಐವತ್ತೊಂದು ಅಪ್ಸರೆಯರು ಹುಟ್ಟಿ ಬಂದರು. ಅವರೆಲ್ಲರಲ್ಲಿ ಊರ್ವಶಿಯು ತುಂಬ ಲಾವಣ್ಯವತಿಯು. ಊರುವಿನಿಂದ ಹುಟ್ಟಿದ ಕಾರಣಕ್ಕಾಗಿ 'ಊರ್ವಶಿ' ಎಂಬ ಹೆಸರು ಬಂದಿತು. ನರನಾರಾಯಣರು ಈಕೆಯನ್ನು ಇಂದ್ರನಿಗೆ ಉಡುಗೊರೆಯಾಗಿ ಕಳಿಸಿದರು.

ಈಕೆ ಸೂರ್ಯಾರಾಧನೆಗೆಂದು ಹೊರಟಾಗ ಮಿತ್ರ ಆದಿತ್ಯನಿಗೆ ಮದುವೆಯಾಗುವೆನೆಂದು ಮಾತುಕೊಟ್ಟಳು. ಮುಂದೆ ಇವಳಿಗೆ ವರುಣ ಭೆಟ್ಟಿಯಾದನು. ಇವಳನ್ನು ಮದುವೆಯಾಗುವುದಾಗಿ ಬೇಡಿದನು. ಈಕೆ ಈ ಮೊದಲೇ ತಾನು ಮಿತ್ರನನ್ನು ಒಲಿದು ಮದುವೆಯಾಗಿರುವುದಾಗಿ ಅವನಿಗೆ ಹೇಳಿದಳು. ತನ್ನ ಪ್ರೇಮವನ್ನು ಮಾತ್ರ ಅವನಿಗೆ ಕೊಡಮಾಡಿದಳು. ವರುಣನು ಇವಳನ್ನುದ್ದೇಶಿಸಿ ತನ್ನ ವೀರ್ಯವನ್ನು ಒಂದು ಕೊಡದಲ್ಲಿ ಚೆಲ್ಲಿದನು. ಮಿತ್ರನಿಗೆ ಈ ಸಂಗತಿ ತಿಳಿಯುತ್ತಲೇ ಅವನು ಸಿಟ್ಟಿಗೆದ್ದನು. ಅವನು 'ಮೃತ್ಯುಲೋಕದಲ್ಲಿ ಪುರೂರವನ ಮಡದಿಯಾಗು' ಎಂದು ಅವಳಿಗೆ ಶಾಪವಿತ್ತನು. ಅಲ್ಲದೆ ತನ್ನ ವೀರ್ಯವನ್ನು ಒಂದು ಕೊಡದಲ್ಲಿ ಚೆಲ್ಲಿದನು. ಈ ಕೊಡಗಳಿಂದ ಅಗಸ್ತ್ಯ ಹಾಗೂ ವಸಿಷ್ಠರು ಜನ್ಮತಳೆದರು.

ಊರ್ವಶಿಯು ಭರತಮುನಿಯ ಶಾಪಕ್ಕೀಡಾಗಿ ಇಪ್ಪತ್ತೈದು ವರ್ಷಗಳ ಕಾಲ ಲತೆಯಾದಳು. ನಾರದನ ಸ್ತುತಿಯಿಂದಾಗಿ ಶಾಪಮುಕ್ತಿಯು ತರುವಾಯು ಇವಳನ್ನು ಅವನಿಂದ ಬಿಡಿಸಿದವನು ಪುರೂರವನೇ. ಊರ್ವಶಿ ಮೂರು ಶರತ್ತುಗಳನ್ನೊಡ್ಡಿ ಪುರೂರವನೊಂದಿಗೆ ಇರಲು ಒಪ್ಪಿಕೊಂಡಳು. ಒಂದಾದರೂ ಶರತ್ತನ್ನು ಮುರಿದನಾದರೆ ತಾನು ಹೊರಟುಹೋಗುವೆನೆಂದಳು. ಈ ಶರತ್ತುಗಳು : ೧. ತಾನು ಮಕ್ಕಳಂತೆ ಸಾಕುತ್ತಲಿದ್ದ ಎರಡು ಟಗರುಗಳನ್ನು ಕಾಪಾಡುವುದು. ೨. ಯಾವಾಗಲೂ ಘೃತಾಹಾರದ ಮೇಲಿರುವುದು ಹಾಗೂ ೩. ಮೈಥುನದ ಹೊತ್ತಿನಲ್ಲಲ್ಲದೆ ಇನ್ನಾವ ಹೊತ್ತಿನಲ್ಲೂ ಪುರೂರವನು ಬೆತ್ತಲು ಅವಸ್ಥೆಯಲ್ಲಿ ತನಗೆ ಕಾಣಕೂಡದು. ಪುರೂರವನು ಇವೆಲ್ಲ ಶರತ್ತುಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತ ೬೦೦೦೦ ವರ್ಷಗಳ ಕಾಲ ಅವಳಿಂದ ಸುಖಪಡೆದನು. ಒಂದು ಸಲ ಮಾತ್ರ ಪುರೂರವನಿಂದ ತಪ್ಪಿ ಮೂರನೆಯ ಶರತ್ತು ಮುರಿಯಲ್ಪಟ್ಟ ಕಾರಣ ಈಕೆ ದೇವಲೋಕಕ್ಕೆ ಹಿಂದಿರುಗಿ ಹೋದಳು.

ಮಹಾಭಾರತದಲ್ಲಿ ಊರ್ವಶಿಯ ಉಲ್ಲೇಖ ಹಲವು ಬಾರಿ ಬಂದಿದೆ. ಈಕೆ ಯಾವಾಗಲೂ ಕುಬೇರನ ಸೇವೆಯಲ್ಲಿದ್ದವಳು. ಅರ್ಜುನನ ಹುಟ್ಟಿನ ಕಾಲಕ್ಕೆ ಗಾಯನ ಮಾಡುವ ಹನ್ನೊಂದು ಜನ ಅಪ್ಸರೆಯರಲ್ಲಿ ಇವಳೂ ಒಬ್ಬಳಾಗಿದ್ದಳು. ಅರ್ಜುನ ಶಿಕ್ಷಣಕ್ಕಾಗಿ ಇಂದ್ರಲೋಕಕ್ಕೆ ಹೋದಾಗ ಇವಳತ್ತ ಪೂಜ್ಯಭಾವನೆಯಿಂದ ನೋಡಿದ್ದನು. ಇಂದ್ರನಿಗೆ ಮಾತ್ರ ಈತ ಅವಳತ್ತ ಕಾಮದ ಕಣ್ಣಿನಿಂದ ನೋಡುತ್ತಿರುವಂತೆ ಭಾಸವಾಯಿತು. ಹೀಗಾಗಿ ಅವನು ಚಿತ್ರಸೇನ ಗಂಧರ್ವನ ಮೂಲಕ ಊರ್ವಶಿಗೆ ಸಂದೇಶವನ್ನು ಕಳಿಸಿ ವಸ್ತ್ರ ಒಡವೆಗಳಿಂದ ಸಿಂಗರಿಸಿಕೊಂಡು ಅರ್ಜುನನಲ್ಲಿಗೆ ಹೋಗಲು ಹೇಳಿದನು. ಈಕೆ ಅರ್ಜುನನಲ್ಲಿಗೆ ಹೋದಾಗ ಇವಳ ಮನ ಮುರಿದುದರಿಂದ 'ನೀನು ಷಂಡನಾಗಲಿರುವೆ' ಎಂದು ಅವನಿಗೆ ಶಾಪವನ್ನಿತ್ತಳು. ಊರ್ವಶಿಯ ಹೆಸರಿನಿಂದ ಒಂದು ಪವಿತ್ರವಾದ ತೀರ್ಥವು ಹೆಸರಾಗಿದೆ.

**ಉಲೂಪಿ :** ಕೌರವ್ಯನೆಂಬ ನಾಗನಕನ್ಯೆ. ಬಲು ಅಂದಗಾತಿ. ಇವಳ ಮದುವೆ ಐರಾವತ ನಾಗನ ಮಗನೊಡನೆ ನೆರವೇರಿತು. ಅಲ್ಪಾವಧಿಯಲ್ಲೇ ವೈಧವ್ಯ ಬಂದಿತು. ಗರುಡನು ಇವಳ ಗಂಡನನ್ನು ಕೊಂದುಹಾಕಿದುದೇ ಕಾರಣ. ಅರ್ಜುನ ತೀರ್ಥಯಾತ್ರೆಯನ್ನು ಮಾಡುತ್ತ ಹೊರಟಾಗ ಒಂದು ಸಲ ಗಂಗಾಸ್ನಾನಕ್ಕೆಂದು ನೀರಿಗಿಳಿದನು. ಉಲೂಪಿ ಅವನನ್ನು ಕಂಡಳು. ಮೊದಲ ನೋಟದಲ್ಲೇ ಅವನಿಗೆ ಮಾರುಹೋದಳು. ಈಕೆ ಅವನನ್ನು ನೀರಲ್ಲಿ ಎಳೆದೊಯ್ದಳು. ಅರ್ಜುನನು ಈಕೆಯ ಕೋರಿಕೆಯನ್ನು ಮನ್ನಿಸಿ, ಐರಾವತನ ಒಪ್ಪಿಗೆಯನ್ನು ಪಡೆದು ಇವಳೊಂದಿಗೆ ಗಾಂಧರ್ವ ವಿವಾಹವನ್ನು ಮಾಡಿಕೊಂಡನು. ಮಹಾಭಾರತದಲ್ಲಿ ಮಾತ್ರ ಗಾಂಧರ್ವ ವಿವಾಹದ ಉಲ್ಲೇಖವಿಲ್ಲ. ಅವಳಿಗೆ ಇರಾವಾನ ಎಂಬ ಮಗನಾದನು. ಅಶ್ವಮೇಧದ ಕಾಲಕ್ಕೆ ಅರ್ಜುನ-ಬಭ್ರುವಾಹನರಲ್ಲಿ ಕಾಳಗ ನಡೆಯಿತು. ಬಭ್ರುವಾಹನನ ಬಾಣ ತಗಲಿ ಅರ್ಜುನ ಎಚ್ಚರದಪ್ಪಿ ಬಿದ್ದನು. ಅವನು ಸತ್ತುಹೋದನೆನ್ನಿಸಿತು. ನಿಜ ಹೇಳುವುದಾದರೆ ಆತನ ಈ ಮೂರ್ಛೆಯಲ್ಲೂ ಉಲೂಪಿಯದೇ ಕೈವಾಡವಿತ್ತು. ಅರ್ಜುನನು ಶಿಖಂಡಿಯ ಬೆನ್ನ ಮರೆಗೆ ನಿಂತು ಭೀಷ್ಮ

ನನ್ನು ಕೊಂದ ಕಾರಣ ಅವನಿಗೆ ತಗಲಿದ ಪಾಪವನ್ನು ಕಳೆಯುವುದೇ ಅವರ ಗುರಿಯಾಗಿತ್ತು. ಅವಳು ಸಂಜೀವನಮಣಿಯ ಮೂಲಕ ಅರ್ಜುನನನ್ನು ಎಚ್ಚರ ತಿಳಿಯುವಂತೆ ಮಾಡಿದಳು. ಮಹಾಪ್ರಸ್ಥಾನಕ್ಕೆಂದು ಹೊರಟ ಪಾಂಡವರೊಂದಿಗೆ ಉಲೂಪಿಯೂ ಇದ್ದಳು. ತರುವಾಯ ಈಕೆ ತನ್ನ ದೇಹವನ್ನು ಗಂಗೆಗೆ ಅರ್ಪಿಸಿದಳು.

**ಋಚೀಕ :** ಭಾರ್ಗವಕುಲೋತ್ಪನ್ನನಾದ ಒಬ್ಬ ಹೆಸರಾದ ಋಷಿ. ಬ್ರಹ್ಮಾಂಡ ಪುರಾಣದ ಅಭಿಪ್ರಾಯದಂತೆ ತೊಡೆಯನ್ನೊಡೆದು ಹೊರಬಂದವನು. ಚಿಕ್ಕಂದಿನಿಂದಲೇ ವೇದಾನುಷ್ಠಾನ ಹಾಗೂ ತಪಸ್ಸುಗಳತ್ತ ಗಮನ. ತೀರ್ಥಯಾತ್ರೆಗೆಂದು ಹೊರಟಿದ್ದನು. ಒಂದು ಸಲ ವಿಶ್ವಾಮಿತ್ರೀ ಹೊಳೆಯ ದಡದಲ್ಲಿ ಮೀಯುತ್ತಲಿದ್ದ ಗಾಧಿಯ ಮಗಳು ಸತ್ಯವತಿ ಈತನ ಕಣ್ಣಿಗೆ ಬಿದ್ದಳು. ಅವಳ ಅಂದಕ್ಕೆ ಮರುಳಾದನು. ಗಾಧಿಯನ್ನು ಇವಳಿಗಾಗಿ ಕೇಳಿದನು. ಗಾಧಿ ತನಗೆ ಒಂದು ಸಾವಿರ ಶ್ಯಾಮಕರ್ಣದ ಕುದುರೆಗಳು ಶುಲ್ಕವಾಗಿ ಬೇಕೆಂದನು. ಆಗ ಈತನು ವರುಣನನ್ನು ಪ್ರಾರ್ಥಿಸಿ ಅವುಗಳನ್ನು ಪಡೆದನು. ಸತ್ಯವತಿಯನ್ನು ತನ್ನವಳನ್ನಾಗಿ ಮಾಡಿಕೊಂಡನು. ಸತ್ಯವತಿಯು ಮಗನನ್ನು ಪಡೆವ ಬಯಕೆಯಿಂದ ತನಗಾಗಿಯೂ, ತನ್ನ ಅಮ್ಮನಿಗಾಗಿಯೂ ವರಗಳನ್ನು ಕೇಳಿದಳು. ಅವನು ಇವಳಿಗೆ ಅಭಿಮಂತ್ರಿತವಾದ ಎರಡು ಚರುಗಳನ್ನು ಅವಳಿಗೆ ನೀಡಿದನಲ್ಲದೆ ಯಾವ ಚರುವನ್ನು ಯಾರು ತಿನ್ನತಕ್ಕದ್ದು, ಪಾಲಿಸತಕ್ಕ ನಿಯಮಗಳಾವವು ಎಂಬುದನ್ನೆಲ್ಲ ಹೇಳಿದನು. ಆದರೆ ಪ್ರತ್ಯಕ್ಷದಲ್ಲಿ ಮಾತ್ರ ಚರುಗಳು ಅದಲುಬದಲಾಗಿ ಸೇವಿಸಲ್ಪಟ್ಟವು. ಅದರಿಂದಾಗಿ ಸತ್ಯವತಿಗೆ ಜಮದಗ್ನಿ ಮೊದಲಾದ ನೂರು ಜನ ಗಂಡುಮಕ್ಕಳಾದರು. ಗಾಧಿಯ ಹೊಟ್ಟೆಯಲ್ಲಿ ವಿಶ್ವಾಮಿತ್ರ ಹುಟ್ಟಿಬಂದನು. ಪೃಥ್ವಿಯನ್ನು ನಿಃಕ್ಷತ್ರಿಯವನ್ನಾಗಿ ಮಾಡುವ ಪರಶುರಾಮನು ಈತನ ಮೊಮ್ಮಗನು.

**ಋತುಪರ್ಣ :** ಇಕ್ಷ್ವಾಕುಕುಲೋತ್ಪನ್ನನು, ಅಯೋಧ್ಯೆಯ ಅಕ್ಷಯುವಿದ್ಯಾ ಸಂಪನ್ನನೂ ಆದ ದೊರೆ. ನಳನು ಜೂಜಾಟದಲ್ಲಿ ಸೋತು ತನ್ನದೆಲ್ಲವನ್ನೂ ಕಳೆದುಕೊಂಡ ಬಳಿಕ ಅವನ ಸಾರಥಿಯಾದ ವಾರ್ಷ್ಣೇಯನ ಬಳಿ ಸಾರಥ್ಯಕರ್ಮವನ್ನು ಕೈಕೊಂಡಿದ್ದನು. ನಲರಾಜನು ಬಾಹುಕನೆಂದು ಹೆಸರನ್ನು ಇಟ್ಟುಕೊಂಡನು. ಈತನು ನಲನನ್ನು ಅಶ್ವಾಧ್ಯಕ್ಷಪದಕ್ಕೆ ನೇಮಕ ಮಾಡಿಕೊಂಡಿದ್ದನು. ಈತನಿಗೆ ಮೊದಲಿನಿಂದಲೇ ದಮಯಂತಿಯ ಆಸೆ. ಹೀಗಾಗಿ ಅವಳು ಸೋಗಿನ ಸ್ವಯಂವರವನ್ನು ಹೂಡುತ್ತಲೇ ಈತ ಅಭ್ಯರ್ಥಿಯಾಗಿ ಹೊರಟನು. ಅಯೋಧ್ಯೆಯಿಂದ ಕುಂಡಿನಪುರ ತುಂಬ ಅಂತರ. ಅದನ್ನು ಒಂದೇ ದಿನದಲ್ಲಿ ತಲಪುವುದು ಕಷ್ಟದ್ದಾಗಿತ್ತು. ಬಾಹುಕ ಈ ಹೊಣೆಹೊತ್ತನು. ದಾರಿಯಲ್ಲಿ ಅವರಿಬ್ಬರೂ ತಮ್ಮ ತಮ್ಮ ಅಶ್ವವಿದ್ಯೆಗಳನ್ನೂ ಅಕ್ಷವಿದ್ಯೆಗಳನ್ನೂ ಒಬ್ಬರಿಗೆ ಒಬ್ಬರು ಹೇಳಿಕೊಟ್ಟರು. ಬಾಹುಕನು ಋತುಪರ್ಣನನ್ನು ಸರಿಯಾದ ಹೊತ್ತಿಗೆ ಕುಂಡಿನಪುರಕ್ಕೆ ತಂದು ತಲಪಿಸಿದನು. ಬಾಹುಕನು ನಲರಾಜನಾಗಿದ್ದು ದಮಯಂತಿಯೊಂದಿಗೆ ಆತನ ಪುನರ್ಮಿಲನವಾದುದನ್ನು ಕಂಡು ಈತ ಸಂತಸಪಟ್ಟನು. ಈತನ ಮಗನ ಹೆಸರು ಆರ್ತಪರ್ಣಿ ಎಂದು.

**ಋಷ್ಯಶೃಂಗ :** ಕಶ್ಯಪ ವಿಭಾಂಡಕ ಹಾಗೂ ಒಬ್ಬಳು ಶಾಪಭ್ರಷ್ಟಳಾದ ದೇವ

ಕನ್ಯೆಯರ ಸಂಗ. ಊರ್ವಶಿಯನ್ನು ಕಂಡು ಕಶ್ಯಪನ ವೀರ್ಯಸ್ಖಲನವಾದ ಹೊಳೆಯ ನೀರನ್ನು ಶಾಪಭ್ರಷ್ಟಳಾಗಿ ಜಿಗರೆಯಾದ ದೇವಕನ್ಯೆಯು ಕುಡಿದಳು. ಈತ ಮಾನವನ ದೇಹವನ್ನು ಹೊತ್ತವನಾದರೂ ತಲೆಯ ಮೇಲೆ ಕೋಡುಗಳಿದ್ದ ಕಾರಣ ಈತನಿಗೆ 'ಋಷ್ಯಶೃಂಗ'ನೆಂದು ಹೆಸರಾಯಿತು. ಈತನ ಹುಟ್ಟಿನೊಂದಿಗೆ ಆ ದೇವಕನ್ಯೆ ಶಾಪಮುಕ್ತಳಾದಳು. ವಿಭಾಂಡಕನು ಈತನನ್ನು ಸಾಕಿ ಸಲಹಿದನು. ಬಹುಕಾಲದವರೆಗೆ ಈತ ವಿಭಾಂಡಕನನ್ನು ಬಿಟ್ಟು ಬೇರಾವ ಮಾನವರನ್ನೂ ಕಂಡಿರಲಿಲ್ಲ. ಅಂಗರಾಜನಾದ ಚಿತ್ರರಥನು ಬ್ರಾಹ್ಮಣರೊಂದಿಗೆ ಸುಳ್ಳು ನಡೆದುಕೊಂಡ ಕಾರಣ ಅವನ ರಾಜ್ಯದಲ್ಲಿ ಬರ ಬಿದ್ದಿತ್ತು. ಋಷ್ಯಶೃಂಗನು ಅವನ ರಾಜ್ಯದಲ್ಲಿ ಕಾಲಿಟ್ಟರೆ ಬರ ಇಲ್ಲದಂತಾಗುವುದೆಂದು ಅವನಿಗೆ ತಿಳಿಯಿತು. ಆದರೆ ಋಷ್ಯಶೃಂಗನನ್ನು ಕರೆತರುವುದು ಅಂತಹ ಹಗುರಾದ ಕಾಯಕವಾಗಿರಲಿಲ್ಲ. ಒಬ್ಬ ಮುದಿಸೂಳೆ ಈ ಹೊಣೆಯನ್ನು ಹೊತ್ತಳು. ಆವಳು ನಾಲ್ಕು ಜನ ಜವ್ವನೆಯರಾದ, ಸುಂದರಿಯರಾದ ವೇಶ್ಯೆಯರನ್ನು ಕರೆದುಕೊಂಡು ವಿಭಾಂಡಕನು ಇಲ್ಲದ ಹೊತ್ತಿನಲ್ಲಿ ಋಷ್ಯಶೃಂಗನನ್ನು ಹೋಗಿ ಕಂಡಳು. ಈತ ಹೆಣ್ಣುಗಳನ್ನು ಮೊದಲೆಂದಿಗೂ ಕಂಡಿರಲಿಲ್ಲ. ಇವರೆಲ್ಲರೂ ಮುನಿಗಳೆಂದೇ ಈತ ಬಗೆದನು. ಅವರ ಹಿಡಿತಕ್ಕೆ ಸಿಕ್ಕುಬಿದ್ದನು. ಅವರೆಲ್ಲರೂ ಕೂಡಿ ಈತನನ್ನು ಅಂಗರಾಜ್ಯಕ್ಕೆ ಕರೆತಂದರು. ಈತ ಬರುತ್ತಲೂ ಸಾಕಷ್ಟು ಮಳೆ ಸುರಿದು ಬರ ದೂರಾಯಿತು. ರೋಮಪಾದರಾಜನು ಇವನಿಗೆ ತನ್ನ ಮಗಳನ್ನು ಮಡದಿಯಾಗಿ ಕೊಟ್ಟನು. ಒಂದು ಮಗುವಾಗುವವರೆಗೆ ಈತನು ಇಲ್ಲಿರಲು ವಿಭಾಂಡಕನ ಅಪ್ಪಣೆ ದೊರಕಿತು. ಈತ ದಶರಥನ ಪುತ್ರಕಾಮೇಷ್ಟಿಯಜ್ಞಕ್ಕೆ ಅಧ್ವರ್ಯುವಾಗಿದ್ದನು.

ಕೌಶಿಕೀ ನದಿಯ ತೀರದಲ್ಲಿ ಈತನ ಆಶ್ರಮವಿತ್ತು. ಋಷ್ಯಶೃಂಗಸಂಹಿತಾ ಹಾಗೂ ಋಷ್ಯಶೃಂಗಸ್ಮೃತಿ ಎಂಬ ಹೊತ್ತಗೆಗಳ ಕರ್ತೃ ಈತ.

**ಏಕತ, ದ್ವಿತ, ತ್ರಿತ :** ಗೌತಮನ ಮೂರು ಗಂಡುಮಕ್ಕಳು. ಇವರ ಹುಟ್ಟು ಅಗ್ನಿ ಹಾಗೂ ಉದಕ ಇವರಿಂದಾಯಿತೆಂದು ಶತಪಥ ಹಾಗೂ ತೈತ್ತಿರೀಯ ಬ್ರಾಹ್ಮಣದಲ್ಲಿ ನಮೂದಿಸಲಾಗಿದೆ. ಈ ಮೂವರು ಬಲು ಜ್ಞಾನಿಗಳು. ಇವರ ತಂದೆಯಂತೆಯೇ ಎಲ್ಲೆಡೆಯಲ್ಲೂ ಇವರನ್ನು ಕೂಡ ಗೌರವಿಸಲಾಗುತ್ತಿತ್ತು. ಮೂವರೂ ಕೂಡಿ ಒಟ್ಟಿಗೇನೆ ಯಜ್ಞಾದಿಗಳ ಪೌರೋಹಿತ್ಯವನ್ನು ಮಾಡುತ್ತಿದ್ದರು. ಒಂದು ಸಲ ಸಾಕಷ್ಟು ದಕ್ಷಿಣೆ ಹಾಗೂ ಪಶುಧನದೊಂದಿಗೆ ಬರುತ್ತಿದ್ದರು. ಈ ಸಂಪತ್ತೆಲ್ಲ ತಮ್ಮಿಬ್ಬರಿಗೇ ದೊರಕಬೇಕೆಂದು ಏಕತ ಹಾಗೂ ದ್ವಿತರಿಗೆ ಅನ್ನಿಸಿತು. ತೋಳಕ್ಕೆ ಹೆದರಿ ಓಡುತ್ತಿರುವಾಗ ತ್ರಿತನು ಒಂದು ಆಳವಾದ ಬಾವಿಗೆ ಬಿದ್ದನು. ಉಳಿದವರಿಬ್ಬರೂ ಕೂಡಿ ಅವನನ್ನು ಬಾವಿಗೆ ನೂಕಿದರೆಂಬ ಉಲ್ಲೇಖವೂ ಬರುತ್ತದೆ. ಅವನು ನೆರವಾಗಿರೆಂದು ಅಣ್ಣಂದಿರನ್ನು ಕೂಗಿ ಕರೆದನು. ಅವರು ಹಾಗೆಯೇ ಓಡಿಹೋದರು. ತರುವಾಯ ಅವನು ದೇವತೆಗಳನ್ನು ಆವಾಹನೆ ಮಾಡಿ ಅವರ ನೆರವಿನಿಂದ ಹೊರಬಂದನು. ಮನೆಗೆ ಬಂದ ಬಳಿಕ ಅಣ್ಣಂದಿರ ಆಸೆಬುರುಕತನಕ್ಕಾಗಿ ಅವರ ಮೇಲೆ ಕೆರಳಿದನು. 'ನೀವು ತೋಳಗಳಾಗುವಿರಿ. ಮಂಗ, ಮುಶಾ, ಕರಡಿಗಳಂಥ ಪ್ರಜೆಯನ್ನು ಹುಟ್ಟುಹಾಕುವಿರಿ' ಎಂದು ಅವರನ್ನು ಶಪಿಸಿದನು.

**ಔರ್ವ :** ಹೈಹಯವಂಶದ ದೊರೆ ಕೃತವೀರ್ಯನು ಹಲವಾರು ಯಜ್ಞಗಳನ್ನು ಮಾಡಿ ಭೃಗುವಂಶದ ತನ್ನ ಪುರೋಹಿತನಿಗೆ ವಿಪುಲವಾದ ಧನವನ್ನು ನೀಡಿದನು. ಮುಂದೆ ಕೃತವೀರ್ಯನ ವಂಶಜರಿಗೆ ದುಡ್ಡಿನ ಕೊರತೆ ಉಂಟಾಯಿತು. ಆಗ ಅವರು ತಮ್ಮ ಪುರೋಹಿತರ ಬಳಿ ದುಡ್ಡನ್ನು ಕೇಳಿದರು. ಕೆಲವರು ಹೆದರಿಕೆಯಿಂದಾಗಿ ತಮ್ಮಲ್ಲಿದ್ದ ದ್ರವ್ಯವನ್ನು ದೊರೆಗೆ ಒಪ್ಪಿಸಿಬಿಟ್ಟರು. ಕೆಲವರು ಅದನ್ನು ನೆಲದಡಿ ಹೂಳಿಬಿಟ್ಟರು. ಹೀಗೆ ಒಬ್ಬ ಭೃಗುವಂಶದವನ ಮನೆಯಲ್ಲಿ ಹೂಳಿಟ್ಟ ಹಣ ಸಿಗುತ್ತಲೇ ಕೃತವೀರ್ಯನ ವಂಶದವರು ಭೃಗುಗಳನ್ನು ಕೊಲ್ಲಲು ಆರಂಭಿಸಿದರು. ಆಗ ಒಬ್ಬಳು ಬಸುರಿಯಾದ ಋಷಿಪತ್ನಿಯು ತನ್ನ ಬಸಿರನ್ನು ಹೆದರಿಕೆಯಿಂದಾಗಿ ತನ್ನ ತೊಡೆಯಲ್ಲಿ ಅಡಗಿಸಿ ಇಟ್ಟು ಕೊಂಡಳು. ದೊರೆಗೆ ಈ ಸಂಗತಿ ತಿಳಿದು ಅವನದನ್ನು ನಾಶಪಡಿಸಲು ಹಾತೊರೆದನು. ಆಗ ಆ ಬಸಿರು ತೊಡೆಯಿಂದ ಹೊರಬಂದ ಕಾರಣ ಆ ಮಗುವಿನ ಹೆಸರು ಔರ್ವ (ಊರುವಿನಿಂದ ಹುಟ್ಟಿದ) ಎಂದಾಯಿತು. ಆತ ಬಲು ಪ್ರಖರವಾದ ತೇಜಸ್ಸನ್ನು ಹೊಂದಿದ್ದನು. ಅವನನ್ನು ಕಾಣುತ್ತಲೇ ಕ್ಷತ್ರಿಯರೆಲ್ಲ ಕಣ್ಣು ಕಳೆದುಕೊಂಡು ಕುರುಡ ರಾದರು. ಅವರು ಅವನನ್ನು ಪ್ರಸನ್ನಗೊಳಿಸಿ ಮತ್ತೆ ತಮ್ಮ ಕಣ್ಣುಗಳನ್ನು ಪಡೆದರು.

ಹೈಹಯವಂಶದವರು ಔರ್ವನ ಬಂಧುಬಳಗದವರನ್ನೆಲ್ಲ ಹಿಂಸಿಸುತ್ತಲೇ ಇದ್ದರು. ಹೀಗಾಗಿ ಈತನು ಅವರೆಲ್ಲರ ಸಂಹಾರಕ್ಕಾಗಿ ಉಗ್ರವಾದ ತಪಸ್ಸನ್ನು ಕೈಗೊಂಡನು. ಈತ ಬಲು ಕ್ರುದ್ಧನಾಗಿದ್ದನು. ಆದರೆ ಪಿತೃಗಳ ಹೇಳಿಕೆಯಂತೆ ತನ್ನ ಕ್ರೋಧವನ್ನು ಕಡಲಲ್ಲಿ ಮುಳುಗಿಸಿಬಿಟ್ಟನು. ಔರ್ವನು ಸಗರನ ಮಡದಿ ಕೇಶಿನೀ ಹಾಗೂ ಸುಮತಿಯರಿಗೆ ಮಕ್ಕಳಾಗಲೆಂದು ವರಗಳನ್ನಿತ್ತನು.

**ಕಚ :** ಮಹರ್ಷಿ ಅಂಗಿರನ ಮೊಮ್ಮಗ. ಬೃಹಸ್ಪತಿಯ ಮಗ. ದೇವ-ದಾನವರ ಯುದ್ಧದ ಸಮಯ. ಶುಕ್ರಾಚಾರ್ಯರ ಸಂಜೀವಿನಿಯಿಂದಾಗಿ ಮರಣಹೊಂದಿದ ರಾಕ್ಷಸರು ಮತ್ತೆ ಜೀವತಳೆಯುತ್ತಿದ್ದರು. ಹೀಗಾಗಿ ದೇವತೆಗಳಿಗೆ ದೈತ್ಯರ ಮೇಲೆ ಜಯ ದೊರೆಕದಂತಾಗಿತ್ತು. ಆಗ ಇಂದ್ರ ಮೊದಲಾದ ದೇವತೆಗಳು ಕಚನನ್ನು ಶುಕ್ರಾಚಾರ್ಯರಲ್ಲಿಗೆ ಈ ವಿದ್ಯೆಯನ್ನು ಪಡೆಯಲೆಂದು ಕಳಿಸಿಕೊಟ್ಟರು. ಆಚಾರ್ಯರ ಮಗಳಾದ ದೇವಯಾನಿಯನ್ನು ವಶಪಡಿಸಿಕೊಂಡು ಈ ವಿದ್ಯೆಯನ್ನು ಗಳಿಸಬಹುದೆಂದು ಹೇಳಿದರು. ಕಚನು ಶುಕ್ರಾಚಾರ್ಯರಲ್ಲಿಗೆ ಹೋದನು. ಅವರು ಈತನಿಗೆ ವಿದ್ಯೆಯನ್ನು ಕಲಿಸಲು ಒಪ್ಪಿಕೊಂಡರು. ಆದರೆ ದೈತ್ಯರಿಗೆ ಈ ಮಾತು ಹಿಡಿಸಲಿಲ್ಲ. ವಿದ್ಯೆಯನ್ನು ಗಳಿಸಲೆಂದು ಬರಬಹುದಾದ ಸಂಕಟಗಳೆಲ್ಲವನ್ನೂ ಎದುರಿಸಲು ಕಚ ಸಿದ್ಧನಾಗಿಯೇ ಬಂದಿದ್ದನು. ಈತ ನಿಷ್ಠೆಯಿಂದ ವಿದ್ಯೆಯನ್ನು ಸಂಪಾದಿಸುತ್ತಿರುವಾಗಲೇ ದೇವಯಾನಿ ಅವನನ್ನು ಪ್ರೀತಿಸತೊಡಗಿದಳು. ದೈತ್ಯರು ಕಚನನ್ನು ನಾಶಪಡಿಸಲು ಮೂರು ಬಾರಿ ಯತ್ನಿಸಿದರು. ಆದರೆ ದೇವಯಾನಿಯು ಪ್ರತಿಸಲವೂ ತನ್ನ ತಂದೆಯ ಸಂಜೀವಿನಿ ವಿದ್ಯೆಯ ನೆರವಿನಿಂದ ಅವನನ್ನು ಬದುಕಿಸಿದಳು. ಮೂರನೆಯ ಬಾರಿಗೆ ದೈತ್ಯರು ಕಚ ನನ್ನು ಸುಟ್ಟು ಆತನ ಬೂದಿಯನ್ನು ಶುಕ್ರಾಚಾರ್ಯರ ಮದ್ಯದಲ್ಲಿ ಬೆರೆಸಿಬಿಟ್ಟರು. ಈತ ಅವರ ಹೊಟ್ಟೆಯನ್ನು ಹೊಕ್ಕನಾದ್ದರಿಂದ ಸಹಜವಾಗಿಯೇ ಸಂಜೀವಿನಿವಿದ್ಯೆ ಪ್ರಾಪ್ತವಾಯಿತು. ಈತ ಶುಕ್ರಾಚಾರ್ಯರ ಹೊಟ್ಟೆಯಿಂದ ಹೊರಬರುತ್ತಲೇ ದೇವ

ಯಾನಿಯನ್ನು ತನ್ನ ಸೋದರಿ ಎಂದು ತಿಳಿಯತೊಡಗಿದನು. ಕಚನು ಶುಕ್ರಾಚಾರ್ಯರ ಹೊಟ್ಟೆಯನ್ನು ಹರಿದು ಹೊರಬಂದನಾದ್ದರಿಂದ ಅವರು ಮಡಿದರು. ಸಂಜೀವಿನಿವಿದ್ಯೆಯಿಂದ ಕಚನು ಮತ್ತೆ ಶುಕ್ರಾಚಾರ್ಯರನ್ನು ಜೀವಿತಗೊಳಿಸಿದನು.

ದೇವಯಾನಿಯು ತನ್ನನ್ನು ಮದುವೆಯಾಗುವಂತೆ ಈತನನ್ನು ಕೇಳಿಕೊಂಡಾಗ ಅದನ್ನು ನಿಗ್ರಹದಿಂದ ನಿರಾಕರಿಸಿದನು. ಇದಕ್ಕೆ ಕಾರಣವೆಂದರೆ ಅವನು ಅವಳನ್ನು ಅದೆಂದಿಗೂ ಆ ರೀತಿಯಾಗಿ ಕಂಡಿರಲೇ ಇಲ್ಲ. ವಿದ್ಯೆಯನ್ನು ಪಡೆಯುವುದೊಂದೇ ಆತನ ಗುರಿಯಾಗಿತ್ತು. ಅವಳು ಗುರುವಿನ ಮಗಳಾದ್ದರಿಂದ ಅವನಿಗೆ ವಂದ್ಯಳೆನ್ನಿಸಿದ್ದಳು. ಕಚನು ತನ್ನ ಕೇಳಿಕೆಗೆ ಸ್ಪಂದಿಸದೆಹೋದದ್ದರಿಂದ ದೇವಯಾನಿ ಅವನ ಮೇಲೆ ಕೆರಳಿದಳು. 'ನಿನ್ನ ಸಂಜೀವಿನಿವಿದ್ಯೆ ಯಶಸ್ವಿಯಾಗಲಾರದು' ಎಂದು ಅವನನ್ನು ಶಪಿಸಿದಳು. ಕಚ ಈ ಶಾಪವನ್ನು ಸಹಿಸಿಕೊಳ್ಳುವಂತಿರಲಿಲ್ಲ. ಅವನು ದೇವಯಾನಿಗೆ ಅದಾವ ಬಗೆಯ ಅನ್ಯಾಯವನ್ನೂ ಬಗೆದಿರಲಿಲ್ಲ. ಅವನು ಕೂಡ ಅವಳಿಗೆ ಮರುಶಾಪವನ್ನಿತ್ತನು— 'ಯಾವ ಬ್ರಾಹ್ಮಣಪುತ್ರನೂ ನಿನ್ನನ್ನು ಮದುವೆಯಾಗನು' ಎಂದು. ಕಚನಿಗೆ ತನ್ನ ವಿದ್ಯೆಯನ್ನು ದೇವತೆಗಳ ಹಿತಕ್ಕಾಗಿ ಬಳಸಲಾಗದ್ದರಿಂದ ಈ ಕಾರ್ಯವನ್ನು ತನ್ನ ಶಿಷ್ಯರ ಮೂಲಕ ಮಾಡಿಸಿದನು. ಇಂದ್ರನು ವಿದ್ಯೆಯನ್ನು ಪಡೆದು ಬಂದ ಕಚನನ್ನು ಕಂಡು ಅವನನ್ನು ಬರಮಾಡಿಕೊಂಡು ಅವನಿಗೆ ಯಜ್ಞಭಾಗವನ್ನು ಕೊಟ್ಟನು,

**ಕಣ್ವ :** ಈತನ ಆಶ್ರಮ ಇದ್ದುದು ಮಾಲಿನಿ ನದಿಯ ದಡದ ಮೇಲೆ. ಕಶ್ಯಪ ಗೋತ್ರದ ಪ್ರಾಚೀನ ಕಾಲದ ಮಹರ್ಷಿ ಈತ. ಶಕುಂತಲೆಯನ್ನು ಸಾಕಿ ಸಲಹಿದವನು ಈತನೇ. ಅವಳಿಗೆ 'ಶಕುಂತಲೆ' ಎಂದು ಹೆಸರಿಟ್ಟನು. ಗಾಂಧರ್ವ ವಿವಾಹಕ್ಕಾಗಿ ಅವಳಿಗೆ ತನ್ನ ಒಪ್ಪಿಗೆಯನ್ನಿತ್ತನು. ಅವಳಿಗೆ ಪಾತಿವ್ರತ್ಯದ ಹಿರಿಮೆಯನ್ನು ತಿಳಿಹೇಳಿದನು. ಹೆಣ್ಣುಹುಡುಗಿಯರು ತಮ್ಮ ತವರಿನಲ್ಲಿರುವುದು ಅವನಿಗೆ ಒಪ್ಪಿಗೆಯಾಗಿರಲಿಲ್ಲ. ಈತನು ಭರತರಾಜನ ಅಶ್ವಮೇಧಯಜ್ಞವನ್ನು ಮಾಡಿಸಿದನು. ಪಾಂಡವರೊಂದಿಗೆ ಒಪ್ಪಂದವನ್ನು ಮಾಡಿಕೊಳ್ಳುವಂತೆ ದುರ್ಯೋಧನನಿಗೆ ಹೇಳಿದನು. ಆದರೆ ಅವನು ಅದನ್ನು ಒಪ್ಪಿಕೊಳ್ಳಲಿಲ್ಲ. ಅಲ್ಲದೆ ಇವನನ್ನು ಅವಮಾನಿತನನ್ನಾಗಿ ಮಾಡಿದನು. ಯುಧಿಷ್ಠಿರನನ್ನು ಕಾಣಲೆಂದು ಬಂದ ಋಷಿಗಳಲ್ಲಿ ಈತನೂ ಒಬ್ಬನಾಗಿದ್ದ. ವೃಷ್ಣಿವೀರರು ವಿಶ್ವಾಮಿತ್ರ, ನಾರದ ಹಾಗೂ ಕಣ್ವರನ್ನು ಕುಚೇಷ್ಟೆಗೆ ಈಡುಮಾಡುತ್ತಲೇ ಈತನು ಅವರನ್ನು ಶಪಿಸಿದನು. (ನೋಡಿ : ಶಾಪ—ಕ್ರ. ೫, ಬ್ರಾಹ್ಮಣ>ವೃಷ್ಣಿವೀರ.)

**ಕದ್ರು :** ದಕ್ಷಪ್ರಜಾಪತಿ–ಅಸಿಕ್ನಿ ಇವರ ಮಗಳು. ಕಶ್ಯಪನ ಮಡದಿ. ಅವಳು ತನ್ನ ಗಂಡನಿಂದ 'ಸಮಬಲರಾದ ಸಾವಿರ ಸರ್ಪಗಳಾಗಲಿ' ಎಂಬ ವರವನ್ನು ಕೇಳಿ ಪಡೆದಿದ್ದಳು. ಆ ರೀತಿಯಾಗಿ ಅವಳು ಸಾವಿರ ನಾಗರಹಾವುಗಳ ಮಾತೆ ಎನ್ನಿಸಿದಳು. ಒಂದು ಸಲ ಇವಳು ತನ್ನ ಸವತಿಯೊಂದಿಗೆ ಉಚ್ಚೈಃಶ್ರವ ಕುದುರೆಯ ಬಾಲದ ಬಣ್ಣದ ಬಗೆಗೆ ಪಂಥ ಕಟ್ಟಿದಳು. ಬಾಲ ಬೆಳ್ಳಗಿದ್ದರೂ ಅದು ಕಪ್ಪೆಂದು ಇವಳ ವಾದ. ತನ್ನ ಮಾತು ಹುಸಿಹೋಗದಿರಲೆಂದು ಈಕೆ ತನ್ನ ಮಕ್ಕಳಿಗೆಲ್ಲ ಕರಿ ಕೂದಲುಗಳಾಗಿ ಕುದುರೆಯ ಬಾಲಕ್ಕೆ ಸುತ್ತಿ ಅಂಟಿಕೊಂಡಿರಲು ಹೇಳಿದಳು. ಆಗ ಮೊದಲಿಗೆ ಕೆಲವು ಹಾವುಗಳು ಒಪ್ಪಿಕೊಳ್ಳಲಿಲ್ಲ. ಅವಳು ಸಿಟ್ಟಿಗೆದ್ದು 'ಹಾಗಿದ್ದರೆ ಸರ್ಪಯಜ್ಞದಲ್ಲಿ ಸುಟ್ಟು ಬೂದಿ

ಯಾಗಿ' ಎಂದು ಅವರಿಗೆ ಶಾಪವನ್ನಿತ್ತಳು. ಆ ನಾಗರಹಾವುಗಳು ತಮ್ಮ ತಾಯಿಯನ್ನು ಮೊರೆಹೊಕ್ಕವು. ಅವಳು ಹೇಳಿದಂತೆ ನಡೆದುಕೊಳ್ಳಲು ಒಪ್ಪಿಕೊಂಡವು. ಆಗ ಅವಳು ಅವರಿಗೆ ಉಃಶಾಪವನ್ನಿತ್ತಳು. ಹಾವುಗಳು ಕುದುರೆಯ ಬಾಲವನ್ನು ಸುತ್ತಿ ಅಂಟಿಕೊಂಡು ಕುಳಿತದ್ದರಿಂದ ಅದು ಕಪ್ಪಾಗಿ ಕಾಣತೊಡಗಿತು. ಹೀಗಾಗಿ ಇವಳ ಸವತಿಯಾದ ವಿನತೆ ಒಂದು ಸಾವಿರ ವರ್ಷಗಳ ಕಾಲ ಇವಳಿಗೆ ದಾಸಿಯಾದಳು.

ಕದ್ರುವು ಒಂದು ಸಲ ತನ್ನನ್ನು ಕಡಲಡಿಯ ನಿರ್ಜನವಾದ ತಾಣಕ್ಕೆ ಕರೆದೊಯ್ಯಲು ವಿನತೆಗೆ ಅಪ್ಪಣೆಯನ್ನು ಮಾಡಿದಳು. ವಿನತೆಯು ಇವಳನ್ನು ತನ್ನ ಬೆನ್ನ ಮೇಲೆ ಕುಳ್ಳಿರಿಸಿ ಕೊಂಡಳು. ಅಲ್ಲದೆ ನಾಗರಹಾವುಗಳನ್ನೆಲ್ಲ ಎತ್ತಿಕೊಂಡು ಹೋಗುವಂತೆ ಗರುಡಹಕ್ಕಿ ಗಳಿಗೆ ಹೇಳಿದಳು. ಗರುಡಗಳು ಗಗನದಲ್ಲಿ ಎತ್ತರಕ್ಕೆ ಹಾರುವಾಗ ಈ ಹಾವುಗಳಿಗೆ ಬಿಸಿಲಿನ ಬೇಗೆಯನ್ನು ತಡೆದುಕೊಳ್ಳಲಾಗಲಿಲ್ಲ. ಅವೆಲ್ಲ ಎಚ್ಚರದಪ್ಪಿದವು. ಕದ್ರುವು ಇಂದ್ರನನ್ನು ಬೇಡಿಕೊಂಡಳು. ಅವನು ಸಂತುಷ್ಟನಾಗಿ ಮಳೆಗರೆದನು. ಅದರಿಂದ ಹಾವುಗಳ ದಾಹ ಕಡಿಮೆಯಾಯಿತು. ಅವರೆಲ್ಲರೂ ರಮಣೀಕ ದ್ವೀಪಕ್ಕೆ ಹೋದರು.

ತನ್ನ ಮಕ್ಕಳನ್ನೇ ಶಪಿಸುವವಳೆಂದು ದೇವತೆಗಳು ಇವಳನ್ನು ಹೀಯಾಳಿಸಿದ್ದಾರೆ. ಬ್ರಹ್ಮದೇವನಿಗೂ ಕೂಡ ಈಕೆಯ ಶಾಪ ಬಲು ಕ್ರೂರವಾಗಿ ಕಂಡಿತು.

**ಕಪಿಲ :** ಪ್ರಜಾಪತಿ ಕರ್ದಮ ಹಾಗೂ ದೇವಹುತಿ ಇವರ ಮಗ. ಶ್ರೀಕೃಷ್ಣನ ಮೊದಲಿನ ಅವತಾರ ಎಂದು ತಿಳಿಯಲ್ಪಡುತ್ತಾನೆ. ಈತನು ದೇವಹುತಿಗೆ ಬ್ರಹ್ಮಜ್ಞಾನ ವನ್ನು ನೀಡಿ ಪಾತಾಳಕ್ಕೆ ಹೋಗಿ ವಾಸವಾಗಿದ್ದನು. ಸಗರಪುತ್ರರು ಅಶ್ವಮೇಧದ ಕುದುರೆಯನ್ನು ಹುಡುಕಲೆಂದು ಪಾತಾಳಲೋಕಕ್ಕೆ ಹೋದಾಗ ಕಪಿಲನೇ ಅದನ್ನು ಕದ್ದಿರಬಹುದೆಂದುಕೊಂಡನು. ಹೀಗಾಗಿ ಅವನನ್ನು ಚೆನ್ನಾಗಿ ಥಳಿಸಿದರು. ಕುಪಿತನಾದ ಕಪಿಲನು ಒಂದೇ ನೋಟದಿಂದ ಅರವತ್ತುಸಾವಿರ ಸಗರಪುತ್ರರನ್ನು ಒಂದೇ ವೇಳೆಗೆ ಸುಟ್ಟು ಬೂದಿಯನ್ನಾಗಿ ಮಾಡಿದನು. ಸಂಖ್ಯಾಶಾಸ್ತ್ರಜ್ಞನಾದ ಕಪಿಲ ಈತನೇ ಆಗಿರಲು ಸಾಕು. ಆದರೆ ಬೇರೆ ಬೇರೆ ಹೊತ್ತಗೆಗಳಲ್ಲಿ ಭಿನ್ನಭಿನ್ನವಾದ ಮಾಹಿತಿ ದೊರಕುತ್ತದೆ. ಸಾಂಖ್ಯಸೂತ್ರ, ತತ್ತ್ವಸಮಾಸ, ವ್ಯಾಸಪ್ರಭಾಕರ, ಕಪಿಲಗೀತಾ, ಕಪಿಲಪಂಚರಾತ್ರ, ಕಪಿಲಸಂಹಿತಾ, ಕಪಿಲಸ್ತೋತ್ರ, ಕಪಿಲಸ್ಮೃತಿ ಮೊದಲಾದ ಹಲವು ಹೊತ್ತಗೆಗಳ ಕರ್ತೃ ಈತನೆನ್ನಲಾಗಿದೆ. ಶ್ರೀಕೃಷ್ಣನು ಗೀತೆಯ ಹತ್ತನೆಯ ಅಧ್ಯಾಯದಲ್ಲಿ ಅರ್ಜುನನಿಗೆ 'ಸಿದ್ಧಾನಾಂ ಕಪಿಲೋ ಮುನಿಃ ।' ಎಂದು ಹೇಳಿದ್ದಾನೆ. ಈತನು ಶರಪಂಜರದ ಮೇಲಿದ್ದ ಭೀಷ್ಮನನ್ನು ಭೆಟ್ಟಿಯಾಗಿದ್ದನು. ಇವನು ಸ್ಯೂಮರಶ್ಮಿಗಳೊಂದಿಗೆ ಸಂಭಾಷಣೆಯನ್ನು ಕೈಕೊಂಡಿದ್ದನು. ಯುಧಿಷ್ಠಿರನಿಗೆ ಶಿವನ ಮಹಿಮೆಯನ್ನು ತನ್ನ ಅನುಭವದ ಆಧಾರ ದಿಂದ ಹೇಳಿದನು.

**ಕಬಂಧ :** ದಂಡಕಾರಣ್ಯದಲ್ಲಿ ವಾಸವಿದ್ದ ಒಬ್ಬ ರಾಕ್ಷಸ. ಇಂದ್ರನ ವಜ್ರಪ್ರಹಾರ ದಿಂದಾಗಿ ತಲೆ ಹಾಗೂ ತೊಡೆಗಳು ಹೊಟ್ಟೆಯನ್ನು ಹೊಕ್ಕದ್ದರಿಂದ ಈತ ತಲೆ, ಕಾಲು ಗಳಿಲ್ಲದವನಾದನು. ಹೀಗಾಗಿ ಕಬಂಧನೆಂಬ ಹೆಸರು ಬಿದ್ದಿತು. ಹೊಟ್ಟೆಹೊರೆಯಲು ಅನುಕೂಲವಾಗಲೆಂದು ಈತನಿಗೆ ಯೋಜನ ಉದ್ದದ ಕೈಗಳು ಬಂದವು. ಇವನು ಮುಗಿಲಲ್ಲಿ ಹಾರಾಡುವ ಜೀವಿಗಳನ್ನು ಹಿಡಿದು ಕಬಳಿಸುತ್ತಿದ್ದನು. ಈತನಿಗೆ ರಾಮನ

ಕೈಯಿಂದ ಸಾವು ಬಂದರೆ ಮತ್ತೆ ಮೊದಲಿನ ರೂಪ ಪ್ರಾಪ್ತವಾಗುವುದೆಂದು ಇಂದ್ರನು ಇವನಿಗೆ ಹೇಳಿದ್ದನು. ಹೀಗೆಯೇ ತನ್ನ ಬೇಟೆಗಳನ್ನು ಹಿಡಿದುಕೊಳ್ಳುವಾಗ ಒಂದಿಲ್ಲೊಂದು ದಿನ ರಾಮ ತನ್ನ ಕೈಗೆ ಬಾರದಿರಲಾರನೆಂಬುದು ಈತನ ಎಣಿಕೆಯಾಗಿತ್ತು. ರಾಮ ಲಕ್ಷ್ಮಣರಿಬ್ಬರೂ ಕೈಗೆ ಸಿಗುತ್ತಲಂತೂ ಈತ ತುಂಬ ಖುಶಿಪಟ್ಟನು. ರಾಮನು ಕೇಳಲಾಗಿ ತಾನು ವಿಶ್ವಾವಸು ಗಂಧರ್ವನೆಂದು ಹೇಳಿದನು. ಬ್ರಾಹ್ಮಣನ ಶಾಪದಿಂದಾಗಿ ಅವನಿಗೆ ರಾಕ್ಷಸಯೋನಿ ಪ್ರಾಪ್ತವಾಗಿತ್ತು. ಕಬಂಧನಲ್ಲಿ ದಿವ್ಯಜ್ಞಾನವಿರಲಿಲ್ಲ. ಹೀಗಾಗಿ ಸೀತೆಯನ್ನು ಕದ್ದವರಾರು ಎಂಬುದನ್ನು ಹೇಳಲಾಗಲಿಲ್ಲ. ತನ್ನ ಸಾವಿನ ತರುವಾಯ ತಾನು ರಾಮನಿಗೆ ನೆರವಾಗುವುದಾಗಿ ಅವನಿಗೆ ಮಾತುಕೊಟ್ಟನು.

**ಕರ್ಕೋಟಕ :** ಕದ್ರುವಿನ ಒಬ್ಬ ಮಗ. ನಾರದನ ಶಾಪದಿಂದ ಬೆಂಕಿಗೆ ಬಿದ್ದಾಗ ನಲನು ಈತನನ್ನು ಉಳಿಸಿದನು. ಕಲಿಯಿಂದ ನಲನಿಗೆ ತೊಂದರೆಯಾಗದಿರಲೆಂದು ತಾನು ಬಿಡುಗಡೆಹೊಂದುತ್ತಲೇ ಈತನು ನಲನನ್ನು ಕಚ್ಚಿದನು. ಇದರಿಂದಾಗಿ ನಲನ ರೂಪ ಮಾರ್ಪಾಟುಗೊಂಡಿತು. ಈತನು ನಲನಿಗೆ ಮೊದಲ ರೂಪವನ್ನು ಪಡೆಯಲೆಂದು ಎರಡು ವಸ್ತ್ರಗಳನ್ನು ಕೊಟ್ಟನು. ಅವುಗಳನ್ನುಡುತ್ತಲೇ ಅವನ ರೂಪ ಮೊದಲಿನಂತಾಗುವುದು ಎಂದು ಹೇಳಿದನು. ವರುಣನ ಆಸ್ಥಾನದಲ್ಲಿ ಈತನಿಗೆ ಸ್ಥಾನವಿತ್ತು. ಈತ ಭೋಗವತಿ ಎಂಬ ರಾಜಧಾನಿಯಲ್ಲಿ ವಾಸವಾಗಿದ್ದನೆಂಬ ಪ್ರಸ್ತಾಪ ಮಹಾಭಾರತದಲ್ಲಿದೆ. ಕಾಶ್ಮೀರದ ಒಂದು ವಂಶದ ಹೆಸರು 'ಕರ್ಕೋಟಕ' ಎಂದಿದೆ. ಕರ್ಕೋಟಕ ನಾಗರಹಾವು ತಮ್ಮನ್ನು ಕಾಪಾಡುತ್ತದೆ ಎಂದು ಅವರು ನಂಬುತ್ತಾರೆ.

**ಕರ್ಣ :** ಸೂರ್ಯನಿಂದ ಕುಂತಿಗೆ ಅವಳು ಕುಮಾರಿಯಾಗಿದ್ದಾಗಲೇ ಹುಟ್ಟಿದ ಮಗ. ಕವಚಕುಂಡಲಗಳೊಂದಿಗೆ ಹುಟ್ಟಿಬಂದಿದ್ದನು. ಜನರ ಹೆದರಿಕೆಯಿಂದಾಗಿ ಕುಂತಿಯು ಈತನನ್ನು ಹೊಳೆಯಲ್ಲಿ ತೇಲಿಬಿಟ್ಟಳು. ಅದೃಷ್ಟದಿಂದ ಅಧಿರಥನೆಂಬ ಸೂತನ ಕೈಗೆ ಸಿಕ್ಕುಬಿಟ್ಟನು. ಅವನು ಈ ಬಾಲಕನನ್ನು ಒಯ್ದು ತನ್ನ ಮಡದಿ ರಾಧೆಗೆ ಒಪ್ಪಿಸಿದನು. ಅವಳು ಈತನನ್ನು ಹೊಟ್ಟೆಯ ಮಗುವಿನಂತೆ ಲಾಲಿಸಿ ಪಾಲಿಸಿದಳು. ಇವನಿಗೆ ವಸುಷೇಣನೆಂಬ ಹೆಸರನ್ನಿಟ್ಟರು, ಆದರೆ ಈತನನ್ನು ಗುರುತಿಸುವುದು ಮಾತ್ರ ಕರ್ಣ, ರಾಧೇಯ, ಸೂತಪುತ್ರ ಎಂಬಂಥ ಹೆಸರುಗಳಿಂದಲೇ. ಸೂತನ ಮಗನೆನ್ನಿಸಿದ್ದರಿಂದ ಈತನಿಗೆ ತುಂಬ ಮನಸ್ತಾಪ, ಅವಮಾನ, ಹೀಯಾಳಿಕೆಗಳನ್ನು ಎದುರಿಸಬೇಕಾಯಿತು. ಈತನ ಶೌರ್ಯಕ್ಕೆ ಮನ್ನಣೆ ಸಿಕ್ಕಲಿಲ್ಲ. ಈತ ದ್ರೋಣಾಚಾರ್ಯನಿಂದ ಶಸ್ತ್ರಾಸ್ತ್ರ ವಿದ್ಯೆಯನ್ನು ಕಲಿತನು. ಆದರೆ ಈತನಿಗೆ ಬ್ರಹ್ಮಾಸ್ತ್ರವಿದ್ಯೆಯು ಪ್ರಾಪ್ತವಾಗಲಿಲ್ಲ. ಆದ್ದರಿಂದಲೇ ಈತನಿಗಿಂತ ಅರ್ಜುನ ಶ್ರೇಷ್ಠನೆನ್ನಿಸಿದನು. ದುರ್ಯೋಧನ ಈತನ ಕಲಿತನವನ್ನು ಗುರುತಿಸಿದನು. ಅವನು ಈತನನ್ನು ತನ್ನವನನ್ನಾಗಿ ಮಾಡಿಕೊಂಡನು. ಈತನಿಗೆ ಅಂಗದೇಶದ ರಾಜ್ಯವನ್ನು ಕೊಟ್ಟನು. ಗೌರವದಿಂದ ಕಂಡನು. ಈತನ ಕಲಿತನದಂತೆಯೇ ಈತನ ಔದಾರ್ಯವೂ ಹೆಚ್ಚಿನದು. ಈತನು ಬ್ರಾಹ್ಮಣನ ಮಾರುವೇಷದಲ್ಲಿ ಬಂದ ಇಂದ್ರನಿಗೆ ತನ್ನ ಕವಚಕುಂಡಲಗಳನ್ನು ಕೂಡ ದಾನವಾಗಿ ಕೊಟ್ಟನು. ಕೊಡುಗೈ ವೀರನೆಂಬ ತನ್ನ ಹೆಸರನ್ನು ಉಳಿಸಿಕೊಂಡನು. ಪರಶುರಾಮನನ್ನು ಮೋಸ ಮಾಡಿ ಅವನಿಂದ ಬ್ರಹ್ಮಾಸ್ತ್ರವನ್ನು ಕಲಿತನು. ಈತನ ಮೋಸ ಬಯಲಾಗುತ್ತಲೇ ಪರಶುರಾಮನು

ಶಾಪವನ್ನಿತ್ತ ಕಾರಣ ಈ ಅಸ್ತ್ರ ಕೆಲಸಕ್ಕೆ ಬಾರದ್ದಾಯಿತು. ಬ್ರಾಹ್ಮಣನ ಕರುವನ್ನು ಕೊಂದ ಪಾಪವೂ ಈನಿಗೆ ತಟ್ಟಿತು. ಭೂಮಿಯು ಈತನ ರಥದ ಗಾಲಿಯನ್ನು ನುಂಗಿಹಾಕೀತು, ಮೈಮರೆತ ಕ್ಷಣಕ್ಕೆ ಈತನ ತಲೆ ಹಾರೀತೆಂದು ಭೀಕರವಾದ ಶಾಪ ಆ ಬ್ರಾಹ್ಮಣನಿಂದ ಬಂದಿತು. ಕರ್ಣನು ಉಃಶಾಪವನ್ನು ಕೇಳಿಕೊಂಡರೆ ಅದನ್ನು ತಳ್ಳಿಹಾಕಲಾಯಿತು. ಮತ್ಸ್ಯವೇಧದ ಕಾಲಕ್ಕೆ ದ್ರೌಪದಿಯು ತಾನು ಸೂತಪುತ್ರನನ್ನು ಮದುವೆಯಾಗಲಾರೆನೆಂದು ಸಾರಿದ್ದರಿಂದ ಈತನಿಗೆ ತನ್ನ ನೈಪುಣ್ಯವನ್ನು ತೋರಿಸಲು ಅವಕಾಶವೇ ದೊರಕಲಿಲ್ಲ. ಈತನಲ್ಲಿ ಕಲಿತನದಷ್ಟೇ ಹೆಚ್ಚಿನ ಸೊಕ್ಕೂ ಇತ್ತು. ಅಹಂಕಾರವೇ ಈತನಿಗೆ ಕುತ್ತಾಯಿತು. ಭೀಷ್ಮ, ಶಲ್ಯರು ಈತನನ್ನು ಹೆಜ್ಜೆಹೆಜ್ಜೆಗೆ ತಿವಿದು ನುಡಿದರು. ಈತ ಯಾವುದೇ ಆಸೆಗಳಿಗೆ ಬಲಿಯಾಗದೆ ಕೊನೆಯವರೆಗೂ ದುರ್ಯೋಧನನೊಂದಿಗೆ ಏಕನಿಷ್ಠನಾಗಿ ಉಳಿದನು. ಶ್ರೀಕೃಷ್ಣನು ಈತನಿಗೆ ಪಾಂಡವರ ಪಕ್ಷಕ್ಕೆ ಬರುವಂತೆ ಕರೆ ನೀಡಿದನು. ಈತನ ಹುಟ್ಟಿನ ಗುಟ್ಟನ್ನು ಹೇಳಿದನು. ದ್ರೌಪದಿಯನ್ನು ಪಡೆಯಬಹುದೆಂಬ ಆಸೆಯನ್ನು ಒಡ್ಡಿದನು. ಇದಕ್ಕೆಲ್ಲಕ್ಕೂ ಈತ ಒಪ್ಪಲಿಲ್ಲ. ಈತ ತನ್ನ ಕಡುಗಲಿತನವನ್ನು ಮೆರೆಯಬಹುದಾದ ಮುಖ್ಯವಾದ ಕ್ಷಣಗಳಲ್ಲಿಯೇ ಕುಂತಿಯೂ ಕೂಡ ಈತನಲ್ಲಿಗೆ ಬಂದು ಈತನ ಹುಟ್ಟಿನ ಗುಟ್ಟನ್ನು ಉಸುರಿದಳು. ಈತನ ಉತ್ಸಾಹವೆಲ್ಲ ಜರ್ರನೆ ಇಳಿದುಹೋಗುವಂತೆ ಮಾಡಿಗಳು. ಇಷ್ಟಾಗಿಯೂ ಈತ ಕೌರವಪಕ್ಷವನ್ನು ಬಿಟ್ಟುಕೊಟ್ಟವನಲ್ಲ. ಅರ್ಜುನನನ್ನುಳಿದು ಬೇರೆ ಪಾಂಡವರಿಗೆಲ್ಲ ಅಭಯವನ್ನಿತ್ತನು.

ಭೀಷ್ಮ ಬದುಕಿರುವವರೆಗೂ ತಾನು ಕೈಯಲ್ಲಿ ಆಯುಧವನ್ನು ಹಿಡಿಯೆನೆಂದೂ ಇಲ್ಲವೆ ಯುದ್ಧವನ್ನು ಕುರಿತು ಯಾವುದೇ ಸಲಹೆಸೂಚನೆಗಳನ್ನು ನೀಡಲಾರೆನೆಂದೂ ಕರ್ಣನು ಪಣತೊಟ್ಟಿದ್ದನು. ಕವಚಕುಂಡಲಗಳ ಬದಲಾಗಿ ಇಂದ್ರನಿಂದ ದೊರೆತ ವಾಸವಶಕ್ತಿಯನ್ನು ಈತ ಅರ್ಜುನನಿಗೆಂದೇ ಮೀಸಲಾಗಿಟ್ಟಿದ್ದನು. ಆದರೆ ಶ್ರೀಕೃಷ್ಣನು ಅದನ್ನು ಘಟೋತ್ಕಚನಿಗಾಗಿ ಬಳಸಹಚ್ಚಿದನು. ಹೀಗಾಗಿ ಈತನ ಗುರಿ ಸೋಲನ್ನಪ್ಪಿತು. ಈತ ದ್ರೋಣನನಂತರ ಕೌರವಸೇನೆಯ ದಂಡನಾಯಕನಾದನು. ಬರಿ ಐದು ದಿನಗಳಲ್ಲಿ ಪಾಂಡವರ ಸೇನೆಯನ್ನು ಯಮಲೋಕಕ್ಕೆ ತಾನು ಅಟ್ಟುವುದಾಗಿ ಪಣವನ್ನು ತೊಟ್ಟನಾದರೂ ಅರ್ಜುನನು ಒಂದೂವರೆ ದಿನದಲ್ಲಿಯೇ ಈತನನ್ನೇ ಯಮಸದನಕ್ಕೆ ಅಟ್ಟಿಬಿಟ್ಟನು. ಕರ್ಣ–ಅರ್ಜುನರ ಕಾಳಗದಲ್ಲಿ ಮಾತ್ರ ಕರ್ಣನು ತನ್ನ ಅತುಲನೀಯವಾದ ಪರಾಕ್ರಮವನ್ನು ಮೆರೆದನು. ಅದೃಷ್ಟ ಯಾವಾಗಲೂ ಈತನತ್ತ ಬೆನ್ನುತಿರುಗಿಸಿತು. ಆಯಕಟ್ಟಿನ ವೇಳೆಗೆ ನೆಲವು ಈತನ ರಥದ ಗಾಲಿಯನ್ನು ನುಂಗಿಹಾಕಿದ್ದರಿಂದ ಈತ ಬಿಕ್ಕಟ್ಟಿಗೆ ಸಿಲುಕಿಹಾಕಿಕೊಂಡನು. ಅರ್ಜುನ ಸರಿಯಾಗಿ ಇದೇ ಕ್ಷಣವನ್ನು ಬಳಸಿಕೊಂಡನು. ಭೀಷ್ಮನೇನೋ ಈತನನ್ನು ಅರ್ಧರಥಿಯೆಂದು ಹೀಗಳೆದಿದ್ದರೂ ಈತ ಮಾತ್ರ ಒಬ್ಬ ಮಹಾರಥಿಯಾಗಿದ್ದನು. ಈತ ದ್ರೌಪದಿಯ ಮಾನಭಂಗದ ಕಾಲಕ್ಕೂ, ಪಾಂಡವರನ್ನು ನಾಶಗೊಳಿಸುವ ಕಪಟದಲ್ಲೂ ಪಾಲ್ಗೊಂಡವನು. ಈತನ ಸಾವಿನಿಂದಾಗಿ ಕೌರವರು ತುಂಬ ಹಾನಿಗೊಳಗಾದರು.

ಕರ್ಣ ತನ್ನ ಕೃತಿಯಿಂದ, 'ದೈವಾಯತ್ತಂ ಕುಲೇ ಜನ್ಮ ಮದಾಯತ್ತಂ ತು ಪೌರುಷಮ್ ।' ಎಂಬ ಉಕ್ತಿಯನ್ನು ಸಿದ್ಧಮಾಡಿ ತೋರಿಸಿದನು.

**ಕಲಿ :** ಅಥರ್ವರ್ಣನ ವಂಶದ ಕ್ರೋಧ-ಹಿಂಸೆ ಇವರ ಮಗ. ಈತನ ಒಡಹುಟ್ಟಿದವಳೆಂದರೆ ದುರುಕ್ತಿ. ಕಲಿಯಿಂದ ಇವಳಿಗೆ ಭಯ ಎಂಬ ಮಗ ಹಾಗೂ ಮೃತ್ಯು ಎಂಬ ಮಗಳು ಹುಟ್ಟಿದರು. ದಮಯಂತಿಯು ನಲನನ್ನು ಮದುವೆಯಾದ್ದರಿಂದ ಈತನಿಗೆ ಕೋಪ ಬಂದಿತು. ಆದ್ದರಿಂದ ನಲನ ದೇಹವನ್ನು ಹೊಕ್ಕು ಆತನನ್ನು ಪೀಡಿಸಿದನು. ಅವನನ್ನು ಜೂಜಾಟಕ್ಕೆ ತೊಡಗಿಸಿದನು. ದಮಯಂತಿಯ ಶಾಪದಿಂದಾಗಿ ಈತನಿಗೆ ನಲನ ದೇಹವನ್ನು ತೊರೆದು ಹೊರಬರಬೇಕಾಯಿತು. ತಕ್ಷಕನ ಹಿಂಸೆ ತಾಳಲಾರದ್ದಕ್ಕೆ ತಾನು ನಲನ ದೇಹವನ್ನು ಹೊಕ್ಕದ್ದಾಗಿ ಈತ ಹೇಳುತ್ತಾನೆ. ಈತನು (ವೃಷಭರೂಪದ) ಧರ್ಮ ಹಾಗೂ (ಗೋರೂಪದ) ಭೂಮಿಯನ್ನು ಹಿಂಸಿಸಲಾರಂಭಿಸಿದ್ದರಿಂದ ಇಂದ್ರನು ಈತನಿಗೆ ಜೂಜು, ಮದ್ಯಪಾನ, ಸ್ತ್ರೀಸಂಗ, ಹಿಂಸೆ ಹಾಗೂ ಹೊನ್ನು ಎಂಬಂತಹ ಆಶ್ರಯಸ್ಥಾನಗಳನ್ನು ನೀಡಿದನು. ಈತನು ನಾರಾಯಣನನ್ನು ಸ್ತುತಿಗೈದು ಅವನನ್ನು ಒಲಿಸಿಕೊಂಡಿದ್ದನು. ಪ್ರದ್ಯೋತನಿಂದಾಗಿ ಈತನ ಮ್ಲೇಂಛ ವಂಶ ಹಾಳಾಗಿತ್ತು. ಅದು ವಿಷ್ಣುವಿನ ಕೃಪೆಯಿಂದಾಗಿ ಉಳಿದುಕೊಂಡಿತು.

**ಕಶ್ಯಪ :** ಕರ್ದಮನ ಮಗಳು ಹಾಗೂ ಮರೀಚಿಯ ಮಡದಿ ಕಲಾ ಇವಳಿಗೆ ಕಶ್ಯಪ ಹಾಗೂ ಪೂರ್ಣಿಮಾ ಎಂಬ ಇಬ್ಬರು ಗಂಡುಮಕ್ಕಳಾದರು. ಕಶ್ಯಪ ಹಿರಿಯ ಮಗ. ತಾರ್ಕ್ಷ್ಯ ಹಾಗೂ ಅರಿಷ್ಟನೇಮಿ ಎಂಬುದಾಗಿ ಈತನ ಹೆಸರುಗಳಲ್ಲಿ ಭಿನ್ನತೆ ಕಂಡು ಬರುತ್ತದೆ. ಈತ ಸಪ್ತರ್ಷಿಗಳಲ್ಲಿ ಒಬ್ಬ. ಪ್ರಜಾಪತಿಯಾಗಿದ್ದನು. ಈತ ಬ್ರಹ್ಮನ ಮಾನಸ ಪುತ್ರನು. ಪರಶುರಾಮನು ಇಪ್ಪತ್ತೊಂದು ಸಲ ಪೃಥ್ವಿಯನ್ನು ನಿಃಕ್ಷತ್ರಿಯವನ್ನಾಗಿ ಮಾಡಿ ಸರಸ್ವತಿ ನದಿಯ ದಡದ ಮೇಲಿನ ರಾಮತೀರ್ಥ ಎಂಬಲ್ಲಿ ಹೂಡಿದ ಯಜ್ಞಕ್ಕೆ ಅಧ್ವರ್ಯುವು ಕಶ್ಯಪನು. ಕಶ್ಯಪನಿಗೆ ಯಜ್ಞದ ದಕ್ಷಿಣೆಯೆಂದು ಪೃಥ್ವಿ ದೊರೆಯಿತು. ಅಳಿದುಳಿದ ಕ್ಷತ್ರಿಯರು ನಾಶಹೊಂದದಿರಲೆಂದು ಕಶ್ಯಪನು ಪರಶುರಾಮನಿಗೆ ಕೊಂಕಣದಲ್ಲಿ (ಶೂರ್ಪಾರಕ) ವಾಸವಾಗಿರಲು ಹೇಳಿದನು. ಕಶ್ಯಪನು ಪೃಥ್ವಿಯನ್ನು ಬ್ರಾಹ್ಮಣರಿಗೊಪ್ಪಿಸಿ ತಾನು ಕಾಡಿನಲ್ಲಿ ಆಸರೆಹೊಂದಿದನು. ಈತ ಮಗನನ್ನು ಪಡೆಯಲೆಂದು ಯಜ್ಞವನ್ನು ಆರಂಭಿಸುತ್ತಲೇ ದೇವತೆಗಳು, ಋಷಿಗಳು, ಗಂಧರ್ವಾದಿಗಳೆಲ್ಲ ಈತನ ನೆರವಿಗೆ ನಿಂತರು. ಇಂದ್ರನು ವಾಲಖಿಲ್ಯರನ್ನು ಅವಮಾನಗೊಳಿಸಿದ್ದರಿಂದ ಅವರು ರೊಚ್ಚಿಗೆದ್ದರು. ಅವರಿಂದ ತನ್ನನ್ನು ರಕ್ಷಿಸಿಕೊಳ್ಳಲೆಂದು ಇಂದ್ರನು ಕಶ್ಯಪನನ್ನು ಮೊರೆಹೊಕ್ಕನು.

ಕಶ್ಯಪನು ಅರ್ಬುದ ಪರ್ವತದ ಮೇಲೆ ತಪಸ್ಸನ್ನು ಆಚರಿಸಿದನು. ಶಂಕರನಿಂದ ಗಂಗೆಯನ್ನು ಪಡೆದನು. ಗರುಡನಿಗೆ ನಾರಾಯಣನ ಮಹಾತ್ಮೆಯನ್ನು ಹೇಳಿದನು. ಕಶ್ಯಪನಿಗೆ ಕಪಿಲಾ, ಇರಾ, ಕದ್ರು, ಅದಿತಿ, ವಿನತಾ ಎಂಬುದಾಗಿ ಹಲವು ಜನ ಮಡದಿಯರಿದ್ದರು. ಅವನಿಗೆ ಹಲವು ಜನ ಮಕ್ಕಳಿದ್ದರು. ಈತನ ಹೆಸರಿನಿಂದ 'ಕಾಶ್ಯಪ' ಗೋತ್ರವಿದೆ. ದೇವ ಹಾಗೂ ದೈತ್ಯರ ಹುಟ್ಟು ಈತನಿಂದಲೇ ಆಯಿತೆಂದು ತಿಳಿಯಲಾಗುತ್ತದೆ.

**ಕಹೋಡ :** ಉದ್ದಾಲಕ ಋಷಿಯ ಶಿಷ್ಯ. ಈತನ ಗುರುಸೇವೆಯಿಂದ ಪ್ರಸನ್ನನಾಗಿ ಉದ್ದಾಲಕನು ಇವನಿಗೆ ತನ್ನ ಮಗಳು ಸುಜಾತಾಳನ್ನು ಕೊಟ್ಟು ಮದುವೆ ಮಾಡಿದನು. ಸುಜಾತಾ ಬಸಿರಾಗಿದ್ದಾಗ ಅವಳ ಹೊಟ್ಟೆಯಲ್ಲಿದ್ದ ಮಗು ಈತನ ಮಂತ್ರ

ಮರಣದ ತಪ್ಪನ್ನು ತೋರಿಸಿಕೊಟ್ಟಿತು. ಈತ ಕೋಪದಿಂದ 'ನಿನ್ನ ಮೈ ಎಂಟೆಡೆಗಳಲ್ಲಿ ಡೊಂಕಾಗಲಿ' ಎಂದು ಶಾಪವಿತ್ತನು. ಹೀಗಾದ್ದರಿಂದ ಈತನ ಮಗನ ಹೆಸರು 'ಅಷ್ಟಾವಕ್ರ' ಎಂದಾಯಿತು. ಈತ ದುಡ್ಡು ಗಳಿಸಲೆಂದು ಒಂದು ಸಲ ಜನಕರಾಜನ ಬಳಿಗೆ ಹೋಗಿದ್ದನು. ಅವನ ಸೆರೆಯಾಳುವೊಬ್ಬನು ಈತನನ್ನು ವಾದದಲ್ಲಿ ಸೋಲಿಸಿ ಈತನನ್ನು ನೀರಲ್ಲಿ ಮುಳುಗಿಸಿಬಿಟ್ಟನು. ತರುವಾಯ ಅಷ್ಟಾವಕ್ರ ಆ ಸೆರೆಯಾಳುವನ್ನು ವಾದದಲ್ಲಿ ಸೋಲಿಸಿ ಅವನನ್ನು ನೀರಲ್ಲಿ ಮುಳುಗಿಸಿದನಲ್ಲದೆ ತನ್ನ ತಂದೆಗೆ ಮರುಜೀವ ಬರುವಂತೆ ಮಾಡಿದನು. ಕಹೋಡ ಯಾಜ್ಞವಲ್ಕ್ಯನ ಸಮಕಾಲೀನನು. ಈತನು ಅಕ್ಕಿ, ಜವೆಗೋದಿ ಯಂತಹ ಕಾಳುಕಡಿಗಳನ್ನು ಮೊದಲು ದೇವತೆಗಳಿಗೆ ಅರ್ಪಿಸಿ ಆಮೇಲೆ ತಿನ್ನತಕ್ಕದ್ದು ಎಂಬ ರೂಢಿಯನ್ನು ಆರಂಭಿಸಿದನು.

**ಕಾರ್ತವೀರ್ಯ ಅರ್ಜುನ:** ಹೈಹಯದ ಅಧಿಪತಿಯಾದ ಕೃತವೀರ್ಯ ಹಾಗೂ ರಾಕಾವತಿಯರ ಮಗ. ಶಿವಪೂಜೆ ಮುರಿದದ್ದರಿಂದ ಈತ ಕೈಯಿಲ್ಲದ ಹೆಳವನಾಗಿ ಹುಟ್ಟಿದನೆಂದು ಶ್ರೀ ರೇಣುಕಾಮಹಾತ್ಮೆಯಲ್ಲಿ ಹೇಳಲಾಗಿದೆ. ಚ್ಯವನನ ಶಾಪದಿಂದಾಗಿ ಕೃತವೀರ್ಯನ ಒಂದು ನೂರು ಜನ ಗಂಡುಮಕ್ಕಳು ಮರಣಹೊಂದಿದರು. ಈತನು ಒಬ್ಬನೇ ಬದುಕಿ ಉಳಿದವ. ಗಣೇಶಪುರಾಣದ ಹೇಳಿಕೆಯಂತೆ ಈತ ಹುಟ್ಟು ಅವಯವ ಹೀನನು. ಗಣೇಶನ ಕೃಪೆಯಿಂದಾಗಿ ಈತನಿಗೆ ಸಾವಿರ ಬಾಹುಗಳು ಹಾಗೂ ಒಳ್ಳೆಯ ರೂಪ ಪ್ರಾಪ್ತವಾಯಿತು. ಉಳಿದ ಪುರಾಣಗಳಲ್ಲಿ ಬೇರೆ ಮಾಹಿತಿ ಇದೆ. ದತ್ತಾತ್ರಯನ ಕೃಪಾಪ್ರಸಾದದಿಂದಾಗಿ ಈತನಿಗೆ ನಾಲ್ಕು ವರಗಳು ದೊರೆತವು, ಅವೆಂದರೆ, ಸಹಸ್ರ ಬಾಹುಗಳು, ಪೃಥ್ವಿಯ ಆಧಿಪತ್ಯ ಹಾಗೂ ಧರ್ಮದ ಪಾಲನೆ, ಹಿರಿಯ ಯೋದ್ಧನಿಂದ ರಣಾಂಗಣದಲ್ಲಿ ಸಾವು ಹಾಗೂ ಅಧರ್ಮದತ್ತ ಸಾಗಿದರೆ ಸಜ್ಜನರಿಂದ ನಿವಾರಣೆ. ಮಹಿಷ್ಮತಿ—ಓಂಕಾರಮಾಂಧಾತಾ—ಈತನ ರಾಜಧಾನಿಯಾಗಿತ್ತು. ಈತ ತನ್ನ ಶೌರ್ಯ ದಿಂದ ಪೃಥ್ವಿಯನ್ನು ಗೆದ್ದುಕೊಂಡನು. ರಾವಣನನ್ನೂ ಗೆದ್ದಿದ್ದನಾದರೂ ಪುಲಸ್ತ್ಯನು ಮಧ್ಯಸ್ಥಿಕೆಯನ್ನು ವಹಿಸಿ ಇವರಿಬ್ಬರಲ್ಲೂ ಗೆಳೆತನ ಕುದುರುವಂತೆ ಮಾಡಿದನು. ಈತನು ಹತ್ತು ಸಾವಿರ ಯಜ್ಞಗಳನ್ನು ಕೈಗೊಂಡನು. ಹೀಗಾಗಿ ಇವನಿಗೊಂದು ದಿವ್ಯವಾದ ರಥ ಹಾಗೂ ಧ್ವಜ ಪ್ರಾಪ್ತವಾದುವು.

ಮುಂದೆ ಹೋದಂತೆ ಈತ ಮದೋನ್ಮತ್ತನಾಗಿ ಮೆರೆದಾಡಹತ್ತಿದನು. ಪ್ರಜೆಗಳೆಲ್ಲ ಬವಣೆಗೀಡಾದರು. ಅತ್ರಿಮುನಿಗಳನ್ನು ಅವಮಾನಿಸಿದನು. ಇವನನ್ನು ಸಂಹರಿಸಲೆಂದೇ ದುರ್ವಾಸನು ಹುಟ್ಟಿಬಂದನು. ಆದರೆ ಕಾರ್ತವೀರ್ಯನ ಮೇಲೆ ದತ್ತದೇವನ ಕೃಪೆಯಿದ್ದ ಕಾರಣ ದುರ್ವಾಸನು ಅವನಿಗೆ ಏನನ್ನೂ ಮಾಡುವಂತಿರಲಿಲ್ಲ. ಈತನು ವಸಿಷ್ಠನ ಆಶ್ರಮವನ್ನು ಸುಟ್ಟುಹಾಕಿದನು. ಅವನು ಈತನಿಗೆ, 'ಪರಶುರಾಮನು ನಿನ್ನನ್ನು ಯುದ್ಧದಲ್ಲಿ ಕೊಲ್ಲುವನು' ಎಂದು ಶಾಪವಿತ್ತನು. ಈತನು ಜಮದಗ್ನಿಯ ಗೋವು ಗಳನ್ನು ಎಳೆದೊಯ್ಯುವಾಗ ಈತನ ಸೈನ್ಯವು ಮರಣಾವಸ್ಥೆಗೆ ತಲಪಿತು. ಗೋವು ಸ್ವರ್ಗದತ್ತ ಹೊರಟಾಗ ಈತನು ಅದನ್ನು ಅದರ ಕರುವಿನೊಂದಿಗೆ ಎಳೆದೊಯ್ದನು. ಪರಶುರಾಮನಿಗೆ ಈ ಸಂಗತಿ ತಿಳಿಯುತ್ತಲೇ ಅವನ ಕೋಪ ಭುಗಿಲ್ಲೆದಿತು. ಅವನು ಕಾರ್ತವೀರ್ಯನಿಗೆ ಪಂಥಾಹ್ವಾನವನ್ನೆಸೆದನು. ಕಾರ್ತವೀರ್ಯನ ಮಡದಿಯು ಅವನನ್ನು

ಯುದ್ಧದಿಂದ ದೂರವಿರಿಸಲು ಹವಣಿಸಿದಳು. ಈತನು ಒಪ್ಪಲಿಲ್ಲ. ಪರಶುರಾಮನು ಕಾಳಗದಲ್ಲಿ ಈತನ ತೋಳುಗಳನ್ನು ಕಡಿದು ಚೆಲ್ಲಿ ಈತನನ್ನು ಕೊಂದುಬಿಟ್ಟನು. ಜಮದಗ್ನಿಗೆ ಪರಶುರಾಮನ ನಡತೆ ಹಿಡಿಸಲಿಲ್ಲ. ಜಮದಗ್ನಿಯು ಒಂಟಿಯಾಗಿದ್ದಾಗ ಕಾರ್ತವೀರ್ಯಾರ್ಜುನನ ಮಕ್ಕಳು ಅವನನ್ನು ಕೊಂದರು. ಹೀಗಾಗಿಯೇ ಪರಶುರಾಮನು ಇಪ್ಪತ್ತೊಂದು ಸಲ ಪೃಥ್ವಿಯನ್ನು ನಿಃಕ್ಷತ್ರಿಯವನ್ನಾಗಿ ಮಾಡಿದನು. ಈತನಿಗೆ ನೂರು ಜನ ಗಂಡುಮಕ್ಕಳು. ಈತ 'ಚಕ್ರವರ್ತಿ', 'ಸಮ್ರಾಟ'ನಾಗಿದ್ದನೆಂದು ಕೆಲವು ಪುರಾಣಗಳು ಬಣ್ಣಿಸುತ್ತವೆ.

**ಕಾಶಿರಾಜ :** ಕಾಶಿಯ ಯಾವ ರಾಜನಾದರೂ ಕಾಶಿರಾಜನೇ. ಇಲ್ಲಿ ಮಾತ್ರ ಈತ ಅಂಬಿಕಾ, ಅಂಬಾಲಿಕೆಯರ ತಂದೆ. ಇವರ ಸ್ವಯಂವರದ ಕಾಲಕ್ಕೆ ಭೀಷ್ಮನು ಇವರನ್ನು ವಿಚಿತ್ರವೀರ್ಯನಿಗಾಗಿ ರಥದಲ್ಲಿರಿಸಿಕೊಂಡು ಓಡಿಸಿಕೊಂಡು ಹೋದನು.

**ಕಾಶ್ಯಪ :** ಮಂತ್ರವಿದ್ಯೆಯನ್ನು ಬಲ್ಲ ಒಬ್ಬ ಬ್ರಾಹ್ಮಣ. ಶೃಂಗಿಯ ಶಾಪದಿಂದಾಗಿ ಪರೀಕ್ಷಿತರಾಜನಿಗೆ ಹಾವು ಕಡಿದು ಸಾವು ಬರಲಿದೆ ಎಂಬುದನ್ನು ಕಂಡುಕೊಂಡನು. ತನ್ನ ಮಂತ್ರಸಾಮರ್ಥ್ಯವನ್ನು ಬಳಸಿ ರಾಜನ ಸಾವನ್ನು ತಪ್ಪಿಸಿ ಕೈತುಂಬ ಹಣವನ್ನು ಪಡೆಯಬೇಕೆಂಬ ಆಸೆಯಿಂದ ಅವನಲ್ಲಿಗೆ ಹೊರಟನು. ತಕ್ಷಕನು ದಾರಿಯಲ್ಲಿಯೇ ಈತನನ್ನು ತಡೆಹಿಡಿದು ಈತನ ಮಂತ್ರಶಕ್ತಿಯನ್ನು ಪರೀಕ್ಷಿಸಿ ಸಾಕಷ್ಟು ದ್ರವ್ಯವನ್ನು ನೀಡಿ ಅಲ್ಲಿಂದಲೇ ಹಿಂತಿರುಗಿಸಿ ಕಳಿಸಿಬಿಟ್ಟನು. ಈತನು ಪರೀಕ್ಷಿತನನ್ನು ಕಂಡಿದ್ದರೆ ತಕ್ಷಕನಿಗೆ ತನ್ನ ಉದ್ದೇಶ ಸಫಲವಾಗಲಾರದೆಂಬ ಹೆದರಿಕೆಯಿತ್ತು. ಬ್ರಾಹ್ಮಣನ ಶಾಪದಿಂದಾಗಿ ತನ್ನ ಮಂತ್ರವಾದರೂ ಅದೆಷ್ಟುಮಟ್ಟಿಗೆ ಫಲ ನೀಡೀತೆಂಬ ಸಂದೇಹ ಕಶ್ಯಪನಲ್ಲೂ ಇತ್ತು. ಹೀಗಾಗಿ ದ್ರವ್ಯ ದೊರಕುತ್ತಲೇ ಈತ ಹಿಂತಿರುಗಿದನು. ದೊರೆಯ ಜೀವವನ್ನು ಉಳಿಸುವುದಕ್ಕಿಂತಲೂ ಈತನಿಗೆ ದ್ರವ್ಯಾರ್ಜನೆ ಮುಖ್ಯವಾಗಿತ್ತು. ಈತ ಅವನ ಜೀವವನ್ನು ಕಾಪಾಡದೆ ಹಾಗೆಯೇ ಹಿಂತಿರುಗಿದುದನ್ನು ಕಂಡು ಜನ ಸಿಟ್ಟಾದರು. ಅವರು ಇವನ ಮೇಲೆ ಬಹಿಷ್ಕಾರವನ್ನು ಸಾರಿದರು. ಇವನು ವೆಂಕಟಾಚಲಕ್ಕೆ ಹೋಗಿ ಅಲ್ಲಿಯ ತೀರ್ಥದಲ್ಲಿ ಸ್ನಾನಮಾಡುತ್ತಲೇ ತನ್ನ ಪಾಪಕರ್ಮದಿಂದ ಮುಕ್ತನಾದನು.

**ಕಿಂದಮ :** ಒಬ್ಬ ಋಷಿ. ತನ್ನ ಮಡದಿಗೆ ಹೆಣ್ಣುಜಿಗರೆಯ ರೂಪವನ್ನು ಕೊಟ್ಟು ತಾನು ಗಂಡುಜಿಗರೆಯಾಗಿ ಒಮ್ಮೆ ಮೈಥುನದಲ್ಲಿ ಮೈಮರೆತಿದ್ದನು. ಆಗ ಪಾಂಡುವಿನ ಬಾಣ ತಗಲಿ ಪ್ರಾಣಬಿಟ್ಟನು. ಸಾಯುವ ಮೊದಲು ಮನುಷ್ಯನ ನುಡಿಯಲ್ಲಿ ಪಾಂಡುವಿಗೆ ಶಾಪವಿತ್ತನು. (ನೋಡಿ : ಶಾಪ—ಕ್ರ. ೧, ಕಿಂದಮ > ಪಾಂಡು.)

**ಕೀಚಕ :** ಕೇಕಯ ಹಾಗೂ ಮಾಲವಿಯರ ಒಂದುನೂರಾ ಆರು ಮಕ್ಕಳಲ್ಲಿ ಚೊಚ್ಚಲು ಮಗ. ಈತನ ಕಿರಿಯ ಸೋದರರೆಲ್ಲ ಉಪಕೀಚಕರೆಂದು ಕರೆಯಲ್ಪಡುತ್ತಿದ್ದರು. ವಿರಾಟರಾಜನ ಮಡದಿ ಸುದೇಷ್ಣಾ ಇವಳು ಈತನ ಬಲಸೋದರಿ. ಈತ ವಿರಾಟನ ಸೇನಾಪತಿಯಾಗಿದ್ದನು. ಸುದೇಷ್ಣೆಯ ಬಳಿಗೆ ದ್ರೌಪದಿಯು ಸೈರಂಧ್ರಿಯಾಗಿ ಬಂದಾಗ ಈತನ ಕಣ್ಣು ಅವಳ ಮೇಲಿತ್ತು. ಈತನು ತನ್ನ ತಂಗಿಯೊಂದಿಗೆ ಮಸಲತ್ತು ಮಾಡಿ ದ್ರೌಪದಿಯನ್ನು ತನ್ನ ಮಹಲಿಗೆ ಬರುವಂತೆ ಮಾಡಿದನು. ಅವಳೊಂದಿಗೆ ಅತಿಪ್ರಸಂಗ ಮಾಡಲು ಅವಳು ಆಸ್ಥಾನಕ್ಕೆ ಓಡಿಹೋದಳು. ಕೀಚಕನು ಅವಳನ್ನು ಬೆನ್ನಟ್ಟಿ

ಹೋಗಿ ಎಲ್ಲರೆದುರಲ್ಲೇ ಅವಳನ್ನು ಕಾಲಿನಿಂದ ಒದೆದನು. ದ್ರೌಪದಿಯ ರಕ್ಷಣೆಗಾಗಿಯೆಂದು ಅದೃಶ್ಯರೂಪದಲ್ಲಿದ್ದ ರಾಕ್ಷಸನು ಕೀಚಕನನ್ನು ದೂರಕ್ಕೆ ಎಸೆದುಬಿಟ್ಟನು. ಭೀಮನು ಶಕ್ತಿ-ಯುಕ್ತಿಗಳಿಂದ ಕೀಚಕನನ್ನು ಕೊಂದನು.

**ಕುಂತಿ :** ಯದುವಂಶದ ದೊರೆಯು ತನ್ನ ಮಗಳಾದ ಪೃಥೆಯನ್ನು ತನ್ನ ಸೋದರತ್ತೆಯ ಮಗ ಕುಂತಿಭೋಜನಿಗೆ ದತ್ತುಕೊಟ್ಟನು. ಹೀಗಾಗಿ ಇವಳ ಹೆಸರು ಕುಂತಿಯಾಯಿತು. ಈಕೆ ವಸುದೇವನ ತಂಗಿ. ಈಕೆ ಅತಿಥಿಯಾಗಿ ಬಂದ ದುರ್ವಾಸನನ್ನು ಬಲು ಉತ್ಕಟತೆಯಿಂದ ಸೇವೆಗೈದಳು. ಅವನು ಸಂತುಷ್ಟನಾಗಿ ಇವರಿಗೆ ವಶೀಕರಣ ಮಂತ್ರವನ್ನಿತ್ತನು. ಇದನ್ನು ಬಳಸಿ ಅವರು ಆವಾಹನೆ ಮಾಡಿದ ದೇವತೆ ಬಂದು ಅವನಿಂದ ಇವಳಿಗೆ ಗಂಡುಮಗು ಹುಟ್ಟುವುದೆಂದು ಹೇಳಿದನು. ಚಿಕ್ಕ ವಯಸ್ಸಿನ ಕುತೂಹಲ ತಾಳದೆ ಇವಳು ಸೂರ್ಯನನ್ನು ಆವಾಹಿಸಿದಳು. ಹೀಗಾಗಿ ಈ ಕುಮಾರಿಗೆ ಮಗ ಹುಟ್ಟಿದನು. ಜನಕ್ಕೆ ಹೆದರಿ ಆ ಮಗುವನ್ನು ಹೊಳೆಯಲ್ಲಿ ತೇಲಿಬಿಟ್ಟಳು. ಈತನೇ ಕಾನೀನ ಮಗ ಕರ್ಣ. ಮುಂದೆ ಸ್ವಯಂವರದಲ್ಲಿ ಈಕೆ ಪಾಂಡುವನ್ನು ಮದುವೆಯಾದಳು. ಕಿಂದಮ ಋಷಿಯ ಶಾಪದಿಂದಾಗಿ ಪ್ರಜೋತ್ಪತ್ತಿಯನ್ನು ಮಾಡಲು ಅಸಮರ್ಥನಾಗಿದ್ದನು. ಅವನು ಮಕ್ಕಳನ್ನು ಪಡೆಯಲೆಂದು ಕುಂತಿಗೆ ಅವಳ ಮಂತ್ರವನ್ನು ಬಳಸಲು ಹೇಳಿದನು. ಈಕೆ ಯಮ, ವಾಯು ಹಾಗೂ ಇಂದ್ರ ದೇವತೆಗಳನ್ನು ಆವಾಹಿಸಿ ನಿಯೋಗದ ಮೂಲಕ ಗಂಡುಮಕ್ಕಳನ್ನು ಪಡೆದಳು. ಈ ಮಕ್ಕಳೆಂದರೆ ಯುಧಿಷ್ಠಿರ, ಭೀಮ ಹಾಗೂ ಅರ್ಜುನ. ಪಾಂಡುವು ಇನ್ನೊಂದು ಮಗು ಬೇಕೆಂದು ದೇವತೆಯನ್ನು ಆವಾಹಿಸಲು ಇವಳಿಗೆ ಹೇಳಿದನು. ಈಕೆ ಆದಕ್ಕೊಪ್ಪಲಿಲ್ಲ. ತನ್ನ ಮಂತ್ರದಿಂದ ತನ್ನ ಸವತಿಯಾದ ಮಾದ್ರಿಗೆ ನಕುಲ, ಸಹದೇವರೆಂಬ ಗಂಡುಮಕ್ಕಳು ದೊರೆಕುವಂತೆ ಮಾಡಿದಳು. ಇವಳ ಮಕ್ಕಳೆಲ್ಲರೂ ಬಲು ಪರಾಕ್ರಮಿಗಳು, ಸದಾಚಾರಿಗಳು. ಕೌರವರು ಇವರನ್ನು ಬಗೆಬಗೆಯಾಗಿ ಪೀಡಿಸಿದರು. ಆದರೆ ಇವರು ಯಶಸ್ವಿಯಾಗಿ ಸಂಕಟಗಳಿಂದ ಹೊರಬಂದರು. ಅರಗಿನ ಅರಮನೆಯಲ್ಲಿ ಪಾಂಡವರನ್ನು ಸುಡುವ ಒಳಸಂಚಿಗೆ ಇವಳೂ ಸಿಕ್ಕಿಹಾಕಿಕೊಂಡಿದ್ದಳು. ಈಕೆ ಪರೋಪಕಾರಿಯಾಗಿದ್ದಳು. ಬ್ರಾಹ್ಮಣನೊಬ್ಬನ ಮೇಲೆ ಬಂದ ಸಂಕಟವನ್ನು ಪರಿಹರಿಸಲೆಂದು ಇವಳು ಭೀಮನನ್ನು ಕಳುಹಿಸಿಕೊಟ್ಟಳು. ಆವನು ಬಕಾಸುರನನ್ನು ಕೊಂದು ಹಿಂತಿರುಗಿದನು. ಕೃಷ್ಣಾರ್ಜುನರ ಕಾಳಗದಿಂದಾಗಿ ಈಕೆ ತುಂಬ ವ್ಯಥೆಯನ್ನು ಅನುಭವಿಸಿದಳು. ಇವಳು ಕರ್ಣನ ಹುಟ್ಟಿನ ಗುಟ್ಟನ್ನು ಅವನಿಗೂ ವಿದುರನಿಗೂ ವಿವರಿಸಿ ಹೇಳಿದಳು. ಇವಳು ಈ ಗುಟ್ಟನ್ನು ವ್ಯಾಸರಿಗೂ, ಕರ್ಣ ಯುದ್ಧದಲ್ಲಿ ಮಡಿದ ತರುವಾಯ ತನ್ನೆಲ್ಲ ಮಕ್ಕಳಿಗೂ ಹೇಳಿದಳು. ಪಾಂಡವರು ವನವಾಸದಲ್ಲಿದ್ದಾಗ ವಿದುರನು ಇವಳನ್ನು ನೋಡಿಕೊಂಡನು. ಪಾಂಡವರಿಗೆ ರಾಜ್ಯ ದೊರೆತ ಬಳಿಕ ಕೆಲಕಾಲ ಅವರೊಂದಿಗೆ ಇದ್ದಳು. ತರುವಾಯ ಧೃತರಾಷ್ಟ್ರನೊಂದಿಗೆ ತಾನೂ ಕಾಡಿಗೆ ಹೋದಳು. ಕಾಡಿನ ಬೆಂಕಿಯಲ್ಲಿ ಧೃತರಾಷ್ಟ್ರ, ಗಾಂಧಾರಿಯೊಂದಿಗೆ ಇವಳೂ ಅಸುನೀಗಿದಳು. ಕುಂತಿ ಒಬ್ಬಳು ವೀರಪತ್ನಿ, ವೀರಮಾತೆಯಾಗಿ ಅಲೌಕಿಕವಾದ ಸ್ತ್ರೀಯಾಗಿದ್ದಳು. ಇವಳು ಯುಧಿಷ್ಠಿರನಿಗೆ, 'ನಿನ್ನ ಬುದ್ಧಿಯು ಧರ್ಮದಲ್ಲಿ ಸ್ಥಿರಗೊಳ್ಳಲಿ. ನಿನ್ನ ಮನಸ್ಸು ದೊಡ್ಡದಾಗಿರಲಿ' ಎಂದು ಹೇಳಿ ಹರಸಿದಳು. ಕರ್ಣನು ಪಾಂಡವರ ಸೋದರನಾಗಿದ್ದನೆಂಬ

ಸಂಗತಿಯನ್ನು ಕುಂತಿಯು ಆತ ಬದುಕಿರುವವರೆಗೂ ಹೇಳದಿದ್ದ ಕಾರಣ ಯುಧಿಷ್ಠಿರನು ಕೆರಳಿ ಹೆಣ್ಣುಜಾತಿಗೇನೆ ಶಾಪವನ್ನಿತ್ತನು. 'ಮುಹೂರ್ತಂ ಜ್ವಲಿತಂ ಶ್ರೇಯೋ ನ ಚ ಧೂಮಾಯಿತಂ ಚಿರಮ್।' ಎಂಬ ಈ ಸಂದೇಶವನ್ನು ಪಾಂಡವರನ್ನು ಯುದ್ಧೋತ್ಸುಕರನ್ನಾಗಿ ಮಾಡಲೆಂದು ಈಕೆ ನೀಡಿದಳು. ಇದು ಇವಳ ವ್ಯಕ್ತಿಮತ್ವದ ಹಿರಿಮೆಯನ್ನು ಎತ್ತಿತೋರಿಸುತ್ತದೆ.

**ಕುಂತಿಭೋಜ :** ಕುಂತಿಭೋಜ ಹಾಗೂ ವಸುದೇವನ ತಂದೆ ಶೂರ ಇವರು ಸ್ನೇಹಿತರಾಗಿದ್ದರು. ಕುಂತಿಭೋಜನಿಗೆ ಮಕ್ಕಳಾಗಿರಲಿಲ್ಲ (ಆದಿ/೬೭), ಶೂರನು ತನ್ನ ಮಗಳನ್ನು ಅವನಿಗೆ ದತ್ತುಕೊಟ್ಟನು. ಇವಳೇ ಪಾಂಡುವಿನ ಮಡದಿ ಕುಂತಿ. ಈತನ ಅತಿರಥಿಯಾದ ಒಬ್ಬ ಮಗ ಪುರುಜಿತನು ದ್ರೋಣನಿಂದ ಕೊಲ್ಲಲ್ಪಟ್ಟನೆಂಬ ಪ್ರಸ್ತಾಪ ಉದ್ಯೋಗಪರ್ವದಲ್ಲಿದೆ. ದ್ರೋಣಪರ್ವದಲ್ಲಿ ಈತನಿಗೆ ಇನ್ನೂ ಹತ್ತು ಜನ ಗಂಡು ಮಕ್ಕಳಿದ್ದುದೂ ಅವರನ್ನು ಅಶ್ವತ್ಥಾಮನು ಕೊಂದುದಾಗಿಯೂ ಉಲ್ಲೇಖವಿದೆ. ಈತ ಸ್ಯಮಂತಪಂಚಕ ದೇಶಕ್ಕೆ ಹೋದನು. ದ್ರೋಣನು ಇವನನ್ನು ಕೊಂದನು.

**ಕುಬೇರ (ವೈಶ್ರವಣ) :** ವಿಶ್ರವಸು ಮುನಿ ಹಾಗೂ ದೇವವರ್ಣಿನಿಯರ ಮಗ. ಈತನ ರೂಪ ರಾಕ್ಷಸರಂತೆಯೂ ಬಲ ಅಸುರರಂತೆಯೂ ಇದ್ದವು. ಈತನಿಗೆ ಮೂರು ಕಾಲುಗಳು. ದೊಡ್ಡ, ಕಪ್ಪನೆಯ ದೇಹ. ಭಾರವಾದ ತಲೆ. ಹಿರಿದಾದ ಗದ್ದ. ಎಂಟು ಹಲ್ಲುಗಳು. ಕುರುಚಲು ಕೂದಲುಗಳು. ಶಂಕುವಿನಂತಹ ಕಿವಿಗಳು. ಕೆಂಬಣ್ಣದ ದಪ್ಪನೆಯ ಬಾಹುಗಳು. ಈತ ಗೋದಿಬಣ್ಣದವನೂ, ಹೆದರಿಕೆ ಹುಟ್ಟಿಸುವಂಥವನೂ, ವೈವರ್ತನೂ, ಜ್ಞಾನಸಂಪನ್ನನೂ, ಹುಟ್ಟಿನಿಂದಲೇ ಜ್ಞಾನಿಯೂ ಆಗಿದ್ದನು. ಈತನ ದೇಹ ಕೆಟ್ಟದ್ದಾಗಿದ್ದ ಕಾರಣ ಈತ 'ಕುಬೇರ'ನೆನ್ನಿಸಿದನು. ಈತ ತೀರ ತನ್ನ ತಂದೆಯಂತೆಯೇ ಕಾಣುತ್ತಿದ್ದನಾದಕಾರಣ ಈತನ ಮುತ್ತಜ್ಜ ಪುಲಸ್ತ್ಯನು ಈತನ ಹೆಸರನ್ನು 'ವೈಶ್ರವಣ' ಎಂದಿಟ್ಟನು. ಅಲ್ಲದೆ ಅವನು ಈತ ಧನಾಧ್ಯಕ್ಷನಾಗಲಿರುವನೆಂದು ಕಣಿ ಹೇಳಿದ್ದನು—ಎಂದು ವಾಲ್ಮೀಕಿರಾಮಾಯಣದಲ್ಲಿ ಹೇಳಿದೆ. ಈತನ ತಾಯಿಯ ಹೆಸರನ್ನು ಬೇರೆ ಬೇರೆ ಗ್ರಂಥಗಳಲ್ಲಿ ಬೇರೆಬೇರೆಯಾಗಿ ಉಲ್ಲೇಖಿಸಲಾಗಿದೆ. ಈತನು ತಪಸ್ಸನ್ನಾಚರಿಸಿ ಬ್ರಹ್ಮದೇವನನ್ನು ಪ್ರಸನ್ನಗೊಳಿಸಿದನು. ಆತನಿಂದ ತನಗಾಗಿ ಯಕ್ಷರ ಆಧಿಪತ್ಯ, ರಾಜರಾಜತ್ವ, ಧನೇಶತ್ವ, ಅಮರತ್ವ, ರುದ್ರನ ಗೆಳೆತನ ಹಾಗೂ ನಲಕೂಬರ ಇವರನ್ನೆಲ್ಲ ಗಳಿಸಿಕೊಂಡನು. ರಾವಣನು ಲಂಕೆಯನ್ನು ಕೇಳುತ್ತಲೇ ತಂದೆಯ ಸಲಹೆಯಂತೆ ಅದನ್ನು ಅವನಿಗೆ ಕೊಟ್ಟುಬಿಟ್ಟನು. ರಾವಣನು ಈತನ ಪುಷ್ಪಕ ವಿಮಾನವನ್ನು ಅಪಹರಿಸಿದನು. ಈತ ತನ್ನ ಎಡಗಣ್ಣ ನೋಟವನ್ನು ಪಾರ್ವತಿಯತ್ತ ಬೀರುತ್ತಲೇ ಅದು ಸುಟ್ಟು ಬೂದಿಯಾಯಿತು. ಬಲಗಣ್ಣು ಕೆಂಬಣ್ಣದ್ದಾಯಿತು. ಹೀಗಾಗಿ 'ಏಕಾಕ್ಷಪಿಂಗಲ'ನೆಂಬ ಹೆಸರು ಬಂದಿತು. ಈತನಿಗೆ ನೂರಕ್ಕಿಂತಲೂ ಹೆಚ್ಚಿಗೆ ಹೆಂಡಂದಿರಿದ್ದರು. ಈತನ ನಗರದ ಹೆಸರು ಅಲಕಾವತಿ. ಈತ ಗಂಧಮಾದನ ಪರ್ವತದ ಮೇಲೆ ವಾಸವಾಗಿದ್ದನು. ಈತನ ಕಾಡಿನ ಹೆಸರು ಸೌಗಂಧಿಕ. ಮಹಾಭಾರತದಲ್ಲಿ ಹಲವೆಡೆಗಳಲ್ಲಿ ಉಲ್ಲೇಖ ಬಂದಿದೆ. ಈತನು ಗಂಧಮಾದನ ಎಂಬ ವಾನರರನ್ನು ನಿರ್ಮಿಸಿದನು. ದೂತನ ಮೂಲಕ ರಾವಣನಿಗೆ ಉಪದೇಶವನ್ನಿತ್ತನು, ಆದರೆ ಅವನಿಗದು ಸರಿಬರಲಿಲ್ಲ. ಈತನು ತುಂಬುರುವಿಗೆ ಶಾಪ-

ಉಃಶಾಪಗಳನ್ನು ನೀಡಿದ್ದನು. ಸೀತೆಯು ಅಗ್ನಿದಿವ್ಯದ ಕಾಲಕ್ಕೆ ಇವನು ರಾವುನಿಗೆ ತಿಳಿಹೇಳಿದನು. ತನ್ನ ಅವಧ್ಯವೆನ್ನಿಸಿದ ಗದೆಯನ್ನು ಹನುಮಂತನಿಗೆ ಕೊಟ್ಟನು.

**ಕುಶಿಕ :** ಕುಶನ ಮಗ. ಹೀಗಾಗಿ ಕೌಶಿಕ. ಕುಶಾಂಬು, ಕುಶಾಂಬ ಹಾಗೂ ಕುಶಾಸ್ಯ ಎಂಬ ಹೆಸರುಗಳು ಬೇರೆ ಬೇರೆ ಹೊತ್ತಗೆಗಳಲ್ಲಿ ಕಂಡುಬರುತ್ತವೆ. ಈತನ ಮಗ ಗಾಧಿ ಹಾಗೂ ಮೊಮ್ಮಗ ವಿಶ್ವಾಮಿತ್ರ. ಈತ ಮಹೋದಯಪುರ ಎಂಬ ನಗರದಲ್ಲಿದ್ದ ಕಾಲಕ್ಕೆ ಚ್ಯವನಭಾರ್ಗವ ಋಷಿಯು ಈತನ ಕುಲವನ್ನು ನಾಶಗೊಳಿಸುವ ಉದ್ದೇಶದಿಂದ ಇವನಲ್ಲಿಗೆ ಅತಿಥಿಯಾಗಿ ಬಂದನು. ಬಹಳ ಕಾಲ ಅಲ್ಲಿಯೇ ಉಳಿದನು. ಇವನು ಕುಶಿಕ ಹಾಗೂ ಆತನ ಮಡದಿಯಿಂದ ಬರಿ ಸೇವೆಯನ್ನಷ್ಟೇ ಮಾಡಿಸಿಕೊಳ್ಳದೆ ಅವರನ್ನು ಬಲುಕಠೋರವಾದ ರೀತಿಯಿಂದ ನಡೆಸಿಕೊಂಡನು, ಅವರನ್ನು ಅನ್ನಾಹಾರ ನೀರುಗಳಿಲ್ಲದೆ ಹಲವು ದಿವಸಗಳ ಕಾಲ ಇರಿಸಿದನು, ರಥಕ್ಕೆ ಹೂಡಿದನು, ಚಾಟಿಯೇಟುಗಳನ್ನು ಕೊಟ್ಟನು. ಆದರೆ ಇವರಿಬ್ಬರೂ ತುಟಿಪಿಟ್ಟೆನ್ನದೆ ಅವಿರತವಾಗಿ ಸೇವೆಗೈದು ಋಷಿಯನ್ನು ಸಂತುಷ್ಟನನ್ನಾಗಿ ಮಾಡಿದರು. ಚ್ಯವನನು ತನ್ನ ಉದ್ದೇಶವನ್ನಂತೂ ಪಕ್ಕಕ್ಕೆ ತಳ್ಳಿದನಲ್ಲದೆ ಕುಶಿಕನಿಗೆ ವರವನ್ನೂ ನೀಡಿದನು. ಕುಶಿಕನು ತನ್ನದು ಬ್ರಾಹ್ಮಣ ವಂಶವಾಗಲಿ ಎಂದು ವರವನ್ನು ಕೇಳುತ್ತಾನೆ. ಅದಕ್ಕೆ ಈತನು ಅವನ ಮೂರನೆಯ ತಲೆಮಾರು ಬ್ರಾಹ್ಮಣರದಾದೀತೆಂದು ಹೇಳಿದನು. ಆ ಪ್ರಕಾರ ವಿಶ್ವಾಮಿತ್ರನಿಗೆ ಬ್ರಾಹ್ಮಣ್ಯ ಪ್ರಾಪ್ತವಾಯಿತು. ಕುಶಿಕನು ತನಗೆ ಇಂದ್ರನಂತಹ ಮಗ ಬೇಕೆಂದು ತಪಗೈಯುತ್ತಲೇ ಗಾಧಿಯ ರೂಪದಲ್ಲಿ ಇಂದ್ರನೇ ಅವನ ಹೊಟ್ಟೆಯಿಂದ ಹುಟ್ಟಿದನು. ಕುಶಿಕನ ಮಡದಿ ಬಲುಶ್ರೇಷ್ಠಳಾದ ಪತಿವ್ರತೆ, ಸಹನೆಯುಳ್ಳವಳು, ಹಾಗೂ ಧಾರ್ಮಿಕ ಮನೋವೃತ್ತಿಯುಳ್ಳವಳಾಗಿದ್ದಳು. ಈತ ವಿಶ್ವಾಮಿತ್ರನ ಕುಲದಲ್ಲಿಯ ಒಬ್ಬ ಗೋತ್ರಕಾರನಾಗಿದ್ದಾನೆ.

**ಕೃತವರ್ಮ :** ಭೋಜವಂಶದ ಹೃದೀಕನ ಮಗ. ಈತ ಒಂದು ಅಕ್ಷೋಹಿಣಿ ಸೈನ್ಯದೊಂದಿಗೆ ಕೌರವರ ಪಾಳೆಯವನ್ನು ಸೇರಿಕೊಂಡನು. ಈತ ಪಾಂಡವರೊಂದಿಗೆ ಆವೇಶಪೂರ್ಣವಾಗಿ ಹೋರಾಡಿದನು. ಆದರೆ ಭೀಮನು ಈತನನ್ನು ಮೂರು ಬಾಣಗಳಿಂದ ಗಾಯಗೊಳಿಸಿದನು. ಮಹಾಭಾರತ ಯುದ್ಧಾನಂತರ ಬದುಕುಳಿದ ಮೂವರು ಕೌರವವೀರರಲ್ಲಿ ಈತನೂ ಒಬ್ಬ. ಯುಧಿಷ್ಠಿರನ ಅಶ್ವಮೇಧದ ಕಾಲಕ್ಕೆ ಈತ ಅರ್ಜುನನೊಂದಿಗೆ ಇದ್ದನು. ಈತನನ್ನು ಕೌರವರ ಪಕ್ಷದ ಒಬ್ಬ ಅತಿರಥಿಯೆಂದು ತಿಳಿಯಲಾಗುತ್ತಿತ್ತು. ಅಭಿಮನ್ಯುವಿನ ಮೇಲೇರಿಬಂದ ಆರು ಜನ ವೀರರಲ್ಲಿ ಈತನೊಬ್ಬ. ದ್ರೋಣಾಚಾರ್ಯರ ಮರಣಾನಂತರ ಈತ ರಣಾಂಗಣವನ್ನು ಬಿಟ್ಟು ಓಡಿಹೋದನು. ಸಾತ್ಯಕಿಯಿಂದ ಈತನಿಗೆ ಎರಡು-ಮೂರು ಬಾರಿ ಸೋಲನ್ನನುಭವಿಸಬೇಕಾಯಿತು. ನಿದ್ರೆಯಲ್ಲಿದ್ದ ಪಾಂಡವರನ್ನು ಕೊಲ್ಲುವ ಅಶ್ವತ್ಥಾಮನಿಗೆ ಈತನ ಬೆಂಬಲವಿತ್ತು. ಇವನು ಪಾಂಡವರ ಪಾಳೆಯಕ್ಕೆ ಬೆಂಕಿಯಿಟ್ಟನು. ಮೌಸಲಯುದ್ಧದಲ್ಲಿ ಸಾತ್ಯಕಿಯು ಕೈಯಿಂದ ಈತನ ಕೊಲೆಯಾಯಿತು.

**ಕೃಪ :** ಉತ್ತರ ಪಾಂಚಾಲ ದೇಶದ ಅರಸುಮನೆತನದ ಗೌತಮ ಮುನಿಯ ಮಗ ಶರದ್ವಾನನು ಒಬ್ಬ ಬಲುದೊಡ್ಡ ತಪಸ್ವಿಯಾಗಿದ್ದನು. ಈತನ ತಪಸ್ಸನ್ನು ಭಗ್ನ

ಗೊಳಿಸಲೆಂದು ಇಂದ್ರನು ಒಬ್ಬಳು ಅಪ್ಸರೆಯನ್ನು (ಮಹಾಭಾರತದಲ್ಲಿ ಈಕೆಯ ಹೆಸರು ಜಾಲವತಿ ಎಂದಿದ್ದು, ಭಾಗವತ ಹಾಗೂ ಮತ್ಸ್ಯಪುರಾಣಗಳಲ್ಲಿ ಊರ್ವಶಿಯೆಂದು ಉಲ್ಲೇಖಿಸಲಾಗಿದೆ) ಕಳಿಸಿದನು. ಅವಳ ಸೌಂದರ್ಯವನ್ನು ಕಂಡು ಶರದ್ವಾನನ ವೀರ್ಯ ಸ್ಖಲನಗೊಂಡು 'ಶರ'ವೆಂಬ ಹುಲ್ಲಿನ ಮೇಲೆ ಬಿದ್ದಿತು. ಅದರಿಂದ ಅವಳಿಗಳು ಹುಟ್ಟಿಬಂದವು. ಶಂತನುವು ಅವುಗಳನ್ನು ಸಲಹಿದನು. ಆ ಮಕ್ಕಳಿಗೆ ಕೃಪ, ಕೃಪಿ ಎಂದು ಹೆಸರಿಟ್ಟನು. ಕೃಪಿಯು ದ್ರೋಣನ ಮಡದಿ, ಅಶ್ವತ್ಥಾಮನ ತಾಯಿ. ಗೌತಮನು ಕೃಪನಿಗೆ ಶಸ್ತ್ರವಿದ್ಯೆಯನ್ನು ಕಲಿಸಿದನು. ಧೃತರಾಷ್ಟ್ರನು ತನ್ನ ಮಕ್ಕಳನ್ನು ಕೃಪಾಚಾರ್ಯ ನಿಗೆ ಒಪ್ಪಿಸಿದನು. ಈತ ಕೌರವರ ಪಕ್ಷದವನಾದರೂ ಒಳಗೊಳಗೇ ಪಾಂಡವರ ಪಕ್ಷಕ್ಕೆ ವಾಲಿದವನು. ಈತ ಕರ್ಣನಿಗೆ ಹೀನಾಯವಾಗಿ ಮಾತನಾಡುತ್ತಿದ್ದನು. ಒಂದು ಸಲ ಕರ್ಣನು ಈತನ ನಾಲಿಗೆಯನ್ನೇ ಕತ್ತರಿಸಿ ಚೆಲ್ಲುವುದಾಗಿ ಬೆದರಿಕೆ ಹಾಕಿದ್ದನು. ಕೃಪಾ ಚಾರ್ಯನು ಭಾರತ ಯುದ್ಧದಲ್ಲಿ ಅತುಲನೀಯವಾದ ಶೌರ್ಯವನ್ನು ಮೆರೆದನು. ಹಲವಾರು ಜನ ಯೋದ್ಧರನ್ನು ಯಮಲೋಕಕ್ಕೆ ಅಟ್ಟಿದನು. ಅರ್ಜುನನ ಬಾಣದಿಂದ ಗಾಯಗೊಂಡನು, ಎಚ್ಚರದಪ್ಪಿದನು. ನಿದ್ದೆಯಲ್ಲಿರುವ ಪಾಂಡವರನ್ನು ಕೊಲ್ಲುವುದಾಗಿ ಅಶ್ವತ್ಥಾಮನು ಹೇಳುತ್ತಲೇ ಇವನಿಗದು ಹಿಡಿಸದೆ ಗಾಂಧಾರಿ, ವಿದುರರ ಸಲಹೆಯನ್ನು ಪಡೆಯಲು ಆತನಿಗೆ ಹೇಳಿದನು. ಪ್ರತ್ಯಕ್ಷ ಕೃತಿಯ ಕಾಲಕ್ಕೆ ಮಾತ್ರ ಅಶ್ವತ್ಥಾಮನಿಗೆ ನೆರವಾಗನು. ಈತ ಮದುವೆಯಾಗಿರಲಿಲ್ಲ. ಕೌರವರ ಸಂಹಾರದ ತರುವಾಯ ಈತ ಗಾಂಧಾರಿಯನ್ನು ಸಮಾಧಾನಪಡಿಸಿದನು. ಮಹಾಪ್ರಸ್ಥಾನಕ್ಕೆ ಹೊರಡುವ ಮುನ್ನ ಯುಧಿಷ್ಠಿರನು ಈತನನ್ನು ಪೂಜಿಸಿದನು. ಅಲ್ಲದೆ ಪರೀಕ್ಷಿತನಿಗೆ ಗುರುವಾಗೆಂದು ಈತ ನನ್ನು ಕೋರಿದನು. ಈತನನ್ನು ರುದ್ರಗಣದ ಅವತಾರವೆಂದು ತಿಳಿಯಲಾಗುತ್ತದೆ.

**ಕೃಶ :** ಸಣಕಲು ದೇಹವನಾದ್ದರಿಂದ 'ಕೃಶ' ಎಂಬ ಹೆಸರು ಬಂದಿತು. ಈತ ಬಲು ಧಾರ್ಮಿಕಮನೋಭಾವದವನು. ಬಹಳಷ್ಟು ವೇಳೆಯನ್ನೆಲ್ಲ ತಪಸ್ಸನ್ನು ಆಚರಿಸುತ್ತಲೇ ಕಳೆಯುತ್ತಿದ್ದನು. ಈತ ಶೃಂಗಿಯ ಸ್ನೇಹಿತ. ಪರೀಕ್ಷಿತರಾಜನು ಶೃಂಗಿಯ ತಂದೆಯಾದ ಶಮೀಕ ಋಷಿಯ ಕೊರಳಿಗೆ ಸತ್ತ ಹಾವನ್ನು ಹಾಕಿದ ವಾರ್ತೆಯನ್ನು ಶೃಂಗಿಗೆ ಹೇಳಿ ದವನು ಈತನೇ.

**ಕೇಕಯ :** ಕೇಕಯವು ಬಿಯಾಸ ಹಾಗೂ ಸತಲಜ ನದಿಗಳ ನಡುವಿನ ನಾಡು. ಈ ನಾಡಿನ ದೊರೆ, ಅರಸುಕುಮಾರರು ಹಾಗೂ ಪ್ರಜೆಗಳೆಲ್ಲ ಕೇಕಯರೆನ್ನಿಸಿದ್ದರು. ಐವರು ಕೇಕಯ ಅರಸುಕುವರರು ಪಾಂಡವಪಕ್ಷದಲ್ಲಿದ್ದರು. ವಿದ ಹಾಗೂ ಅನುವಿದರು ಮಾತ್ರ ದುರ್ಯೋಧನನ ಪಕ್ಷದಿಂದ ಕಾದುತ್ತಿದ್ದರು. ಸಾತ್ಯಕಿ ಇವರಿಬ್ಬರನ್ನೂ ಕೊಂದು ಬಿಟ್ಟನು. ಭೀಷ್ಮನು ಪಾಂಡವರ ಪಕ್ಷದ ಕೇಕಯರನ್ನು ಯಮಲೋಕಕ್ಕೆ ಕಳಿಸಿದನು. ವಿರಾಟ ದೊರೆಯ ಮಡದಿಯು ಕೇಕಯ ಅರಸುಕುವರಿಯಾಗಿದ್ದವಳು.

**ಕೌರವ :** ಕುರುವಂಶದಲ್ಲಿ ಹುಟ್ಟಿದವರೆಲ್ಲರೂ ಕೌರವರು. ಹೀಗಾಗಿ, ಪಾಂಡವರೂ ಕೂಡ ಕೌರವರೇ. ಆದರೆ, ಸಾಮಾನ್ಯವಾಗಿ ಧೃತರಾಷ್ಟ್ರನ ಮಕ್ಕಳನ್ನು 'ಕೌರವ'ರೆಂದೂ, ಪಾಂಡುವಿನ ಮಕ್ಕಳನ್ನು 'ಪಾಂಡವ'ರೆಂದೂ ಗುರುತಿಸಲಾಗುತ್ತದೆ. ಮಹಾಭಾರತದಲ್ಲಿ 'ಕೌರವ' ಪದವನ್ನು ಬಳಸಿರುವುದು ಅರ್ಜುನ, ಬಭ್ರುವಾಹನ, ಭೀಮ, ಭೀಷ್ಮ, ಭೂರಿ,

ಭೂರಿಶ್ರವ, ಶಂತನು, ಧೃತರಾಷ್ಟ್ರ, ದುರ್ಯೋಧನ, ದುಶ್ಶಾಸನ, ದುರ್ಮುಖ, ಜನಮೇಜಯ, ಪಾಂಡು, ಸೋಮದತ್ತ, ಸುಹೋತ್ರ, ವಿಚಿತ್ರವೀರ್ಯ, ವಿದುರ, ಯುಧಿಷ್ಠಿರ, ಯುಯುತ್ಸು-ಇವರನ್ನು ಕುರಿತು. ಕೌರವ ಪಕ್ಷ, ಕೌರವ ವಂಶ, ಕೌರವ ಸೈನ್ಯ ಎಂಬ ಉಲ್ಲೇಖಗಳೂ ಇವೆ.

**ಕೌಶಿಕ :** ವೇದಾಧ್ಯಯನಸಂಪನ್ನನೂ ತಪೋನಿಷ್ಠನೂ ಧರ್ಮಪರಾಯಣನೂ ಆದ ಒಬ್ಬ ಋಷಿ. ಒಮ್ಮೆ ಒಂದು ಬೆಳ್ಳಕ್ಕಿಯು ಮಲ ಈತನ ಹೆಗಲ ಮೇಲೆ ಬಿದ್ದಿತು. ಈತ ಹಕ್ಕಿಯ ಮೇಲೆ ಕಣ್ಣುಹಾಕುತ್ತಲೇ ಅದು ಸತ್ತುಬಿದ್ದಿತು. ಇದನ್ನು ಕಂಡು ಈತನಿಗೆ ದುಃಖವಾಯಿತು. ಈತ ಒಂದು ಸಲ ಭಿಕ್ಷೆಗಾಗಿ ಒಂದು ಮನೆಗೆ ಹೋದನು. ಮನೆಯೊಡತಿ ಕೆಲಸಗಳಲ್ಲಿ ತೊಡಗಿದ್ದರಿಂದ ಈತನಿಗೆ ಭಿಕ್ಷೆ ಇಕ್ಕುವಲ್ಲಿ ಅವಳಿಗೆ ತಡವಾಯಿತು. ಆದಕ್ಕಾಗಿ ಅವಳು ಈತನಲ್ಲಿ ಕ್ಷಮೆ ಕೇಳಿದಳು. ಆದರೂ ಈತನ ಕೋಪ ಇಳಿಯಲಿಲ್ಲ. ಆಗ ಅವಳು, 'ನಾನೇನೂ ಬೆಳ್ಳಕ್ಕಿಯಲ್ಲ, ಒಬ್ಬಳು ಗೃಹಿಣಿ. ನಿಮಗೆ ಧರ್ಮದ ಅರ್ಥವಂತಿಕೆಯನ್ನು ಅರಿತುಕೊಳ್ಳುವುದೇ ಇದ್ದರೆ ಧರ್ಮವ್ಯಾಧನ ಬಳಿಗೆ ಹೋಗಿ' ಎಂದು ಅವನಿಗ ಹೇಳಿದಳು. ಧರ್ಮವ್ಯಾಧನು ಈತನಿಗೆ ಸೇವೆ, ತಾಯಿ-ತಂದೆಗಳ ಸೇವೆಯನ್ನು ಕುರಿತು ಉಪದೇಶವನ್ನು ನೀಡಿದನು.

**ಖಗಮ :** ತಪಸ್ವಿಯಾದ ಒಬ್ಬ ಬ್ರಾಹ್ಮಣ. ಒಂದು ಸಲ ಇವನು ಅಗ್ನಿಹೋತ್ರದಲ್ಲಿ ಮೈಮರೆತಿದ್ದನು. ಆಗ ಸಹಸ್ರಪಾದನೆಂಬ ಈತನ ಗೆಳೆಯನು ಚೇಷ್ಟೆಗೆಂದು ಒಂದು ಹುಲ್ಲಿನ ಹಾವನ್ನು ಮಾಡಿ ಈತನ ಮೈಮೇಲೆ ಎಸೆದನು. ಅದನ್ನು ಕಂಡು ಈತ ಎಚ್ಚರದೆಪ್ಪಿ ಬಿದ್ದನು. ಎಚ್ಚರ ತಿಳಿದೆದ್ದ ಮೇಲೆ 'ನೀನು ನನ್ನ ಮೈಮೇಲೆ ಎಸೆದ ನಂಜಿಲ್ಲದ ಹಾವಾಗು' ಎಂದು ಅವನನ್ನು ಶಪಿಸಿದನು. ಶಾಪವನ್ನು ಕೇಳಿ ಸಹಸ್ರಪಾದನಿಗೆ ಬಲು ಕೆಡಕೆನಿಸಿತು. ಅದನ್ನು ಕಂಡು ಖಗಮನು, 'ಭೃಗುಕುಲದಲ್ಲಿ ಹುಟ್ಟಿದವನಾದ ರುರುವಿನ ದರ್ಶನದಿಂದ ನಿನಗೆ ಶಾಪಮುಕ್ತಿ ದೊರಕಲಿದೆ' ಎಂದು ಅವನಿಗೆ ಉಃಶಾಪವನ್ನಿತ್ತನು. ಶಾಪದಿಂದಾಗಿ ಸಹಸ್ರಪಾದನು ಪೆರೆಹುಳುವಾಗಿ ಹುಟ್ಟಿಬಂದನು.

**ಗಂಗೆ :** ಗಂಗೆಯು ಅಗ್ನಿಯ ಬೀಜವನ್ನು ಧರಿಸಿ ಸ್ಕಂದನಿಗೆ ಜನ್ಮವಿತ್ತಳು. ಇವಳು ಮಹಾಸಾಗರದ ಮಡದಿಯಾಗಿದ್ದು ವೇದದ ಬಲಬದಿಯಾಗಿರುವಳು. ಗಂಗೆಯ ಮಹಾತ್ಮೆಯನ್ನು ಪುರಾಣಗಳಲ್ಲಿ ಬಲು ವಿಸ್ತಾರದಿಂದ ಬಣ್ಣಿಸಲಾಗಿದೆ. ಋಗ್ವೇದದಲ್ಲಿ ಇವಳ ಪ್ರಸ್ತಾಪವಿದೆ. ಇವಳೊಬ್ಬಳು ಸ್ವರ್ಗೀಯ ದೇವತೆ ಎನ್ನಿಸಿದ್ದಾಳೆ. ಒಂದು ಸಲ ದೇವತೆಗಳೆಲ್ಲ ಬ್ರಹ್ಮದೇವನಲ್ಲಿಗೆ ಹೋದರು. ಅವರೊಂದಿಗೆ ಗಂಗೆ ಹಾಗೂ ಇಕ್ಷ್ವಾಕುಕುಲದಲ್ಲಿ ಹುಟ್ಟಿದವನಾದ ಮಹಾಭಿಷರೂ ಇದ್ದರು. ಗಾಳಿಯಿಂದ ಇವಳ ಬಟ್ಟೆಗಳು ಹಾರಾಡಿದಾಗ ದೇವತೆಗಳೆಲ್ಲ ತಲೆತಗ್ಗಿಸಿದರು. ಆದರೆ ಮಹಾಭಿಷನು ಮಾತ್ರ ಯಾವುದೇ ಸಂದೇಹವಿಲ್ಲದೆ ನೆಟ್ಟನೋಟದಿಂದ ಇವಳತ್ತ ನೋಡುತ್ತ ನಿಂತನು. ಹೀಗಾಗಿ ಬ್ರಹ್ಮದೇವನು ಈತನಿಗೆ, 'ನೀನು ಮೃತ್ಯುಲೋಕದಲ್ಲಿ ಹುಟ್ಟಿಬರಲಿರುವೆ. ಗಂಗೆ ನಿನ್ನ ಮಡದಿಯಾಗುವಳು. ಅಲ್ಲಿ ಅವಳು ನಿನಗೆ ಹಿಡಿಸದಂತಹ ಕೃತ್ಯಗಳನ್ನು ಎಸಗುವಳು. ಇದನ್ನು ಕಂಡು ನಿನಗೆ ಕೋಪ ಬಂದ ದಿನವೇ ನಿನಗೆ ಮುಕ್ತಿ' ಎಂದು ಶಾಪವಿತ್ತನು. ಈ ಶಾಪವನ್ನು ಕೇಳಿ ಮಹಾಭಿಷನು ಪ್ರತೀಪನ ಹೊಟ್ಟೆಯಲ್ಲಿ ಹುಟ್ಟಿಬರಲು ನಿರ್ಧರಿಸಿದನು. ಅವನು ತನ್ನ

ಬಯಕೆಯನ್ನು ಗಂಗೆಗೆ ಹೇಳಿದನು. ಅದರೊಟ್ಟಿಗೆ ಒಂದು ಶರತ್ತನ್ನೂ ಮುಂದಿಟ್ಟನು. ಅದೇನೆಂದರೆ ಹುಟ್ಟಿದ ಒಂದೊಂದು ಮಗುವನ್ನು ಇವಳು ನೀರಿಗೆ ಎಸೆಯಬೇಕೆಂಬುದು. ಇವಳೂ ಕೂಡ ಒಂದನ್ನುಳಿದು ಎಲ್ಲ ಮಕ್ಕಳನ್ನೂ ನೀರಿಗೆಸೆಯಲು ಒಪ್ಪಿಕೊಂಡಳು. ಅಷ್ಟವಸುಗಳೂ ಕೂಡ ತಮ್ಮೆಲ್ಲರ ಅಂಶಗಳನ್ನು ಹೊಂದಿದ್ದ ಒಂದು ಮಗುವನ್ನು ಜೀವದಿಂದಿರಿಸಲು ಒಪ್ಪಿಕೊಂಡರು. ಮಹಾಭಿಷನು ಪ್ರತೀಪನ ಹೊಟ್ಟೆಯಲ್ಲಿ ಜನ್ಮತಳೆದು ಬಂದನು. ಈತನ ಹೆಸರು ಶಂತನು. ಇವನೊಂದಿಗೆ ಗಂಗೆಯು ಮದುವೆ ನೆರವೇರಿತು. ಮದುವೆಗೆ ಮುಂಚೆಯೇ ಈಕೆ ತನ್ನ ಮಾವನಿಗೊಂದು ಶರತ್ತನ್ನು ಒಡ್ಡಿದ್ದಳು. ಅದೇನೆಂದರೆ, 'ಮದುವೆಯ ತರುವಾಯ ನಾನು ಏನನ್ನೇ ಮಾಡಿದರೂ ನನ್ನ ಗಂಡನು ಅದಕ್ಕೆ ತಡೆಯನ್ನುಂಟುಮಾಡತಕ್ಕದ್ದಲ್ಲ. ಅವನು ಈ ಶರತ್ತನ್ನು ಪಾಲಿಸುವವರೆಗೆ ಮಾತ್ರ ನನ್ನ ಸಹವಾಸ ಆತನಿಗೆ ಲಭಿಸೀತು'—ಎಂಬುದು. ಶಂತನುವಿನಿಂದ ಇವಳಿಗೆ ಎಂಟು ಜನ ಗಂಡುಮಕ್ಕಳಾದರು. ಅವನು ಎಂಟನೆಯ ಮಗುವನ್ನು ನೀರಿನಲ್ಲಿ ಮುಳುಗಿಸಲು ಒಪ್ಪಿಗೆಯನ್ನೀಯಲಿಲ್ಲ. ಹೀಗಾಗಿ ಈಕೆ ಅವನನ್ನು ತೊರೆದು ಸ್ವರ್ಗಲೋಕಕ್ಕೆ ತೆರಳಿದಳು. ಈ ಎಂಟನೆಯ ಮಗನೇ ಭೀಷ್ಮನು. ಗಂಗೆಯು ಈತನನ್ನು ತನ್ನ ಜೊತೆಗೆ ಸ್ವರ್ಗಕ್ಕೆ ಕರೆದೊಯ್ದು ಎಲ್ಲ ಬಗೆಯ ವಿದ್ಯೆಗಳನ್ನು ಹೇಳಿಕೊಟ್ಟಳು. ಶಂತನು ಬೇಟೆಗೆಂದು ಬಂದಾಗ ಅವನಿಗೆ ಈತನನ್ನು ಒಪ್ಪಿಸಿದಳು.

**ಗಂಡಾ :** ಪಶುಸಖನ ಮಡದಿ. ಸಪ್ತರ್ಷಿಗಳ ದಾಸಿ. ಇವಳನ್ನು ಚಂಡಾಯೆಂದೂ ಕರೆಯಲಾಗುತ್ತದೆ. ಇವಳು ವೃಷದರ್ಭಿಗೆ ಪ್ರತಿಗ್ರಹದೋಷವನ್ನು ತೋರಿಸಿಕೊಟ್ಟು ಹೆದರಿಕೆಯನ್ನು ಹುಟ್ಟಿಸಿದಳು. ವಸಿಷ್ಠನ ಕಮಲ ಕಳವಾದಾಗ ಆಣೆಮಾಡಿ ಹೇಳಿದವರಲ್ಲಿ ಇವಳೂ ಒಬ್ಬಳು.

**ಗಾಧಿ :** ಕಾನ್ಯಕುಬ್ಜ ದೇಶದ ದೊರೆ ಕುಶಿಕನು ಈತನ ಮಗನು, ಹಾಗೂ ವಿಶ್ವಾಮಿತ್ರನ ತಂದೆ. ಇವನ ಮಗಳಾದ ಸತ್ಯವತಿಯೊಂದಿಗೆ ಮದುವೆಯಾಗಲೆಂದು ಋಚೀಕನು ವರುಣನನ್ನು ಪ್ರಸನ್ನಗೊಳಿಸಿಕೊಂಡು ಅವನಿಂದ ಪಡೆದ ಒಂದು ಸಾವಿರ ಕಪ್ಪು ಕಿವಿಗಳ ಕುದುರೆಗಳನ್ನು ಈತನಿಗೆ ಕನ್ಯಾಶುಲ್ಕವಾಗಿ ಕೊಟ್ಟನು. ಇವನು ವಿಶ್ವಾಮಿತ್ರನಿಗೆ ರಾಜ್ಯಪದವನ್ನು ಕೊಟ್ಟು ಸ್ವರ್ಗಾರೋಹಣವನ್ನು ಕೈಕೊಂಡನು.

**ಗಾಂಧಾರಿ :** ಗಾಂಧಾರ ದೇಶದ ರಾಜ ಸುಬಲನ ಕನ್ಯೆ. ಶಕುನಿಯ ಸೋದರಿ. ಧೃತರಾಷ್ಟ್ರನ ಮಡದಿ. ಕೌರವರ ತಾಯಿ. ಇವಳಿಗೆ ನೂರು ಜನ ಗಂಡುಮಕ್ಕಳಾಗಲೆಂದು ಶಂಕರ ಹಾಗೂ ವ್ಯಾಸರು ವರಗಳನ್ನಿತ್ತರು.

ಆರಾಧ್ಯಂ ವರದಂ ದೇವಂ ಭಗನೇತ್ರಹರಂ ಹರಮ್ ।
ಗಾಂಧಾರೀ ಕಿಲ ಪುತ್ರಾಣಾಂ ಶತಂ ಲಭೇ ವರಂ ಶುಭಾ ॥ (ಆದಿ : ೧೦೯/೯, ೧೦)

ತೋಷಯಾಮಾಸ ಗಾಂಧಾರೀ ವ್ಯಾಸಸ್ತಸ್ಯೈ ವರಂ ದದೌ ।
ಸಾ ವವ್ರೇ ಸದೃಶಂ ಭರ್ತುಃ ಪುತ್ರಾಣಾಂ ಶತಮಾತ್ಮನಃ ॥ (ಆದಿ : ೧೧೪/೮)

ಗಾಂಧಾರಿಯು ಮಹಾಪತಿವ್ರತೆಯಾಗಿದ್ದಳು. ಧೃತರಾಷ್ಟ್ರನು ಕುರುಡನಾದ್ದರಿಂದ ಈಕೆ ತಾನೂ ಕೂಡ ಬಾಳಿಡೀ ಕಣ್ಣಿಗೆ ಬಟ್ಟೆಯನ್ನು ಕಟ್ಟಿಕೊಂಡಿದ್ದಳು. ಇವಳಿಗೆ ನೂರು

ಜನ ಗಂಡುಮಕ್ಕಳು ಹಾಗೂ ಒಬ್ಬಳು ಮಗಳಿದ್ದಳು. ದುರ್ಯೋಧನನು ಪಾಂಡವರ ಹಗೆಯನ್ನು ಕಟ್ಟಿಕೊಳ್ಳುವುದು ಬೇಡವೆಂದು ಇವಳು ಅವನಿಗೆ ಎಷ್ಟೇ ಹೇಳಿದರೂ ಆತ ಕೇಳಲಿಲ್ಲ. ಕೌರವರ, ದುರ್ಯೋಧನನ ಸಾವಿನ ತರುವಾಯ ಯುಧಿಷ್ಠಿರನು ಈಕೆಯನ್ನು ಕಾಣಲು ಬಂದಾಗ ಅವನನ್ನು ಶಪಿಸಲು ಹವಣಿಸಿದಳು. ಹಾಗೆ ಮಾಡುವುದು ತಪ್ಪೆಂದು ವ್ಯಾಸನು ಅವಳನ್ನು ಮನಗಾಣಿಸಿದನು. ಇವಳು ಶ್ರೀಕೃಷ್ಣನಿಗೆ ಮಾತ್ರ ಕಷ್ಟಕರವಾದ ಶಾಪವನ್ನಿತ್ತಳು. ದುರ್ಯೋಧನನು ಯುದ್ಧಕ್ಕೆ ಹೊರಡುವ ಮುನ್ನ ಇವಳನ್ನು ವಂದಿಸಿ ಹರಕೆಯನ್ನು ಕೇಳಲು ಬರುತ್ತಿದ್ದನು. ಆಗ ಈಕೆ 'ಯತೋ ಧರ್ಮಸ್ತತೋ ಜಯಃ' ಎಂದೆನ್ನುತ್ತಿದ್ದಳು. ಇವಳ ನೋಟದಲ್ಲಿ ವಿಲಕ್ಷಣವಾದ ತೇಜಸ್ಸು ಇತ್ತು. ಇವಳು ಗಂಡು ಮಕ್ಕಳ ಸಾವಿನಿಂದ ನೊಂದ ದ್ರೌಪದಿ, ಕುಂತಿಯರನ್ನು ಸಮಾಧಾನಪಡಿಸಿದಳು. ಈಕೆ ಧೃತರಾಷ್ಟ್ರನೊಡನೆ ಪಾಂಡವರಲ್ಲಿಗೆ ಇರಲು ಹೋದಳು. ಯುಧಿಷ್ಠಿರನು ಇವಳನ್ನು ಬಲು ಚೆನ್ನಾಗಿ ನೋಡಿಕೊಂಡನು. ಭೀಮ ಮಾತ್ರ ಚುಚ್ಚುಮಾತುಗಳನ್ನಾಡುತ್ತಿದ್ದನು. ಧೃತರಾಷ್ಟ್ರ, ಕುಂತಿ ಹಾಗೂ ವಿದುರರೊಂದಿಗೆ ಇವಳೂ ವನವಾಸವನ್ನು ಸ್ವೀಕರಿಸಿದಳು. ಧೃತರಾಷ್ಟ್ರನೊಂದಿಗೆ ದೇಹತ್ಯಾಗವನ್ನು ಮಾಡಿದಳು. ಇವಳಿಗೆ ಕುಬೇರಲೋಕ ಪ್ರಾಪ್ತವಾಯಿತು.

೧

**ಗಾಲವ:** ವಿಶ್ವಾಮಿತ್ರನ ಒಬ್ಬ ಶಿಷ್ಯನಿವ. ಗುರುವಿನ ಸೇವೆಯನ್ನು ಬಲು ಉತ್ಕಟತೆಯಿಂದ ಕೈಕೊಂಡನು. ಅವನ ಕೃಪೆಗೆ ಪಾತ್ರನಾದನು. ಈತನ ಒತ್ತಾಯದಿಂದಾಗಿ ವಿಶ್ವಾಮಿತ್ರನು ಗುರುದಕ್ಷಿಣೆಯೆಂದು ಎಂಟು ನೂರು ಕಪ್ಪು ಕಿವಿಗಳ ಕುದುರೆಗಳನ್ನು ಕೊಡಲು ಹೇಳಿದನು. ಈತ ಅಷ್ಟೊಂದು ಸಮರ್ಥನಾಗಿರಲಿಲ್ಲ. ಹೀಗಾಗಿ ವಿಷ್ಣುವನ್ನು ಮೊರೆಹೊಕ್ಕನು. ವಿಷ್ಣುವು ಈತನ ಭಕ್ತಿಗೆ ಮೆಚ್ಚಿ ಗರುಡನಿಗೆ ಈತನ ಬಯಕೆಯನ್ನು ಈಡೇರಿಸುವಂತೆ ಹೇಳಿದನು. ಗರುಡನು ಈತನನ್ನು ಯಯಾತಿಯ ಬಳಿಗೆ ಕರೆದೊಯ್ದನು. ಆದರೆ ಆಗ ಯಯಾತಿಗೂ ಈ ಬಯಕೆಯನ್ನು ಈಡೇರಿಸುವುದು ಸಾಧ್ಯವಿರಲಿಲ್ಲ. ಆದರೂ ಯಯಾತಿಯು ತನ್ನ ಮಗಳಾದ ಮಾಧವಿಯು ಹಾಗೂ ಅವಳ ಮಗನ ಮೇಲೆ ಹಕ್ಕನ್ನುಳಿಸಿಕೊಂಡು ಕುದುರೆಗಳನ್ನು ಕೊಟ್ಟನು. ಅದರಿಂದಾಗಿ ಗಾಲವನಿಗೆ ತನ್ನ ಗುರುದಕ್ಷಿಣೆಯನ್ನು ಸಲ್ಲಿಸಲು ಸಾಧ್ಯವಾಯಿತು.

೨

ವಿಶ್ವಾಮಿತ್ರನ ಒಬ್ಬ ಮಗನ ಹೆಸರೂ ಗಾಲವನೆಂದು. ಬರ ಬಿದ್ದಿದ್ದರೂ ವಿಶ್ವಾಮಿತ್ರ ತನ್ನ ಮಡದಿ-ಮಕ್ಕಳ ಚಿಂತೆಯಿಲ್ಲದೆ ತಪಸ್ಸಿಗೆಂದು ಹೊರಟುಹೋದನು. ಅವನ ಮಡದಿಯು ಬಲು ಕಷ್ಟದಿಂದ ತನ್ನ ಮಕ್ಕಳನ್ನು ಬದುಕಿಸಲು ಹೆಣಗಿದಳು. ಆದರೆ ಹೊಟ್ಟೆಗಿಲ್ಲದೆ ಮಕ್ಕಳು ಹಸಿವೆಯಿಂದ ತೊಳಲಾಡತೊಡಗಿದವು. ಹೀಗಾಗಿ ಅವಳು ಅವರನ್ನು ಮಾರಿಬಿಡಲು ಯೋಚಿಸಿದಳು. ಸತ್ಯವ್ರತನು ಅವಳ ಕುಶಲೋಪರಿಗಳನ್ನು ಕೇಳಿಕೊಂಡು ವಿಶ್ವಾಮಿತ್ರ ಮರಳಿ ಬರುವವರೆಗೂ ತುಸು ಮಟ್ಟಿಗೆ ಅವರ ಹೊಟ್ಟೆ ಹೊರೆಯುವ ವ್ಯವಸ್ಥೆಯನ್ನು ಮಾಡಿದನು.

**ಗೃತ್ಸಮದ :** ಇಂದ್ರನ ಪ್ರಿಯ ಸಖ. ಬೃಹಸ್ಪತಿಗೆ ಸಮನಾದ ಒಬ್ಬ ಶ್ರೇಷ್ಠ ಮುನಿ. ಋಗ್ವೇದದಲ್ಲಿ ಈತನ ಉಲ್ಲೇಖ ಮೇಲಿಂದಮೇಲೆ ಬರುತ್ತದೆ. ಋಗ್ವೇದ ದಲ್ಲಿಯ ಎರಡನೆಯ ಮಂಡಲದ ಋಚೆಗಳು ಗಾರ್ತ್ಸಮದ ಋಚೆಗಳೆಂದು ತಿಳಿಯಲ್ಪಡು ತ್ತವೆ. ಈತ ಭೃಗುಕುಲದ ಗೋತ್ರಕಾರನೂ ಮಂತ್ರಕಾರನೂ ಆಗಿದ್ದನು. ಒಂದು ಸಲ ಇಂದ್ರನ ಸಹಸ್ರವಾರ್ಷಿಕ ಸತ್ರಕ್ಕೆ ಚಾಕ್ಷುಷಮನುಪುತ್ರನಾದ ವರಿಷ್ಠನು ಬಂದಾಗ ಗೃತ್ಸಮದನು ಸಾಮವೇದವನ್ನು ಅಶುದ್ಧವಾದ, ತಪ್ಪುತಪ್ಪಾದ ರೀತಿಯಲ್ಲಿ ಉಚ್ಚರಿ ಸುವುದನ್ನು ಕಂಡು ಅವನಿಗೆ ಶಾಪವಿತ್ತನು. ಶಂಕರನ ಕೃಪೆಯಿಂದಾಗಿ ಈತನಿಗೆ ಶಾಪ ಮುಕ್ತಿ ಸಿಕ್ಕಿತು. ಈತ ಒಬ್ಬ ತೇಜಸ್ವಿಯಾದ ಮಹರ್ಷಿ ಎನ್ನಿಸಿದ್ದನು. ನಿಷ್ಠೆಯಿಂದ ಬ್ರಹ್ಮಚರ್ಯವ್ರತವನ್ನು ಪಾಲಿಸುತ್ತಿದ್ದನು. ಈತನು ತನ್ನ ತಪಸ್ಸಿನಿಂದಾಗಿ ಕೆಲಕಾಲ ಇಂದ್ರಪದವನ್ನೂ ಗಳಿಸಿದ್ದನು. ಈತನಿಗೆ ಸುಚೇತಾ ಎಂಬ ಹೆಸರಿನ ಮಗನಿದ್ದನು.

೧

**ಗೌತಮ :** ಬೃಹಸ್ಪತಿಯ ಶಾಪಕ್ಕೀಡಾಗಿ ಹುಟ್ಟುಕುರುಡನಾದ ಆಂಗಿರಸ ಕುಲೋತ್ಪನ್ನನಾದ ದೀರ್ಘತಮ ಹಾಗೂ ಪ್ರದ್ವೇಷಿಯರ ಮಗ. ವೈವಸ್ವತ ಮನ್ವಂ ತರದ ಸಪ್ತರ್ಷಿಗಳಲ್ಲಿ ಒಬ್ಬ. ಬ್ರಹ್ಮದೇವನ ಮಾನಸಕನ್ಯೆ ಅಹಲ್ಯೆ ಈತನ ಮಡದಿ. ಇವಳಿಂದ ಹುಟ್ಟಿದ ಈತನ ಮಗ ಶತಾನಂದ ಜನಕರಾಜನ ಪುರೋಹಿತನಾಗಿದ್ದನು. ಇವನಿಗೆ ಉತ್ತಂಕನೆಂಬ ಒಬ್ಬ ಶಿಷ್ಯನಿದ್ದನು. ಅವನನ್ನೇ ಈತ ತನ್ನ ಅಳಿಯನನ್ನಾಗಿ ಮಾಡಿಕೊಂಡನು. ಮಿಥಿಲೆಯ ಬಳಿಯ ಕಾಡಿನಲ್ಲಿ ಪಾರಿಯಾತ್ರ ಪರ್ವತದ ಸಾನ್ನಿಧ್ಯ ದಲ್ಲಿ ಈತನ ಆಶ್ರಮವಿತ್ತು. ಅಲ್ಲಿಯೇ ಅರವತ್ತುಸಾವಿರ ವರ್ಷಗಳ ಕಾಲ ತಪವನ್ನು ಆಚರಿಸಿದನಂತೆ. ಈತನ ತಪಸ್ಸಿನಿಂದ ಸಂತುಷ್ಟನಾಗಿ ಶಂಕರನು ಇವನಿಗೆ ಗಂಗೆಯನ್ನು ಕೊಟ್ಟನು. ಹೀಗಾಗಿ ಗಂಗೆಯು ಗೌತಮಿ ಎಂದೂ ಹೆಸರಾಗಿದ್ದಾಳೆ. ಬರಬಿದ್ದಾಗ ಅವಳು ಋಷಿಗೆ ಅನ್ನನೀರುಗಳನ್ನಿತ್ತು ಕಾಪಾಡಿದಳು. ಇವನೊಬ್ಬ ಧರ್ಮಶಾಸ್ತ್ರಕಾರನೆನಿಸಿದ್ದನು. ಗೌತಮಸ್ಮೃತಿ ಗ್ರಂಥವು ಹೆಸರಾದುದು. ಇದಲ್ಲದೆ ಈತ ಆಸ್ತಿಕಸೂತ್ರ, ಪಿತೃಮೇಧ ಸೂತ್ರ, ದಿನಚಂದ್ರಿಕಾ, ಗೌತಮೀಶಿಕ್ಷಾ, ನ್ಯಾಯಸೂತ್ರ ಮೊದಲಾದ ಹಲವಾರು ಗ್ರಂಥಗಳ ಕರ್ತನಾಗಿದ್ದಾನೆ.

೨

ವೇದಗಳ ಕಿಂಚಿತ್ತೂ ಜ್ಞಾನವಿಲ್ಲದ ಒಬ್ಬ ದುರಾಚಾರಿ, ಕೃತಘ್ನ ಹಾಗೂ ನೀಚ ಪ್ರವೃತ್ತಿಯ ಬ್ರಾಹ್ಮಣ. ಈತನಿಗೆ ಉಪಕಾರವನ್ನು ಮಾಡಿದ ರಾಜಧರ್ಮನ ಜೀವಕ್ಕೇನೆ ಸಂಚಕಾರವನ್ನು ತಂದವನು. ಒಬ್ಬ ಶೂದ್ರನು ಕೊಟ್ಟ ದುಷ್ಟ ವಿಧವೆಯಾದ ಹೆಣ್ಣಿ ನೊಂದಿಗೆ ಈತ ಸಂಬಂಧವನ್ನು ಹೊಂದಿದ್ದನು. ಇವನಿಂದ ಅವಳಿಗೆ ಹಲವು ಜನ ಮಕ್ಕಳು ಹುಟ್ಟಿದವು.

ನೋಡಿ : ಶಾಪ ಕ್ರ. ೧೧೪–ಬ್ರಹ್ಮದೇವ > ರಾಜಧರ್ಮ ಹಾಗೂ ಶಾಪ ಕ್ರ. ೧೧೫ —ದೇವ > ಗೌತಮ.

**ಚಿತ್ರಸೇನ:** ವಿಶ್ವಾವಸು ಎಂಬ ಗಂಧರ್ವನ ಮಗ. ಇವನೊಬ್ಬ ದೇವರ್ಷಿ. ಅರ್ಜುನ ದೇವಲೋಕಕ್ಕೆ ಬಂದಾಗ ಈತನು ಅವನಿಗೆ ಗಂಧರ್ವವಿದ್ಯೆಗಳನ್ನು ಕಲಿಸಿದನು. ಇಂದ್ರನ ಅಪ್ಪಣೆಯ ಮೇರೆಗೆ ಊರ್ವಶಿಯನ್ನು ಅರ್ಜುನನಲ್ಲಿಗೆ ಕಳಿಸಿಕೊಟ್ಟನು. ದುರ್ಯೋಧನನು ವನವಾಸಿಗಳಾದ ಪಾಂಡವರನ್ನು ಹೀನಾಯಮಾಡಲೆಂದು ಘೋಷಯಾತ್ರೆಯ ನಿಮಿತ್ತವಾಗಿ ಅತ್ತ ಹೊರಟಾಗ ಈತನು ಇಂದ್ರನ ಹೇಳಿಕೆಯ ಮೇರೆಗೆ ಅವನ ಮೇಲೇರಿಹೋಗಿ ಅವನನ್ನು ಸೋಲಿಸಿದನು. ಅಲ್ಲದೆ ದುರ್ಯೋಧನನನ್ನು ಸೆರೆಹಿಡಿದಿಟ್ಟನು. ಈತನು ಕರ್ಣನೊಂದಿಗೆ ಕಾದಾಡುತ್ತಲೇ ಅವನು ಓಟಕಿತ್ತನು. ಈತ ಅರ್ಜುನನಿಂದ ಮಾತ್ರ ಸೋಲನ್ನನುಭವಿಸಿದನು. ಚಿತ್ರಸೇನನು ಯುಧಿಷ್ಠಿರನ ಅಶ್ವಮೇಧದ ಕಾಲಕ್ಕೆ ಹಾಜರಿದ್ದನು.

**ಚ್ಯವನಭಾರ್ಗವ:** ಭೃಗು ಋಷಿಯ ಮಡದಿ ಪುಲೋಮಾ. ಭೃಗುವಿನ ವೀರ್ಯದಿಂದ ಅವಳ ಹೊಟ್ಟೆಯಲ್ಲಿ ಬಸಿರು ಹುಟ್ಟಿತು. ಋಷಿಯು ಜಲಾಶಯಕ್ಕೆ ಸ್ನಾನಕ್ಕೆಂದು ಹೋದಾಗ ಈತನ ಆಶ್ರಮದಲ್ಲಿ ಪುಲೋಮ ಎಂಬ ರಾಕ್ಷಸನು ಬಂದನು. ಪುಲೋಮಾಳ ಚೆಲುವಿಗೆ ಮನಸೋತನು. ಅವನು ಅವಳನ್ನು ಓಡಿಸಿಕೊಂಡು ಒಯ್ದನು. ರಾಕ್ಷಸನ ಹೆದರಿಕೆಯಿಂದಾಗಿ ಅವಳು ದಾರಿಯಲ್ಲಿಯೇ ಹೆತ್ತಳು. ಹೀಗಾಗಿ ಮಗುವಿಗೆ 'ಚ್ಯವನ'ನೆಂಬ ಹೆಸರು ಬಂದಿತು. ಚ್ಯವನನ ತೇಜಸ್ಸಿನಿಂದಾಗಿ ರಾಕ್ಷಸ ಸುಟ್ಟು ಬೂದಿಯಾದನು. ಪುಲೋಮಾ ಇವಳು ಮಗುವನ್ನೆತ್ತಿಕೊಂಡು ಆಶ್ರಮಕ್ಕೆ ಮರಳಿದಳು. ಚ್ಯವನ ವೇದವೇದಾಂಗಗಳಲ್ಲಿ ತುಂಬ ಪರಿಣತನಾಗಿದ್ದನು. ಈತನು ಉಗ್ರವಾದ ತಪಸ್ಸನ್ನು ಗೈದನು. ಮೈಮೇಲೆಲ್ಲ ಹುತ್ತ ಬೆಳೆಯಿತು. ಇಷ್ಟಾದರೂ ತಪಸ್ಸಿನಲ್ಲಿ ಮೈಮರೆತ ಈತನಿಗೆ ಅದರ ಪರಿವೆಯೇ ಇರಲಿಲ್ಲ. ಶರ್ಯಾತಿ ವೈವಸ್ವತ ಮನುವಿನ ರೂಪವತಿಯಾದ ಮಗಳು ಸುಕನ್ಯಾ ಎನ್ನುವವಳು ತನ್ನ ಸಖಿಯರೊಂದಿಗೆ ಹುತ್ತದ ಹತ್ತಿರಕ್ಕೆ ಬಂದಳು. ಒಳಗೇನೋ ಹೊಳಪುಳ್ಳ ವಸ್ತುವನ್ನು ಕಂಡಳು. ಅದೇನೆಂಬುದನ್ನು ಕಂಡುಕೊಳ್ಳಲೋಸುಗ ಅವಳು ಹುತ್ತಿನಲ್ಲಿ ಮುಳ್ಳು ಚುಚ್ಚಿದಳು. ಅದರಿಂದಾಗಿ ಋಷಿಯ ಕಣ್ಣುಗುಡ್ಡೆಗಳು ಒಡೆದವು. ಋಷಿಯು ಕೋಪದಿಂದ ಸಿಡಿದೆದ್ದು ಸೈನ್ಯದೊಂದಿಗಿದ್ದ ರಾಜನಿಗೆ ಮಲಮೂತ್ರಗಳಾಗದಂತೆ ಮಾಡಿದನು. ರಾಜನು ಅವನನ್ನು ಮೊರೆಹೊಕ್ಕನು. ಚ್ಯವನನು ಅರಸುಗುವರಿಯನ್ನು ಮಡದಿಯಾಗಿ ಕೊಡೆಂದನು. ಈತ ಮುಪ್ಪಿನವನಾಗಿದ್ದರೂ ಉಪಾಯವಿಲ್ಲದೆಯೇ ದೊರೆಯು ತನ್ನ ಮಗಳು ಸುಕನ್ಯೆಯನ್ನು ಈತನಿಗೆ ಮದುವೆ ಮಾಡಿ ಕೊಟ್ಟನು. ಅವಳೊಮ್ಮೆ ಅಶ್ವಿನೀಕುಮಾರರ ಕಣ್ಣಿಗೆ ಬಿದ್ದಳು. ತಮ್ಮೊಂದಿಗೆ ಬರುವಂತೆ ಅವರು ಕೇಳಿದರು. ಅವಳು ತನ್ನ ಪಾವಿತ್ರ್ಯದಿಂದ ಅವರ ಕಣ್ಣು ಕುರುಡಾಗುವಂತೆ ಮಾಡಿದಳಲ್ಲದೆ ತನ್ನ ಗಂಡನಿಗೆ ಯೌವನವನ್ನು ತಂದುಕೊಟ್ಟಳು. ಚ್ಯವನನು ಈ ಉಪಕಾರವನ್ನು ನೆನೆಯಲೆಂದು ಮಹಾವನ ಅರಮನೆಗೆ ಹೋಗಿ ಯಜ್ಞವನ್ನು ಮಾಡಿದನು. ಚ್ಯವನನು ಪ್ರಯಾಗ ಕ್ಷೇತ್ರದಲ್ಲಿ ಹಗಲಿರುಳು ನೀರಲ್ಲಿ ನಿಂತು ಉದವಾಸ ಎಂಬ ವ್ರತವನ್ನು ಆಚರಿಸಿದನು. ಒಂದು ಸಲ ಮೀನುಗಾರರಿಗೆ ಅವರ ಜಾಲದಲ್ಲಿ ಮೀನುಗಳೊಂದಿಗೆ ಒಬ್ಬ ಋಷಿಯೂ ಸಿಕ್ಕಿಹಾಕಿಕೊಂಡುದನ್ನು ಕಂಡು ಅವರೆಲ್ಲ ಗಾಬರಿಗೊಂಡರು. ಅವರು ನಹುಷನಲ್ಲಿಗೆ ಹೋಗಿ

ನಡೆದುದನ್ನೆಲ್ಲ ಆ ದೊರೆಗೆ ಹೇಳಿದರು. ನಹುಷನು ಚ್ಯವನನನ್ನು ಷೋಡಶೋಪಚಾರ ಗಳಿಂದ ಪೂಜಿಸಿ ಅವನು ಬಯಸಿದುದನ್ನು ಕೇಳಬೇಕೆಂದು ಕೋರಿದನು. ಅದಕ್ಕೆ ಚ್ಯವ ನನು ತನ್ನ ಸರಿಯಾದ ಬೆಲೆಯಷ್ಟು ಹಣವನ್ನು ಮೀನುಗಾರರಿಗೆ ಕೊಡೆಂದು ರಾಜನಿಗೆ ಹೇಳಿದನು. ನಹುಷನು ತನ್ನ ಇಡಿಯ ರಾಜ್ಯವನ್ನೇ ಕೊಟ್ಟರೂ ಸರಿಯಾದ ಬೆಲೆಯಾಗ ಲಿಲ್ಲ. ಆಗ ಒಬ್ಬ ಋಷಿಯು ಗೋಧನವನ್ನು ಕೊಡಲು ಹೇಳಿದನು. ಅದರಿಂದಾಗಿ ಈತನ ಸರಿಯಾದ ಬೆಲೆ ಬಂದಿತು. ಮನುವಿನ ಮಗಳಾದ ಆರುಷಿಯಿಂದ ಈತನಿಗೆ ಔರ್ವನೆಂಬ ಮಗ ಹುಟ್ಟಿದನು. ಈತ ಉತ್ತಮನಾದ ವಾಗ್ಮಿಯಾಗಿದ್ದನು, ಮಂತ್ರಕಾರ ನಾಗಿದ್ದನು. ಈತನನ್ನು ಸಪ್ತರ್ಷಿಗಳಲ್ಲಿ ಒಬ್ಬನೆಂದು ತಿಳಿಯಲಾಗುತ್ತದೆ.

**ಜನಕ :** ವಿದೇಹ ವಂಶದವನಾದ ಮಿಥಿಜನಕನು ಮಿಥಿಲಾನಗರವನ್ನು ಸ್ಥಾಪಿಸಿ ದ್ದನು. ಈ ನಗರದ ದೊರೆಗಳೆಲ್ಲರನ್ನೂ ಜನಕರೆಂದು ಗುರುತಿಸಲಾಗುತ್ತದೆ. ಹೀಗಾಗಿ 'ಜನಕ'ವು ಒಂದು ಸಾಮಾನ್ಯ ನಾಮವು. ವಸಿಷ್ಠನ ಶಾಪದಿಂದಾಗಿ ನಿಮಿಯ ದೇಹವು ಅಚೇತನವಾಯಿತು. ದೇವತೆಗಳ ಅಪ್ಪಣೆಯಂತೆ ಬ್ರಾಹ್ಮಣನು ಅವರ ದೇಹವನ್ನು ಕಡೆಯಲಾಗಿ ಹುಟ್ಟಿಬಂದವನೇ 'ಜನಕ'ನು. ಈತ ಪ್ರಜಾಪಾಲನದಕ್ಷ ದೊರೆಯಾಗಿ ದ್ದನು. ಈತ ಪಂಚಶಿಖರೊಂದಿಗೆ ಅಧ್ಯಾತ್ಮವಿದ್ಯೆಯನ್ನು ಕುರಿತು ವಾದಹೂಡಿದ್ದನು. ಇವನು ಪ್ರಜಾಪಾಲನೆಯ ಸಂದರ್ಭದಲ್ಲಿ ಕ್ಷತ್ರಿಯರ ಹಲವಾರು ಕರ್ತವ್ಯಗಳನ್ನು ಕುರಿತು ಹೇಳಿದ್ದಾನೆ. ಈತ ಇಚ್ಛಾಮರಣಿಯಾಗಿದ್ದನು. ಇವನು ದೇಹತ್ಯಾಗ ಮಾಡಿ ಯಮಲೋಕದಲ್ಲಿ ಹಾಯ್ದುಹೋಗುವಾಗ ಇವನ ಗಾಳಿಯಿಂದಾಗಿ ಅಲ್ಲಿ ಕೊಳೆಯುತ್ತ ಬಿದ್ದಿರುವ ಹಲವರ ದುಃಖಗಳಿಗೆ ಪರಿಹಾರ ದೊರಕಿತು. ಈತನು ತನ್ನೆಲ್ಲ ಪುಣ್ಯವನ್ನೂ ಪೀಡಿತರಿಗಾಗಿ ಕೊಟ್ಟುಬಿಟ್ಟನು. ಆ ಮೂಲಕ ಅವರನ್ನು ಉದ್ಧರಿಸಿದನು. ಇವನಿಗೆ ನಾಲ್ವರು ಮಡದಿಯರು. ಆದರೂ ಇವನಿಗೆ ಮಕ್ಕಳಾಗಿರಲಿಲ್ಲ. ಹೀಗಾಗಿ ಪುತ್ರಕಾಮೇಷ್ಟಿ ಯಜ್ಞವನ್ನು ಮಾಡಿದನು. ಅದರ ಫಲವೆಂದು ಇವನಿಗೆ ಇಬ್ಬರು ಗಂಡುಮಕ್ಕಳು ಹಾಗೂ ಒಬ್ಬ ಹೆಣ್ಣುಮಗಳು ಹುಟ್ಟಿದರು. ಗಣೇಶಪುರಾಣದಲ್ಲಿ ನಾರದನು ಈತನ ಗರ್ವಹರಣವನ್ನು ಮಾಡಿದ ಕಥೆ ಬರುತ್ತದೆ. ಜನಕ ದೊರೆಗಳಾದ ದೈವರಾತಿ, ಸೀರ ಧ್ವಜ, ಬಹುಲಾಶ್ವರೆಂಬವರು ಬೇರೆ ಬೇರೆ ಕಾಲಗಳಲ್ಲಿ ಇದ್ದರು.

**ಜನಮೇಜಯ :** ಅರ್ಜುನನ ಮರಿಮಗ. ಅಭಿಮನ್ಯುವಿನ ಮೊಮ್ಮಗ. ಪರೀಕ್ಷಿತನ ಮಗ. ಈತನ ತಾಯಿಯ ಹೆಸರನ್ನು ಕೆಲವು ಹೊತ್ತಗೆಗಳಲ್ಲಿ ಮಾದ್ರವತಿ ಎಂದು ನಮೂದಿಸಿದ್ದು ಇನ್ನು ಕೆಲವೆಡೆಗಳಲ್ಲಿ ಇರಾವತಿ ಎಂದು. ತಕ್ಷಕನ ಕಚ್ಚುವಿಕೆ ಯಿಂದ ಪರೀಕ್ಷಿತನಿಗೆ ಸಾವು ಬಂದಿತು. ಆಗಿನ್ನೂ ಈತ ಚಿಕ್ಕ ವಯಸ್ಸಿನವನಿದ್ದನು. ಬುದ್ಧಿಮತ್ತೆಯಲ್ಲಿ ಪ್ರೌಢನೆನ್ನಿಸಿದ್ದರಿಂದ ಈತನಿಗೆ ಪಟ್ಟಾಭಿಷೇಕವನ್ನು ಮಾಡ ಲಾಗಿತ್ತು. ಕಾಶಿಯ ಸುವರ್ಣವರ್ಮ ದೊರೆಯ ಮಗಳು ವಪುಷ್ಟಮಾ ಇವಳು ಈತನ ಮಡದಿ. ಈತ ಸದ್ವರ್ತನೆಯುವನಾಗಿದ್ದು ಹಿರಿಯರ ಮಾರ್ಗದರ್ಶನದಲ್ಲಿ ಉತ್ತಮ ವಾಗಿ ರಾಜ್ಯವನ್ನು ಆಳುತ್ತಿದ್ದನು. ಪರೀಕ್ಷಿತನಿಗೆ ಹಾವು ಕಚ್ಚಿ ಸಾವು ಬಂದ ಕಾರಣ ಜನಮೇಜಯು ಸರ್ಪಯಜ್ಞವನ್ನು ಮಾಡುವವನೇ ಇದ್ದನು. ಉತ್ತಂಕನು ಈತನಿಗೆ ಬೆಂಬಲ ನೀಡಿದನು. ಇವನು ತಕ್ಷಕನನ್ನು ಕೊಲ್ಲುವ ಪಣತೊಟ್ಟನು. ಈತನ ಯಜ್ಞ

ದಲ್ಲಿ ಒಬ್ಬ ಬ್ರಾಹ್ಮಣನಿಂದ ವಿಘ್ನ ತಲೆದೋರಲಿದೆಯೆಂದು ಒಬ್ಬ ಬಡಿಗನು ಕಣಿ ಹೇಳಿದನು. ದೇವಶುನಿಯು ತನ್ನ ಮಗನನ್ನು ಹೊಡೆದದ್ದಕ್ಕಾಗಿ ಇಂಥದೇ ಒಂದು ಶಾಪವನ್ನಿತ್ತಿದ್ದಳು. ಸರ್ಪಯಜ್ಞದಲ್ಲಿ ಕೋಟ್ಯಾವಧಿಯ ಹಾವುಗಳು ಬಂದು ಯಜ್ಞ ಕುಂಡದಲ್ಲಿ ಬೀಳಹತ್ತಿದವು. ಇದನ್ನು ಕಂಡು ತಕ್ಷಕನು ಹೆದರಿ ಇಂದ್ರನನ್ನು ಮೊರೆ ಹೊಕ್ಕನು. ಇಂದ್ರನು ಅವನಿಗೆ ಅಭಯವನ್ನಿತ್ತನು. ಆದರೆ ಬ್ರಾಹ್ಮಣರು 'ಇಂದ್ರಾಯ ತಕ್ಷಕಾಯ ಸ್ವಾಹಾ' ಎಂದು ಅನ್ನುತ್ತಲೇ ತಕ್ಷಕನು ಅಲ್ಲಿ ಪ್ರಕಟನಾಗಲೇಬೇಕಾಯಿತು. ಆಸ್ತಿಕನು ಜನಮೇಜಯನನ್ನು ಹೊಗಳಿ ಅವನನ್ನು ಸಂತುಷ್ಟಗೊಳಿಸಿದನಲ್ಲದೆ ವರವನ್ನು ಕೇಳಿ ಸರ್ಪಯಜ್ಞವನ್ನು ನಿಲ್ಲಿಸಹಚ್ಚಿದನು.

ವ್ಯಾಸನ ಶಿಷ್ಯನಾದ ವೈಶಂಪಾಯನ ಜನಮೇಜಯನಿಗೆ ಭಾರತವನ್ನು ಹೇಳುತ್ತ ಲಿದ್ದಾನೆ. ಇವನು ಸರ್ಪಸತ್ರದ ತರುವಾಯ ಅಶ್ವಮೇಧಯಜ್ಞವನ್ನು ಆರಂಭಿಸಿದನು. ಅದು ಪೂರ್ತಿಗೊಳ್ಳದೆಂದು ವ್ಯಾಸನು ಅವನಿಗೆ ಹೇಳಿದ್ದನು. ಅಷ್ಟೇ ಅಲ್ಲದೆ ಮುಂದೆಂದಿಗೂ ಈ ಪೃಥ್ವಿಯ ಮೇಲೆ ಅಶ್ವಮೇಧಯಜ್ಞ ನಡೆಯಬಾರದೆಂದೂ ಹೇಳಿದನು. ಇವನು ವಾಜಸನೇಯನಿಂದ ಒಂದು ಯಜ್ಞವನ್ನು ಮಾಡಿಸಿದ್ದರಿಂದ ವೈಶಂಪಾಯನನು ಇವನಿಗೆ ಶಾಪವಿತ್ತನೆಂದು ಮತ್ಸ್ಯ ಹಾಗೂ ವಾಯುಪುರಾಣಗಳಲ್ಲಿ ಹೇಳಲಾಗಿದೆ. ಈತ ರಾಜ್ಯವನ್ನು ಬಿಟ್ಟುಕೊಡಬೇಕಾಯಿತು.

**ಜಮದಗ್ನಿ :** ಭೃಗುಕುಲದ ಋಚೀಕ, ಗಾಧಿಕನ್ಯೆ ಸತ್ಯವತಿಯರ ಮಗ. ಈತನ ಮಡದಿಯ ಹೆಸರು ರೇಣುಕೆ. ರುಮಣ್ವಾನ, ಸುಷೇಣ, ವಸುಮಾನ, ವಿಶ್ವಾವಸು ಹಾಗೂ ಪರಶುರಾಮರು ಮಕ್ಕಳು. ಈತ ಬಲು ಮುಂಗೋಪಿ. ಒಂದು ಸಲ ಈತನೆಸೆದ ಬಾಣವನ್ನು ತರಲು ರೇಣುಕೆಗೆ ಬಹುಸಮಯ ಹಿಡಿಯಿತು. ಅದಕ್ಕೆ ಕಾರಣ ಬಿಸಿಲಿನಿಂದಾಗಿ ಅವಳ ಪಾದಗಳು ಸುಡಹತ್ತಿದ್ದುದು. ಆಗ ಈತನು ಸೂರ್ಯನತ್ತಲೇ ಗುರಿಹಿಡಿಯಲು ಹೊರಟವನು. ಸೂರ್ಯನು ಈತನಿಗೆ ಶರಣುಬಂದನು. ಈತನು ರೇಣುಕೆಯ ತಲೆಯನ್ನು ಹಾರಿಸಲು ತನ್ನ ಮಕ್ಕಳಿಗೆ ಅಪ್ಪಣೆ ನೀಡಿದನು. ಪರಶುರಾಮನನ್ನುಳಿದು ಉಳಿದವರೆಲ್ಲ ಒಪ್ಪಲಿಲ್ಲ. ಹೀಗಾಗಿ ಇವನು ತನ್ನ ನಾಲ್ವರು ಗಂಡುಮಕ್ಕಳನ್ನು ಕೊಂದು ಬಿಟ್ಟನು. ಪರಶುರಾಮನೇನೋ ಈತನ ಮಾತು ಕೇಳಿದನು. ಕೂಡಲೇ ತಂದೆಯಿಂದ ವರ ಕೇಳಿ ತನ್ನ ತಾಯಿ ಹಾಗೂ ಒಡಹುಟ್ಟಿದವರನ್ನು ಮರುಜೀವ ಬರಿಸುವಂತೆ ಕೇಳಿ ಕೊಂಡನು. ಮುಂದೆ ಮುಂದೆ ಈತನ ಈ ಶೀಘ್ರಕೋಪದ ಸ್ವಭಾವ ಶಾಂತವಾಯಿತು. ಎಷ್ಟರಮಟ್ಟಿಗೆಂದರೆ ಶ್ರಾದ್ಧಕ್ಕೆಂದು ಇರಿಸಿದ ಹಾಲಿನಲ್ಲಿ ಒಂದು ಹಾವು ತನ್ನ ನಂಜನ್ನು ಬೆರೆಸಿದರೂ ಈತ ಸಿಟ್ಟಿಗೇಳಲಿಲ್ಲ. ಜಮದಗ್ನಿಗೆ ತನ್ನ ಮಡದಿಮಕ್ಕಳನ್ನು ಕೊಂದ ತರುವಾಯ ಪಶ್ಚಾತ್ತಾಪ ಎನ್ನಿಸಿತು.

ಈತನು ಒಂದು ಸಾವಿರ ವರ್ಷಗಳ ಕಾಲ ತಪಸ್ಸುಮಾಡಿ ಇಂದ್ರನ ಕಾಮಧೇನು ವನ್ನು ಪಡೆದನು. ಕಶ್ಯಪನು ಈತನಿಗೆ ಷಡಕ್ಷರಮಂತ್ರವನ್ನಿತ್ತನು. ಕಾರ್ತವೀರ್ಯನು ಈತನ ಕಾಮಧೇನುವನ್ನು ಓಡಿಸಿಕೊಂಡು ಹೋದನು. ಪರಶುರಾಮನು ಅವನನ್ನು ಕೊಂದು ಕಾಮಧೇನುವನ್ನು ಮರಳಿ ತಂದನು. ಅವನು ಕಾರ್ತವೀರ್ಯನನ್ನು ಕೊಂದುದು ಜಮದಗ್ನಿಗೆ ಹಿಡಿಸಲಿಲ್ಲ. ತಮ್ಮ ತಂದೆಯ ಕೊಲೆಯ ಸೇಡು ತೀರಿಸಿ

ಕೊಳ್ಳಲೆಂದು ಕಾರ್ತವೀರ್ಯನ ಮಕ್ಕಳು ಪರಶುರಾಮನಿಲ್ಲದ ಹೊತ್ತಿನಲ್ಲಿ ಆಶ್ರಮದ ಮೇಲೆ ದಾಳಿಯಿಕ್ಕಿ ಜಮದಗ್ನಿಯನ್ನು ಕೊಂದುಬಿಟ್ಟರು. ಹೀಗಾಗಿ ಪರಶುರಾಮನು ಇಪ್ಪತ್ತೊಂದು ಸಲ ಈ ಭೂಮಿಯನ್ನು ನಿಃಕ್ಷತ್ರಿಯವನ್ನಾಗಿ ಮಾಡಿದನು. ಜಮದಗ್ನಿಯೇ ಶ್ರಾದ್ಧಕರ್ಮಗಳನ್ನು ಆರಂಭಿಸಿದವನೆಂದು ಆಶ್ರಮವಾಸಿಕ ಪರ್ವದ ಉಲ್ಲೇಖದಿಂದ ಕಂಡುಬರುತ್ತದೆ.

ಋಗ್ವೇದದಲ್ಲಿ ಹಲವೆಡೆಗಳಲ್ಲಿ ಈತನ ಉಲ್ಲೇಖವಿದೆ. ಸೌದಾಸನ ಯಜ್ಞದ ಕಾಲಕ್ಕೆ ವಸಿಷ್ಠನ ಮಗ ಶಕ್ತಿಯು ವಿಶ್ವಾಮಿತ್ರನನ್ನು ವಾದದಲ್ಲಿ ಸೋಲಿಸಿದನು. ಅಲ್ಲದೆ ಅವನನ್ನು ಯಜ್ಞದಿಂದ ಹೊರದೂಡಿದನು. ಆಗ ಜಮದಗ್ನಿಯು ಸೂರ್ಯನಿಂದ ಸಸರ್ಪರೀ (ವಕ್ತೃತ್ವಕೌಶಲ) ವಿದ್ಯೆಯನ್ನು ವಿಶ್ವಾಮಿತ್ರನಿಗೆ ತಂದುಕೊಟ್ಟನು. ಈತ ವಿಶ್ವಾಮಿತ್ರನಿಗೆ ಅನುಕೂಲನೂ, ವಸಿಷ್ಠನಿಗೆ ಎದುರಾಳಿಯೂ ಆಗಿದ್ದನೆಂದು ಕಾಣುತ್ತದೆ. ಈತ ಕೈಕೊಂಡ ಚತುರಾತ್ರಯಜ್ಞದಿಂದಾಗಿ ಈತನ ವಂಶವು ದಾರಿದ್ರ್ಯದಿಂದ ದೂರಾಯಿತು. ಇಂದ್ರನು ಅಕ್ಷರಬ್ರಹ್ಮ ಹಾಗೂ ವೇದಗಳ ಪ್ರಚಾರಕ್ಕಾಗಿ ಈತನನ್ನು ನೇಮಿಸಿದ್ದನು. ಋಗ್ವೇದದಲ್ಲಿ ಈತನ ಹೆಸರಿನಿಂದ ಹಲವಾರು ಸೂತ್ರಗಳಿವೆ.

೧

**ಜರತ್ಕಾರು :** ಯಾಯಾವರನ ಮಗ. ಕಟ್ಟುನಿಟ್ಟಾಗಿ ಬ್ರಹ್ಮಚರ್ಯೆಯನ್ನು ಪಾಲಿಸುತ್ತಿದ್ದನು. ತೀರ್ಥಯಾತ್ರೆಗೆಂದು ಅಲೆಯುತ್ತಿರುವಾಗ ಪಿತೃಗಳು ಕಣಿವೆಯಲ್ಲಿ ನೇತುಬಿದ್ದುದನ್ನು ಕಂಡನು. ಈ ಅವಸ್ಥೆ ಬರಲು ಕಾರಣ ಏನೆಂದು ಕೇಳಿದನು. ತಮ್ಮ ಕುಲದ ಸಂತಾನವಾದ ಜರತ್ಕಾರುವು ಮದುವೆಯಾಗದ್ದರಿಂದ ವಂಶದ ಬೆಳವಣಿಗೆ ಕುಂಠಿತಗೊಳ್ಳಲಿರುವ ಸಂಕಟ ಬಂದಿದ್ದರಿಂದ—ಎಂದರು. ಅವನು ತಾನೇ ಜರತ್ಕಾರು ವೆಂದೂ ಅವರ ಮುಕ್ತಿಗಾಗಿ ತಾನು ಮದುವೆಯಾಗುವೆನೆಂದೂ ಮಾತುಕೊಟ್ಟನು. ಅವನ ಮದುವೆಯ ಬಗೆಗಿನ ಶರತ್ತುಗಳು ಬಲು ವಿಚಿತ್ರವೂ ಹಾನಿಕಾರಕವೂ ಆಗಿದ್ದವು. ಹೀಗಾಗಿ ಅವನ ಮದುವೆ ಒಂದು ಸಮಸ್ಯೆ ಎನ್ನಿಸಿತ್ತು. ಆದರೆ ವಾಸುಕಿಯು ತನ್ನ ತಂಗಿಯನ್ನು ಮದುವೆ ಮಾಡಿಕೊಡಲು ಒಪ್ಪಿಕೊಂಡನು. ಈತನು ತನ್ನ ಶರತ್ತುಗಳನ್ನು ಮುಂದೊಡ್ಡಿದನು. ಅವೆಂದರೆ—ಮದುಮಗಳ ಹೆಸರು ಹಾಗೂ ತನ್ನ ಹೆಸರು ಒಂದೇ ಆಗಿರತಕ್ಕದ್ದು. ಅವಳನ್ನು ಬಿಕ್ಕೆಯಾಗಿ ಕೊಡತಕ್ಕದ್ದು. ಅವಳ ಹೊಣೆಯನ್ನು ತಾನು ಹೊರಲಾರೆ. ಅವಳು ಈತನ ಮನಸ್ಸಿಗೆ ಎದುರಾಗಿ ನಡೆದುಕೊಳ್ಳಕೂಡದು. ವಾಸುಕಿಯು ಇವೆಲ್ಲ ಶರತ್ತುಗಳನ್ನು ಒಪ್ಪಿಕೊಂಡೇ ತನ್ನ ತಂಗಿಯನ್ನು ಈತನೊಂದಿಗೆ ಮದುವೆ ಮಾಡಿಕೊಟ್ಟನು. ಅವಳು ಕೂಡ ಒಳ್ಳೆಯ ಎಚ್ಚರದಿಂದ ಗಂಡನನ್ನು ಸೇವಗೈಯುತ್ತಲಿದ್ದಳು. ಒಂದು ಸಲ ಜರತ್ಕಾರು ಋಷಿಯು ತನ್ನ ಮಡದಿಯ ತೊಡೆಯ ಮೇಲೆ ತಲೆಯಿಟ್ಟು ನಿದ್ದೆಹೋಗಿದ್ದನು. ಸಂಜೆಯಾಗುತ್ತ ಬಂದಿತು. ಗಂಡನ ಸಂಧ್ಯಾವಂದನೆಯ ಸಮಯ. ಅವನನ್ನು ಎಬ್ಬಿಸಿದರೆ ಅವನು ಕೆರಳುವನು. ಎಬ್ಬಿಸದಿದ್ದರೆ ನಿತ್ಯಕರ್ಮ ತಪ್ಪುವ ಹೆದರಿಕೆ. ಅವಳಿಗೆ ಪೇಚಿಗಿಟ್ಟುಕೊಂಡಿತು. ಕೊನೆಗೆ ಸಾಹಸವನ್ನೆಲ್ಲ ಒಟ್ಟುಗೂಡಿಸಿ ಅವನನ್ನು ಎಬ್ಬಿಸಿದಳು. ನಿದ್ದೆಗೇಡು ಆದದ್ದ

ರಿಂದ ಅವನು ಕಿರಲಿ ಕಿಡಿಕಿಡಿಯಾದನು. ಅವನು ಜಂಬದ ಹುಂಜನಂತಿದ್ದನು. ತನ್ನ ಸಾಯಂಸಂಧ್ಯೆ ಮುಗಿಯದ ಹೊರತು ಸೂರ್ಯ ಮುಳುಗಲು ಸಾಧ್ಯವೇ ಇಲ್ಲವೆಂದು ಈತ ನಂಬಿದ್ದನು. ಅದೇನಿದ್ದರೂ ಈಗಂತೂ ತನ್ನ ಮಡದಿ ಒಂದು ಶರತ್ತನ್ನು ಮುರಿದಿದ್ದಳು. ಬಸಿರಾಗಿದ್ದ ಅವಳು ಈತನನ್ನು ಪರಿಪರಿಯಾಗಿ ಬೇಡಿಕೊಂಡಳು. ಅದನ್ನು ಲೆಕ್ಕಿಸದೆ ಈತ ಅವಳನ್ನು ತೊರೆದುಬಿಟ್ಟನು. ತಪಸ್ಸಿಗೆಂದು ಅಲ್ಲಿಂದ ಹೊರಟೇ ಹೋದನು. ಮುಂದೆ ಅವಳಿಗೆ ಹುಟ್ಟಿದ ಮಗನೇ ಆಸ್ತಿಕ. ಕಾರು ಎಂದರೆ ದೇಹ. ಅದನ್ನು ತಪಸ್ಸಿನಿಂದ ಸವೆಯಿಸುವವನೇ ಜರತ್ಕಾರು,

೨

ವಾಸುಕಿಯ ಒಡಹುಟ್ಟಿದವಳು. ಜರತ್ಕಾರು ಋಷಿಯ ಮಡದಿ. ಆಸ್ತಿಕನ ತಾಯಿ. ಶಾಪಗ್ರಸ್ತವಾದ ಹಾವುಗಳನ್ನು ಶಾಪದಿಂದ ಬಿಡುಗಡೆಗೊಳಿಸಲು ಮಗ ಆಸ್ತಿಕನಿಗೆ ಹೇಳಿದಳು. ಅದರಂತೆ ಆಸ್ತಿಕನು ಜನಮೇಜಯನ ಸರ್ಪಯಜ್ಞದ ಕಾಲಕ್ಕೆ ಹಾವುಗಳ ಸಂಹಾರವನ್ನು ತಡೆಗಟ್ಟಿದನು. ಇವಳು ಬಲು ಪತಿಪರಾಯಣೆಯಾಗಿದ್ದಳು.

**ತ್ರಿಜಟಾ :** ರಾವಣನ ಲಂಕೆಯಲ್ಲಿದ್ದ ಸುಸ್ವಭಾವದ ಒಬ್ಬಳು ರಕ್ಕಸಿ. ಸೀತೆಯ ಕಾವಲಿಗಾಗಿ ನೇಮಕವಾದ ರಕ್ಕಸಿಯರಲ್ಲಿ ಇವಳೊಬ್ಬಳು. ಇವಳು ರಾವಣನ ಸೋಲಾಗಿ ರಾಮನು ಗೆಲ್ಲುವನೆಂದು ಕನಸನ್ನು ಕಂಡಿದ್ದಳು. ಹೀಗಾಗಿ ಇವಳು ಸೀತೆಯನ್ನು ಬಲು ಎಚ್ಚರದಿಂದ ಕಾಪಾಡುತ್ತಿದ್ದಳು. ಈಕೆ ಬಗೆಬಗೆಯಾಗಿ ಸೀತೆಗೆ ರಾವಣನ ಬಗೆಗೆ ತಿಳಿ ಹೇಳಿ ಅವನಿಗೆ ಹೆದರದಿರುವಂತೆ ಪರಿಪರಿಯಾಗಿ ಹೇಳಿದಳು. ಶ್ರೀರಾಮ ಇವಳನ್ನು ಸತ್ಕರಿಸಿದನು.

**ದಂಶ (ಅಲರ್ಕ) :** ದಂಶನು ಮೊದಲೊಬ್ಬ ರಾಕ್ಷಸನು. ಭೃಗುವಿನ ಶಾಪದಿಂದಾಗಿ ಈತನಿಗೆ ಒಂದು ಹುಳುವಿನ ಜನ್ಮಬಂದಿತು. ಪರಶುರಾಮನು ಕರ್ಣನ ತೊಡೆಯ ಮೇಲೆ ತಲೆಯಿಟ್ಟು ನಿದ್ದೆಹೋದಾಗ ಈತನು ಅವನ ತೊಡೆಯನ್ನು ಕೊರೆದನು. ಸಹಿಸಲಸಾಧ್ಯವಾದ ನೋವು ಉಂಟಾಗಿಯೂ ಕರ್ಣನು ಅದೆಲ್ಲವನ್ನು ಸಹಿಸುತ್ತ ತೆಪ್ಪಗೆ ಕುಳಿತನು. ಪರಶುರಾಮ ಎಚ್ಚೆತ್ತ ಬಳಿಕ ಕರ್ಣನ ಕಪಟ ಹೊರಬಿದ್ದಿತು. ಅವನು ಕರ್ಣನನ್ನು ಶಪಿಸಿದನು. ಪರಶುರಾಮನ ಕಣ್ಣುನೋಟದಿಂದಾಗಿ ಆ ಹುಳು ಸತ್ತುಬಿದ್ದಿತು. ಅದೊಂದು ವಿಚಿತ್ರವಾದ ಜೀವಿಯಾಗಿತ್ತು. ತುಸು ಹೊತ್ತಿನಲ್ಲಿಯೇ ಅಲ್ಲೊಬ್ಬ ರಾಕ್ಷಸ ಮುಗಿಲಲ್ಲಿ ಕಾಣತೊಡಗಿದನು. ಅವನು ಕೃತಜ್ಞತೆಯಿಂದ ಪರಶುರಾಮನಿಗೆ ತಲೆಬಾಗಿದನು. ಅಲ್ಲದೆ ತನ್ನನ್ನು ನರಕದಿಂದ ಕಾಪಾಡಿ ಪಾರುಮಾಡಿದ್ದಕ್ಕಾಗಿ ಅವನಿಗೆ ಕೃತಜ್ಞತೆಗಳನ್ನು ಸಲ್ಲಿಸಿದನು. ಪರಶುರಾಮನು ಅವನ ಬಗೆಗೆ ಕೇಳುತ್ತಲೇ ಆ ರಾಕ್ಷಸನು ಭೃಗುವಿನ ಶಾಪದ ಕಥೆಯನ್ನು ಹೇಳಿದನು.

ನೋಡಿ : ಶಾಪ, ಕ್ರ. ೧೦೦—ಭೃಗುವಂಶ > ಅಲರ್ಕ.

**ದಕ್ಷ :** ಪ್ರಾಚೇತಸ ದಕ್ಷನು ಪ್ರಜಾಪತಿಯಾಗಿದ್ದನು. ಬ್ರಹ್ಮದೇವನ ಬಲಗಾಲಿನ ಹೆಬ್ಬೆರಳಿನಿಂದ ಈತ ಹುಟ್ಟಿಬಂದನು. ಸೋಮ ಹಾಗೂ ಪ್ರಚೇತಸ ಇವರ ಅರ್ಧ ಅರ್ಧ ತೇಜಸ್ಸು ಕೂಡಿ ದಕ್ಷನ ಹುಟ್ಟು ಆಯಿತೆಂದು ಬ್ರಹ್ಮಪುರಾಣ, ವಿಷ್ಣುಪುರಾಣ,

ಭಾಗವತ, ಹರಿವಂಶ ಮೊದಲಾದ ಹೊತ್ತಗೆಗಳಲ್ಲಿ ಬಣ್ಣಿಸಲಾಗಿದೆ. ದಕ್ಷನು ತನ್ನ ತೇಜಸ್ಸು ಹಾಗೂ ಮನಸ್ಸಿನಿಂದ ಪ್ರಜಾಸೃಷ್ಟಿಯನ್ನು ನಿರ್ಮಿಸಿದನು. ಮಾನಸ ಸೃಷ್ಟಿಯಿಂದ ಪ್ರಜಾಸೃಷ್ಟಿ ಆಗದಂತಾಗಲು ಈತನು ಉಗ್ರವಾದ ತಪಸ್ಸನ್ನು ಕೈಕೊಂಡನು. ಆಗ ಶ್ರೀಹರಿಯು ಪ್ರಸನ್ನನಾದನು. ಅವನು ಪಂಚಜನ ಪ್ರಜಾಪತಿಯ ಮಗಳಾದ ಅಸಿಕ್ನಿ ಇವಳೊಡನೆ ಈತನ ಮದುವೆಯನ್ನು ಮಾಡಿಕೊಟ್ಟನು. ಇನ್ನು ಪ್ರಜೆಗಳನ್ನು ಬೆಳೆಸು ಎಂದನು. ಈತನಿಗೆ ಹರ್ಯಶ್ವರೆಂಬ ಹತ್ತುಸಾವಿರ ಜನ ಗಂಡುಮಕ್ಕಳು ಹಾಗೂ ಅರವತ್ತು ಜನ ಹೆಣ್ಣುಮಕ್ಕಳು ಇದ್ದರು. ಇವರಲ್ಲಿಯ ಹತ್ತು ಹೆಣ್ಣುಮಕ್ಕಳನ್ನು ಧರ್ಮನಿಗೆ, ಹದಿಮೂರು ಕಶ್ಯಪನಿಗೆ, ಇಪ್ಪತ್ತೇಳು ಚಂದ್ರನಿಗೆ, ತಾರ್ಕ್ಷ್ಯನೆಂಬ ಕಶ್ಯಪನಿಗೆ ನಾಲ್ವರು, ಭೂತ, ಕೃಶಾಶ್ವ ಹಾಗೂ ಅಂಗಿರಸ ಇವರಿಗೆ ಇಬ್ಬಿಬ್ಬರಂತೆ ತನ್ನ ಹೆಣ್ಣುಮಕ್ಕಳನ್ನು ಕೊಟ್ಟನು. ಬ್ರಹ್ಮಾಂಡಪುರಾಣದ ಅಭಿಪ್ರಾಯದಂತೆ ಅಸಿಕ್ನಿಗೆ ಐದು ಸಾವಿರ ಮಕ್ಕಳು ಹುಟ್ಟಿದವು. ಮತ್ಸ್ಯಪುರಾಣದ ಹೇಳಿಕೆಯಂತೆ ದಕ್ಷನ ಮೊದಲು ಸಂಕಲ್ಪ, ದರ್ಶನ, ಸ್ಪರ್ಶ ಇವುಗಳಿಂದಲೂ ಮಕ್ಕಳು ಹುಟ್ಟುತ್ತಿದ್ದವು. ದಕ್ಷನಿಂದ ಮುಂದೆ ಮಾತ್ರ ಗಂಡು-ಹೆಣ್ಣುಗಳ ಸಮಾಗಮದಿಂದಲೇ ಮಕ್ಕಳು ಹುಟ್ಟತೊಡಗಿದವು.

ದಕ್ಷಕನ್ಯೆ : ನೋಡಿ : ವ್ಯಕ್ತಿವಿಶೇಷ : ರೋಹಿಣಿ.

೧

**ದಮಯಂತಿ (ಭೈಮಿ) :** ಮಹರ್ಷಿ ದಮನನ ಹರಕೆಯಿಂದ ವಿದರ್ಭಪತಿಯಾದ ಭೀಮಕನಿಗೆ ಹುಟ್ಟಿದ ಮಗಳು. ಈಕೆ ಬಲು ರೂಪಸಂಪನ್ನಳಾಗಿದ್ದಳು. ಹಂಸ ಪಕ್ಷಿಯು ನಲನನ್ನು ಕುರಿತು ಮಾಡಿದ ಬಣ್ಣನೆಯಿಂದಾಗಿ ಇವಳ ಮನದಲ್ಲಿ ನಲನ ಬಗೆಗೆ ಪ್ರೇಮ ಹುಟ್ಟಿತು. ಸ್ವಯಂವರದ ಹೊತ್ತಿನಲ್ಲಿ ಇಂದ್ರಾದಿದೇವತೆಗಳೆಲ್ಲ ನಲನಂತೆಯೇ ರೂಪ ಧರಿಸಿ ಬಂದ ಕಾರಣ ಈಕೆ ಗೊಂದಲದಲ್ಲಿ ಬಿದ್ದಳು. ಇಷ್ಟಾಗಿಯೂ ಇವಳು ನಿಜವಾದ ನಲನ ಕೊರಳಿಗೆಯೇ ವರಮಾಲೆಯನ್ನು ಹಾಕಿದಳು. ನಲನು ಜೂಜಾಟದಲ್ಲಿ ತನ್ನದೆಲ್ಲವನ್ನೂ ಕಳೆದುಕೊಂಡನು. ಹೀಗಾಗಿ ಇವಳು ಎಲ್ಲಿಲ್ಲದ ಬವಣೆಗೀಡಾದಳು. ಇವಳದು ಬಲು ಉಜ್ವಲವಾದ ಪತಿನಿಷ್ಠೆ. ಇವಳು ಹೆಬ್ಬಾವಿನ ಹಿಡಿತಕ್ಕೆ ಸಿಕ್ಕುಬಿದ್ದಾಗ ಬೇಡನೊಬ್ಬನು ಇವಳ ಒಂಟಿತನದ ದುರ್ಲಾಭವನ್ನೆತ್ತಲು ನೋಡಿದನು. ಆದರೂ ಈಕೆ ಹೇಗೋ ಆ ಸಂಕಟವನ್ನು ಮೆಟ್ಟಿನಿಂತು ತನ್ನ ತವರಿಗೆ ಮರಳಿದಳು. ನಲನನ್ನು ಕಂಡು ಹಿಡಿಯುವ ಹಂಚಿಕೆಗಳೆಲ್ಲ ಸೋತಾಗ ಇವಳೊಂದು ಸೋಗಿನ ಸ್ವಯಂವರದ ಹಂಚಿಕೆಯನ್ನು ಹೂಡಿದಳು. ಇದು ಗೆದ್ದಿತು. ನಲ-ದಮಯಂತಿ ಮತ್ತೆ ಒಂದುಗೂಡಿದರು. ಇವಳಿಗೆ ಇಂದ್ರಸೇನ ಹಾಗೂ ಇಂದ್ರಸೇನಾ ಎಂಬಿಬ್ಬರು ಮಕ್ಕಳು. ನಲನ ಬಗೆಗಿನ ಈಕೆಯ ಅನನ್ಯವಾದ ನಿಷ್ಠೆಯು ಇವಳು ಕೈಕೊಂಡ ಸತ್ಕ್ರಿಯೆಯ ಮೂಲಕ ವ್ಯಕ್ತಗೊಳ್ಳುತ್ತದೆ.

೨

**ದಮಯಂತಿ (ಸೃಂಜಯನ ಮಗಳು) :** ಶೈಬ್ಯನ ಮಗನಾದ ಸೃಂಜಯನ ಮಗಳು. ಇವಳನ್ನು ಮದಯಂತಿ ಹಾಗೂ ಶ್ರೀಮತಿ ಎಂಬ ಹೆಸರುಗಳಿಂದಲೂ ಗುರುತಿಸ

ಲಾಗುತ್ತದೆ. ಮಹರ್ಷಿಗಳಾದ ನಾರದರು ಹಾಗೂ ಪರ್ವತರು ಸೃಂಜಯನಲ್ಲಿಗೆ ಅತಿಥಿಗಳಾಗಿ ಬಂದಿದ್ದರು. ಆಗ ಈಕೆಯು ಅವರನ್ನು ಮನಗೊಟ್ಟು ಸೇವೆಗೈದಳು. ನಾರದ ಇವಳಿಗೆ ಮರುಳಾದನು. ನಾರದನು ತನ್ನೀ ಮನದಾಸೆಯನ್ನು ಪರ್ವತನಿಗೆ ಹೇಳಲಿಲ್ಲ. (ತಮ್ಮ ತಮ್ಮ ಮನಗಳಲ್ಲಿದ್ದುದನ್ನು ಒಬ್ಬರಿಗೊಬ್ಬರು ಹೇಳತಕ್ಕದ್ದೆಂದು ಅವರಿಬ್ಬರಲ್ಲಿ ಒಪ್ಪಂದವಾಗಿತ್ತು.) ಹೀಗಾಗಿ ಪರ್ವತನು ಅವನಿಗೆ ಶಾಪವನ್ನಿತ್ತನು. ಆದರ ಪರಿಣಾಮವೆಂದು ನಾರದ 'ವಾನರಮುಖಿ'ಯಾದನು. ದಮಯಂತಿಯೂ ನಾರದನನ್ನು ಇಷ್ಟಪಟ್ಟಿದ್ದಳು. ಆದರೆ ಸೃಂಜಯನಿಗಾಗಲಿ ಅವನ ಮಡದಿಗಾಗಲಿ ತಮ್ಮ ಮಗಳನ್ನು ಇಂಥ ಬ್ರಾಹ್ಮಣರಿಗೆ ಕೊಡುವ ಮನಸ್ಸಿರಲಿಲ್ಲ. ಅವನು ಅವಳನ್ನು ಅವಳ ವಿಚಾರಗಳಿಂದ ದೂರವಿರಿಸಲು ಯತ್ನಿಸಿದನು. ಆದರೆ ಒಬ್ಬ ಪೆದ್ದು ರಾಜಕುವರನಿಗಿಂತ ತನಗೆ ನಾರದ ಹೆಚ್ಚು ಪ್ರಿಯನೆಂದು ಅವಳು ಅವನಿಗೆ ಖಡಾಖಂಡಿತವಾಗಿ ಹೇಳಿಬಿಟ್ಟಳು. ನಾರದನನ್ನೇ ಮದುವೆಯಾದಳು. ಕೆಲಕಾಲದ ತರುವಾಯ ಪರ್ವತನು ತನ್ನ ಶಾಪವನ್ನು ಹಿಂತೆಗೆದುಕೊಂಡನು. ಹೀಗಾಗಿ ನಾರದನಿಗೆ ತನ್ನ ಮೊದಲ ರೂಪ ಪ್ರಾಪ್ತವಾಯಿತು. ವಿಷ್ಣುವು ನಾರದ ಹಾಗೂ ಪರ್ವತರನ್ನು ಮೋಸಗೊಳಿಸಿ ಇವಳನ್ನು ಅಪಹರಿಸಿದನು. (ಹೀಗಾಗಿ ಇವರಿಬ್ಬರೂ ವಿಷ್ಣುಭಕ್ತಿಯನ್ನು ತೊರೆದು ಶಿವಭಕ್ತರಾದರು.) ಇಂಥದೊಂದು ವಿಚಿತ್ರ ಕಥೆಯು ಲಿಂಗಪುರಾಣ, ಅದ್ಭುತರಾಮಾಯಣ ಹಾಗೂ ಶಿವಪುರಾಣಗಳಲ್ಲಿ ಬಂದಿದೆ.

**ದಿಲೀಪ :** ಸಗರನ ಮರಿಮಗ, ಅಂಶುಮಾನನ ಮಗ, ಭಗೀರಥನ ತಂದೆ. ಈತನು ನೂರು ಯಜ್ಞಗಳನ್ನು ಕೈಗೊಂಡನು. ಪಿತೃಗಳನ್ನು ಉದ್ಧರಿಸಬೇಕೆಂಬ ಈತನ ಯತ್ನ ಯಶ ಕಾಣಲಿಲ್ಲ. ಮುಂದೆ ಭಗೀರಥನು ಅದನ್ನು ಯಶಸ್ವಿಯಾಗಿಸಿದನು. ಈತನು ತನ್ನ ಮಗನಿಗೆ ರಾಜ್ಯಾಡಳಿತೆಯನ್ನು ಒಪ್ಪಿಸಿ ತಾನು ವನವಾಸಕ್ಕೆ ಹೊರಟುಹೋದನು. ಹಲವು ಬಾರಿ ಗೋದಾನಗಳನ್ನು ನೀಡಿ ಸ್ವರ್ಗವನ್ನು ಗಳಿಸಿದನು. ಅಗಸ್ತ್ಯನ ಕಮಲದ ಹೂವು ಕಳವಾದ ಸಂದರ್ಭದಲ್ಲಿ ಆಣೆಮಾಡಿ ಹೇಳಿದ ಹಲವರು ರಾಜರುಗಳು ಹಾಗೂ ಋಷಿಗಳಲ್ಲಿ ಈತನೂ ಒಬ್ಬ. ಇವನು ಅದೆಷ್ಟು ಪುಣ್ಯವಂತನಾಗಿದ್ದನೆಂದರೆ ಈತನ ದರ್ಶನ ಮಾತ್ರದಿಂದಲೇ ಸ್ವರ್ಗಪ್ರಾಪ್ತಿಯಾಗುತ್ತಿತ್ತು. ಈತ ಯಮನ ಉಪಾಸಕನಾಗಿದ್ದನು.

**ದೀರ್ಘತಮ :** ಮಹರ್ಷಿ ಉತಥ್ಯ ಹಾಗೂ ಮಮತೆಯ ಮಗ. ಬಸಿರಲ್ಲಿರುವಂದಿನಿಂದಲೇ ವೇದ, ವೇದಾಂಗಗಳ ಜ್ಞಾನವು ದೊರೆತ ಒಬ್ಬ ಋಷಿ. ಬೃಹಸ್ಪತಿಯ ಶಾಪದಿಂದಾಗಿ ಈತ ಹುಟ್ಟುಕುರುಡನಾಗಿದ್ದನು. ಈತನು ಸೌರಭೇಯನಿಂದ ಗೋಧರ್ಮವನ್ನು ಅರಿತುಕೊಂಡು ಅದನ್ನು ಪಾಲಿಸಹತ್ತಿದನು. ಆಗ ಆಶ್ರಮದಲ್ಲಿಯ ಋಷಿಗಳು ಅವನನ್ನು ಬಿಟ್ಟುಬಿಟ್ಟರು. ಪ್ರದ್ವೇಷಿಯು ಈತನ ಮಡದಿ. ಅವಳೂ ಇವನನ್ನು ತೊರೆದುಬಿಟ್ಟಳು. ಅಲ್ಲದೆ ಇವನ ಹಾಗೂ ಮಕ್ಕಳ ಲಾಲನೆಪಾಲನೆಗಳನ್ನೂ ನಿರಾಕರಿಸಿದಳು. ಆಗ ಈತನು ಗಂಡ ಜೀವದಿಂದಿರಲಿ ಇಲ್ಲವೆ ಮರಣಹೊಂದಿರಲಿ, ಮಡದಿಯೆನ್ನಿಸಿದವಳು ಅವನೊಂದಿಗೆ ನಿಷ್ಠೆಯಿಂದಲೇ ಇರತಕ್ಕದ್ದೆಂದು ಸ್ತ್ರೀಯರಿಗೆಲ್ಲ ಮಿತಿಯನ್ನು ಹಾಕಿದನು. ಅವನು ಹೀಗೆನ್ನುವನು—

ಅದ್ಯ ಪ್ರಭೃತಿ ಮರ್ಯಾದಾ ಮಯಾ ಲೋಕೇ ಪ್ರತಿಷ್ಠಿತಾ ।

ಏಕ ಏವ ಪತಿರ್ನಾರ್ಯಾ ಯಾವಜ್ಜೀವಂ ಪರಾಯಣಮ್ ॥
ಮೃತೇ ಜೀವತಿ ವಾ ತಸ್ಮಿನ್ನಾಪರಂ ಪ್ರಾಪ್ನುಯಾನ್ನರಮ್ ॥

ಪ್ರದ್ವೇಷಿಯು ತನ್ನ ಮಕ್ಕಳಿಂದ ದೀರ್ಘತಮನನ್ನು ಕಟ್ಟಿಸಿ ಹೊಳೆಯಲ್ಲಿ ಎಸೆಸಿ ಬಿಟ್ಟಳು. ಅವನು ಹೊಳೆಯೊಂದಿಗೆ ತೇಲುತ್ತ ತೇಲುತ್ತ ಬಲಿಯ ರಾಜ್ಯಕ್ಕೆ ಬಂದನು. ರಾಜನು ಅವನನ್ನು ನೀರಿನಿಂದ ಹೊರತೆಗೆಯಿಸಿದನು. ಅವನನ್ನು ಬಲು ಮರ್ಯಾದೆ ಯಿಂದ ಕಂಡನು. ದೊರೆಗೆ ಮಕ್ಕಳಿರಲಿಲ್ಲ. ದೀರ್ಘತಮನಿಂದ ಮಕ್ಕಳನ್ನು ತಡೆಯಲು ತನ್ನ ಅರಸಿಗೆ ಹೇಳಿದನು. ಅವನು ಕುರುಡನಾದ್ದರಿಂದ ಅವಳು ಅವನ ಹತ್ತಿರಕ್ಕೆ ಹೋಗದೆ ತನ್ನೊಬ್ಬಳು ದಾಸಿಯನ್ನು ಕಳಿಸಿಕೊಟ್ಟಳು. ಅವನಿಂದ ಆ ದಾಸಿಗೆ ಹನ್ನೊಂದು ಜನ ಮಕ್ಕಳಾದವು. ಅವು ಯಾರವು ಎಂಬ ಬಗೆಗೆ ಬಲಿ ಹಾಗೂ ದೀರ್ಘತಮರಲ್ಲಿ ವಾದ ಕ್ಕಿಟ್ಟುಕೊಂಡಿತು. ಹೀಗಾಗಿ ರಾಣಿಯ ಠಕ್ಕು ಹೊರಬಂದಿತು. ತರುವಾಯ ದೊರೆಯು ತನ್ನ ಅರಸಿಯನ್ನು ಬಲವಂತದಿಂದ ದೀರ್ಘತಮನ ಬಳಿಗೆ ಕಳಿಸಿದನು. ಅವನಿಂದ ಅವಳಿಗೆ ಐದು ಜನ ಮಕ್ಕಳಾದರೆಂದು ಹರಿವಂಶ, ವಿಷ್ಣುಪುರಾಣ, ಭಾಗವತ ಮೊದಲಾದ ಹೊತ್ತಗೆಗಳಲ್ಲಿ ಕಥೆಯಿದೆ.

ಇಂದ್ರನ ಆಸ್ಥಾನದಲ್ಲಿ ಈತನು ಅವನನ್ನು ಸಂತೋಷಪಡಿಸುವ ಕೆಲಸವನ್ನು ಮಾಡು ತ್ತಿದ್ದನು. ನಾರಾಯಣನ ಸ್ತುತಿಯಿಂದಾಗಿ ಈತನಿಗೆ ಕಣ್ಣು ಕಾಣತೊಡಗಿದವು. ಅಂದಿನಿಂದ ಈತ ಗೌತಮನೆಂದು ಹೆಸರಾದನು.

**ದುರ್ಯೋಧನ :** ಧೃತರಾಷ್ಟ್ರ, ಗಾಂಧಾರಿಯರ ಚೊಚ್ಚಲು ಮಗ, ಒಬ್ಬ ಒಳ್ಳೆಯ ರಥಿ, ಸಾರಥಿ, ಶಸ್ತ್ರಾಸ್ತ್ರಕುಶಲ, ಗದಾಯುದ್ಧಪ್ರವೀಣ. ಮಹಾಭಾರತ ದಲ್ಲಿಯ ಮಹತ್ವಾಕಾಂಕ್ಷಿಯಾದ ಒಂದು ವ್ಯಕ್ತಿಮತ್ವ ಈತನದು. ಈತ ಕಲಿಯ ಅಂಶ ದೊಂದಿಗೆ ಹುಟ್ಟಿಬಂದದ್ದರಿಂದ ಕ್ಷತ್ರಿಯರು ನಾಶಹೊಂದಿದರೆಂದು ಮಹಾಭಾರತದಲ್ಲಿ ಬಣ್ಣಿಸಲಾಗಿದೆ. ಈತ ಹುಟ್ಟುವ ಹೊತ್ತಿನಲ್ಲಿ ಹಲವು ಬಗೆಯ ಉತ್ಪಾತಗಳು, ದುಶ್ಚಿಹ್ನೆ ಗಳು ಕಂಡುಬರಹತ್ತಿದವು. ಈ ಮಗು ಹುಟ್ಟುತ್ತಲೇ ಕತ್ತೆಯ ಮರಿಯಂತೆ ಕಿರುಚು ತ್ತಿತ್ತು. ಕೇಡಿನ ಲಕ್ಷಣಗಳುಳ್ಳ ಈ ಬಾಲಕನನ್ನು ಕೂಡಲೇ ತೊರೆದುಬಿಡುವಂತೆ ವಿದುರ ಹಾಗೂ ಬ್ರಾಹ್ಮಣರು ಧೃತರಾಷ್ಟ್ರನಿಗೆ ಹೇಳಿದ್ದರು. ದುರ್ಯೋಧನನಿಗೆ ಪಾಂಡವರ ಬಗೆಗೆ ಎಲ್ಲಿಲ್ಲದ ಹೊಟ್ಟೆಕಿಚ್ಚು. ಭೀಮನ ಮೇಲೆ ಮಾತ್ರ ಎಲ್ಲರಿಗಿಂತಲೂ ಹೆಚ್ಚಿನ ರೋಷ. ಅವನನ್ನು ಕೊಲ್ಲಲು ಈತ ಹಲವು ಕಪಟಗಳನ್ನು ಹೂಡಿದನು. ಆದರೆ ಅವಾವೂ ಯಶ ಪಡೆಯಲಿಲ್ಲ. ಈತ ಅರಗಿನ ಅರಮನೆಯಲ್ಲಿ ಸುಡುವುದು, ವಿಷಪ್ರಯೋಗ, ನೀರಿಗೆ ಎಸೆಯುವುದು ಮೊದಲಾದ ಹಲವು ಬಗೆಗಳಿಂದ ಭೀಮನನ್ನು ಹಿಂಸಿಸಿದನು. ಕರ್ಣ ಹಾಗೂ ಶಕುನಿಯರ ತಪ್ಪುಸಲಹೆಗಳಿಂದಾಗಿಯೂ ಒಣ ಅಹಂಕಾರದಿಂದಾಗಿಯೂ ಈತ ಪಾಂಡವರನ್ನು ತುಂಬ ಹಿಂಸಿಸಿದನು. ತುಂಬುಸಭೆಯಲ್ಲಿ ದ್ರೌಪದಿಯ ಮಾನಭಂಗವನ್ನು ಎಸಗಿದನು. ಅವಳಿಗೆ ತನ್ನ ತೊಡೆಯನ್ನು ತೆರೆದು ತೋರಿಸಿದನು. ಪಾಂಡವರ ವೈಭವ ಅವನ ಕಣ್ಣುಗಳನ್ನು ಕುಕ್ಕುತ್ತಿತ್ತು. ಶೌರ್ಯದಿಂದ ಅವರನ್ನು ಸೋಲಿಸಲು ತನಗೆ ಸಾಧ್ಯವಿಲ್ಲೆಂದು ತಿಳಿದದ್ದರಿಂದ ಜೂಜಾಟದಲ್ಲಿ ಕಪಟದಿಂದ ಸೋಲಿಸಿ ಅವರ ಸೊತ್ತನ್ನು ಕಸಿದುಕೊಂಡು ಅವರನ್ನು ಕಾಡಿಗೆ ಅಟ್ಟಿದನು. ಪಾಂಡವರು ಈತನನ್ನು ಹಲವು ಸಲ

ಫಜೀತಿಗೆ ಸಿಲುಕಿಸಿದರು. ಹಲವು ಸಲ ಈತನನ್ನು ಹಾಗೂ ಕೌರವರನ್ನು ಸಂಕಟದಿಂದ ಪಾರುಮಾಡಿದರು. ಆದರೂ ಅವನಿಗೆ ಪಾಂಡವರನ್ನು ಕಂಡರಾಗುತ್ತಿರಲಿಲ್ಲ. ಅವರನ್ನು ಹೆಚ್ಚುಹೆಚ್ಚಾಗಿ ದ್ವೇಷಿಸಹತ್ತಿದನು. ಯುಧಿಷ್ಠಿರ ಯುವರಾಜನಾಗುವುದು ಈತನಿಗೆ ಹಿಡಿಸಲಿಲ್ಲ. ಪಾಂಡವರು ಕಾಡಿನಲ್ಲಿದ್ದಾಗಲೂ ಅವರನ್ನು ಪೀಡಿಸದೆ ಬಿಡಲಿಲ್ಲ. ಪಾಂಡವರ ವನವಾಸ ಹಾಗೂ ಅಜ್ಞಾತವಾಸಗಳು ಮುಗಿದ ತರುವಾಯ ಅವನಿಗೆ ಅವರ ರಾಜ್ಯ ವನ್ನು ಮರಳಿಕೊಡುವುದು ಈತನ ಕರ್ತವ್ಯವಾಗಿತ್ತು. ಆದರೆ ಸೂಜಿಯ ಮೊನೆಯಷ್ಟು ತಾಣವನ್ನೂ ಅವರಿಗೆ ಕೊಡಲೊಪ್ಪಲಿಲ್ಲ. ಈತನ ಈ ಹಟಮಾರಿತನದಿಂದಾಗಿಯೇ ಸರ್ವ ನಾಶವನ್ನು ಬರಮಾಡಿಕೊಂಡಂತಾಯಿತು. ಯಾರೇ ಹೇಳಿದ ಒಳ್ಳೆಯ ಉಪದೇಶದ ಮಾತುಗಳು ಕೂಡ ಈತನಿಗೆ ರುಚಿಸುತ್ತಿರಲಿಲ್ಲ. ಹಿರಿಯರೂ, ಹಿರಿಮೆಯುಳ್ಳವರೂ ಆದ ವ್ಯಕ್ತಿಗಳೆಲ್ಲ ಪಾಂಡವರೊಡನೆ ಕಾದಾಟವನ್ನು ತಪ್ಪಿಸಲೆಂದೂ, ಒಂದು ಒಪ್ಪಂದದ ನಿಲುವಿಗೆ ತರಲೆಂದೂ ಈತನಿಗೆ ಪರಿಪರಿಯಾಗಿ ಹೇಳಿ ನೋಡಿದರು. ಆದರೆ ಈತ ಅವರಾರನ್ನೂ ಲೆಕ್ಕಿಸಲಿಲ್ಲ. ತನ್ನ ಹಟವನ್ನು ಬಿಡಲಿಲ್ಲ. ಅವನ ಒಂದೇ ಒಂದು ಗುರಿ ಯೆಂದರೆ ಪಾಂಡವರ ನಾಶ. ಹೀಗಾಗಿ ಶ್ರೀಕೃಷ್ಣನ ಮಧ್ಯಸ್ಥಿಕೆಯೂ ಯಶಸ್ವಿಯಾಗಲಿಲ್ಲ. ಇಷ್ಟೇ ಅಲ್ಲದೆ ಈತ ಶ್ರೀಕೃಷ್ಣನನ್ನೂ ಸೆರೆಹಿಡಿಯಲು ಹವಣಿಸಿದನು. ಕೌರವರ ಸೇನೆ ಹಾಗೂ ತನ್ನ ಬಂಧುಬಳಗದವರೆಲ್ಲ ನಾಶಹೊಂದಿದ ಬಳಿಕ ಈತ ಒಂದು ಸರೋವರದಲ್ಲಿ ಅಡಗಿಕೊಂಡು ಕುಳಿತನು. ಭೀಮನೊಂದಿಗೆ ಗದಾಯುದ್ಧ ನಡೆಯಿತು. ಅವನು ಈತನ ತೊಡೆಯನ್ನು ಒಡೆದದ್ದರಿಂದ ಈತ ವಿಕಲಾಂಗನಾದನು, ಅಸಹಾಯನಾದನು. ಅಶ್ವತ್ಥಾಮನು ಧೃಷ್ಟದ್ಯುಮ್ನ ಹಾಗೂ ಪಾಂಡವರನ್ನು ಕ್ರೂರವಾಗಿ ಕೊಂದುದನ್ನು ಕೇಳಿ ಈತ ಕೃತಕೃತ್ಯನಾಗಿ ಜೀವವನ್ನು ತೊರೆದನು.

ಕಾಶಿಯ ಅರಸುಕುವರಿ ಭಾನುಮತಿ ಈತನ ಮಡದಿ. ಇವರಿಗೆ ಲಕ್ಷ್ಮಣ ಹಾಗೂ ಲಕ್ಷ್ಮಣಾ ಎಂಬ ಮಕ್ಕಳಿದ್ದರು. ಬಲರಾಮನಿಗೆ ಈತನ ಬಗೆಗೆ ಅನುಕಂಪವಿತ್ತು. ಆತ ಈತನ ಗದಾನೈಪುಣ್ಯವನ್ನು ಗೌರವಿಸುತ್ತಿದ್ದನು.

> ಜಾನಾಮಿ ಧರ್ಮಂ ನ ಚ ಮೇ ಪ್ರವೃತ್ತಿಃ ।
> ಜಾನಾಮ್ಯಧರ್ಮಂ ನ ಚ ಮೇ ನಿವೃತ್ತಿಃ ॥

ಎಂಬುದಾಗಿ ಈತನ ಸ್ವಭಾವವೈಶಿಷ್ಟ್ಯವನ್ನು ಕುರಿತು ಪಾಂಡವಗೀತೆಯಲ್ಲಿ ಬಣ್ಣಿಸ ಲಾಗಿದೆ.

**ದುರ್ವಾಸ:** ಅತ್ರಿಋಷಿಗೆ ಅನಸೂಯೆಯಿಂದ ಹುಟ್ಟಿದ ಮಗ. ಅತ್ರಿಯ ತಲೆ ಯಿಂದ ಹೊರಟ ತೇಜಸ್ವಿಯಾದ ಜ್ವಾಲೆಯಿಂದ ಈತನ ನಿರ್ಮಿತಿ ಆಯಿತು—ಎಂದು ಶಿವಶತರುದ್ರಸಂಹಿತೆಯಲ್ಲಿ ಹೇಳಲಾಗಿದೆ. ಶಂಕರನು ತ್ರಿಪುರರನ್ನು ನಾಶಗೊಳಿಸಲೆಂದು ಎಸೆದ ಬಾಣವು ಕಿರಿಯ ಬಾಲಕನ ರೂಪವನ್ನು ಪಡೆದು ಹಿಂತಿರುಗಿ ಬಂದು ಶಂಕರನ ತೊಡೆಯೇರಿ ಕುಳಿತಿತಂತೆ. ಈತನೇ ದುರ್ವಾಸನೆಂದು ಮಹಾಭಾರತದಲ್ಲಿ ಬಣ್ಣಿಸಲಾಗಿದೆ. ಈತನನ್ನು ಶಿವನ ಅವತಾರವೆಂದು ತಿಳಿಯಲಾಗುತ್ತದೆ. ಈತ ಬಲು ತಾಮಸಿ. ಯಾವಾಗಲೂ ಬೇರೆಯವರನ್ನು ಪೀಡಿಸುತ್ತಿದ್ದನು. ಪುರಾಣಗಳಲ್ಲಿ ಲೆಕ್ಕವಿಲ್ಲದಷ್ಟು

ಈತನ ಕೋಪದ ಕಥೆಗಳಿವೆ. ಈತನು ಇಂದ್ರನಿಗರ್ಪಿಸಿದ ಹೂಹಾರವನ್ನು ಅವನು ಐರಾವತದ ಕಾಲ್ಕೆಳಗೆ ತುಳಿಸಿಹಾಕಿದ್ದರಿಂದ ರೊಚ್ಚಿಗೆದ್ದು 'ನಿನ್ನ ಸಂಪತ್ತೆಲ್ಲ ನಾಶವಾಗಲಿ'—ಎಂದು ಇಂದ್ರನನ್ನು ಶಪಿಸಿದನು. ಇಂದ್ರನು ಉಶ್ಶಾಪಕ್ಕಾಗಿ ಕೋರಿದರೂ ಈತ ಅದಕ್ಕೊಪ್ಪಲಿಲ್ಲ. ಈತನು ವಿನಾಕಾರಣವಾಗಿ ಅಂಬರೀಷನನ್ನು ಪೀಡಿಸಿದನು. ಈ ಪೀಡೆ ಈತನನ್ನೇ ಅಂಟಿಕೊಂಡಿತು. ವಿಷ್ಣುಚಕ್ರದಿಂದ ಬಿಡುಗಡೆಹೊಂದಬೇಕಾದರೆ ಈತನೇ ಅಂಬರೀಷನ ಕಾಲುಗಳನ್ನು ಹಿಡಿದುಕೊಳ್ಳಬೇಕಾಗಿಬಂದಿತು.

ಇವನೊಮ್ಮೆ ಒಂದು ಸಾವಿರ ವರ್ಷಗಳ ಕಾಲ ಉಪವಾಸವನ್ನು ಕೈಕೊಂಡನು. ಅದನ್ನು ನಿಲ್ಲಿಸುವ ಕಾಲಕ್ಕೆ ಶ್ರೀರಾಮನಲ್ಲಿಗೆ ಹೋದನು. ಆಗ ಕಾಲನು ಶ್ರೀರಾಮನ ಸಂಗಡ ಏಕಾಂತದಲ್ಲಿ ಮಾತನಾಡುತ್ತ ಕುಳಿತಿದ್ದನು. ಹೀಗಾಗಿ ಲಕ್ಷ್ಮಣನು ಶ್ರೀರಾಮನ ಅಪ್ಪಣೆಯು ಮೇರೆಗೆ ಈತನನ್ನು ತಕ್ಷಣ ರಾಮನ ಬಳಿಗೆ ಹೋಗಲು ಬಿಡಲಿಲ್ಲ. ಅವನು ಈತನಿಗೆ ತುಸು ಹೊತ್ತು ಕಾಯಲು ಹೇಳಿದನು. ತಕ್ಷಣ ತನ್ನನ್ನು ರಾಮನೊಂದಿಗೆ ಭೆಟ್ಟಿಯಾಗಲು ಬಿಡದಿದ್ದರೆ ತಾನು ಎಲ್ಲರನ್ನೂ ಶಪಿಸುವುವಾಗಿ ಬೆದರಿಕೆ ಹಾಕಿದನು. ಲಕ್ಷ್ಮಣನು ಈತನನ್ನು ರಾಮನಿಗೆ ಭೆಟ್ಟಿಮಾಡಿಸಿದನು. ಶ್ರೀರಾಮನು ಈತ ಬಯಸಿದುದನ್ನು ಉಣಬಡಿಸಿ ಈತನನ್ನು ತೃಪ್ತನನ್ನಾಗಿ ಮಾಡಿದನು. ಈತನು ಮುದ್ಗಲನನ್ನು ಪರೀಕ್ಷಿಸಿ ನೋಡಿ, 'ನೀನು ಸದೇಹದೊಂದಿಗೆ ಸ್ವರ್ಗಕ್ಕೆ ತೆರಳುವಿ' ಎಂದು ಅವನಿಗೆ ವರವನ್ನಿತ್ತನು. ಇವನು ಶ್ರೀಕೃಷ್ಣನಿಗೆ ವರವನ್ನೂ, ರುಕ್ಮಿಣಿಗೆ ಶಾಪವನ್ನೂ ಇತ್ತುದಾಗಿ ಸ್ಕಂದಪುರಾಣದಲ್ಲಿ ಉಲ್ಲೇಖಿಸಲಾಗಿದೆ. ಈತನು ಶಿವಾರಾಧನೆಯನ್ನು ಮಾಡಿ ತುಂಬ ತಪಸ್ಸುಮಾಡಿದನು. ಇಷ್ಟಾಗಿಯೂ ಶಂಕರ ಪ್ರಸನ್ನನಾದಲಿಲ್ಲ. ಹೀಗಾಗಿ ಅವನನ್ನೇ ಶಪಿಸಿದನು. ಔರ್ವಋಷಿಕನ್ಯೆ ಕಂದಲಿ ಈತನ ಮಡದಿ. ಸಿಟ್ಟಿನ ಭರದಲ್ಲಿ ಇವನು ಅವಳನ್ನು ಶಾಪದಿಂದ ಸುಟ್ಟು ಬೂದಿ ಮಾಡಿದನು. ಈತನ ಹೆಸರಿಗೆ ಹಲವಾರು ಹೊತ್ತಗೆಗಳಿವೆ.

ದುರ್ವಾಸನು ಕುಂತಿಗೆ ದೇವಹೂತಿ ಎಂಬ ವಿದ್ಯೆಯನ್ನು ದಯಪಾಲಿಸಿದ್ದನು. ಈ ವಿದ್ಯೆಯಿಂದಾಗಿ ಅವಳಿಗೆ ಸೂರ್ಯ, ಯಮ, ವಾಯು ಮತ್ತು ಇಂದ್ರ, ಅಲ್ಲದೆ ಮಾದ್ರಿಗೆ ಅಶ್ವಿನೀಕುಮಾರರಿಂದ ನಕುಲಸಹದೇವರೆಂಬ ಅವಳಿಮಕ್ಕಳಾದವು. ಶ್ರೀ ಮ. ರಂ. ಶಿರವಾಡಕರ್ ಅವರ ಅಭಿಪ್ರಾಯದಂತೆ ದುರ್ವಾಸನೇ ಪಾಂಡವರಿಗೆ ಪಿತನು.

**ದೇವಯಾನಿ :** ದೈತ್ಯರ ಗುರು ಶುಕ್ರಾಚಾರ್ಯನ ರೂಪವತಿ ಮಗಳು. ದೇವಗುರು ಬೃಹಸ್ಪತಿಯ ಮಗ ಕಚ ಸಂಜೀವಿನಿವಿದ್ಯೆಯನ್ನು ಕಲಿಯಲೆಂದು ಶುಕ್ರಾಚಾರ್ಯನ ಬಳಿಗೆ ಬಂದನು. ಈಕೆ ಆತನ ರೂಪ, ನಡತೆಗಳಿಗೆ ಮಾರುಹೋದಳು. ದೈತ್ಯರು ಹೊಟ್ಟೆಕಿಚ್ಚಿನಿಂದ ಕಚನನ್ನು ಮೂರು ಸಲ ಕೊಂದರು. ಆಗ ಇವಳು ಶುಕ್ರಾಚಾರ್ಯರ ನೆರವಿನಿಂದ ಆತನನ್ನು ಬದುಕಿಸಿದಳು. ಕಚನು ದೇವಯಾನಿಯ ಮದುವೆಯ ಬೇಡಿಕೆಯನ್ನು ಒಪ್ಪಲಿಲ್ಲ. ಇವಳು, 'ಹಾಗಿದ್ದರೆ ನಿನ್ನೀ ವಿದ್ಯೆ ಸಫಲವಾಗದು' ಎಂದು ಅವನನ್ನು ಶಪಿಸಿದಳು. ಅವನೂ ಕೂಡ, 'ಹಾಗಿದ್ದರೆ ಯಾವ ಬ್ರಾಹ್ಮಣಕುಮಾರನೂ ನಿನ್ನನ್ನು ಮದುವೆಯಾಗಲಾರ'ನೆಂದು ಮರುಶಾಪವಿತ್ತನು. ದೈತ್ಯರ ದೊರೆ ವೃಷಪರ್ವನ ಮಗಳು ಶರ್ಮಿಷ್ಠೆಯು ಈಕೆಯ ಗೆಳತಿ. ಒಂದು ಸಲ ಇವರಿಬ್ಬರಲ್ಲಿ ಜಗಳವಾಗುತ್ತಲೇ

ಶರ್ಮಿಷ್ಠೆಯು ಇವಳನ್ನು ಬಾವಿಗೆ ನೂಕಿಬಿಟ್ಟಳು. ಯಯಾತಿಯು ಅವಳನ್ನು ಬಾವಿಯಿಂದ ಮೇಲೆತ್ತಿದನು. ಅವನು ಇವಳನ್ನು ತನ್ನ ಮಡದಿಯಾಗಿ ಸ್ವೀಕರಿಸಿದನು. ಶುಕ್ರಾಚಾರ್ಯನ ಶಾಪದ ಹೆದರಿಕೆ ಹಾಗೂ ಜ್ಞಾತಿಯ ಕಲ್ಯಾಣಕ್ಕಾಗಿ ಶರ್ಮಿಷ್ಠೆಯು ದೇವಯಾನಿಯ ದಾಸ್ಯತ್ವವನ್ನು ಒಪ್ಪಿಕೊಂಡಳು. ಯಯಾತಿಯಿಂದ ಶರ್ಮಿಷ್ಠೆಗೆ ಮೂರು ಜನ ಮಕ್ಕಳಾದರು. ದೇವಯಾನಿಗೆ ಮಾತ್ರ ಇಬ್ಬರೇ ಗಂಡುಮಕ್ಕಳಾದರು. ಯಯಾತಿಯೊಂದಿಗಿನ ಶರ್ಮಿಷ್ಠೆಯ ನಂಟು ದೇವಯಾನಿಗೆ ಸಹಿಸಲಸಾಧ್ಯವಾಯಿತು. ಈಕೆ ಶುಕ್ರಾಚಾರ್ಯನ ಕೈಲಿ ಅವನಿಗೆ ಮುಪ್ಪಿನ ಶಾಪವನ್ನು ಕೊಡಿಸಿದಳು. ಈಕೆ ಬಲು ಮಾನವಂತೆ, ಅಹಂಕಾರಿ ಹಾಗೂ ಹೊಟ್ಟೆಕಿಚ್ಚಿನವಳಾಗಿದ್ದಳು. ಈಕೆ ತನ್ನ ಸ್ವಾರ್ಥಕ್ಕಾಗಿ ಶುಕ್ರಾಚಾರ್ಯನ ಸಂಜೀವಿನಿ ವಿದ್ಯೆಯನ್ನೂ, ಜ್ಞಾನವನ್ನೂ ತುಂಬ ಬಳಸಿಕೊಂಡಳು.

**(ಅಸಿತ) ದೇವಲ :** ಕಶ್ಯಪನ ಮಗ ಅಸಿತ ದೇವಲ ಒಬ್ಬ ಸೂಕ್ತದ್ರಷ್ಟಾರನಾಗಿದ್ದನು. ಜೈಗೀಷವ್ಯ ಹಾಗೂ ನಾರದರೊಂದಿಗೆ ಈತನ ಸಂಭಾಷಣೆ ತುಂಬ ಸಾಗುತ್ತಿತ್ತು. ಜೈಗೀಷವ್ಯನು ತನ್ನ ತಪಸ್ಸು ಹಾಗೂ ಯೋಗಸಾಮರ್ಥ್ಯದ ದರ್ಶನವನ್ನು ಮಾಡಿಸಿದನು. ಆದರಿಂದ ಇವನು ಬಲು ಪ್ರಭಾವಿತನಾದನು. ಅವನು ಈತನಿಗೆ ಯೋಗವನ್ನು ಉಪದೇಶಿಸಿ ಸಂನ್ಯಾಸದ ದೀಕ್ಷೆಯನ್ನಿತ್ತನು. ಆದರಿಂದಾಗಿ ಈತನಿಗೆ ಪರಮ ಸಿದ್ಧಿಗಳೂ, ಶ್ರೇಷ್ಠವಾದ ಯೋಗಜ್ಞಾನವೂ ಪ್ರಾಪ್ತವಾಯಿತು. ಹಿಮಾಲಯನ ಮಗಳು ಏಕಪರ್ಣಾ ಈತನ ಮಡದಿ. ಯುಧಿಷ್ಠಿರನ ಮಯಸಭೆ, ಬ್ರಹ್ಮದೇವನ ಒಡ್ಡೋಲಗ, ಸ್ಯಮಂತಕಕ್ಷೇತ್ರ, ವಿದೇಹ ಮುಂತಾದೆಡೆಗಳಲ್ಲೆಲ್ಲ ಈತನು ಉಪಸ್ಥಿತನಾಗಿ ಇರುವ ಉಲ್ಲೇಖಗಳು ಮಹಾಭಾರತದಲ್ಲಿವೆ. ಈತ ಸ್ಮೃತಿಕಾರನಾಗಿದ್ದನು. ದೇವಲಸ್ಮೃತಿಯು ಹೆಸರಾದುದು.

**ದೇವಶರ್ಮ :** ಜನಮೇಜಯನ ಸರ್ಪಯಜ್ಞದ ಒಬ್ಬ ಋಷಿ. ಅದ್ವಿತೀಯ ಸೌಂದರ್ಯವತಿಯಾದ ರುಚಿಯೇ ಈತನ ಮಡದಿ ಈತನು ತನ್ನ ಈ ಮನದನ್ನೆಯನ್ನು ಕಾಪಾಡುವ ಹೊಣೆಯನ್ನು ತನ್ನ ಪ್ರಿಯಶಿಷ್ಯ ವಿಪುಲನ ಮೇಲೆ ಹೊರಿಸಿ ಯಜ್ಞಕಾರ್ಯಕ್ಕಾಗಿ ಪಯಣ ಹೋದನು. ಇಂದ್ರನು ರುಚಿಯ ಒಂಟಿತನದ ದುರ್ಲಾಭವನ್ನು ಪಡೆಯಲು ಹಂಚಿಕೆಹಾಕಿದ್ದನು. ವಿಪುಲ ತನ್ನ ಯೋಗಸಾಮರ್ಥ್ಯದಿಂದ ಅದನ್ನು ಸದೆಬಡಿದನು. ತನ್ನ ಗುರುವಿನ ಮಡದಿಯ ಪಾತಿವ್ರತ್ಯವನ್ನು ಕಾಪಾಡಿದನು. ವಿಪುಲ ತನ್ನ ಗುರುಪತ್ನಿಯ ದೇಹವನ್ನು ಹೊಕ್ಕಿದ್ದನು. ಆತನ ವಿಶುದ್ಧವಾದ ಗುರಿಯನ್ನು ಗುರುತಿಸಿ ದೇವಶರ್ಮನು ಅವನಿಗೆ ವರವಿತ್ತನು. ಆದರೂ ಒಳ್ಳೆಯ ಚಾತುರ್ಯದಿಂದ ಆತನ ತಪ್ಪನ್ನೂ ಗಮನಕ್ಕೆ ತಂದುಕೊಡಲು ಮರೆಯಲಿಲ್ಲ. ಸ್ವರ್ಗಪ್ರಾಪ್ತಿಯಾಗಲೆಂದು ಹರಸಿದನು.

**ದ್ರೋಣ :** ಅಂಗಿರಸ ಗೋತ್ರದವನಾದ ಭರದ್ವಾಜಋಷಿಯ ಮಗ. ಘೃತಾಚಿ ಎಂಬ ಅಪ್ಸರೆಯನ್ನು ಕಾಣುತ್ತಲೇ ಭಾರದ್ವಾಜನ ವೀರ್ಯಸ್ಖಲನಹೊಂದಿತು. ಅವನು ಅದನ್ನು ಒಂದು ದೊನ್ನೆಯಲ್ಲಿ ಹಿಡಿದಿಟ್ಟಕಾರಣ ಈತ ಹುಟ್ಟಿಬಂದು 'ದ್ರೋಣ'ನೆಂದು ಹೆಸರುಪಡೆದನು. ಈತ ಬೃಹಸ್ಪತಿಯ ಅಂಶನೆನ್ನಿಸಿದ್ದಾನೆ. ಈತನಿಗೆ ತಂದೆಯಿಂದಲೇ

ಧನುರ್ವೇದ ಹಾಗೂ ವೇದಗಳ ಪರಿಚಯು ಆಯಿತು. ಈತ ದ್ರುಪದನ ಬಾಲಮಿತ್ರನು. ಅವನಿಂದ ಅವಮಾನಿತಗೊಂಡು ಅವನ ಹಗೆಯಾದನು. ಪರಶುರಾಮನಿಂದ ಅಸ್ತ್ರವಿದ್ಯೆಯನ್ನು ಕಲಿತನು. ಮಂತ್ರವಿದ್ಯೆಯನ್ನೂ ಚೆನ್ನಾಗಿ ಬಲ್ಲವನು. ಭೀಷ್ಮನು ಕೌರವ-ಪಾಂಡವರಿಗೆ ತರಬೇತಿಯನ್ನು ನೀಡಲು ಈತನನ್ನು ನೇಮಿಸಿದನು. ಈತನು ಏಕಲವ್ಯನಿಗೆ ಧನುರ್ವಿದ್ಯೆಯನ್ನು ನಿರಾಕರಿಸಿದನು. ಆದರೂ ಆತ ಅದರಲ್ಲಿ ನುರಿತವನಾದನು. ಅವನಿಂದ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಪಡೆದು ಅವನ ವಿದ್ಯೆ ಕೆಲಸಕ್ಕೆ ಬಾರದಂತೆ ಮಾಡಿದನು. ದ್ರೋಣನು ದ್ರುಪದನನ್ನು ಸೋಲಿಸಿ ಅವನ ಅರ್ಧರಾಜ್ಯವನ್ನು ವಶಪಡಿಸಿಕೊಂಡನು. ಈತ ಕಡುಗಲಿಯೆನ್ನಿಸಿದ್ದನು. ಭೀಷ್ಮನ ವಧೆಯ ತರುವಾಯ ಕೌರವರ ದಂಡನಾಯಕನಾದನು. ಐದು ದಿನಗಳಲ್ಲಿ ಪಾಂಡವರ ಸೇನೆಯನ್ನು ತುಂಬ ಹಾನಿಗೀಡುಮಾಡಿದನು. ಈತ ದುರ್ಯೋಧನನಿಗಾಗಿ ತನ್ನ ಪ್ರಾಣವನ್ನೇ ಪಣಕ್ಕೊಡ್ಡಿ ಹೋರಾಡಿದರೂ ಆತ ಮಾತ್ರ ಈತನನ್ನು ಪಾಂಡವಪಕ್ಷಪಾತಿ ಎಂದೇ ಬಗೆದಿದ್ದನು. ಈತನಿಗೆ ದುರ್ಯೋಧನನ ಮಾತುಗಳನ್ನು ಸಹಿಸಲಸಾಧ್ಯ ಎನ್ನಿಸುತ್ತಿತ್ತು. ಈತನು ದುರ್ಯೋಧನನಿಗೆ ಪಾಂಡವರೊಡನೆ ಒಪ್ಪಂದವನ್ನು ಮಾಡಿಕೊಳ್ಳಲು ಹೇಳುತ್ತಿದ್ದನು. ಈತ ಅರ್ಜುನನ ಬಿಲ್ಲುವಿದ್ಯೆಯ ನೈಪುಣ್ಯವನ್ನು ಗೌರವಿಸುತ್ತಿದ್ದನು. ಪಣತೊಟ್ಟು ಒಬ್ಬನಾದರೂ ಪಾಂಡವ ವೀರನನ್ನು—ಅಭಿಮನ್ಯುವನ್ನು—ಕೊಂದನು. ಭೀಮನು 'ಅಶ್ವತ್ಥಾಮ'ನೆಂಬ ಒಂದು ಆನೆಯನ್ನು ಕೊಂದನು. ಯುಧಿಷ್ಠಿರನು 'ನರೋ ವಾ ಕುಂಜರೋ ವಾ' ಎಂದು ಘೋಷಿಸಿದ್ದರಿಂದ ತನ್ನ ಮಗ 'ಅಶ್ವತ್ಥಾಮ'ನೇ ಮಡಿದನೆಂದುಕೊಂಡು ಈತ ಹತಾಶನಾದನು. ಈತ ಶಸ್ತ್ರವನ್ನು ಕೆಳಗಿಡುತ್ತಲೇ ಇದೇ ಅವಕಾಶವನ್ನು ಬಳಸಿಕೊಂಡು ದ್ರುಪದನ ಮಗ ಧೃಷ್ಟದ್ಯುಮ್ನನು ತನ್ನ ಖಡ್ಗದಿಂದ ಈತನ ತಲೆಯನ್ನು ಕಡಿದು ಉರುಳಿಸಿದನು. ಕೃಪಾಚಾರ್ಯನ ಸೋದರಿ ಕೃಪಿಯು ದ್ರೋಣನ ಮಡದಿ; ಅಶ್ವತ್ಥಾಮ ಮಗ.

**ದ್ರೌಪದಿ :** ಸೋಮವಂಶದ ದೊರೆಯಾದ ದ್ರುಪದನ ಅಯೋನಿಸಂಭವಳಾದ ಮಗಳು. ಈಕೆ ಯಜ್ಞಕುಂಡದಲ್ಲಿ ಹುಟ್ಟಿಬಂದವಳಾದ್ದರಿಂದ ಯಾಜ್ಞಸೇನಿ ಎಂಬ ಹೆಸರಿನಿಂದಲೂ ಗುರುತಿಸಲ್ಪಡುತ್ತಾಳೆ. ಇವಳನ್ನು 'ಪಾಂಚಾಲಿ' ಎಂದೂ ಕರೆಯಲಾಗುತ್ತದೆ. ಅರ್ಜುನನು ಇವಳ ಸ್ವಯಂವರದ ಕಷ್ಟದ ಪಣವನ್ನು ಗೆದ್ದು ಇವಳನ್ನು ಮನೆಗೆ ಕರೆತಂದನು. ಕುಂತಿಯ ಅಪ್ಪಣೆಯ ಮೇರೆಗೆ ಇವಳು ಪಾಂಡವರೆಲ್ಲರಿಗೂ ಮಡದಿ ಎನ್ನಿಸಿದಳು. ಹಿಂದಿನ ಜನ್ಮದಲ್ಲಿ ಋಷಿಕನ್ಯೆಯಾಗಿದ್ದಳು. ಬರುವ ಜನ್ಮದಲ್ಲಿ ಉತ್ತಮನಾದ ಗಂಡ ತನಗೆ ದೊರಕಲೆಂದು ಶಂಕರನನ್ನು ಮೊರೆಯಿಟ್ಟಳು. ಇವಳು ಐದು ಸಲ ಮೊರೆಯಿಟ್ಟಬಳಿಕ ಶಂಕರನು ಪ್ರಸನ್ನನಾಗಿ ವರವಿತ್ತ ಕಾರಣ ಇವಳಿಗೆ ಐವರು ಗಂಡಂದಿರು ದೊರೆತರೆಂದು ವ್ಯಾಸನು ದ್ರುಪದನಿಗೆ ಹೇಳಿದನು. ಅಲ್ಲದೆ ಐವರು ಪಾಂಡವರ ಮಡದಿಯಾಗುವುದರಿಂದ ಅದಾವ ಅಧರ್ಮವೂ ಆಗದೆಂದು ಬೇರೆ ಅವನಿಗೆ ತಿಳಿಸಿದನು. ಈ ಬಗೆಗೆ ಪುರಾಣದಲ್ಲಿರುವ ಕಥೆಯೇ ಬೇರೆ. ದ್ರೌಪದಿಯ ಬಾಳಿನ ಹಲವಾರು ಘಟನೆಗಳು ಅಲೌಕಿಕವಾದವುಗಳು. ಐವರು ಗಂಡಂದಿರು, ತುಂಬುಸಭೆಯಲ್ಲಿ ಮಾನಭಂಗ, ಒಂದೇ ಕಾಲಕ್ಕೆ ಗಂಡುಮಕ್ಕಳೆಲ್ಲರ ಸಾವು, ದಾಸ್ಯತ್ವ ಮುಂತಾದವುಗಳು.

ಈಕೆ ಬಲು ಚುರುಕುಮತಿಯಾಗಿದ್ದಳು. ದ್ರೋಣ, ಭೀಷ್ಮರಂಥವರೂ ಕೂಡ ಇವಳ ಪ್ರಶ್ನೆಗಳನ್ನು ಉತ್ತರಿಸಲಾಗದೇ ಹೋಗುತ್ತಿದ್ದರು. ಜಯದ್ರಥ ಹಾಗೂ ಕೀಚಕರು ಇವಳನ್ನು ಕೆಣಕಿದ್ದರಿಂದ ತಮ್ಮ ದೇಹಗಳನ್ನೇ ತ್ಯಜಿಸಬೇಕಾಗಿ ಬಂದಿತು. ಕೌರವರು ಎಸಗಿದ ಅನ್ಯಾಯದ ಪರಿಮಾರ್ಜನೆ ಕೇವಲ ಯುದ್ಧದಿಂದಲೇ ಸಾಧ್ಯವೆಂದು ನಂಬಿದವಳು. ಈಕೆ ಶ್ರೀಕೃಷ್ಣನನ್ನೂ, ತನ್ನ ಗಂಡಂದಿರನ್ನೂ ಹೀಗಳೆದು ಅವರು ಯುದ್ಧಕ್ಕೆ ಸಿದ್ಧರಾಗುವಂತೆ ಅಣಿಮಾಡಿದಳು. ಅಜ್ಞಾತವಾಸದ ಕಾಲಕ್ಕೆ ಇವಳು ವಿರಾಟನಗರದಲ್ಲಿ ಸೈರಂಧ್ರಿಯಾಗಿ ಉಳಿದಳು. ಆಗಲೂ ಇವಳು ತನ್ನ ಶರತ್ತುಗಳನ್ನೊಡ್ಡದೆ ಇರಲಿಲ್ಲ. ಈಕೆ ಬಲು ಸ್ವಾಭಿಮಾನಿಯಾಗಿದ್ದಳು. ಈಕೆ ಪಟ್ಟ ಬವಣೆಗಳು ಭಯಂಕರವಾದವುಗಳು. ಇವಳಷ್ಟು ಮಾನಭಂಗ ಪ್ರಪಂಚದ ಯಾವ ಹೆಣ್ಣಿನ ಪಾಲಿಗೂ ಬಂದಿರಲಿಕ್ಕಿಲ್ಲ. ಈಕೆ ಸರಿಯಾದ ಯೋಗ್ಯತೆ ಮತ್ತು ಮರ್ಯಾದೆಯ ಮಿತಿಗಳನ್ನು ಕಾಪಾಡಿಕೊಂಡು ತನ್ನ ಗಂಡಂದಿರಿಗೆ ಉಚಿತ ಸಲಹೆಗಳನ್ನು ಇತ್ತಳು.

ದ್ರೌಪದಿಯ ಅಂದ, ಬುದ್ಧಿಕೌಶಲ್ಯ, ತೇಜಸ್ಸು, ತ್ಯಾಗ, ಕೋಪ, ಪ್ರೇಮ, ಸೇವಾಭಾವಗಳೆಲ್ಲವು ಅದ್ವಿತೀಯವಾದವುಗಳೇ ಸರಿ. ಶ್ರೀಕೃಷ್ಣನು ಈಕೆಗೆ ಒಂದು ಆಧಾರವೆನ್ನಿಸಿದ್ದನು. ಇವಳ ಬವಣೆಗಳನ್ನು ದೂರಗೊಳಿಸುವಲ್ಲಿ ಭೀಮ-ಅರ್ಜುನರ ಪಾಲು ದೊಡ್ಡದು. ಇವರ ಕೆರಳುವಿಕೆಯಲ್ಲೂ ವಿಲಕ್ಷಣವಾದ ತೀವ್ರತೆಯಿತ್ತು. ವೀರಪತ್ನಿ ಹಾಗೂ ವೀರಮಾತೆಯಾಗಿ ಇವಳ ಅಸಾಮಾನ್ಯ ವ್ಯಕ್ತಿತ್ವವು ಹೆಸರುವಾಸಿಯಾದುದು. ಪ್ರಾತಃಸ್ಮರಣೀಯರಾದ ಐವರು ಪತಿವ್ರತೆಯರ ಪಟ್ಟಿಯಲ್ಲಿ ಇವಳ ಹೆಸರೂ ಒಂದು.

**ಧನುಷಾಕ್ಷ:** ಈತ ರೈಭ್ಯನಾಗಿದ್ದನು. ಬಾಲಧಿಯ ಮಗ ಮೇಧಾವಿಯು ಈತನನ್ನು ಪೀಡಿಸಿದನು. ಅವನನ್ನು ನಾಶಗೊಳಿಸಲೆಂದು ಇವನು ಶಾಪವನ್ನಿತ್ತನು. ಆದರೆ ಅದು ಯಶಸ್ವಿಯಾಗಲಿಲ್ಲ. ಬಾಲಧಿಯು ತನ್ನ ಮಗನಿಗಾಗಿ ಸೀಮಿತವಾದ ಅಮರತ್ವವನ್ನು ಗಳಿಸಿಕೊಟ್ಟುದೇ ಹೀಗಾಗಲು ಕಾರಣ. ಬೆಟ್ಟಗಳು ಈತನ ಸಾವಿಗೆ ನಿಮಿತ್ತವಾಗಿದ್ದವು. ಅದನ್ನು ತಿಳಿದು ಧನುಷಾಕ್ಷನು ಬೆಟ್ಟಗಳನ್ನು ಒಡೆದು ತುಂಡುಗಳನ್ನಾಗಿ ಮಾಡುತ್ತಲೇ ಮೇಧಾವಿಯು ಸತ್ತುಬಿದ್ದನು. ನೋಡಿ: ಶಾಪ—ಕ್ರ. ೫೭, ಧನುಷಾಕ್ಷ > ಮೇಧಾವಿ.

**ಧುಂಧುಮಾರ (ಕುವಲಾಶ್ವ):** ಬೃಹದಶ್ವ ದೊರೆಯ ಮಗ ಕುವಲಾಶ್ವನು ಧುಂಧು ಎಂಬ ರಾಕ್ಷಸನನ್ನು ಕೊಂದ ಕಾರಣ ಈತ ಧುಂಧುಮಾರ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ. ಧುಂಧು ರಾಕ್ಷಸನು ಉತ್ತಂಕನನ್ನು ಪೀಡಿಸಹತ್ತಿದಾಗ ಬೃಹದಶ್ವನು ಕುವಲಾಶ್ವನಿಗೆ ಅವನನ್ನು ಸದೆಬಡಿಯಲು ಹೇಳಿದನು. ಧುಂಧುವು ತನ್ನ ಹಿಂಬಾಲಕರೊಂದಿಗೆ ಮರಳುಗಾಡಿನಲ್ಲಿ ಅಡಗಿ ಕುಳಿತನು. ಆಗ ಕುವಲಾಶ್ವನು ತನ್ನ ಮಕ್ಕಳೊಂದಿಗೆ ಹೋಗಿ ಧುಂಧುವನ್ನು ಕೊಂದನು. ಧುಂಧುವು ಕುವಲಾಶ್ವನ ಕೆಲವು ಜನ ಮಕ್ಕಳನ್ನು ಕೊಂದನು. ಬೇರೆ ಬೇರೆ ಹೊತ್ತಗೆಗಳಲ್ಲಿ ಕುವಲಾಶ್ವನ ಮಕ್ಕಳ ಸಂಖ್ಯೆ ಬೇರೆ ಬೇರೆಯಾಗಿದೆ. ವನಪರ್ವದ ೨೦ಳನೆಯ ಅಧ್ಯಾಯದಲ್ಲಿ ಕುವಲಾಶ್ವ-ಧುಂಧು ಇವರ ಕಾಳಗದ ಸವಿಸ್ತರವಾದ ವರ್ಣನೆಯಿದೆ.

**ಧೃತರಾಷ್ಟ್ರ :** ವಿಚಿತ್ರವೀರ್ಯನಿಗೆ ಮಕ್ಕಳಿರಲಿಲ್ಲ. ತಾಯಿ ಸತ್ಯವತಿಯು ಹೇಳಿ ಕೆಯ ಮೇರೆಗೆ ವ್ಯಾಸನು ಅಂಬಿಕೆಯೊಂದಿಗೆ ನಿಯೋಗವನ್ನು ಮಾಡಿದನು. ಅದರಿಂದಾಗಿ ಹುಟ್ಟಿದ ಮಗನೀತ. ಈತ ಹುಟ್ಟುಗುರುಡನು. ಭೀಷ್ಮನೇ ಅವನನ್ನು ಬೆಳೆಸಿ ದೊಡ್ಡವ ನನ್ನಾಗಿ ಮಾಡಿದನು. ಈತ ಹುಟ್ಟಿನಿಂದಲೇ ಜಾಣ. ವೇದಶಾಸ್ತ್ರಗಳಲ್ಲಿ ನಿಪುಣ. ಭೀಷ್ಮನೇ ಈತನ ಮದುವೆಯನ್ನು ಗಾಂಧಾರಿಯೊಂದಿಗೆ ಮಾಡಿಸಿದನು. ಈತನಿಂದ ಅವಳಿಗೆ ನೂರು ಜನ ಗಂಡು ಹಾಗೂ ಒಬ್ಬಳು ಹೆಣ್ಣು ಮಕ್ಕಳಾದರು. ಈತ ದುರ್ಯೋ ಧನನ ಕುಟಿಲ ಕಾರಸ್ಥಾನಗಳನ್ನು ಬೆಂಬಲಿಸುತ್ತಿದ್ದನು. ಈತನ ಪಾಂಡವರ ಬಗೆಗಿನ ಮಮತೆ ತೋರಿಕೆಯದು ಮಾತ್ರ. ದ್ರೌಪದಿಯ ಮಾನಭಂಗದ ಕಾಲಕ್ಕೆ ತುಟಿಪಿಟ್ಟೆನ್ನದೆ ಕುಳಿತಿದ್ದನು. ಆದರೂ ದ್ರೌಪದಿಗೆ ವರವನ್ನಿತ್ತು ಅವಳನ್ನು ದಾಸ್ಯದಿಂದ ಬಿಡುಗಡೆ ಮಾಡಿಸಿದನು. ಈತ ಬಲು ಸ್ವಾರ್ಥಿ. ಮಕ್ಕಳ ಬಗೆಗೆ ಕುರುಡುಪ್ರೇಮ. ಈತನ ಮಕ್ಕಳು ಪಾಂಡವರನ್ನು ಪೀಡಿಸಿದರು. ಅಲ್ಲದೆ ಕಪಟಕಾರಸ್ಥಾನಗಳನ್ನು ರಚಿಸಿದರು. ಅವರೊಂದಿಗೆ ಅನ್ಯಾಯವಾಗಿ ನಡೆದುಕೊಂಡರು. ಅವರ ಜನ್ಮಸಿದ್ಧವಾದ ಹಕ್ಕುಗಳನ್ನು ಹಿಡಿದುಕೊಂಡರು. ಇದೆಲ್ಲ ಅಧರ್ಮ ಎಂದು ಭೀಷ್ಮ, ವಿದುರರು ನೀಡಿದ ಸಲಹೆಯನ್ನು ಈತ ಒಪ್ಪಿಕೊಳ್ಳಲಿಲ್ಲ. ಈತ ಮಹಾಭಾರತ ಯುದ್ಧವನ್ನು ತನ್ನ ಕಣ್ಣುಗಳಿಂದ ಕಾಣು ವಂತಿರಲಿಲ್ಲ. ಸಂಜಯ ಅದನ್ನು ತನ್ನ ದಿವ್ಯದೃಷ್ಟಿಯಿಂದ ಕಂಡು ಈತನಿಗೆ ಇದ್ದ ಕ್ಕಿದ್ದಂತೆಯೇ ಬಣ್ಣಿಸಿ ಹೇಳುತ್ತಿದ್ದನು. ಪಾಂಡವರ ಸೋಲಿನಿಂದ ಹಿರಿಹಿರಿ ಹಿಗ್ಗು ತ್ತಿದ್ದನು. ಈತನಿಗೆ ಕುರುಕುಲದ ನಾಶ ಕಂಡುಬರುತ್ತಿತ್ತಾದರೂ ಅದನ್ನು ತಡೆಹಿಡಿಯ ಲೆಂದು ಪ್ರಯತ್ನ ಮಾಡಲಿಲ್ಲ. ಈತನ ನೂರೂ ಜನ ಮಕ್ಕಳು ಯುದ್ಧದಲ್ಲಿ ಮಡಿದರು. ಕೌರವರಿಗೆ ಅದೆಂತಹ ದುರ್ದೆಸೆ ಬಂದೊದಗಿತೆಂದರೆ ಅಶ್ವತ್ಥಾಮ, ಕೃಪ ಹಾಗೂ ಕೃತ ವರ್ಮ ಈ ಮೂವರೇ ಬದುಕಿ ಉಳಿದವರು. ಈತ ಭೀಮನ ಮೇಲೆ ಸೇಡು ತೀರಿಸಿ ಕೊಳ್ಳಲೆಂದು ಹೊಂಚುಹಾಕಿದ್ದನು. ಆದರೆ ಶ್ರೀಕೃಷ್ಣನ ಯುಕ್ತಿಯಿಂದಾಗಿ ಅದು ಯಶ ಹೊಂದಲಿಲ್ಲ. ಈತ ಭೀಮನೆಂದು ತಿಳಿದು ಕಬ್ಬಿಣದ ಪ್ರತಿಮೆಯನ್ನಪ್ಪುತ್ತಲೇ ಅದು ಒಡೆದು ಚೂರುಚೂರಾಯಿತು. ಇದರಿಂದ ಈತನ ದುಷ್ಟ ಉದ್ದೇಶ ಖಚಿತಗೊಳ್ಳುತ್ತವೆ. ತನ್ನ ಬಾಳಿಡೀ ಈತ ಪಾಂಡವರಿಗೆ ಅಹಿತವನ್ನೇ ಬಗೆದನು. ಬಾಳ ಸಂಜೆಯಲ್ಲಿ ಮಾತ್ರ ಅವರ ನೆರವಿನಿಂದಲೇ ಬದುಕುವಂತಾಯಿತು. ಯುಧಿಷ್ಠಿರನು ಈತನೊಂದಿಗೆ ಚೆನ್ನಾಗಿ ನಡೆದುಕೊಂಡನು. ಆದರೆ ಭೀಮನ ನಂಜಿನ ಮಾತುಗಳಿಂದ ತುಂಬ ಬೇಸತ್ತನು. ಕೊನೆಗೆ ಗಾಂಧಾರಿ, ಕುಂತಿ, ವಿದುರರೊಂದಿಗೆ ಕಾಡಿಗೆ ತೆರಳಿದನು. ಈತನ ಕೋರಿಕೆಯ ಮೇರೆಗೆ ವ್ಯಾಸನು ಈತನಿಗೆ ಸತ್ತವರ ದರ್ಶನವನ್ನು ಮಾಡಿಸಿದನು. ಈತ ಒಂದು ಕಾಡುಬೆಂಕಿಗೆ ಸಿಲುಕಿ ಅಸುನೀಗಿದನು. ಈತ ಕಡುಲೋಭಿ, ಧೂರ್ತ, ಸುಳ್ಳುಗಾರ, ದುಷ್ಟಬುದ್ಧಿ ಯುವ, ಚಂಚಲ ಹಾಗೂ ಅನಿಶ್ಚಿತತೆಯಿಂದ ಕೂಡಿದವನಾಗಿದ್ದನು. ಹೆಸರಿಗೆ ಮಾತ್ರ ದೊರೆಯಾಗಿದ್ದನು. ದುರ್ಯೋಧನನೆದುರು ಈತನ ಆಟ ನಡೆಯುತ್ತಿರಲಿಲ್ಲ.

**ಧೃಷ್ಟದ್ಯುಮ್ನ :** ದ್ರುಪದನ ಅಯೋನಿಸಂಭವನಾದ ಮಗ. ದ್ರುಪದನು ದ್ರೋಣನ ಮೇಲೆ ಸೇಡು ತೀರಿಸಿಕೊಳ್ಳಲೆಂದು ಯಾಜೋಪಯಾಜನೆಂಬ ಮುನಿಯಿಂದ ಯಜ್ಞವನ್ನು ಮಾಡಿಸಿ ಅಗ್ನಿಯಿಂದ ಈ ಮಗನನ್ನು ಪಡೆದನು. ನಂತರ ದ್ರೌಪದಿಯು

ಸ್ವಯಂವರದ ಕಾಲಕ್ಕೆ ಅರ್ಜುನನು ಬ್ರಾಹ್ಮಣನ ಮಾರುವೇಷದಲ್ಲಿ ಮತ್ಸ್ಯಭೇದವನ್ನು ಕೈಕೊಂಡದ್ದರಿಂದ ಒಂದು ಸಮಸ್ಯೆ ಹುಟ್ಟಿಕೊಂಡಿತು. ಆದರಿಂದಾಗಿ ಅಲ್ಲಿಯೇ ಕಾಳಗ ಆರಂಭವಾಗುವ ಹೆದರಿಕೆಯಿತ್ತು. ಧೃಷ್ಟದ್ಯುಮ್ನನು ಪಾಂಡವರೇ ಬ್ರಾಹ್ಮಣರ ಮಾರು ವೇಷದಲ್ಲಿ ಬಂದಿದ್ದಾರೆಂಬುದನ್ನು ಮನಗಂಡನು; ಉಳಿದವರಿಗೂ ಮನಗಾಣಿಸಿದನು. ಹೀಗಾಗಿ ಯುದ್ಧದ ಸನ್ನಿವೇಶ ತಪ್ಪಿತಷ್ಟೆ. ಈತ ದ್ರೋಣಾಚಾರ್ಯನ ಶಿಷ್ಯ. ಬಲು ಪರಾಕ್ರಮಿ. ಮಹಾಭಾರತಯುದ್ಧದಲ್ಲಿ ಪಾಂಡವರ ಬದಿಗಿದ್ದ ಒಬ್ಬ ಅತಿರಥಿ. ಶ್ರೀಕೃಷ್ಣನ ಸಲಹೆಯಂತೆ ಯುಧಿಷ್ಠಿರನು ಈತನನ್ನು ದಂಡನಾಯಕನನ್ನಾಗಿ ಮಾಡಿದನು. ಈತನು ಮಹಾಭಾರತಯುದ್ಧದಲ್ಲಿ ತುಂಬಾ ಪರಾಕ್ರಮವನ್ನು ಮೆರೆದನು. ಯುಧಿಷ್ಠಿರನು ಅಶ್ವತ್ಥಾಮ ಮಡಿದನೆಂದೂ 'ನರೋ ವಾ ಕುಂಜರೋ ವಾ' ಎಂದು ಹೇಳಿದ್ದರಿಂದಲೂ ದ್ರೋಣ ಉದ್ವಿಗ್ನನಾದನು. ಶಸ್ತ್ರಸಂನ್ಯಾಸವನ್ನು ಪಡೆದನು. ಆಗ ಈತನು ಇದೇ ದ್ರೋಣನ ಕೊಲೆಗೆ ಸರಿಯಾದ ಅವಕಾಶವೆಂದು ಬಗೆದು ಅವನ ತಲೆಯನ್ನು ಕತ್ತರಿಸಿ ಚೆಲ್ಲಿಬಿಟ್ಟನು. ಈ ಕೃತ್ಯ ಸಾತ್ಯಕಿಗೆ ಹಿಡಿಸಲಿಲ್ಲ. ಅವನು ಈತನನ್ನು ನಿಂದಿಸಿದನು. ಅಶ್ವತ್ಥಾಮನು ತನ್ನ ತಂದೆಯ ಕೊಲೆಯ ಸೇಡನ್ನು ತೀರಿಸಿಕೊಂಡನು. ಧೃಷ್ಟದ್ಯುಮ್ನನು ಮಲಗಿ ನಿದ್ದೆಹೋದಾಗ ಆತನನ್ನು ಕೊಂದುಬಿಟ್ಟನು. ಈತನಿಗೆ ಐವರು ಗಂಡುಮಕ್ಕಳು, ನಾಲ್ವರನ್ನು ದ್ರೋಣನು ಕೊಂದನು. ಐದನೆಯವನಾದ ಧೃಷ್ಟಕೇತುವೂ ಕೂಡ ತರುವಾಯದಲ್ಲಿ ದ್ರೋಣನಿಂದಲೇ ಕೊಲ್ಲಲ್ಪಟ್ಟ ಕಾರಣ ಈತನ ವಂಶ ಹಾಳಾಗಿಹೋಯಿತು.

**ನಕುಲ :** ಪಂಚಪಾಂಡವರಲ್ಲಿ ಒಬ್ಬನು, ನಾಲ್ಕನೆಯವನು. ಅಶ್ವಿನೀಕುಮಾರರಿಂದ ಮಾದ್ರಿಯೊಂದಿಗೆ ನಡೆದ ನಿಯೋಗದಿಂದಾಗಿ ಹುಟ್ಟಿದ ಅವಳಿಗಳಲ್ಲಿ ಚೊಚ್ಚಲು ಮಗ. ಈತನ ಮಡದಿಯ ಹೆಸರು ಕರೇಣುಮತಿ. ಈತ ಬಲು ಚೆಲುವ. ಅಜ್ಞಾತವಾಸದ ಕಾಲಕ್ಕೆ ವಿರಾಟನಗರದಲ್ಲಿ ಅಶ್ವಪಾಲನೆಂದು ಕೆಲಸಕ್ಕಿದ್ದನು. ಈತನು ಏಳು ನೂರು ಜನ ತ್ರಿಗರ್ತರನ್ನು ಕೊಂದನು. ಅಶ್ವಮೇಧಯಜ್ಞದ ಕಾಲಕ್ಕೆ ಯುಧಿಷ್ಠಿರನು ಈತನನ್ನು ತ್ರಿಗರ್ತ ಹಾಗೂ ಶಿಬಿ ಇವರನ್ನು ಗೆದ್ದುಬರಲು ಕಳುಹಿಸಿದನು. ಆಗ ನಕುಲನು ಪಡುವಣದ ರಾಜರುಗಳನ್ನೆಲ್ಲ ಸೋಲಿಸಿ ತನ್ನ ಶೌರ್ಯವನ್ನು ಮೆರೆದನು. ಈತನು ಮಹಾಭಾರತಯುದ್ಧದಲ್ಲೂ ಅತುಲನೀಯವಾದ ಶೌರ್ಯವನ್ನು ಪ್ರಕಟಿಸಿದನು. ಹಲವರನ್ನು ಯಮಲೋಕಕ್ಕೆ ಅಟ್ಟಿದನು.

**ನಚಿಕೇತ :** ಧೌಮ್ಯನ ಶಿಷ್ಯ, ಉದ್ದಾಲಕನ ಮಗ. ಉದ್ದಾಲಕನು ವಿಶ್ವಜಿತ್ ಯಜ್ಞವನ್ನು ಮಾಡಿ ತನ್ನದೆಲ್ಲವನ್ನೂ ಋತ್ವಿಜರಿಗೆ ದಾನವಾಗಿ ಕೊಟ್ಟುಬಿಟ್ಟನು. ಆಗಿನ್ನೂ ನಚಿಕೇತ ಚಿಕ್ಕವನಾಗಿದ್ದನು. ಬುದ್ಧಿಯಿಂದ ಬಲುಚುರುಕು. ತಾನು ತಂದೆಯ ಸೊತ್ತಾದುದರಿಂದ ಆತನು ತನ್ನನ್ನೇಕೆ ದಾನವಾಗಿ ಕೊಡಲಿಲ್ಲವೆಂದು ಈತನಿಗೆ ಚಿಂತೆಗಿಟ್ಟುಕೊಂಡಿತು. ಉದ್ದಾಲಕನು ಒಳ್ಳೆಯ ಹೈನಿನ ದಷ್ಟಪುಷ್ಟವಾದ ದನಗಳನ್ನು ದಾನ ಮಾಡದೆ ಸಣಕಲು, ಬರಡು ದನಗಳನ್ನಷ್ಟೇ ದಾನವಾಗಿ ಕೊಟ್ಟನು. ಹೀಗಾಗಿ ಅವನೊಂದಿಗೆ ತನಗೂ ಪಾಪ ತಗಲೀತೆಂದು ಈತನ ಕೊರಗು. ಇಂಥ ದಾನ ಬೇಡವೆಂದು ತನ್ನ ತಂದೆಯನ್ನು ತಡೆಯಲು ಯತ್ನಿಸಿದನು. ತಂದೆಯಾದರೋ 'ನಿನ್ನನ್ನು ಮೃತ್ಯುವಿಗೆ

ಕೊಟ್ಟುಬಿಡುವೆ'ನೆಂದು ಈತನನ್ನು ಶಪಿಸಿದನು. ಈ ಬಣ್ಣನೆ ಕಠೋಪನಿಷತ್ತಿನದು. ಇದೇ ಸಮಯಕ್ಕೆ ಆಕಾಶವಾಣಿಯಾಯಿತೆಂದು ತೈತ್ತಿರೀಯ ಬ್ರಾಹ್ಮಣದಲ್ಲಿದೆ. ನಚಿಕೇತ ಆಕಾಶವಾಣಿಯ ಅಪ್ಪಣೆಯ ಮೇರೆಗೆ ಯಮಲೋಕಕ್ಕೆ ತೆರಳಿದನು. ಅಲ್ಲಿ ಯಮನ ಪ್ರಶ್ನೆಗಳಿಗೆ ಉತ್ತರಗಳನ್ನಿತ್ತನು. ಹೀಗಾಗಿ ಯಮನು ಸಂತುಷ್ಟನಾಗಿ ಈತನಿಗೆ ಮೂರು ವರಗಳನ್ನಿತ್ತನು: (೧) ಮತ್ತೆ ಜೀವಂತನಾಗಿ ತನ್ನ ತಂದೆಯನ್ನು ಕಾಣುವುದು. (೨) ಮೃತ್ಯುವಿನ ಮೇಲೆ ವಿಜಯ. (೩) ತನ್ನ ಕೈಯಿಂದ ಅಕ್ಷಯ್ಯ ಶ್ರೌತಸ್ಮಾರ್ತ ಕರ್ಮಗಳಾಗತಕ್ಕದ್ದು. ಕಠೋಪನಿಷತ್ತಿನಲ್ಲಿ ಈ ಆಕಾಶವಾಣಿಯಿಲ್ಲ. ವರಗಳಲ್ಲೂ ವ್ಯತ್ಯಾಸವಿದೆ. ಮಹಾಭಾರತದಲ್ಲಿ (ಅನುಶಾಸನಪರ್ವ/೭೧) ನಚಿಕೇತನಿಗೆ ಶಾಪ ಸಿಗಲು ಬೇರೆ ಕಾರಣಗಳೇ ಇವೆ. (ನೋಡಿ: ಶಾಪ, ಕ್ರ. ೧೩೧—ಉದ್ದಾಲಕ >ನಚಿಕೇತ)

ಕಠೋಪನಿಷತ್ತಿನ ನಚಿಕೇತ-ಯಮ ಇವರಲ್ಲಿಯ ಸಂವಾದಗಳು ಎಲ್ಲರಿಗೂ ತಿಳಿದವುಗಳೇ ಆಗಿವೆ.

**ನಲ :** ನಿಷಧ ದೇಶದ ದೊರೆ ವೀರಸೇನನ ಮಗ. ಪ್ರಾಚೀನಕಾಲದ ಒಬ್ಬ ಪುಣ್ಯಪುರುಷ. ನಲನು ಹಂಸಪಕ್ಷಿಗೆ ಉಪಕಾರವನ್ನು ಮಾಡಿದ್ದರಿಂದ ಅವನಿಗೆ ದಮಯಂತಿಯ ಬಗೆಗೆ ಮಾಹಿತಿ ಸಿಕ್ಕಿತು. ಅವನು ಅವಳಲ್ಲಿ ಅನುರಕ್ತನಾದನು. ಇವನು ಸ್ವಯಂವರಕ್ಕೆಂದು ಹೊರಟಾಗ ದೇವತೆಗಳು ಈತನನ್ನು ತಮ್ಮ ದೂತನೆಂದು ದಮಯಂತಿಯ ಬಳಿಗೆ ಕಳಿಸಿದರು. ಅವನು ದೂತನ ಕೆಲಸವನ್ನು ಸರಿಯಾಗಿಯೇ ಮಾಡಿದನು. ದಮಯಂತಿಯಾದರೋ ಈತನಿಗೇನೆ ಒಲಿದಿದ್ದಳು. ಸ್ವಯಂವರದ ಮಂಟಪದಲ್ಲಿ ನಲನ ಪಕ್ಕದಲ್ಲಿ ದೇವತೆಗಳೂ ಅವನ ವೇಷಗಳಲ್ಲಿಯೇ ಕುಳಿತುಕೊಂಡರೂ ಕೂಡ ದಮಯಂತಿಯು ನಲನನ್ನು ಸರಿಯಾಗಿ ಗುರುತಿಸಿ ಅವನ ಕೊರಳಿಗೆಯೇ ವರಮಾಲೆಯನ್ನು ಹಾಕಿದಳು. ಈತ ಜೂಜಾಟದಲ್ಲಿ ಎಲ್ಲವನ್ನು ಕಳೆದುಕೊಂಡು ದಮಯಂತಿಯೊಂದಿಗೆ ಕಾಡಿನಲ್ಲಿ ಅಲೆದಾಡುವ ಹೊತ್ತು ಬಂದಿತು. ಅವಳ ಬವಣೆಗಳನ್ನು ಕಾಣಲಾಗದೆ ಈತ ಅವಳೊಬ್ಬಳನ್ನೇ ತೊರೆದು ಹೊರಟುಹೋದನು. ಒಂಟಿಯಾಗಿ ಏನೆಲ್ಲ ಸಂಕಟಗಳನ್ನು ಎದುರಿಸಿದನು. ಕಲಿಯು ಈತನ ಮೈಯಲ್ಲಿ ಹೊಕ್ಕನು. ಹೀಗಾಗಿ ಹೇಳಲಸದಳವಾದ ಬವಣೆಗಳನ್ನು ಪಡಬೇಕಾಯಿತು. ಕರ್ಕೋಟಕನನ್ನು ದಾವಾನಲದಿಂದ ಪಾರುಮಾಡಿದನು. ಆಗ ಅವನು ಈತನನ್ನು ಕಚ್ಚಿ ಅಂದಗೆಡುವಂತೆಯೂ ಕುಳ್ಳನನ್ನಾಗಿಯೂ ಮಾಡಿದನು. ಬಾಹುಕನೆಂಬ ಹೆಸರಿನಿಂದ ಋತುಪರ್ಣ ರಾಜನಲ್ಲಿ ಕೆಲಕಾಲ ಅಶ್ವಾಧ್ಯಕ್ಷನಾಗಿ ದುಡಿದನು. ದಮಯಂತಿಯ (ಸೋಗಿನ) ಸ್ವಯಂವರದ ವಾರ್ತೆಯನ್ನು ಕೇಳಿ ಈತ ಅಸ್ವಸ್ಥನಾದನು. ಸ್ವಯಂವರಕ್ಕೆ ತಲಪಲು ವೇಳೆ ಕಡಿಮೆಯಿತ್ತು. ಋತುಪರ್ಣ ಸ್ವಯಂವರಕ್ಕೆ ಹೋಗಲು ಆಸೆಪಟ್ಟಿದ್ದನು. ವೇಳೆಯ ಅಭಾವದಿಂದಾಗಿ ಸ್ವಯಂವರ ಮಂಟಪವನ್ನು ತಲಪುವಂತಿರಲಿಲ್ಲ. ಆಗ ಈತನು ಅವನನ್ನು ವೇಳೆಗೆ ಸರಿಯಾಗಿ ಸ್ವಯಂವರ ಮಂಟಪಕ್ಕೆ ತಲಪಿಸಲು ಹೊಣೆಹೊತ್ತನು. ಅದರಂತೆ ಅದನ್ನು ಪಾರುಗಾಣಿಸಿಯೂ ಬಿಟ್ಟನು. ಪಯಣದ ಕಾಲಕ್ಕೆ ಇಬ್ಬರೂ ತಮ್ಮ ತಮ್ಮ ವಿದ್ಯೆಗಳನ್ನು ವಿನಿಮಯ ಮಾಡಿಕೊಂಡರು. ಬಾಹುಕನೇ ನಲ ಎಂಬುದನ್ನು ದಮಯಂತಿಯು ಗುರುತಿಸಿದ್ದಳು. ಹಲವಾರು ಪರೀಕ್ಷೆಗಳಿಂದ ಅದನ್ನು ಖಚಿತಗೊಳಿಸಿಕೊಂಡಳು. ನಲ-ದಮಯಂತಿಯರು ಮತ್ತೆ ಒಂದಾದರು. ಪುಷ್ಕರನನ್ನು

ಜೂಜಿನಲ್ಲಿ ಸೋಲಿಸಿದ ತರುವಾಯ ನಲನು ತನ್ನ ರೂಪು ಹಾಗೂ ರಾಜ್ಯಗಳನ್ನು ಮರಳಿ ಪಡೆದನು.

**ನಲಕೂಬರ :** ವೈಶ್ರವಣನ ಮಗ, ಮಣಿಗ್ರೀವನ ಕಿರಿಯ ತಮ್ಮ. ಒಂದು ಸಲ ಈ ಸಹೋದರರಿಬ್ಬರೂ ಕೈಲಾಸ ಪರ್ವತದ ಉಪವನದಲ್ಲಿ ಹರಿವ ಗಂಗೆಯಲ್ಲಿ ಹೆಣ್ಣುಗಳೊಂದಿಗೆ ಮದಿರಪಾನಮತ್ತರಾಗಿ ಕ್ರೀಡೆಯಲ್ಲಿ ವ್ಯಮರೆತಿದ್ದರು. ಎಲ್ಲರೂ ನಗ್ನರಾಗಿದ್ದರು. ನಾರದನು ಅವರನ್ನೆಲ್ಲ ಅಂಥ ಅವಸ್ಥೆಯಲ್ಲಿ ಕಂಡನು. ಶಾಪಕ್ಕೆ ಹೆದರಿ ಹೆಂಗಳೆಯರೆಲ್ಲ ಬಟ್ಟೆಗಳನ್ನು ತೊಟ್ಟರು. ಇವರಿಬ್ಬರೂ ಮತ್ತರಾಗಿದ್ದ ಕಾರಣ ನಗ್ನರಾಗಿಯೇ ಉಳಿದರು. ನಾರದನು ನೂರು ವರ್ಷಗಳ ಕಾಲ ದಿವ್ಯವೃಕ್ಷಗಳಾಗಿರೆಂದು ಅವರಿಬ್ಬರನ್ನೂ ಶಪಿಸಿದನು. ನಾರದನ ಕೃಪೆಯಿಂದಾಗಿ ಅವರಿಗೆ ತಮ್ಮ ಪೂರ್ವಸ್ಮೃತಿಗಳು ಮಾತ್ರ ಉಳಿದವು. ಶ್ರೀಕೃಷ್ಣನ ಸಾನ್ನಿಧ್ಯದಿಂದಾಗಿ ಇವರಿಗೆ ಶಾಪಮುಕ್ತಿ ದೊರೆಯಿತು. ಇವರು ಕೃಷ್ಣಭಕ್ತರಾದರು. ಈ ಕಥೆ ಮಹಾಭಾರತದಲ್ಲಿದೆ.

ರಂಭೆ ಹಾಗೂ ಈತ ಒಬ್ಬರನ್ನೊಬ್ಬರು ತುಂಬ ಪ್ರೀತಿಸುತ್ತಿದ್ದರು—ಎಂದು ವಾಲ್ಮೀಕಿ ರಾಮಾಯಣದಲ್ಲಿ ಉಲ್ಲೇಖವಿದೆ. ರಂಭೆಯು ರಾವಣನನ್ನು ಕುರಿತು ಈತ ಧರ್ಮದಿಂದ ಬ್ರಾಹ್ಮಣನಂತೆ, ವೀರತನದಲ್ಲಿ ಕ್ಷತ್ರಿಯನಂತೆ, ಕ್ರೋಧದಿಂದ ಅಗ್ನಿಯಂತೆ ಹಾಗೂ ಕ್ಷಮೆಯಿಂದ ಪೃಥ್ವಿಯಂತೆ ಇರುವನೆಂದು ಹೇಳಿದ್ದಾಳೆ. ಅವಳು ಸಂಕೇತಕ್ಕನುಸಾರವಾಗಿ ವಸ್ತ್ರ ಒಡವೆಗಳಿಂದ ಸಿಂಗರಿಸಿಕೊಂಡು ನಲಕೂಬರನಲ್ಲಿಗೆ ಹೋಗುತ್ತಿರುವಾಗ ರಾವಣನು ಅವಳ ಮೇಲೆ ಅತ್ಯಾಚಾರವನ್ನೆಸಗಿ ಅವಳನ್ನು ಭೋಗಿಸಿದನು. ಅವಳು ಈ ಸಂಗತಿಯನ್ನು ನಲಕೂಬರನಿಗೆ ಹೇಳಿದಳು. ಅವನು ಕೆರಳಿ ಕಿಡಿಕಿಡಿಯಾದನು. ಅವನು ಕೈಯಲ್ಲಿ ನೀರು ಹಿಡಿದು ರಾವಣನನ್ನು ಶಪಿಸಿದನು.

**ನಹುಷ :** ಪುರೂರವನ ಮೊಮ್ಮಗ. ಆಯುವಿನ ಮಗ. ಯಯಾತಿಯ ತಂದೆ. ಈತನ ತಾಯಿಯ ಬೇರೆ ಬೇರೆ ಹೆಸರುಗಳು ಬೇರೆ ಬೇರೆ ಪುರಾಣಗಳಲ್ಲಿವೆ. ಈತನ ತಾಯಿಗೆ ಒಂದು ಕಣಿ ಹೇಳಲಾಗಿತ್ತು. ಅದೆಂದರೆ ಅವಳ ಹೊಟ್ಟೆಯಿಂದ ಹುಟ್ಟುವ ಮಗ ತನ್ನ ತಂದೆಯನ್ನು ಕೊಲ್ಲುವನೆಂಬುದು. ಅದರಿಂದಾಗಿ ಈತನ ಮೇಲೆ ಹುಟ್ಟಿದ ಕ್ಷಣಕ್ಕೇನೆ ವಿಪತ್ತು ಬಂದೆರಗಿತು. ವಸಿಷ್ಠನ ದಿವ್ಯದೃಷ್ಟಿಗೆ ಇದೆಲ್ಲ ಕಂಡದ್ದರಿಂದ ಈತನಿಗೆ ಸಂರಕ್ಷಣೆ ಸಿಕ್ಕಿತು. ವಸಿಷ್ಠನೇ ಈತನ ಮುಂಜಿವೆಯನ್ನು ಮಾಡಿಸಿ ಈತನಿಗೆ ವೇದ ಹಾಗೂ ಬಿಲ್ಲು ವಿದ್ಯೆಗಳನ್ನು ಕಲಿಸಿದನು. ಚ್ಯವನನು ಮೀನುಗಾರರ ಬಲೆಯಲ್ಲಿ ಸಿಕ್ಕುಬಿದ್ದಾಗ ಅವರಿಗೆ ಆಕಳುಗಳನ್ನು ಕೊಟ್ಟು ಆತನನ್ನು ಬಿಡಿಸಿದನು. ತ್ವಷ್ಟನ ಸನ್ಮಾನಾರ್ಥವಾಗಿ ಗವಾಲಂಭನವನ್ನು ಮಾಡಿದನು. ಬ್ರಹ್ಮಹತ್ಯೆಯಿಂದಾಗಿ ಇಂದ್ರನು ತನ್ನ ಪದವನ್ನು ಕಳೆದುಕೊಳ್ಳುತ್ತಲೇ ದೇವತೆಗಳು ಹಾಗೂ ಋಷಿಗಳು ತಮ್ಮ ತಪೋಬಲಗಳನ್ನು ಈತನಿಗಿತ್ತು ಇಂದ್ರಪದದ ಮೇಲೆ ಕುಳ್ಳಿರಿಸಿದರು. 'ನೀನು ಕಣ್ಣಿಟ್ಟು ನೋಡಿದವನು ತನ್ನ ತೇಜಸ್ಸನ್ನು ಕಳೆದುಕೊಳ್ಳುವನು' ಎಂದು ವರವನ್ನಿತ್ತರು. ಈತ ಕೆಲವು ಕಾಲ ಧರ್ಮದಿಂದ ರಾಜ್ಯವನ್ನಾಳುತ್ತಲಿದ್ದನು. ಆಮೇಲೆ ಸೊಕ್ಕಿನಿಂದ ಬೀಗಿದನು. ಈತನ ತಲೆ ತಿರುಗಿ ವಿಷಯಲಂಪಟನಾದನು. ಒಮ್ಮೆ ಈತನಿಗೆ ಇಂದ್ರಾಣಿ ಕಂಡಳು. ಅವಳ ಅಂದಚೆಂದಗಳಿಂದ ಈತನಲ್ಲಿ ಕಾಮಭಾವನೆ ಹೆಡೆಯೆತ್ತಿತು. ಅವಳನ್ನು ಕರೆತರಲು ದೇವತೆಗಳಿಗೆ ಅಪ್ಪಣೆ

ಯನ್ನು ವಿಧಿಸಿದನು. ಅವಳು ಇಂದ್ರನೊಂದಿಗೆ ಮಾತನಾಡಿ ಸಪ್ತರ್ಷಿಗಳು ಹೊತ್ತ ಪಲ್ಲಕ್ಕಿಯಲ್ಲಿ ಅವನು ಕುಳಿತು ಬಂದರೆ ಒಪ್ಪಿಗೆಯೆಂದು ಹೇಳಿಕಳಿಸಿದಳು. ನಹುಷನಿಗೆ ಇದರಲ್ಲೇನೂ ತೊಂದರೆ ಕಾಣಲಿಲ್ಲ. ಅವನು ಸಪ್ತರ್ಷಿಗಳು ಹೊತ್ತ ಪಲ್ಲಕ್ಕಿಯೊಡನೆ ಅವಳತ್ತಿಗೆ ಹೊರಟನು. ಅವನ ಕಾಲು ಅಗಸ್ತ್ಯನ ತಲೆಗೆ ತಾಗಿತು. ಅಗಸ್ತ್ಯನ ಜಡೆಯಲ್ಲಿದ್ದ ಭೃಗುವು ಶಾಪವನ್ನಿತ್ತನು. ಆಗ ಈತ ಹಾವಾಗಿ ಭೂಮಿಗೆ ಬಂದು ಬಿದ್ದನು. ಯುಧಿಷ್ಠಿರನು ಈತನನ್ನು ಶಾಪದಿಂದ ಮುಕ್ತಗೊಳಿಸಿದನು.

ಇವನ ಮಕ್ಕಳ ಸಂಖ್ಯೆ ಬೇರೆ ಬೇರೆ ಹೊತ್ತಗೆಗಳಲ್ಲಿ ಬೇರೆಬೇರೆಯಾಗಿದೆ. ಹಲವು ಹೊತ್ತಗೆಗಳಲ್ಲಿ ಯತಿ, ಯಯಾತಿ, ಸಂಯಾತಿ ಹಾಗೂ ಆಯಾತಿ ಎಂಬ ಹೆಸರುಗಳಿರುವುದು ಕಂಡುಬರುತ್ತದೆ.

**ನಾಗ :** ಮೇರುಕರ್ಣಿಕೆಯಲ್ಲಿದ್ದ ಕಶ್ಯಪ ಹಾಗೂ ಕದ್ರುವಿನ ಮಗ. ಕಶ್ಯಪನ ಮಕ್ಕಳಾದ ಅನಂತ, ವಾಸುಕಿ, ತಕ್ಷಕ ಮೊದಲಾದವರು ಭೂಮಿಯ ಮೇಲಿನ ಪ್ರಜೆಗಳನ್ನು ಬಹಳ ಪೀಡಿಸಹತ್ತಿದರು. ಆಗ ಬ್ರಹ್ಮದೇವನು 'ಜನಮೇಜಯನ ಸರ್ಪಯಜ್ಞದ ಕಾಲಕ್ಕೆ ಗರುಡನಿಂದ ನಿಮ್ಮ ನಾಶವಾಗಲಿ' ಎಂದು ಶಾಪವಿತ್ತನು. ಪದ್ಮಪುರಾಣ ಈ ಕಥೆಯನ್ನು ಹೇಳುತ್ತದೆ. ಮಹಾಭಾರತದಲ್ಲಿ ಮಾತ್ರ ಈ ಶಾಪವಿಲ್ಲ. ಜನಮೇಜಯನ ಯಜ್ಞದ ಕಾಲಕ್ಕೂ ತಮಗೆ ತೊಂದರೆಯಾಗದಿರಲೆಂದು ಅವರೆಲ್ಲ ಒಂದೆಡೆ ಕಲೆತು ನಿರ್ಧರಿಸಿದರು. ಈ ತಾಣವೇ 'ನಾಗತೀರ್ಥ'ವೆಂದು ಹೆಸರಾಯಿತು. ಅವರು ಬ್ರಹ್ಮದೇವನನ್ನು ಕಂಡ ದಿನವೇ 'ನಾಗಪಂಚಮಿ'.

**ನಾಭಾಗ ವೈವಸ್ವತ :** ವೈವಸ್ವತ ಮನುವಿನ ಮೊಮ್ಮಗ. ನಭಗನ ಮಗ. ಪದ್ಮಪುರಾಣದ ಹೇಳಿಕೆಯಂತೆ ಈತ ವೈವಸ್ವತ ಮನುವಿನ ಮಗನೇ ಸರಿ. ಗುರುವಿನ ಮನೆಯಲ್ಲಿರುವಾಗ ಈತನ ಉಳಿದ ಸೋದರರು ತಮ್ಮತಮ್ಮಲ್ಲಿ ಪಾಲುಮಾಡಿಕೊಂಡು ಅಪ್ಪನನ್ನು ಈತನ ಪಾಲಿಗೆ ಒಪ್ಪಿಸಿದರು. ತಂದೆಯು ಇವನಿಗೆ ದುಡ್ಡಿಗಾಗಿ ಯೋಚಿಸಬೇಕಾಗಿಲ್ಲವೆಂದೂ ಅಂಗಿರಸನ ಯಜ್ಞದ ಕಾಲಕ್ಕೆ ಸಿಕ್ಕೇ ಸಿಗುವುದೆಂದೂ ಆಶ್ವಾಸನೆಯನ್ನಿತ್ತನು. ಆ ಪ್ರಕಾರವಾಗಿ ಯಜ್ಞದ ಕಾಲಕ್ಕೆ ದುಡ್ಡು ಕೇಳಲೆಂದು ಈತ ಹೋದಾಗ ಅಲ್ಲೊಬ್ಬ ಕಪ್ಪುಬಣ್ಣದ ಮನುಷ್ಯ ಬಂದನು. 'ಉಳಿದಿರುವ ದುಡ್ಡೆಲ್ಲ ನನ್ನದು. ನೀನು ತೆಗೆದುಕೊಳ್ಳಬೇಡ. ಈ ಬಗೆಗೆ ಬೇಕಿದ್ದರೆ ನಿನ್ನ ತಂದೆಯನ್ನೇ ಕೇಳು' ಎಂದನು. ಈತನಿಗೆ ತಡೆಯೊಡ್ಡಿದನು. ನಾಭಾಗನು ತನ್ನ ತಂದೆಯನ್ನು ಕೇಳಲಾಗಿ ಯಜ್ಞದಲ್ಲಿ ಶೇಷವುಳಿದುದರ ಮೇಲೆ ರುದ್ರನದೇ ಅಧಿಕಾರವೆಂದು ಅವನು ಹೇಳಿದನು. ನಾಭಾಗನು ಇದೇ ಮಾತನ್ನು ಆ ಕಪ್ಪು ಮನುಷ್ಯನಿಗೆ ಅರುಹಿದನು. ಈತನ ಪ್ರಾಮಾಣಿಕತೆಯನ್ನು ಕಂಡು ಕಪ್ಪು ಮಾರುವೇಷದ ರುದ್ರ ಸಂತುಷ್ಟನಾದನು. ಹೀಗಾಗಿ ಅದೆಲ್ಲ ಧನವಲ್ಲದೆ ಈತನಿಗೆ ಬ್ರಹ್ಮವಿದ್ಯೆಯನ್ನೂ ಹೇಳಿಕೊಟ್ಟನು. ಈತನ ಮಗ ಅಂಬರೀಷ.

**ನಾರದ :** ನಾರದನ ಹುಟ್ಟು ಹಾಗೂ ಅವನ ಬಾಳನ್ನು ಕುರಿತು ಬೇರೆಬೇರೆಡೆಗಳಲ್ಲಿ ಬೇರೆ ಬೇರೆ ವಿವರಗಳಿವೆ. ಈತ ಕಶ್ಯಪ ಪ್ರಜಾಪತಿಯ ಮಗನೆಂದೂ, ಅರುಂಧತಿ ಹಾಗೂ ಪರ್ವತರ ಒಡಹುಟ್ಟಿದವನಾಗಿದ್ದನೆಂದೂ ವಾಯುಪುರಾಣದಲ್ಲಿ ಬಣ್ಣಿಸಲಾಗಿದೆ.

ಮಹಾಭಾರತದಲ್ಲಿ ನಾರದ–ಪರ್ವತರು ಸೋದರಮಾವ–ಸೋದರಳಿಯರೆಂದು ಹೇಳಲಾಗಿದೆ. ಬ್ರಹ್ಮವೈವರ್ತಪುರಾಣದ ಹೇಳಿಕೆಯಂತೆ ಈತ ಹುಟ್ಟಿದ್ದು ಒಬ್ಬಳು ಶೂದ್ರ ಹೆಣ್ಣಿನ ಹೊಟ್ಟೆಯಲ್ಲಿ. ಹಾಗೆಂದು ಆತನಿಗೆ ಶಾಪ ಸಿಕ್ಕಿತ್ತಂತೆ. ಶ್ರೀಕೃಷ್ಣನ ಪ್ರಸಕ್ತಿಯಿಂದಾಗಿ ಈತ ಶಾಪಮುಕ್ತನಾದನೆಂಬ ಕಥೆಯಿದೆ. ಈತ ಗಾನಪ್ರಿಯನೂ ಅಹುದು, ಗಾಯಕನೂ ಅಹುದು. ಈತನಲ್ಲಿ ಈ ಬಯಕೆ ಹುಟ್ಟಿದುದು ಹಾಗೂ ಈ ಕಲೆ ಪ್ರಾಪ್ತವಾದುದನ್ನು ಕುರಿತು ಬಗೆಬಗೆಯ ಕಥೆಗಳಿವೆ. ಈತ ಒಂದು ಬಾರಿ ವೃಂದಾರಣ್ಯದ ಸರೋವರದಲ್ಲಿ ಮೀಯುತ್ತಿದ್ದ ಕಾರಣ ಈತನ ಗಂಡಸುತನ ಹಾಳಾಗಿ ಈತ ಹೆಣ್ಣಾದನು. ನಾರದ ನಾರದಿಯಾದನು. ಶ್ರೀಕೃಷ್ಣನೊಂದಿಗೆ ಸಮಾಗಮ ನಡೆಯಿತು. ಆಮೇಲೆ ಬೇರೆಡೆಯಲ್ಲಿ ಸ್ನಾನಮಾಡುತ್ತಲೇ ಈತನ ಹೆಣ್ಣುತನ ಮಾಯವಾಯಿತು. ಗಂಡಸುತನ ಬಂದಿತು. ಈ ಕಥೆಯಿರುವುದು ನಾರದಪುರಾಣ ಹಾಗೂ ಪದ್ಮಪುರಾಣಗಳಲ್ಲಿದೆ. ಸೃಂಜಯನ ಮಗಳು ದಮಯಂತಿಯೊಡನೆ ಈತನ ಮದುವೆಯಾಗಿತ್ತೆಂಬ ವಿಷಯ ಮಹಾಭಾರತದಲ್ಲಿ ಹೇಳಲಾಗಿದೆ. ಮತ್ತು ಈ ಸಂದರ್ಭದಲ್ಲಿಯೇ ನಾರದ–ಪರ್ವತರು ಒಬ್ಬರಿಗೊಬ್ಬರು ಶಾಪ–ಪ್ರತಿಶಾಪಗಳನ್ನಿತ್ತಿದ್ದರು. ಆಗಲೆ ಅವುಗಳನ್ನು ಹಿಂತೆಗೆದುಕೊಂಡರು ಕೂಡ. ಕಂಸನಿಗೆ ದೇವಕಿಯ ಮಕ್ಕಳನ್ನು ಕೊಲ್ಲಲು ಹೇಳಿದವನು ಈತನೇ ಎಂದು ಭಾಗವತದಲ್ಲಿ ನಮೂದಿಸಲಾಗಿದೆ. ಈತನು ಶ್ರೀಕೃಷ್ಣನಿಗೆ ಪಾರಿಜಾತದ ಹೂವನ್ನು ಕೊಟ್ಟು ರುಕ್ಮಿಣಿ–ಸತ್ಯಭಾಮೆಯರಲ್ಲಿ ಜಗಳ ಹಚ್ಚಿದನು. ಈತನ ಗಾಯನಪ್ರಿಯತೆಯಂತೆಯೇ ಈತನ ಕಲಹಪ್ರಿಯತೆಯೂ ಹೆಸರಾದುದು. ಇಂದ್ರನ ಆಸ್ಥಾನಕ್ಕೆ ಹೋಗಿ ಅಲ್ಲಿಯ ಅಪ್ಸರೆಯರಲ್ಲೂ ಜಗಳ ಹೂಡಿ ಬಂದವನು. ಈತ ದೊಡ್ಡ ವಿದ್ವಾಂಸ. ಈತನು ನಾರಾಯಣನಿಗೆ ಮಾಡಿದ ಆತ್ಮವೃತ್ತದ ಉಪದೇಶ ಪಾಂಚರಾತ್ರ ಎಂಬುದಾಗಿ ಹೆಸರಾದುದು. ಈತನು ಶುಕ, ದೇವಲ, ಸಮಂಗ, ಶ್ರೀಕೃಷ್ಣ, ಮಾರ್ಕಂಡೇಯರೊಂದಿಗೆ ಸಂಭಾಷಣೆ ನಡೆಸಿ ಅವರಿಗೆ ಉಪದೇಶವನ್ನಿತ್ತನು. ಹೆಸರುಗಳನ್ನು ನೀಡಿದನು. ಈತನು ಧೃತರಾಷ್ಟ್ರನಿಗೆ ಹಲವು ನೀತಿಪಾಠದ ಕಥೆಗಳನ್ನು ಹೇಳಿದನು. ಯುಧಿಷ್ಠಿರನಿಗೆ ರಾಜನೀತಿ ಹಾಗೂ ಕರ್ಣನನ್ನು ಕುರಿತು ಮಾಹಿತಿಗಳನ್ನು ನೀಡಿದನು. ವ್ಯವಹಾರವನ್ನು ಕುರಿತು ಎರಡು ಹೊತ್ತಗೆಗಳನ್ನು ಬರೆದಿರುವನು. ನಾರದನ ಸಂಚಾರ ತ್ರಿಭುವನದಲ್ಲಿ. ಅವನ ವಾಸಸ್ಥಾನ ಯಾವುದೆಂದು ಮಾತ್ರ ಹೇಳಲಾಗದು. ನಾರದಸಂಹಿತೆ ಎಂಬ ಸಂಗೀತಶಾಸ್ತ್ರವನ್ನು ಕುರಿತಾದ ಒಂದು ಹೊತ್ತಗೆ ಈತನ ಹೆಸರಿನಲ್ಲಿದೆ. ವಾಸ್ತುಶಾಸ್ತ್ರವನ್ನು ಕುರಿತು ಈತನ ಒಂದು ಹೊತ್ತಗೆಯಿರುವ ಪ್ರಸ್ತಾಪ ಮತ್ಸ್ಯಪುರಾಣದಲ್ಲಿದೆ.

**ನಿಮಿರಾಜ :** ಅಯೋಧ್ಯೆಯ ಒಡೆಯನಾದ ಇಕ್ಷ್ವಾಕುವಿನ ಹನ್ನೆರಡನೆಯ ಮಗ. ನಿಮಿಯು ಹೆಂಗಳೆಯರೊಂದಿಗೆ ಜೂಜಾಟವನ್ನಾಡುತ್ತಲಿರುವಾಗ ಆಕಸ್ಮಾತ್ತಾಗಿ ವಸಿಷ್ಠ ಅಲ್ಲಿಗೆ ಬಂದನು. ನಿಮಿಯು ಅವನನ್ನು ಸರಿಯಾಗಿ ಬರಮಾಡಿಕೊಳ್ಳಲಿಲ್ಲ. ಹೀಗಾಗಿ ವಸಿಷ್ಠನು ಅವನನ್ನು ಶಪಿಸಿದನು. ನಿಮಿಯು ಮರುಶಾಪವನ್ನಿತ್ತನೆಂದು ಪದ್ಮಪುರಾಣವು ಹೇಳುತ್ತದೆ. ವಾಲ್ಮೀಕಿರಾಮಾಯಣವು ಹೇಳುವ ಕಾರಣವೇ ಬೇರೆ. ನಿಮಿಯು ಪುರೋಹಿತನಾದ ಗೌತಮನಿಂದ ಯಾಗವನ್ನು ಮಾಡಿಸಿದ್ದನು. ಆಗ ವಸಿಷ್ಠನು ನಿಮಿಯಲ್ಲಿಗೆ ಹೋದಾಗ ಅವನು ಅಲಕ್ಷ್ಯತೋರಿದ್ದರಿಂದ ಅವನಿಗೆ ಶಾಪವನ್ನಿತ್ತನು.

ನಿಮಿಯೂ ನಿದ್ರೆಹೋದಾಗ ವಸಿಷ್ಠ ಬಂದುದರಿಂದ ಅವನನ್ನು ಗಮನಿಸಲಾಗಲಿಲ್ಲ. ವಸಿಷ್ಠನು ಇದನ್ನರಿಯದೆ ಶಾಪವಿತ್ತನು. ವಸಿಷ್ಠನು ಅಕಾರಣವಾಗಿ ಶಾಪವಿತ್ತನೆಂದು ನಿಮಿಯೂ ಅವನಿಗೆ ಮರುಶಾಪವಿತ್ತನು. ಇಬ್ಬರೂ ಒಬ್ಬರಿಗೊಬ್ಬರು ಅಚೇತನತ್ವದ ಶಾಪವನ್ನಿತ್ತರು.

ವಸಿಷ್ಠನ ಶಾಪದಿಂದಾಗಿ ಸತ್ತುಹೋದ ನಿಮಿಯ ದೇಹವನ್ನು ಸುಗಂಧದ ಎಣ್ಣೆಯಲ್ಲಿ ಸರಿಯಾಗಿ ಕಾಪಾಡಿ ಇಟ್ಟು ಋಷಿಗಳು ಯಜ್ಞವನ್ನು ಮುಂದುವರಿಸಿದರು. ಹವಿರ್ಭಾಗವನ್ನು ಗ್ರಹಿಸಲು ಬಂದ ದೇವತೆಗಳಿಗೆ ಯಜಮಾನನನ್ನು ಹರಸುವಂತೆ ಕೇಳಿಕೊಂಡರು. 'ದೇಹ ಹಾಗೂ ಪ್ರಾಣಗಳ ವಿಯೋಗವು ಬಲು ದುಸ್ಸಹವಾದುದೇನೋ ಸರಿ. ಹಾಗೆಂದೇ ನಾನು ದೇಹವನ್ನು ತ್ಯಜಿಸಿ ಜನರ ಕಣ್ಣುಗಳಲ್ಲಿ ವಾಸಿಸಬಯಸುತ್ತೇನೆ' ಎಂದು ನಿಮಿಯು ಹೇಳಿದನು. ಆದುದರಿಂದ ದೇವತೆಗಳು ಅವನನ್ನು ಕಣ್ಣುಗಳಲ್ಲಿ ಸ್ಥಾಪಿಸಿದರೆಂಬ ಮಾಹಿತಿ ಕೆಲಗ್ರಂಥಗಳಲ್ಲಿ ದೊರೆಕುತ್ತದೆ. ಕಣ್ಣುರೆಪ್ಪೆಗಳನ್ನು ಮುಚ್ಚುವ-ತೆರೆಯುವ ಕಾಲಾವಧಿಗೆ ನಿಮಿಷ ಎಂದೆನ್ನಲು ಈ ನಿಮಿರಾಜನೇ ಕಾರಣನೆಂದು ಮತ್ಸ್ಯಪುರಾಣದಲ್ಲಿ ಹೇಳಲಾಗಿದೆ.

ಈತ ನಿಪುತ್ರಕನಾಗಿದ್ದನು. ಈತನ ದೇಹವನ್ನು ಕಟ್ಟಿಗೆಯನ್ನಾಗಿ ಮಾಡಿ ಸಮಂತ್ರಕ ಹೋಮವನ್ನು ಮಾಡಲಾಗಿ ಈ ಮಂಥನದಿಂದ ಹುಟ್ಟಿಬಂದ ಮಿಥಿಯು ನಿಮಿಯ ಮಗನೆಂದೂ ವೈದೇಹಿ ಎಂಬ ಹೆಸರಿನಿಂದಲೂ ಗುರುತಿಸಲ್ಪಡುತ್ತಾನೆ.

**ನಿಮಿಋಷಿ :** ಅತ್ರಿಯ ಕುಲದಲ್ಲಿ ಹುಟ್ಟಿದ ಒಬ್ಬ ಋಷಿ. ದತ್ತಾತ್ರೇಯನ ಮಗ. ಇವನು ತನ್ನ ಮಗನಾದ ಶ್ರೀಮಾನ ಮಡಿದಾಗ ಅವನಿಗೆ ಪಿಂಡಪ್ರದಾನವನ್ನು ಮಾಡಿದನು. ಈತನು ಸ್ಮರಿಸುತ್ತಲೇ ಅತ್ರಿಋಷಿಗಳು ಪ್ರಕಟರಾದರು. ಈ ಋಷಿಯು ಸತ್ತವರಿಗಾಗಿ ಶ್ರಾದ್ಧ, ಪಿಂಡಪ್ರದಾನ ಮುಂತಾದವುಗಳನ್ನು ಆರಂಭಿಸಿದನು.

**ನೃಗ :** ಯಮುನ ಆಸ್ಥಾನದಲ್ಲಿ ಬಲು ಪ್ರಾಚೀನ ಕಾಲದಲ್ಲಿದ್ದ ಒಬ್ಬ ಧಾರ್ಮಿಕ ಪ್ರವೃತ್ತಿಯ ರಾಜನು. ಮಾರ್ಕಂಡೇಯನು ಈತನ ಕುಲದ ವೀರರ ಪರಾಕ್ರಮದ ಯಶೋಗಾಥೆಯನ್ನು ಹಾಡಿದ್ದಾನೆ. ಈತನು ಪಯೋಷ್ಣಿ ಹೊಳೆಯ ದಡದಲ್ಲಿ ಯಜ್ಞವನ್ನು ಮಾಡಿದನು. ಪುಷ್ಕರತೀರ್ಥದಲ್ಲಿ ಬ್ರಾಹ್ಮಣರಿಗೆ ಎಣಿಸಲಾಗದಷ್ಟು ಆಕಳುಗಳನ್ನು ದಾನಮಾಡಿದನು. ಆಗ ತಪ್ಪಿ ಒಂದೇ ಆಕಳನ್ನು ಇಬ್ಬರಿಗೆ ದಾನವಾಡಿದನು. ಅದರಿಂದಾಗಿ ಆ ಇಬ್ಬರು ಬ್ರಾಹ್ಮಣರಲ್ಲಿ ವಾದಕ್ಕಿಟ್ಟುಕೊಂಡಿತು. ನ್ಯಾಯ ಪಡೆಯಲೆಂದು ಅವರಿಬ್ಬರೂ ದೊರೆಯ ಬಳಿ ಹೋದರು. ರಾಜ ಗಮನವನ್ನೀಯಲಿಲ್ಲ. ಇಬ್ಬರೂ ಕೆರಳಿದರು. 'ಓತಿಯಾಗು' ಎಂದು ಅವನನ್ನು ಶಪಿಸಿದರು. (ನೋಡಿ : ವಾಲ್ಮೀಕಿ ರಾಮಾಯಣ : ಶಾಪ ಮತ್ತು ವರ : ಶಾಪ, ಕ್ರ. ೪೯, ಪು. ೧೫೫.)

**ಪರಶುರಾಮ :** ಜಮದಗ್ನಿ, ರೇಣುಕೆಯರ ಕಿರಿಯ ಮಗ. ಈತ ವಿಷ್ಣುವಿನ ಅವತಾರ ಎನ್ನಿಸಿದ್ದಾನೆ. ಈತನು ಶಂಕರನನ್ನು ಪ್ರಸನ್ನಗೊಳಿಸಿ ಧನುರ್ವೇದ, ಶಸ್ತ್ರಾಸ್ತ್ರವಿದ್ಯೆ, ಮಂತ್ರಪ್ರಯೋಗ ಮುಂತಾದ ಜ್ಞಾನವನ್ನು ಗಳಿಸಿದನು. ತಂದೆಯ ಅಪ್ಪಣೆಯನ್ನು ಪಾಲಿಸಿ ತಾಯಿಯ ತಲೆಯನ್ನು ಕಡಿದನು. ಆದರಿಂದ ಸಂತುಷ್ಟನಾದ ತಂದೆಗೆ ತನ್ನ ತಾಯಿಯನ್ನು ಮರಳಿ ಜೀವಿತಗೊಳಿಸುವ ವರವನ್ನು ಕೇಳಿಕೊಂಡನು. ತಾಯಿಗೆ ಜೀವ ಬರುವಂತೆ ಮಾಡಿದನು. 'ಅಜಿಂಕ್ಯನಾಗು' ಎಂದು ಕೂಡ ವರವನ್ನು ಪಡೆದಿದ್ದನು.

ಕಾರ್ತವೀರ್ಯಾರ್ಜುನನು ಜಮದಗ್ನಿಯನ್ನು ಕೊಂದನು. ಆಗ ಈತನು ಕಾರ್ತವೀರ್ಯಾರ್ಜುನನ್ನು ಅವನ ಸೇನೆಯೊಂದಿಗೆ ನಾಶಪಡಿಸಿದನು. ಭೃಗುವು ಸಂಜೀವಿನಿವಿದ್ಯೆಯಿಂದ ಜಮದಗ್ನಿಗೆ ಜೀವ ಬರಿಸಿದನು. ಈತನು ಇಪ್ಪತ್ತೊಂದು ಸಲ ಪೃಥ್ವಿಯನ್ನು ನಿಃಕ್ಷತ್ರಿಯಮವನ್ನಾಗಿ ಮಾಡಲು ಪಣತೊಟ್ಟನು. ಅದನ್ನು ಪೂರ್ತಿಗೊಳಿಸಿದನು. ಪಿತೃಗಳಿಗೆ ಈ ಕ್ಷತ್ರಿಯ ಸಂಹಾರ ಹಿಡಿಸಲಿಲ್ಲ. ಅವರು ಪ್ರಾಯಶ್ಚಿತ್ತವನ್ನು ಮಾಡಿಕೊಂಡರು. ಈತನು ಅಶ್ವಮೇಧ ಯಜ್ಞವನ್ನು ಮಾಡಿ ಕಶ್ಯಪನಿಗೆ ಪೃಥ್ವಿಯನ್ನು ದಾನವಾಗಿ ಕೊಟ್ಟನು. ಭೀಷ್ಮನು ಪರಶುರಾಮನ ಶಿಷ್ಯ. ಅಂಬೆಯು ಸೇಡಿನ ಸಂದರ್ಭದಲ್ಲಿ ಈ ಗುರು-ಶಿಷ್ಯರಲ್ಲಿ ಕಾಳಗ ಏರ್ಪಟ್ಟಿತು. ಅದರಲ್ಲೀತ ಗೆಲವನ್ನು ಪಡೆದನು. ಕರ್ಣ ತಾನು ಬ್ರಾಹ್ಮಣನೆಂದು ಹೇಳಿ ಮೋಸದಿಂದ ಈತನಿಂದ ವಿದ್ಯೆಯನ್ನು ಪಡೆದನು. ಈ ಸಂಗತಿ ತಿಳಿದುಬರುತ್ತಲೇ ಅವನಿಗೆ ಶಾಪವನ್ನಿತ್ತು ಆತನ ವಿದ್ಯೆ ಉಪಯೋಗವಾಗದಂತೆ ಮಾಡಿದನು.

ಈತ ಏಳು ಜನ ಚಿರಂಜೀವಿಗಳಲ್ಲಿ ಒಬ್ಬ. ಈತನ ಹೆಸರಿನಿಂದ ಪರಶುರಾಮಸೂತ್ರ ಎಂಬ ಹೊತ್ತಗೆ ಇದೆ.

**ಪರಾವಸು :** ವಿಶ್ವಾಮಿತ್ರನ ಮೊಮ್ಮಗ. ರೈಭ್ಯ ಮುನಿಯ ಚೊಚ್ಚಲು ಮಗ. ಭರದ್ವಾಜನ ಮಗ ಯವಕ್ರೀತನು ಈತನ ಮಡದಿಯ ಮೇಲೆ ಅತ್ಯಾಚಾರವನ್ನು ಎಸಗಿದನು. ಇದರಿಂದ ರೈಭ್ಯಮುನಿ ಕೆರಳಿ ತನ್ನ ಜಡೆಯಿಂದ ಒಬ್ಬ ಕೃತ್ಯಾ ಹಾಗೂ ರಾಕ್ಷಸರನ್ನು ನಿರ್ಮಿಸಿದನು. ಅವರ ಕೈಯಿಂದ ಯವಕ್ರೀತನನ್ನು ಕೊಲ್ಲಿಸಿದನು. ಭರದ್ವಾಜನಿಗೆ ತನ್ನ ಒಬ್ಬನೇ ಒಬ್ಬ ಮಗನ ಸಾವಿನಿಂದಾಗಿ ದುಃಖ ಒತ್ತರಿಸಿಬಂದಿತು. ಅವನು ರೈಭ್ಯನಿಗೆ 'ನಿನ್ನ ಹಿರಿಯ ಮಗನೇ ನಿನ್ನನ್ನು ಕೊಲ್ಲಲಿ' ಎಂದು ಶಾಪವಿತ್ತನು. ರೈಭ್ಯನು ದೂರದಿಂದ ಜಿಂಕೆಯಂತೆ ಕಾಣುವ ಹಾಗೆ ಕುಳಿತಿದ್ದನು. ಆಗ ಪರಾವಸುವಿನ ಬಾಣ ತಗಲಿ ಮರಣಹೊಂದಿದನು. ಪರಾವಸು ತನ್ನಿಂದ ಎಸಗಲಾದ ಈ ಬ್ರಹ್ಮಹತ್ಯೆಯನ್ನು ಪರಿಹರಿಸಿಕೊಳ್ಳಲೆಂದು ತನ್ನ ತಮ್ಮ ಅರ್ವಾವಸುವಿಗೆ ವ್ರತವನ್ನು ಮಾಡಲು ಹೇಳಿದನು. ಅವನು ಹಾಗೆ ಮಾಡಿದನು. ಆದರೆ ಈತನು ಬೃಹದ್ಯುಮ್ನ ರಾಜನಿಗೆ ಅವನು ಬ್ರಹ್ಮಘ್ನನೆಂದು ಹೇಳಿ ಯಜ್ಞಮಂಟಪದಿಂದ ಹೊರಹಾಕಲು ಯತ್ನಿಸಿದನು. ಕೊನೆಗೆ ಬ್ರಹ್ಮಘ್ನನಾದವನು ಈತನೇ ಎಂಬುದು ತಿಳಿದುಬಂದಿತು. ಈತನೇ ಪರಶುರಾಮ ಕೆರಳುವಂತೆ ಮಾಡಿ ಪೃಥ್ವಿಯು ನಿಃಕ್ಷತ್ರಿಯವಾಗುವಂತೆ ಮಾಡಿದನು.

**ಪರಾಶರ :** ವಸಿಷ್ಠನ ಮೊಮ್ಮಗ. ಶಕ್ತಿ-ಅದೃಶ್ಯಂತಿಯರ ಮಗ. ವಿಶ್ವಾಮಿತ್ರನು ವಸಿಷ್ಠನ ಮಕ್ಕಳನ್ನೆಲ್ಲ ಕೊಂದದ್ದರಿಂದ ಆತ ತುಂಬ ಬೇಸರಪಟ್ಟುಕೊಂಡಿದ್ದನು. ಅವನು ಆಶ್ರಮವನ್ನು ತೊರೆದು ಹೊರಡುತ್ತಲೇ ಅದೃಶ್ಯಂತಿಯು ಅವನನ್ನು ಹಿಂಬಾಲಿಸಿದಳು. ವಸಿಷ್ಠನಿಗೆ ಅವಳ ಹೊಟ್ಟೆಯಿಂದ ವೇದಧ್ವನಿ ಕೇಳಿಬರಹತ್ತಿತು. ವಂಶ ಮುಂದುವರಿಸುವ ಆಸೆಯಿಂದಾಗಿ ಅವನು ಮರಳಿ ಆಶ್ರಮಕ್ಕೆ ಬಂದನು. ಈತ ವಸಿಷ್ಠನನ್ನೇ ತನ್ನ ತಂದೆಯೆಂದು ತಿಳಿದಿದ್ದನು. ಅದೃಶ್ಯಂತಿಯು ಅವನು ಅಜ್ಜನೆಂಬುದನ್ನು ಈತನಿಗೆ ತಿಳಿಸಿ ಹೇಳಿದಳು. ಈತ ತುಸು ಬೆಳೆದು ದೊಡ್ಡವನಾಗುತ್ತಲೇ ರಾಕ್ಷಸನೊಬ್ಬ ಈತನ ದೇಹವನ್ನು ಹೊಕ್ಕನು. ಹೀಗಾಗಿ ಕಲ್ಮಾಷಪಾದನು ತನ್ನ ತಂದೆ ಶಕ್ತಿಯನ್ನು ಕೊಂದವನೆಂಬುದು ಈತನಿಗೆ ತಿಳಿಯಿತು. ಆತ ಸೇಡು ತೀರಿಸಿಕೊಳ್ಳಲು ನಿರ್ಧರಿಸಿದನು. ಅದಕ್ಕಾಗಿ ಈ

ಜಗತ್ತನ್ನೇ ನಾಶಗೊಳಿಸಲು ನಿಶ್ಚಯಿಸಿದನು. ವಸಿಷ್ಠನು ಅವನಿಗೆ ಔರ್ವನ ಉದಾಹರಣೆ ಯನ್ನು ಹೇಳಿ ಅವನನ್ನು ಪರಾವೃತ್ತಗೊಳಿಸಿದನು. ಇಷ್ಟಾಗಿಯೂ ರಾಕ್ಷಸರನ್ನೆಲ್ಲ ಸಂಹರಿಸಲೆಂದು ರಾಕ್ಷಸಯಜ್ಞವನ್ನು ಕೈಕೊಂಡನು. ಪುಲಸ್ತ್ಯ ಹಾಗೂ ಅತ್ರಿ ಮೊದಲಾದ ಋಷಿಗಳು ಈತನನ್ನು ಈ ಕ್ರೂರವಾದ ಕೃತ್ಯದಿಂದ ಕಾಪಾಡಿದರು. ಪುಲಸ್ತ್ಯನ ವರದಿಂದಾಗಿ ಸಕಲಶಾಸ್ತ್ರಪಾರಂಗತನೂ, ಪುರಾಣವಕ್ತಾರನೂ ಆದನು.

ಮೀನುಗಾರನ ಮಗಳು ಸತ್ಯವತಿಯನ್ನು ಕಾಣುತ್ತಲೇ ಈತನ ಕಾಮುವಾಸನೆ ಕೆರಳಿತು. ತನ್ನ ಸಾಮರ್ಥ್ಯದ ಪ್ರಭಾವವನ್ನು ಮೆರೆದು, ಅವಳಿಗೆ ವರವಿತ್ತು ಸಮಾಗ ಮೋತ್ಸುಕಳನ್ನಾಗಿ ಮಾಡಿದನು. ಈತನ ಮಗ ವ್ಯಾಸ. ವರದಿಂದಾಗಿ ಸತ್ಯವತಿಯು ಹೆರಿಗೆಯು ತರುವಾಯದಲ್ಲೂ ಕುಮಾರಿಯಾಗಿಯೇ ಉಳಿದಳು. ಅವಳು ಯೋಜನಗಂಧೆ ಎನ್ನಿಸಿದಳು. ಈತನು ಯುಧಿಷ್ಠಿರನಿಗೆ ರುದ್ರಮಹಾತ್ಮೆ ಹಾಗೂ ಜನಕನಿಗೆ ತತ್ವಶಾಸ್ತ್ರ ವನ್ನು ಉಪದೇಶಿಸಿದನು. ಈತನ ಹೆಸರಿನಿಂದ ಪರಾಶರಸ್ಮೃತಿ, ನೀತಿಶಾಸ್ತ್ರ ಮತ್ತು ಪರಾಶರೋಪಪುರಾಣ ಮುಂತಾದ ಒಂಬತ್ತು-ಹತ್ತು ಹೊತ್ತಗೆಗಳಿವೆ. ಈತ ಸ್ಮೃತಿಕಾರ ನೆಂದು ಹೆಸರಾಗಿದ್ದಾನೆ.

೧

**ಪರೀಕ್ಷಿತ:** ಅಭಿಮನ್ಯು-ಉತ್ತರೆಯರ ಮಗ. ಅರ್ಜುನನ ಮೊಮ್ಮಗ. ಮಹಾಭಾರತ ಯುದ್ಧ ಮುಗಿದ ಒಂದು ವರ್ಷದಲ್ಲಿಯೇ ಈತ ಹುಟ್ಟಿದನು. ಅಶ್ವತ್ಥಾಮನು ಉತ್ತರೆಯ ಬಸಿರಿನ ಮೇಲೆ ಬ್ರಹ್ಮಾಸ್ತ್ರವನ್ನು ಬಳಸಿದ್ದರಿಂದ ಈತ ಸತ್ತ ಶಿಶುವಾಗಿ ಹುಟ್ಟಿದ್ದನು. ಆದರೆ ಶ್ರೀಕೃಷ್ಣನ ಕೃಪಾಪ್ರಸಾದದಿಂದಾಗಿ ಮತ್ತೆ ಜೀವತಳೆದನು. ಪಾಂಡವ ವಂಶದ ಒಂದೇ ಒಂದು ಕುಡಿ ಈತ. ಯುಧಿಷ್ಠಿರನು ಮೂವತ್ತಾರು ವರ್ಷಗಳ ಕಾಲ ರಾಜ್ಯವನ್ನು ಆಳಿದನು. ಪಾಂಡವರೆಲ್ಲ ದ್ರೌಪದಿಯೊಡನೆ ಮಹಾಪ್ರಸ್ಥಾನವನ್ನಿಡುವ ಮುನ್ನ ಈತನಿಗೆ ಪಟ್ಟಾಭಿಷೇಕವಾಯಿತು. ಸೋದರಸೊಸೆಯಾದ ಇರಾವತಿಯೇ ಈತನ ಮಡದಿ. ಕೆಲವು ಹೊತ್ತಗೆಗಳಲ್ಲಿ ಈತನ ಮಡದಿಯ ಹೆಸರನ್ನು ಭದ್ರವತಿ ಎಂದು ಬರೆಯಲಾಗಿದೆ. ಈತನಿಗೆ ಜನಮೇಜಯ, ಶ್ರುತಸೇನ, ಉಗ್ರಸೇನ ಹಾಗೂ ಭೀಮಸೇನರೆಂಬ ಗಂಡುಮಕ್ಕಳು. ಕೃಪಾಚಾರ್ಯನ ಪೌರೋಹಿತ್ಯದಲ್ಲಿ ಮೂರು ಅಶ್ವಮೇಧಯಜ್ಞಗಳನ್ನು ಮಾಡಿದನು. ಈತನ ಆಳ್ವಿಕೆಯಲ್ಲಿ ಕಲಿಯು ಹೊಕ್ಕು ಗೋಧನವನ್ನು ಪೀಡಿಸತೊಡಗಿದನು. ಈತನು ಅವನಿಗೆ ದೇಹಾಂತಶಿಕ್ಷೆಯನ್ನು ಕೊಡಬೇಕೆಂದು ಯೋಜಿಸಿದನು.. ಆದರೆ ಕಲಿ ಶರಣು ಬಂದನು. ಹೀಗಾಗಿ ಅವನಿಗೆ ಗಡೀಪಾರು ಶಿಕ್ಷೆಯನ್ನು ಮಾತ್ರ ವಿಧಿಸಲಾಯಿತು.

ಈತನು ಶಮೀಕ ಋಷಿಯ ಮೈಮೇಲೆ ಸತ್ತ ಹಾವನ್ನು ಎಸೆದನು. ಅವನ ಮಗ ಶೃಂಗಿಯು ಈತನಿಗೆ 'ತಕ್ಷಕನ ಕಚ್ಚುವಿಕೆಯಿಂದಾಗಿ ಏಳು ದಿನಗಳಲ್ಲಿ ನಿನಗೆ ಸಾವು ಬರಲಿ' ಎಂದು ಶಾಪವನ್ನಿತ್ತನು. (ನೋಡಿ : ಶಾಪ, ಕ್ರ. ೨೧, ಶೃಂಗಿ > ಪರೀಕ್ಷಿತ.) ಜನಮೇಜಯನು ತನ್ನ ತಂದೆಯನ್ನು ಕಾಣಬೇಕೆಂದು ಬಯಸಿದನು. ಆಗ ವ್ಯಾಸನು ಪರೀಕ್ಷಿತನನ್ನು ಆವಾಹನೆ ಮಾಡಿ ಈತನ ಬಯಕೆಯನ್ನು ಈಡೇರಿಸಿದನು.

೨

ಪರೀಕ್ಷಿತನೆಂಬ ರಾಜನೊಬ್ಬ ಇಕ್ಷ್ವಾಕುಕುಲದಲ್ಲಿ ಹುಟ್ಟಿದವನಾಗಿದ್ದನು. ಮಂಡೂಕರ ದೊರೆ ಆಯು ಈತನ ಮಗಳು. ಸುಶೋಭನೆ ಈತನ ಮಡದಿ. ಅವುಗೆ ಶಲ, ದಲ, ಬಲರೆಂಬ ಮೂರು ಜನ ಗಂಡುಮಕ್ಕಳಿದ್ದರು. (ನೋಡಿ : ಶಾಪ, ಕ್ರ. ೬೪, ಆಯು > ಸುಶೋಭನೆ)

**ಪರ್ವತ :** ಕಶ್ಯಪನ ಮಾನಸಪುತ್ರ. ನಾರದನ ಸೋದರಳಿಯ ಮಗ. ಈತನೊಬ್ಬ ದೇವರ್ಷಿ. ನಾರದ-ಪರ್ವತರು ಒಬ್ಬರನ್ನೊಬ್ಬರು ಶಪಿಸಿ, ಮರುಶಪಿಸಿಯೂ ಇದ್ದರು. (ನೋಡಿ : ಶಾಪ, ಕ್ರ. ೮೮-೮೯, ಪರ್ವತ > ನಾರದ, ನಾರದ > ಪರ್ವತ.) ಜನಮೇಜಯನ ಸರ್ಪಯಜ್ಞದ ಒಬ್ಬ ಸದಸ್ಯ. ದ್ರೌಪದಿಯ ಸ್ವಯಂವರ ಕಾಲಕ್ಕೆ ಈತನೂ ನಾರದನೊಂದಿಗೆ ಹಾಜರಿದ್ದನು. ಶರಪಂಜರದಮೇಲಿದ್ದ ಭೀಷ್ಮನಿಗೆ ಭೆಟ್ಟಿಯಾಗಿ ಬಂದಿದ್ದನು. ವಸಿಷ್ಠನು ಬ್ರಹ್ಮಸರೋವರದ ಮೇಲೆ ಕಮಲದ ಹೂವನ್ನು ಇಟ್ಟಾಗ ಯಾರೋ ಅದನ್ನು ಕದ್ದರು ಆಗ ಆಣೆ ಮಾಡಿದ ಋಷಿಗಳಲ್ಲಿ ಈತನೂ ಒಬ್ಬ.

**ಪಶುಸುಖ :** ಪಶುಗಳೊಂದಿಗಿನ ಗೆಳೆತನದಿಂದಾಗಿ ಈತನಿಗೆ ಈ ಹೆಸರು ಬಂದಿತು. ಈತ ಶೂದ್ರಜಾತಿಯವನು. ಸಪ್ತರ್ಷಿಗಳನ್ನು ಸೇವೆಗೈಯುವವನಾಗಿದ್ದನು. ವಸಿಷ್ಠ ಋಷಿಗಳ ಕಮಲ ಕಳವಾದಾಗ ಆಣೆ ಮಾಡಿದವರಲ್ಲಿ ಈತನೂ ಒಬ್ಬ. ಈತನ ಮಡದಿಯ ಹೆಸರು ಗಂಡಾ.

**ಪಾಂಚಾಲ :** ಇದು ಒಬ್ಬ ವ್ಯಕ್ತಿಯ ಹೆಸರಲ್ಲ. ಪಾಂಚಾಲ ದೇಶದ ದೊರೆಗಳೆಲ್ಲ 'ಪಾಂಚಾಲ'ರೇ. ಪಾಂಚಾಲ ಒಂದು ನಾಡಿನ ಹೆಸರು ಕೂಡ. ದ್ರೌಪದಿಯ ಸ್ವಯಂವರದ ತರುವಾಯ ಪಾಂಡವರು ಒಂದು ವರ್ಷ ಈ ನಾಡಿನಲ್ಲಿದ್ದರು. ಪಾಂಚಾಲನೆಂಬ ಋಷಿಯೂ ಇದ್ದನು. ದ್ರುಪದ, ಧೃಷ್ಟದ್ಯುಮ್ನ, ಸತ್ಯಜಿತ ಹಾಗೂ ಗಾಲವರನ್ನೂ 'ಪಾಂಚಾಲ'ರೆಂದೇ ಗುರುತಿಸಲಾಗುತ್ತದೆ.

**ಪಾಂಡು :** ವಿಚಿತ್ರವೀರ್ಯ ಮಕ್ಕಳಿಲ್ಲದೆ ಮಡಿದನು. ವ್ಯಾಸನು ತನ್ನ ತಾಯಿ ಸತ್ಯವತಿಯ ಹೇಳಿಕೆಯ ಮೇರೆಗೆ ನಿಯೋಗದ ಮೂಲಕ ಅಂಬಾಲಿಕೆಗೆ ಗಂಡುಮಗು ವನ್ನು ನೀಡಿದನು. ಪಾಂಡುವು ರೋಗಿಯಾದಕಾರಣ ಅವನ ಹೆಸರು 'ಪಾಂಡವ' ನೆಂದಾಯಿತು. ಧೃತರಾಷ್ಟ್ರ ಹಿರಿಯನಾದುದರಿಂದ ಗದ್ದುಗೆಯ ಮೇಲೆ ಹಕ್ಕು ಆತನದು. ಕುರುಡನಾದುದರಿಂದ ಆತ ರಾಜ್ಯವನ್ನು ಆಳುವಂತಿರಲಿಲ್ಲ ವಿದುರ ದಾಸಿಯ ಮಗ ನಾಗಿದ್ದನು. ಹೀಗಾಗಿ ಕಿರಿಯ ಪಾಂಡುವೇ ಹಸ್ತಿನಾಪುರದ ದೊರೆಯಾದನು. ಕಿಂದಮ ಋಷಿಯ ಶಾಪದಿಂದಾಗಿ ಈತ ಪ್ರಜೋತ್ಪಾದನೆಗೆ ಹೆದರುತ್ತಿದ್ದನು. ಅವನು ಹೆಣ್ಣನ್ನು ಕೂಡಿಕೊಳ್ಳುವಂತಿರಲಿಲ್ಲ. ಅವನು ತನ್ನ ಮಡದಿಯರಾದ ಕುಂತಿ, ಮಾದ್ರಿಯರಿಗೆ ನಿಯೋಗದಿಂದ ಮಕ್ಕಳನ್ನು ಪಡೆಯಲು ಹೇಳಿದನು. ದುರ್ವಾಸನು ಕುಂತಿಗಿತ್ತ ಮಂತ್ರವೂ ನೆರವಿಗೆ ಬಂದಿತು. ಕುಂತಿ-ಮಾದ್ರಿಯರ ಮಕ್ಕಳು ಹಾಗೆ ನೋಡಿದರೆ ಪಾಂಡುವಿನ ಕ್ಷೇತ್ರಜರಾದರೂ ಅವರನ್ನು 'ಪಾಂಡವ'ರೆಂದೇ ಕರೆಯಲಾಗುತ್ತದೆ. ಈತನು ಪೃಥ್ವಿಯನ್ನು ಪಾದಾಕ್ರಾಂತಗೊಳಿಸಲೆಂದು ತನ್ನ ದೊಡ್ಡ ಸೈನ್ಯದೊಂದಿಗೆ

ಹೊರಟನು. ಹಲವು ಜನ ರಾಜರುಗಳನ್ನು ಗೆದ್ದು ರಾಜ್ಯವನ್ನು ವಿಸ್ತರಿಸಿದನು. ಋಷಿಯ ಶಾಪದಿಂದಾಗಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ತನ್ನ ಮಡದಿಯರೊಂದಿಗೆ ಕಾಡಿನಲ್ಲಿ ಇರಹತ್ತಿದನು. ಒಂದು ಸಲ ಮಾದ್ರಿಯ ಸೌಂದರ್ಯದಿಂದಾಗಿ ಈತನಲ್ಲಿ ಕಾಮವಾಸನೆ ಕೆರಳಿತು. ಅವಳ ವಿರೋಧವನ್ನು ಲೆಕ್ಕಿಸದೆಯೇ ಅವಳೊಡನೆ ಸಮಾಗಮ ವನ್ನು ಬಯಸಿ ಸಾವನ್ನು ಬರಮಾಡಿಕೊಂಡನು. ಮಾದ್ರಿ ಸತಿಹೋದಳು.

**ಪುರೂರವ :** ಬುಧನಿಗೆ ಇಲೆಯಿಂದ ಹುಟ್ಟಿದ ಮಗನು. ಸೋಮವಂಶದ ಮೂಲಪುರುಷ. ಮತ್ಸ್ಯಪುರಾಣದ ಹೇಳಿಕೆಯಂತೆ ಈತನ ರಾಜಧಾನಿ ಪ್ರತಿಷ್ಠಾನಪುರ ವಾಗಿತ್ತು. ಈತನು ನೂರು ಅಶ್ವಮೇಧಯಜ್ಞಗಳನ್ನು ಮಾಡಿದ್ದನು. ಮಿತ್ರಾವರುಣರ ಶಾಪಕ್ಕೆ ಗುರಿಯಾಗಿ ಭೂಮಿಗೆ ಬಂದ ಊರ್ವಶಿಯು ಪುರೂರವನ ಗುಣಗಳಿಗೆ ಮನ ಸೋತಳು. ಈತನು ಅವಳನ್ನು ಓಡಿಸಿಕೊಂಡು ಹೋಗುವ ಕೇಶಿಯಿಂದ ಪಾರು ಮಾಡಿದ್ದನು. ಪುರೂರವನು ಅವಳ ಅಂದಕ್ಕೆ ಮಾರುಹೋಗಿ ಅವಳಿಗಾಗಿ ತನ್ನ ಬೇಡಿಕೆಯನ್ನು ಮುಂದೊಡ್ಡಿದನು. ಅವಳು ಮೂರು ಶರತ್ತುಗಳನ್ನು ಹಾಕಿದಳು. ಅವುಗಳ ಪಾಲನೆ ನಡೆಯುವವರೆಗೆ ಅವನ ಮಡದಿಯಾಗಿರಲು ಒಪ್ಪಿದಳು. ಒಂದು ಶರತ್ತು ಮುರಿಯಲಾಗುತ್ತಲೇ ಅವಳು ಅವನನ್ನು ತೊರೆದು ಹೋಗಿಬಿಟ್ಟಳು. ಈತನಿಗೆ ಊರ್ವಶಿಯಿಂದ ಆರು ಜನ ಮಕ್ಕಳಾದರು. ಒಂದು ಸಲ ಧರ್ಮ, ಅರ್ಥ, ಕಾಮಗಳು ಮಾನವರೂಪವನ್ನು ಧರಿಸಿ ಈತನೆದುರು ಬಂದವು. ಈತನು ಧರ್ಮಕ್ಕೆ ಎಲ್ಲಕ್ಕೂ ಹೆಚ್ಚಿನ ಗೌರವ, ಆದ್ಯತೆಯನ್ನಿತ್ತ ಕಾರಣ ಅರ್ಥ ಹಾಗೂ ಕಾಮರು 'ಲೋಭದಿಂದಾಗಿ ನಿನ್ನ ನಾಶವಾಗಲಿ' ಎಂದು ಶಾಪವನ್ನಿತ್ತರು. ತುಂಬುರುವು ಈತನಿಗೆ ಶಾಪವಿತ್ತ ಪ್ರಸ್ತಾಪ ಸ್ಕಂದಪುರಾಣದಲ್ಲಿದೆ. ಈತ ಕ್ಷತ್ರಿಯನಾಗಿಯೂ ಮಂತ್ರಕಾರನಾಗಿದ್ದನು. ಚಾತುರ್ವರ್ಣ್ಯ ವನ್ನು ಕುರಿತು ವಾಯು ಹಾಗೂ ಕಶ್ಯಪರೊಂದಿಗೆ ವಾದಮಾಡಿದ್ದನು.

**ಪುಲೋಮಾ :** ಬ್ರಹ್ಮದೇವನ ಮಾನಸಪುತ್ರನಾದ ಭೃಗುವಿನ ಮಡದಿ. ಒಬ್ಬ ರಾಕ್ಷಸನ ಹೆಸರೂ ಇದೇ ಆಗಿದೆ. ಈಕೆ ಚಿಕ್ಕವಳಿದ್ದಾಗ ಇವಳ ತಂದೆಯು ಒಂದು ಸಲ ಇವಳನ್ನು ಹೆದರಿಸಲೆಂದು, 'ತಾಳು, ನಿನ್ನನ್ನು ರಾಕ್ಷಸನಿಗೆ ಕೊಟ್ಟುಬಿಡುತ್ತೇನೆ' ಎಂದನು. ಪುಲೋಮ ರಾಕ್ಷಸನಿಗೆ ಸರಿಯಾಗಿ ಈ ಮಾತು ಕೇಳಿಬಂದಿತು. ಅವನು ಇವಳಿಗೆ ಒಲಿದನು. ಅವನು ಇವಳನ್ನು ತನ್ನ ಮಡದಿಯೆಂದೇ ನಂಬಿದನು. ಆದರೆ ಪುಲೋಮಾಳ ತಂದೆಗೆ ಈ ಸಂಗತಿ ಗೊತ್ತಿರಲಿಲ್ಲ. ಅವಳು ದೊಡ್ಡವಳಾಗುತ್ತಲೇ ತಂದೆಯು ಅವಳನ್ನು ಭೃಗುವಿಗೆ ಕೊಟ್ಟು ಮದುವೆಯನ್ನು ಮಾಡಿದನು. ಭೃಗುವು ಸ್ನಾನಕ್ಕೆಂದು ಒಂದು ಸಲ ಹೊರಹೋದಾಗ ಪುಲೋಮ ರಾಕ್ಷಸ ಮನೆಗೆ ಬಂದನು. ಅವನೊಬ್ಬ ಅತಿಥಿಯೆಂದು ಬಗೆದು ಈಕೆ ಅವನನ್ನು ಬರಮಾಡಿಕೊಂಡಳು. ರಾಕ್ಷಸನು ಅವಳನ್ನು ಓಡಿಸಿಕೊಂಡು ಹೋಗುವ ಯೋಚನೆಯಲ್ಲಿದ್ದನು. ಪ್ರತ್ಯಕ್ಷವಾಗಿ ಕೃತಿಗಿಳಿವ ಮುನ್ನ ಅವನು ಅಗ್ನಿ ಯನ್ನು 'ಪುಲೋಮಾ ಯಾರ ಮಡದಿ ?' ಎಂದು ಕೇಳಿ ಅವನ ಸಲಹೆಯನ್ನು ಬಯಸಿದನು. ಆತನೊಂದಿಗೆ ಅವಳ ಮದುವೆಯಾಗಿಲ್ಲವೆಂದೂ, ಆತನು ಅವಳಿಗೆ ಒಲಿದಿದ್ದರೂ ಭೃಗುವಿನೊಂದಿಗೆ ಅವಳ ಮದುವೆಯಾದ್ದರಿಂದ ಆಕೆ ಅವನ ಮಡದಿ ಯೆಂದೂ ಅಗ್ನಿಯು ಅವನಿಗೆ ಹೇಳಿದನು. ರಾಕ್ಷಸನು ವರಾಹದ ರೂಪವನ್ನು ಧರಿಸಿ

ಪುಲೋಮಾಳನ್ನು ಓಡಿಸಿಕೊಂಡು ಹೋದನು. ಆಗ ಪುಲೋಮಾ ಬಸಿರಾಗಿದ್ದಳು. ಬಸಿರಿಗೆ ರಾಕ್ಷಸನ ಈ ನಡತೆ ಹಿಡಿಸಲಿಲ್ಲ. ಅದು ಬಸಿರಿನಿಂದ ಹೊರಬಂದಿತಲ್ಲದೆ ಆ ರಾಕ್ಷಸನನ್ನು ಸುಟ್ಟು ಬೂದಿಯನ್ನಾಗಿ ಮಾಡಿತು. ಭೃಗುವಿನ ಮಡದಿ ಪುಲೋಮಾಳಿಗೆ ಹತ್ತೊಂಬತ್ತು ಜನ ಮಕ್ಕಳಾದರು. ಅವರಲ್ಲಿ ಏಳು ಜನ ಋಷಿಗಳಾಗಿ ಹನ್ನೆರಡು ಜನ ದೇವತೆಗಳಾದರು.

**ಪುಷ್ಕರಧಾರಿಣಿ :** ವಿದರ್ಭದಲ್ಲಿದ್ದ ಸತ್ಯನೆಂಬ ಮನಸ್ಸಿಂದಂತೆ ನಡೆದುಕೊಳ್ಳುವ ಬ್ರಾಹ್ಮಣನ ಮಡದಿ. ಗಂಡನು ಹಿಂಸಾತ್ಮಕವಾದ ಯಜ್ಞವನ್ನು ಮಾಡುವುದು ಅವಳಿಗೆ ಸುತರಾಂ ಒಪ್ಪಿಗೆಯದಾಗಿರಲಿಲ್ಲ. ಆದರೆ ಅವನ ಮನದಂತೆ ನಡೆದುಕೊಳ್ಳದಿದ್ದರೆ ಶಾಪವನ್ನಿತ್ತಾನೆಂಬ ಹೆದರಿಕೆಯಿಂದಾಗಿ ಅವಳು ಯಜ್ಞಪತ್ನಿಯಾಗಿದ್ದಳಷ್ಟೆ.

ನೋಡಿ : ವ್ಯಕ್ತಿವಿಶೇಷ—ಸತ್ಯ.

**ಪೌಷ್ಯ :** ಒಬ್ಬ ಕ್ಷತ್ರಿಯ ರಾಜ. ಧೌಮ್ಯನ ಶಿಷ್ಯನಾದ ಉತ್ತಂಕನು ಗುರುದಕ್ಷಿಣೆಗಾಗಿ ಈತನ ಮಡದಿಯ ಕುಂಡಲಗಳನ್ನು ಕೇಳಿದನು. ಅವಳು ಅವುಗಳನ್ನು ಅವನಿಗೆ ಕೊಟ್ಟಳು. ಈತನು ಬೇಕೆಂದೇ ಉತ್ತಂಕನನ್ನು ಊಟಕ್ಕಾಗಿ ನಿಲ್ಲಿಸಿಕೊಂಡನು. ಊಟ ಸರಿಯಾಗಿರಲಿಲ್ಲ. ಹೀಗಾಗಿ ಉತ್ತಂಕನು ಈತನಿಗೆ ಕುರುಡಾಗೆಂದು ಶಾಪವಿತ್ತನು. ಆಗ ಪೌಷ್ಯನು 'ನಿನಗೆ ಮಕ್ಕಳಾಗದಿರಲಿ' ಎಂದು ಅವನಿಗೆ ಮರುಶಾಪವನ್ನಿತ್ತನು. ತರುವಾಯ ಉತ್ತಂಕನಿಗೆ ತನ್ನ ತಪ್ಪಿನ ಅರಿವಾಯಿತು. ಅವನು ಉತ್ತಂಕನ ಕ್ಷಮೆ ಕೇಳಿದನು. ಉತ್ತಂಕನ ಕುರುಡಿನ ಕಾಲಾವಧಿಯನ್ನು ಕಡಿಮೆ ಮಾಡುವ ಉಶ್ಶಾಪವನ್ನು ನೀಡಿದನು. ಪೌಷ್ಯನಿಗೆ ತನ್ನ ಶಾಪವನ್ನು ಹಿಂತೆಗೆದುಕೊಳ್ಳಲು ಹೇಳಿದನು. ಆದರೆ ಅವನು ತನ್ನ ಅಸಮರ್ಥತೆಯನ್ನು ವ್ಯಕ್ತಪಡಿಸಿದನು. ಅದಕ್ಕೆ ಉತ್ತಂಕ, 'ನೀನು ತಪ್ಪುಗಾರನಿದ್ದು ನನ್ನನ್ನು ಶಪಿಸಿದ್ದರಿಂದ ನಿನ್ನ ಶಾಪ ಕಾರ್ಯಗತವಾಗದು' ಎಂದನು.

**ಪೌಷ್ಯಪತ್ನಿ :** ಇವಳು ಶ್ರೇಷ್ಠಳಾದ ಪತಿವ್ರತೆ ಎಂದು ಪೌಷ್ಯನೇ ಹೇಳಿದ್ದಾನೆ. ಅವಳು ಮುಸುರೆಯ ಬಾಯಿಯಿಂದ ಬಂದವರಿಗೆ ಭೆಟ್ಟಿಯನ್ನು ನೀಡುತ್ತಿರಲಿಲ್ಲ. ಹೀಗಾಗಿಯೇ ಉತ್ತಂಕನಿಗೆ ಈಕೆ ಮೊದಲು ಕಾಣಲಿಲ್ಲ. ಅವನು ಶುಚಿರ್ಭೂತನಾಗಿ ಬರುತ್ತಲೇ ಅವನನ್ನು ಬರಮಾಡಿಕೊಂಡಳು. ಅವನಿಗೆ ಕುಂಡಲಗಳನ್ನು ಕೊಟ್ಟಳು. ಅವುಗಳನ್ನು ಜೋಪಾನವಾಗಿ ಇರಿಸಿಕೊಳ್ಳಲು ಹೇಳಿದಳು. ತಕ್ಷಕನು ಅವುಗಳ ಮೇಲೆ ಕಣ್ಣಿಟ್ಟಿದ್ದನು. ಹೀಗಾಗಿ ಅವನ ಬಗೆಗೆ ಎಚ್ಚರದಿಂದ ಇರಲು ಹೇಳಿದಳು.

**ಪ್ರಮದ್ವರಾ :** ವಿಶ್ವಾವಸು ಗಂಧರ್ವ ಹಾಗೂ ಮೇನಕೆಯರ ಮಗಳು. ಮೇನಕೆಯು ಹೆರಿಗೆಯಾಗುತ್ತಲೇ ಇವಳನ್ನು ಸ್ಥೂಲಕೇಶನೆಂಬ ಮುನಿಯ ಆಶ್ರಮದ ಬಳಿ ಬಿಟ್ಟುಹೋಗಿದ್ದಳು. ಮುನಿಯೇ ಈ ಕೂಸನ್ನು ಲಾಲಿಸಿ ಪಾಲಿಸಿದ್ದನು. ಅವನು ಇವಳಿಗೆ 'ಪ್ರಮದ್ವರಾ' ಎಂದು ಹೆಸರಿಟ್ಟನು. ಒಂದು ಸಲ ಪ್ರಮಿತಿ ಋಷಿ ಹಾಗೂ ಘೃತಾಚಿಯರ ಮಗನಾದ ರುರುವು ಇವಳನ್ನು ಕಂಡನು. ಮೊದಲ ನೋಟದಲ್ಲಿಯೇ ಅವಳ ಮೇಲೆ ಈತನ ಪ್ರೇಮ ನೆಟ್ಟಿತು. ರುರುವು ರೀತಿಯಂತೆ ಋಷಿಯ ಬಳಿ ಬೇಡಿಕೆಯನ್ನೊಡ್ಡಿದನು. ಅವನು ಒಪ್ಪಿಕೊಂಡನು. ಹೀಗಾಗಿ ಪ್ರಮದ್ವರೆಯು ರುರುವಿನ ವಾಗ್ದತ್ತ ವಧುವಾಗಿದ್ದಳು. ಮದುವೆಯ ಮೊದಲೇ ಹಾವು ಕಚ್ಚಿ ಸತ್ತಳು. ರುರುವಿಗೆ ಬಹಳ

ದುಃಖವಾಯಿತು. ಅವನ ಕರುಣವಿಲಾಪವನ್ನು ಕೇಳಿ ದೇವದೂತರು ಇಳಿದುಬಂದರು. ಅವಳ ಆಯುಸ್ಸೇ ಅಷ್ಟಿತ್ತೆಂದು ಅವನಿಗೆ ಹೇಳಿದರು. ಅಲ್ಲದೆ, 'ನೀನು ಆಯುಸ್ಸಿನ ಒಂದಂಶವನ್ನು ಅವಳಿಗೆ ಕೊಡಮಾಡಿದೆಯಾದರೆ ಅಷ್ಟರಮಟ್ಟಿಗೆ ಅವಳಿಗೆ ಅದು ದೊರಕಲು ಸಾಧ್ಯ. ಅವಳು ಜೀವತಳೆಯುವಳು' ಎಂದರು. ರುರುವು ಅವಳಿಗೆ ತನ್ನ ಅರ್ಧ ಆಯುಸ್ಸನ್ನು ನೀಡಿ ಜೀವತಳೆಯುವಂತೆ ಮಾಡಿದನು. ಅವರ ಮದುವೆ ನಡೆಯಿತು. ಸುಖದಿಂದ ಸಂಸಾರವನ್ನು ಸಾಗಿಸಿದನು. ಅವರಿಗೆ ಶುನಕ ಎಂಬ ಮಗನಿದ್ದನು.

**ಬಂದಿ :** ಈತನನ್ನು ಸೂತಪುತ್ರನೆಂದು ಉಲ್ಲೇಖಿಸಲಾಗುತ್ತದೆ. ಆದರೆ ಈತ ವರುಣನ ಮಗನು. ಈತ ವಾದವಿವಾದಪಟುವಾಗಿದ್ದನು. ಜನಕರಾಜನ ಬಳಿಯಿದ್ದ ಕಾಲಕ್ಕೆ ಹಲವು ಜನ ಬ್ರಾಹ್ಮಣರನ್ನು ವಾದಗಳಲ್ಲಿ ಸೋಲಿಸಿದ್ದನು. ಸೋತವರಿಗೆ ಈತ ಜಲಸಮಾಧಿಯನ್ನೀಯುತ್ತಿದ್ದನು. ಅಷ್ಟಾವಕ್ರನ ತಂದೆ ಕಹೋಡನನ್ನು ನೀರಲ್ಲಿ ಮುಳುಗಿಸಿದ್ದನು. ಅಷ್ಟಾವಕ್ರನಿಗೆ ಈ ಸಂಗತಿ ತಿಳಿದ ಬಳಿಕ ಅವನು ಬಂದು ಈತನನ್ನು ವಾದದಲ್ಲಿ ಸೋಲಿಸಿ ನೀರಲ್ಲಿ ಮುಳುಗಿಸಿದನು.

ನೋಡಿ : ಶಾಪ, ಕ್ರ. ೫೬, ಅಷ್ಟಾವಕ್ರ > ಸಂಜಾತಾ.

**ಬಭ್ರು :** ವೃಷ್ಣಿವಂಶದ ಒಬ್ಬ ಯಾದವ. ಇವನು ರೈವತಕ ಪರ್ವತದ ಮೇಲೆ ನಡೆದ ಮಹೋತ್ಸವದಲ್ಲಿ ಪಾಲ್ಗೊಂಡಿದ್ದನು. ಯದುವಂಶದ ಏಳು ಜನ ಮಹಾರಥಿಗಳಲ್ಲಿ ಈತನ ಗಣನೆಯಿದೆ. ಈತ ತಪಸ್ವಿಯಾಗಿದ್ದನು. ಶಿಶುಪಾಲನು ಈತನ ಮಡದಿಯ ಮೇಲೆ ಅತ್ಯಾಚಾರವನ್ನು ನಡೆಯಿಸಿದನು. ವ್ಯಾಧನ ಒನಕೆಯ ಪೆಟ್ಟಿನಿಂದ ಈತನಿಗೆ ಸಾವು ಬಂದಿತು.

**ಬಭ್ರುವಾಹನ :** ಅರ್ಜುನ, ಚಿತ್ರಾಂಗದೆಯರ ಮಗ. ಮಣಿಪುರದ ದೊರೆ. ಅಶ್ವಮೇಧಯಜ್ಞದ ಕಾಲಕ್ಕೆ ಅರ್ಜುನನು ಮಣಿಪುರದ ಹತ್ತಿರಕ್ಕೆ ಬಂದಾಗ ಈತ ಉಲೂಪಿಯ ಪ್ರೋತ್ಸಾಹನೆಯಿಂದಾಗಿ ಅವನ ಕುದುರೆಯನ್ನು ತಡೆದನು. ಇವರಿಬ್ಬರಲ್ಲಿ ಕಾಳಗ ನಡೆಯಿತು. ಬಾಣಗಳ ಹೊಡೆತಕ್ಕೆ ಸಿಕ್ಕು ಇಬ್ಬರೂ ಮೂರ್ಛೆಹೋದರು. ಬಭ್ರುವಾಹನ ಎಚ್ಚೆತ್ತ ಬಳಿಕ ಉಲೂಪಿಯು ಅವನನ್ನು ಸಮಾಧಾನಪಡಿಸಿದಳು. ಅವಳಿತ್ತ ಮಣಿಯ ಸ್ಪರ್ಶದಿಂದಾಗಿ ಅರ್ಜುನನು ಎಚ್ಚೆತ್ತನು. ತಂದೆ-ಮಗನ ಮಿಲನವಾಯಿತು. ಇವನು ಅಶ್ವಮೇಧಯಜ್ಞದ ಕರೆಯನ್ನು ಮನ್ನಿಸಿ ತಾಯಿ ಉಲೂಪಿ ಹಾಗೂ ಚಿತ್ರಾಂಗದೆಯರ ಕೂಡ ಹೋಗಿದ್ದನು. ಶ್ರೀಕೃಷ್ಣನು ಬಭ್ರುವಾಹನನಿಗೆ ದಿವ್ಯವಾದ ಕುದುರೆಗಳನ್ನು ಹೂಡಿದ ಹೊನ್ನರಥವನ್ನು ಕೊಟ್ಟನು. ಯುಧಿಷ್ಠಿರನು ಅವನಿಗೆ ವಿಪುಲ ಸಂಪತ್ತನ್ನು ನೀಡಿದನು.

**ಬಲರಾಮ :** ಈತ ಹಿಂದಿನ ಜನ್ಮದಲ್ಲಿ ಶೇಷನಾಗಿದ್ದನು. ವಸುದೇವ, ರೋಹಿಣಿಯರ ಮಗ. ಶ್ರೀಕೃಷ್ಣನ ಅಣ್ಣ. ಇವನು ಭೀಮ ಹಾಗೂ ದುರ್ಯೋಧನರಿಗೆ ಗದಾಯುದ್ಧದ ತರಬೇತಿಯನ್ನಿತ್ತನು. ದ್ರೌಪದಿಯ ಸ್ವಯಂವರದ ಕಾಲಕ್ಕೆ ಶ್ರೀಕೃಷ್ಣನೊಂದಿಗೆ ಈತನೂ ಹಾಜರಿದ್ದನು. ಸುಭದ್ರೆಯನ್ನು ಓಡಿಸಿಕೊಂಡು ಹೋಗುತ್ತಲೇ ಈತ ತುಂಬ ಕೆರಳಿದ್ದನು. ಶ್ರೀಕೃಷ್ಣನೇ ಇವನನ್ನು ಶಾಂತಗೊಳಿಸಿದನು. ಇವನ ಅಧ್ಯಯನ ಸಾಂದೀಪನಿಯ ಆಶ್ರಮದಲ್ಲಾಯಿತು. ಇವನು ಧೇನುಕಾಸುರ ಹಾಗೂ ಮುಷ್ಟಿಕರನ್ನು

ಕೊಂದನು. ಇವನು ಕೌರವ-ಪಾಂಡವರಲ್ಲಿ ಒಪ್ಪಂದವನ್ನುಂಟುಮಾಡಲೆಂದು ದೂತನನ್ನು ಕಳಿಸಲು ಒಪ್ಪಿಕೊಂಡನು. ಮಹಾಭಾರತ ಯುದ್ಧದಲ್ಲಿ ಅಲಿಪ್ತನಾಗಿದ್ದನು. ಕೌರವರಿಗಾಗಲಿ, ಪಾಂಡವರಿಗಾಗಲಿ ನೆರವಾಗಲಿಲ್ಲ. ಆ ಕಾಲಕ್ಕೆ ತೀರ್ಥಯಾತ್ರೆಗೆಂದು ಹೊರಟು ಹೋದನು. ಭೀಮ-ದುರ್ಯೋಧನರ ಗದಾಯುದ್ಧದ ಹೊತ್ತಿಗೆ ಹಾಜರಿದ್ದನು. ಭೀಮನು ದುರ್ಯೋಧನನನ್ನು ಅನ್ಯಾಯದಿಂದ ಕೊಂದನೆಂದು ಈತನ ಕೋಪ ಉಕ್ಕೇರಿತು. ದ್ವಾರಕೆಗೆ ಹಿಂತಿರುಗಿದನು. ಯುಧಿಷ್ಠಿರನ ಅಶ್ವಮೇಧಯಾಗಕ್ಕೆಂದು ಹಸ್ತಿನಾಪುರಕ್ಕೆ ಬಂದಿದ್ದನು. ದ್ವಾರಕೆಯಲ್ಲಿ ಮದ್ಯಪಾನವನ್ನು ನಿಷೇಧಿಸಿದ್ದನು. ಈತ ಯಾವಾಗಲೂ ನೀಲಿ ಬಣ್ಣದ ಬಟ್ಟೆಗಳನ್ನೇ ಉಡುತ್ತಿದ್ದನು.

**ಬಾಲಧಿ :** ಒಬ್ಬ ಮುನಿ. ಅಮರನಾದ ಮಗನನ್ನು ಪಡೆಯಲೆಂದು ಘೋರವಾದ ತಪಸ್ಸನ್ನು ಗೈದನು. ಮರ್ತ್ಯರಾರೂ ಎಂದೆಂದಿಗೂ ಅಮರತ್ವವನ್ನು ಪಡೆಯಲಾರರೆಂದು ದೇವತೆಗಳು ಹೇಳಿದರು. ಹೀಗಾಗಿ ಮಿತಿಯುಳ್ಳ ಅಮರನಾದ ಮಗ ಸಾಕೆಂದನು. ಪರ್ವತವು ಆತನಿಗೆ ನಿಮಿತ್ತವಾಗಿರಲಿ, ಅದಿರುವವರೆಗೆ ಈತನಿಗೆ ಆಯುಸ್ಸಿರಲಿ—ಎಂದು ಕೋರಿದನು. ದೇವತೆಗಳು ಈತನ ಬಯಕೆಯನ್ನು ಈಡೇರಿಸಿದರು. ದೇವತೆಗಳ ಕೃಪೆಯಿಂದ ಅವನಿಗೆ ಮಗ ಹುಟ್ಟಿದನು. ಅವನೇ ಮೇಧಾವಿ. ಬಾಲಧಿಯು ಅವನಿಗೆ 'ಪರ್ವತಾಯು' ಎಂದೆನ್ನುತ್ತಿದ್ದನು. ವರ ದೊರೆತ ಬಳಿಕ ಮೇಧಾವಿಯು ಬಲು ಅಮಾನವೀಯತೆಯಿಂದ ನಡೆದುಕೊಳ್ಳಲು ಆರಂಭಿಸಿದನು. ಹೀಗಾಗಿ ಧನುಷಾಕ್ಷನು ಮೇಧಾವಿಯ ಬಾಳಿನ ಆಯುಸ್ಸಿಗೆ ನಿಮಿತ್ತವಾಗಿದ್ದ ಪರ್ವತವನ್ನು ನಾಶಪಡಿಸಿದನು. ಆದ್ದರಿಂದ ಅವನ ಬಾಳು ಕೊನೆಗೊಂಡಿತು.

**ಬುಧ :** ಚಂದ್ರನಿಂದ ಬೃಹಸ್ಪತಿಯ ಮಡದಿ ತಾರೆ ಇವಳಿಗಾದ ಮಗನು. ಚಂದ್ರವಂಶವನ್ನು ಹುಟ್ಟಿಸಿದವನೆಂದು ತಿಳಿಯಲ್ಪಡುತ್ತಾನೆ. ಭವಿಷ್ಯಪುರಾಣದ ಅಭಿಪ್ರಾಯದಂತೆ ಚಂದ್ರ ಹಾಗೂ ರೋಹಿಣಿಯರ ಮಗನೀತ. ಬೃಹಸ್ಪತಿಯು ಈತನ ಜಾತಕರ್ಮಾದಿಗಳನ್ನೆಲ್ಲ ಪೂರೈಸಿದನು. ಈತ ಬಲು ದೊಡ್ಡ ವಿದ್ವಾಂಸನಾಗಿದ್ದನು. ಹಸ್ತಿ-ಶಾಸ್ತ್ರದಲ್ಲಿ ಪಾರಂಗತನು. ಇದು ಗ್ರಹಮಾಲೆಯಲ್ಲಿ ಶುಕ್ರನ ಮೇಲ್ಪದಿಗೆ ಎರಡು ಲಕ್ಷ ಯೋಜನಗಳ ಅಂತರದಲ್ಲಿದೆ. ಬಹಳಷ್ಟುಮಟ್ಟಿಗೆ ಬೆಳ್ಳಗಿನ ಗ್ರಹವಿದು. ಈ ಗ್ರಹವು ಸೂರ್ಯನನ್ನು ಉಲ್ಲಂಘಿಸಿದಾಗಲೆಲ್ಲ ಅನಾವೃಷ್ಟಿಯ ಹೆದರಿಕೆ ಇರುತ್ತದೆ. ಈತ ಸರೋವರದಲ್ಲಿ ನಿಂತು ತೀವ್ರವಾದ ತಪಸ್ಸನ್ನು ಆಚರಿಸುತ್ತಿದ್ದನು. ಇಲಾ ಎಂಬ ಚೆಲುವೆಗೆ ಮರುಳಾಗಿದ್ದನು. ಇವರಿಬ್ಬರ ಹೊಟ್ಟೆಯಿಂದ ಪುರೂರವ ಹುಟ್ಟಿಬಂದನು. ಪದ್ಮಪುರಾಣದ ಅಭಿಪ್ರಾಯದಂತೆ ಈತ ಸೋಮವಂಶದ ಮೂಲಪುರುಷನು.

**ಬೃಹಸ್ಪತಿ :** ಅಂಗಿರಾ ಋಷಿ ಹಾಗೂ ಸುರೂಪಾ ಇವರ ಮಗನು. ಸಂವರ್ತ ಹಾಗೂ ಉತಥ್ಯರಿಗೆ ಒಡಹುಟ್ಟಿದವನು. ಇವನು ಬಲು ದೊಡ್ಡ (ಬೃಹತ್) ತಪಸ್ಸನ್ನು ಮಾಡಿದನು. ಹೀಗಾಗಿ ಬೃಹಸ್ಪತಿ ಎಂಬ ಹೆಸರು ಬಂದಿತು. ಇದು ಸ್ಕಂದಪುರಾಣದ ಹೇಳಿಕೆ. ಶುಭಾ ಹಾಗೂ ತಾರಾ ಇವರು ಈತನ ಮಡದಿಯರು. ಶುಭೆಗೆ ಏಳು ಜನ ಕನ್ಯೆಯರು; ತಾರೆಗೆ ಏಳು ಜನ ಗಂಡುಮಕ್ಕಳು ಹಾಗೂ ಸ್ವಾಹಾ ಎಂಬ ಒಬ್ಬಳು ಮಗಳು. ಈತನೂ ಬೃಹಸ್ಪತಿಯ ಮಗನೇ ಸರಿ. ಈತನ ತಾಯಿಯ ಹೆಸರು ಮಾತ್ರ

ಖಚಿತವಾಗಿ ತಿಳಿದಿಲ್ಲ. ಉತಥ್ಯನ ಮಡದಿಯು ಗರ್ಭಿಣಿಯಾಗಿದ್ದಾಗ ಬೃಹಸ್ಪತಿಯು ಅವಳನ್ನು ಬಲಾತ್ಕರಿಸಿದನು. ಬಸಿರಿನಲ್ಲಿದ್ದ ಮಗು ಈತನನ್ನು ವಿರೋಧಿಸಿತು. ಈತನು ಅದಕ್ಕೆ ಶಾಪವಿತ್ತನು. ಬಸಿರಲ್ಲಿದ್ದ ಈ ಮಗುವೇ ಮುಂದೆ ದೀರ್ಘತಮನಾದನು. ಮಮತೆಯಿಂದ ಭರದ್ವಾಜನೆಂಬ ಮಗನು ಹುಟ್ಟಿದ ಉಲ್ಲೇಖ ಆದಿಪರ್ವದಲ್ಲಿದೆ. ದೇವತೆಗಳ ಪೌರೋಹಿತ್ಯವನ್ನು ಸ್ವೀಕರಿಸಿದ ತರುವಾಯ ಈತನು ಮಾನವನ ಪೌರೋಹಿತ್ಯವನ್ನು ನಿರಾಕರಿಸಿದನು. ಸಂವರ್ತನು ಮರುತ್ತನ ಯಜ್ಞದ ಪೌರೋಹಿತ್ಯವನ್ನು ಸ್ವೀಕರಿಸಿದ್ದರಿಂದ ಆ ಯಜ್ಞವನ್ನು ನಿಲ್ಲಿಸಲು ಇಂದ್ರನಿಗೆ ಹೇಳಿದನು. ಇಂದ್ರ ಎರಗಿಬರುತ್ತಲೇ ಸಂವರ್ತನು ತನ್ನ ಬ್ರಹ್ಮತೇಜಸ್ಸಿನಿಂದ ಅವನನ್ನು ಸೋಲಿಸಿದನು. ಅಲ್ಲದೆ ಯಜ್ಞಕರ್ಮವನ್ನು ಪೂರ್ತಿಗೊಳಿಸಿದನು. ದೈತ್ಯಗುರು ಶುಕ್ರಾಚಾರ್ಯರ ಸಂಜೀವಿನಿವಿದ್ಯೆಯಿಂದಾಗಿ ದೇವತೆಗಳ ಆಟವು ನಡೆಯದಂತಾಯಿತು. ಹೀಗಾಗಿ ದೇವತೆಗಳ ಪುರೋಹಿತನಾದ ಬೃಹಸ್ಪತಿಯು ತನ್ನ ಮಗ ಕಚನನ್ನು ಈ ವಿದ್ಯೆಯನ್ನು ಪಡೆಯಲೆಂದು ಶುಕ್ರಾಚಾರ್ಯನಲ್ಲಿಗೆ ಕಳುಹಿಸಿದನು. ಬೃಹಸ್ಪತಿಯು ಉಪರಿಚರವಸುವಿನ ಯಜ್ಞಕ್ಕಾಗಿ ಹೋಗಿದ್ದನು. ಆಗ ವಿಷ್ಣುವೇ ಅಗ್ನಿಗಿತ್ತ ತುಪ್ಪದ ಆಹುತಿಯನ್ನು (ಪುರೋಡಾಶ) ತಿಂದುಹಾಕಿದನು. ಆದರೆ ಬೃಹಸ್ಪತಿಗೆ ಮಾತ್ರ ಆತನ ದರ್ಶನವಾಗಲಿಲ್ಲ.

ಬೃಹಸ್ಪತಿಯು ಇಂದ್ರನಿಗೆ ರಾಜನ ಕರ್ತವ್ಯಗಳನ್ನು ತಿಳಿಸಿ ಹೇಳಿದನು. ಪೃಥ್ವಿಯ ದೋಹನದ ಕಾಲಕ್ಕೆ ದೇವತೆಗಳು ಈತನನ್ನು ವತ್ಸನನ್ನಾಗಿ ಮಾಡಿದ್ದರು. ಈತನು ಧರ್ಮಶಾಸ್ತ್ರ, ಅರ್ಥಶಾಸ್ತ್ರ, ನೀತಿಶಾಸ್ತ್ರಗಳನ್ನು ಕುರಿತು ಹೊತ್ತಗೆಗಳನ್ನು ಬರೆದಂತಿದೆ. ಆದರೆ ಎಂಬತ್ತು ಶ್ಲೋಕಗಳುಳ್ಳ ಒಂದು ಸ್ಮೃತಿಯನ್ನುಳಿದು ಬೇರೇನೂ ಸಿಕ್ಕಿಲ್ಲ. ಈತನು ಬ್ರಹ್ಮದೇವನ ಬಾಹುದಂಡಕವನ್ನು ಸಂಕ್ಷಿಪ್ತಗೊಳಿಸಿರುವ ಉಲ್ಲೇಖವು ಶಾಂತಿಪರ್ವದಲ್ಲಿದೆ. ಮತ್ಸ್ಯಪುರಾಣದ ಉಲ್ಲೇಖದಂತೆ ಈತ ವಾಸ್ತುಶಾಸ್ತ್ರವನ್ನು ಕುರಿತು ಗ್ರಂಥವನ್ನು ರಚಿಸಿರುವುದು ಕಂಡುಬರುತ್ತದೆ. ಋಗ್ವೇದದಲ್ಲಿ ಬೃಹಸ್ಪತಿಯನ್ನು ಕುರಿತಾದ ಉಲ್ಲೇಖಗಳಿವೆ. ಈತ ಬಲುಪರಾಕ್ರಮಿಯಾಗಿದ್ದನು.

**ಬ್ರಹ್ಮದೇವ:** ಬ್ರಹ್ಮನ್ ಎಂಬುದು ಸೃಷ್ಟಿಯ ಮೂಲತತ್ವವೆಂದು ತಿಳಿಯಲಾಗುತ್ತದೆ. ಈತ ಸೃಷ್ಟಿಯ ಮೊದಲು ಹುಟ್ಟಿದನು. ಭಗವಂತನು ಪೃಥ್ವಿರೂಪದ ಕಮಲವನ್ನು ತಯಾರಿಸಿದನು. ಬ್ರಹ್ಮ ಅದರಲ್ಲಿ ಹುಟ್ಟಿದನೆಂದು ಮತ್ಸ್ಯಪುರಾಣದಲ್ಲಿ ಹೇಳಲಾಗಿದೆ. ವಿಷ್ಣುವು ಸೃಷ್ಟಿಯನ್ನು ಕುರಿತು ಯೋಚಿಸುವಾಗ ಹುಟ್ಟಿದ ಅಹಂಕಾರದಿಂದಲೇ ಬ್ರಹ್ಮನ ಉತ್ಪತ್ತಿಯಾಯಿತೆಂದು ಮಹಾಭಾರತ ಹೇಳುತ್ತದೆ. ಈತನು ಮೊದಲು ತಮೋಗುಣದ, ತದನಂತರ ರಜೋಗುಣದ ಹಾಗೂ ತರುವಾಯ ಸತ್ವಗುಣದ ಪ್ರಜೆಯನ್ನು ನಿರ್ಮಿಸಿದನು. ಈತ ಎಲ್ಲ ವೇದಾಂತಗಳ ಅಧಿಷ್ಠಾತೃ. ಈತನಿಂದಲೇ ಗಾಯತ್ರಿಯು ಹುಟ್ಟಿದಳು. ಈ ಜೋಡಿಯು ಸಾಕ್ಷಾತ್ ಆಗಿ ಇಲ್ಲವೆ ಅಮೂರ್ತವಾಗಿ ಬೇಕಿದ್ದಂತೆ ಇರುತ್ತದೆ. ಗಾಯತ್ರಿಯು ಈತನನ್ನು ಅದೆಂದಿಗೂ ಬಿಟ್ಟಿರಳು. ಈತ ವೇದರಾಶಿಯಾಗಿದ್ದು ಸಾವಿತ್ರಿಯು ಅದರಲ್ಲಿಯೇ ವಾಸವಾಗಿರುವಳು.

ಈತ ಒಂದೇ ಮೋರೆಯುವನಾಗಿದ್ದರೂ ಈತನನ್ನು ಯಾವಾಗಲೂ ಚತುರ್ಮುಖನೆಂದೇ ಬಣ್ಣಿಸಲಾಗುತ್ತದೆ. ಈತನು ತನ್ನ ಮೈಯಿಂದ ಶತರೂಪಾ ಎಂಬ ಹೆಣ್ಣನ್ನು

ಸೃಷ್ಟಿಸಿದನು. ಅವಳು ಅವನ ಸುತ್ತಲೂ ಸುತ್ತತೊಡಗಿದಳು. ಈತನ ಸುತ್ತಲೂ ಮಾನಸಪುತ್ರರು ಕುಳಿತಿದ್ದರಿಂದ ಅವಳತ್ತ ಹಿಂತಿರುಗಿ ನೋಡಲು ಈತನಿಗೆ ನಾಚಿಕೆಯಾಯಿತು. ಆ ರೂಪವತಿಯನ್ನು ನೋಡುವ ಈತನ ಬಯಕೆಯಾದರೋ ಬಲು ತೀವ್ರವಾಯಿತು. ಹೀಗಾಗಿ ನಾಲ್ಕೆಸೆಗಳಲ್ಲೂ ನಾಲ್ಕು ಮೋರೆಗಳನ್ನು ತಯಾರಿಸಿದನು. ಅವಳು ಮೇಲಕ್ಕೆ ಹೋಗಹತ್ತುತ್ತಲೆ ತನ್ನ ಮೇಲ್ಬದಿಗೆ ಐದನೆಯ ಮೋರೆಯನ್ನು ನಿರ್ಮಿಸಿಕೊಂಡನು. ಮುಂದೆ ಶಂಕರನು ಅದನ್ನು ಕಡಿದುಹಾಕಿದನು. ಶತರೂಪೆಯತ್ತ ನೋಡಿದ್ದರಿಂದ ಮಕ್ಕಳಿಗಾಗಿ ಈತನು ಕೈಕೊಂಡ ತಪಸ್ಸು ಹಾಳಾಯಿತು. ರುದ್ರನು ತನ್ನ ಮಗಳು ಸಂಧ್ಯಾ ಇವಳಿಂದ ಬ್ರಹ್ಮನನ್ನು ಮರುಳುಮಾಡಿಸಿ ಮಕ್ಕಳಿದುರಿನಲ್ಲಿಯೇ ಈತನನ್ನು ಅವಮಾನಕ್ಕೀಡುಮಾಡಿದನು. ಆಗ ಈತನು ಶಂಕರನನ್ನು ಮರುಳುಮಾಡುವ ಸತಿಯನ್ನು ಹುಟ್ಟಿಸಿ ದಕ್ಷನ ಕೈಲಿ ಆತನನ್ನು ಅವಮಾನಗೊಳಿಸಿದನು.

ಬ್ರಹ್ಮದೇವನು ವರವನ್ನು ಕೊಡುವಲ್ಲಿ ಬಲು ಉದಾರನು. ವಾಲ್ಮೀಕಿರಾಮಾಯಣದಲ್ಲಿ ಬ್ರಹ್ಮದೇವನು ಇಪ್ಪತ್ತು ಸಲ ವರಗಳನ್ನು ಕೊಟ್ಟಿದ್ದು ಮಹಾಭಾರತದಲ್ಲಿ ಮೂವತ್ತೈದಕ್ಕೂ ಹೆಚ್ಚಿನ ಸಲ ಇತ್ತಿದ್ದಾನೆ. ಬ್ರಹ್ಮದೇವನ ವರದಿಂದಾಗಿ ವಾಲ್ಮೀಕಿಯು ರಾಮಾಯಣವನ್ನು ಬರೆಯಲು ಪ್ರವೃತ್ತನಾದನು. ಈತನು ರಾವಣ, ಕುಂಭಕರ್ಣ, ಮೇಘನಾದ ಮೊದಲಾದ ಹಲವು ಜನ ರಾಕ್ಷಸರಿಗೆ ವರಗಳನ್ನಿತ್ತನು. ಪಿತೃಗಳಿಗೆ ಸ್ವರ್ಗವನ್ನು ದೊರಕಿಸಿಕೊಟ್ಟನು. ಇದಕ್ಕಾಗಿ ಭಗೀರಥನಿಗೆ ಈತನ ವರವೇ ನೆರವಾಯಿತು.

ದೇವಕಾರ್ಯಗಳಲ್ಲಿ ಹನುಮಂತನ ಉಪಯೋಗ ಸಾಕಷ್ಟಾಗಲಿದೆ ಎಂಬುದನ್ನು ಗುರುತಿಸಿ ಉಳಿದ ದೇವತೆಗಳೂ ಆತನಿಗೆ ವರವನ್ನೀಯುವಂತೆ ಮಾಡಿದನು. ಈತನು ಕುಂಭಕರ್ಣನಿಗೆ ಸುದೀರ್ಘವಾದ ನಿದ್ರೆಯನ್ನೂ, ರಾವಣನಿಗೆ ಸೀಮಿತವಾದ ಅವಧ್ಯತ್ವವನ್ನೂ ಪಡೆಯುವಂತೆ ವರವಿತ್ತನು. ಮೇಘನಾದನು ಇಂದ್ರನನ್ನು ಗೆದ್ದು ತಂದ ತರುವಾಯ ಅವನನ್ನು ಬಿಡುಗಡೆ ಮಾಡಲೆಂದು ಕೇಳಿದಷ್ಟು ವರಗಳನ್ನು ಆತನಿಗೆ ಕೊಡಲು ಬ್ರಹ್ಮದೇವ ತಯಾರಾದನು. ಇಡಿಯಾದ ಅವಧ್ಯತ್ವವು ಭೂಮಿಯ ಮೇಲಿನ ಯಾವ ಜೀವಿಗೂ ಸಿಗದ್ದರಿಂದ ಅದೊಂದನ್ನು ಬಿಟ್ಟು ಮೇಘನಾದನು ಕೇಳಿದ ವರಗಳನ್ನೆಲ್ಲ ಕೊಟ್ಟನು. ಈತನು ಅವರೆಲ್ಲರಿಗೆ ಶಾಪಗಳನ್ನೂ ಕೊಟ್ಟಿದ್ದಾನೆ. ತಾನಿತ್ತ ವರಗಳು ಸುಳ್ಳಾಗದಂತೆ ಈತ ತುಂಬ ಎಚ್ಚರವಹಿಸುತ್ತಾನೆ. ರಾವಣ-ಯಮರ ಕಾಳಗದಲ್ಲಿ ಯಮನು ಆತನನ್ನು ಕೊಲ್ಲಲೆಂದು ಕಾಲದಂಡವನ್ನೆತ್ತುತ್ತಲೇ ಬ್ರಹ್ಮದೇವ ಅದನ್ನು ಕೆಳಗಿಳಿಸಲು ಹೇಳಿದನು.

ಬ್ರಹ್ಮದೇವನು ವಿಶ್ವಕರ್ಮನಿಂದ ತಯಾರಿಸಲ್ಪಟ್ಟ ಪುಷ್ಪಕವಿಮಾನವನ್ನು ಕುಬೇರನಿಗೆ ಕೊಟ್ಟುಬಿಟ್ಟನು. ಇಂದ್ರನಿಂದ ವೈಷ್ಣವಯಾಗವನ್ನು ಮಾಡಹಚ್ಚಿದನು. ಚಂದ್ರನಿಗೆ ಪೀಡೆಯನ್ನು ಉಂಟುಮಾಡುವ ರಾವಣನನ್ನು ಒಂದು ಮಂತ್ರದ ಮೂಲಕ ತೆಪ್ಪಗಾಗಿಸಿದನು. ದೇವಕಾರ್ಯ ಕೈಗೂಡಲೆಂದು ವಿಷ್ಣುವು ಮಾನವನ ಅವತಾರವನ್ನು ಪಡೆಯುವಂತೆ ದೇವತೆಗಳಿಂದ ಅವನಿಗೆ ಪ್ರಾರ್ಥನೆ ಮಾಡಿಸಿದನು. ಆಹಾರವನ್ನೇ ತ್ಯಜಿಸಿದ ಸೀತೆಯನ್ನು ಬದುಕಿಸಲೆಂದು ಇಂದ್ರನನ್ನು ಹವಿಷ್ಯಾನ್ನದೊಂದಿಗೆ ಲಂಕೆಗೆ ರವಾನಿಸಿದನು. ಮಹಾಪ್ರಸ್ಥಾನದ ತರುವಾಯ ಶ್ರೀರಾಮನನ್ನು ವಿಷ್ಣುವಿನ ತೇಜಸ್ಸಿನಲ್ಲಿ ವಿಲೀನಗೊಳ್ಳಲೆಂದು ಬರಮಾಡಿಕೊಂಡವನೂ ಈತನೇ.

೧

**ಭರದ್ವಾಜ :** ಈ ಹೆಸರಿನ ಹಲವು ವ್ಯಕ್ತಿಗಳಿರುವರು. ಅವರಲ್ಲಿ ಒಬ್ಬ ವಾಲ್ಮೀಕಿಯು ಶಿಷ್ಯನಾಗಿದ್ದವನು. ವಾಲ್ಮೀಕಿಯು ಬಾಯಿಂದ, 'ಮಾ ನಿಷಾದ...' ಎಂಬ ಉದ್ಗಾರವು ಹೊರಬಂದಾಗ ಈತನೂ ಅವನ ಜೊತೆಗಿದ್ದನು. ಶ್ರೀರಾಮನು ದಂಡಕಾರಣ್ಯಕ್ಕೆ ಹೋಗುವಾಗ ಈತನಿಗೆ ಭೆಟ್ಟಿಯಾದನು. ಈತನು ಅವನನ್ನು ಯಥೋಚಿತವಾಗಿ ಬರಮಾಡಿಕೊಂಡು ಅವನಿಗೆ ತನ್ನೊಂದಿಗೇನೇ ಇರಲು ಹೇಳಿದನು. ಈ ಆಶ್ರಮ ಅಯೋಧ್ಯೆಯಿಂದ ಹೆಚ್ಚು ದೂರದಲ್ಲಿ ಇರಲಿಲ್ಲವಾದ್ದರಿಂದ ಶ್ರೀರಾಮನು ಚಿತ್ರಕೂಟದತ್ತ ಹೋಗಲು ನಿರ್ಧರಿಸಿದನು. ಈತನೇ ಭರತನಿಗೆ ಶ್ರೀರಾಮನ ವಾಸ್ತವ್ಯದ ಬಗೆಗೆ ಹೇಳಿದನು. ಈತನು ಶ್ರೀರಾಮನಿಗೆ ವರವಿತ್ತನು. ಅಶ್ವಮೇಧದ ತರುವಾಯವೂ ಇವರಿಬ್ಬರ ಭೆಟ್ಟಿಯಾಗಿತ್ತು. ಈತನ ಮಗಳು ದೇವವರ್ಣಿನಿಯು ಪುಲಸ್ತ್ಯನ ಮಗ ವಿಶ್ರವನ ಮಡದಿ.

೨

ಬೃಹಸ್ಪತಿ ಹಾಗೂ ಮಮತೆಯರ ಮಗನ ಹೆಸರು ಭರದ್ವಾಜ. ಈತ ಹುಟ್ಟುತ್ತಲೇ ಅವರಿಬ್ಬರೂ ಈತನನ್ನು ತ್ಯಜಿಸಿದ್ದರು. ಮರುತನು ಈತನನ್ನು ಭರತನಿಗೆ ಒಯ್ದು ಕೊಟ್ಟನು. ಹಾವಿನ ವಿಷವೇರಿ ಮಡಿದ ಪ್ರಮದ್ವರೆಯನ್ನು ಕುರಿತು ಶೋಕಿಸುವ ರುರುವನ್ನು ಸಾಂತ್ವನಗೊಳಿಸುವ ಹಲವು ಜನ ಋಷಿಗಳಲ್ಲಿ ಈತನೂ ಒಬ್ಬ. ಈತನು ಜಗತ್‌ಸೃಷ್ಟಿಯು ಸಂದರ್ಭದಲ್ಲಿ ಭೃಗುವಿನೊಂದಿಗೆ ಚರ್ಚಿಸಿದನು. ಈತ ಸೂಕ್ತದ್ರಷ್ಟಾರನಲ್ಲದೆ ಧನ್ವಂತರಿಗೆ ಆಯುರ್ವೇದವನ್ನು ಹೇಳಿಕೊಟ್ಟನು.

೩

ಅಂಗಿರನ ಕುಲದಲ್ಲಿ ಹುಟ್ಟಿದ ಭರದ್ವಾಜನು ರೈಭ್ಯ ಋಷಿಯು ಗೆಳೆಯನು. ಯುವಕ್ರೀತನ ತಂದೆಯು. ಯುವಕ್ರೀತನು ರೈಭ್ಯನ ಸೊಸೆಯು ಮೇಲೆ ಅತ್ಯಾಚಾರವನ್ನೆಸಗಿದನು. ಹೀಗಾಗಿ ರೈಭ್ಯನು ತನ್ನ ಜಡೆಯಿಂದ ಒಬ್ಬ ಕೃತ್ಯಾ ರಾಕ್ಷಸನನ್ನು ನಿರ್ಮಿಸಿ ಅವನಿಂದ ಯುವಕ್ರೀತನನ್ನು ಕೊಲ್ಲಿಸಿದನು. ಆಗ ಆವನು ರೈಭ್ಯನ ಸಾವು ಅವನ ಮಗನ ಕೈಯಿಂದಲೇ ಆಗಲೆಂದು ಶಪಿಸಿ ಮಗನ ಸಾವಿನ ಶೋಕದಿಂದಾಗಿ ಅಗ್ನಿಯನ್ನು ಪ್ರವೇಶಿಸಿದನು.

**ಭೀಮ :** ಕುಂತಿಗೆ ವಾಯುವಿನಿಂದ ನಿಯೋಗದ ಮೂಲಕ ಹುಟ್ಟಿದ ಮಗನು. ಈತನ ಹುಟ್ಟಿನ ಕಾಲಕ್ಕೆ ಆಕಾಶವಾಣಿ 'ಈತ ಬಲವಂತರ ದೊರೆಯಾಗಲಿರುವನು' ಎಂದು ಕಣಿ ನುಡಿಯಿತು. ಶರ್ಯಾತಿಯು ಮಗ ಶುಕ್ರನು ಧನುರ್ವೇದಾದಿ ಶಿಕ್ಷಣವನ್ನು ಇತ್ತನು. ಈತ ಗದಾಯುದ್ಧದಲ್ಲಿ ತುಂಬ ಪಳಗಿದವನು. ಮುಂದೆ ಕೌರವ-ಪಾಂಡವರೆಲ್ಲರ ಜೊತೆಗೆ ಕೃಪಾಚಾರ್ಯ ಹಾಗೂ ದ್ರೋಣಾಚಾರ್ಯರಿಂದ ಹಲವು ವಿದ್ಯೆಗಳನ್ನು ಪಡೆದನು. ಈತ ಚಿಕ್ಕಂದಿನಿಂದಲೂ ಶಕ್ತಿವಂತನಾಗಿದ್ದರಿಂದ ಎಲ್ಲರೂ ಈತನಿಗೆ ಹೆದರಿಕೊಂಡೇ ಇರುತ್ತಿದ್ದರು. ದುರ್ಯೋಧನನಿಗೆ ಈತನನ್ನು ಕಂಡರಾಗುತ್ತಿರಲಿಲ್ಲ. ಈತನನ್ನು ಮೋಸದಿಂದ ಕೊಲ್ಲಲೆಂದು ಆತನು ಹೂಡಿದ ಸಂಚುಗಳೆಲ್ಲವೂ ಹಾಳಾದವು. ಈತನಿಗೆ ಹಾವಿನ ನಂಜು ಇಲ್ಲವೆ ವಿಷದ ಹಣ್ಣುಗಳಿಂದ ಯಾವ ಬಾಧೆಯೂ ತಟ್ಟುತ್ತಿರ

ಲಿಲ್ಲ. ಪಾಂಡವರನ್ನು ಅರಗಿನರಮನೆಯಲ್ಲಿಟ್ಟು ಕೊಲ್ಲಬೇಕೆಂಬ ದುರ್ಯೋಧನನ ಕಾರಸ್ಥಾನ ಭೀಮನಿಂದಾಗಿ ಸೋತಿತು. ಆಗ ವಿದುರನು ನೆರವಾದನು. ಈತನ ಅಸೀಮಿತವಾದ ಸಾಮರ್ಥ್ಯದಿಂದಾಗಿ ಪಾಂಡವರು ಹಾಗೂ ದ್ರೌಪದಿಯರಿಗೆ ಬಂದೊದಗಿದ ಹಲವು ಸಂಕಟಗಳು ದೂರಾದವು. ಇವನು ಹಿಡಿಂಬ ಹಾಗೂ ಬಕಾಸುರರನ್ನು ಬಲು ಸಹಜವಾಗಿ ಕೊಂದನು. ಹಿಡಿಂಬನ ತಂಗಿ ಹಿಡಿಂಬೆ ಈತನಿಗೆ ಮರುಳಾಗಿದ್ದಳು. ತನ್ನನ್ನು ಮದುವೆಯಾಗಲು ಈತನನ್ನು ಕೇಳಿದಳು. ಒಂದು ಮಗುವಾಗುವವರೆಗೆ ಮಾತ್ರ ಅವಳೊಂದಿಗೆ ಇರುವ ಶರತ್ತಿನ ಮೇಲೆ ಅವಳನ್ನು ಮದುವೆಯಾದನು. ಇವರಿಬ್ಬರ ಮಗನೇ ಘಟೋತ್ಕಚನು. ಭೀಮನು ಜರಾಸಂಧನನ್ನು ಎರಡು ಹೋಳುಗಳಾಗುವಂತೆ ಹರಿದು ಚೆಲ್ಲಿದನು. ರಾಜಸೂಯ ಯಜ್ಞದ ಕಾಲಕ್ಕೆ ಈತನು ಹಲವು ದೇಶಗಳನ್ನು ಗೆದ್ದುಕೊಂಡನು. ದುಶ್ಶಾಸನನು ತುಂಬುಸಭೆಯಲ್ಲಿ ದ್ರೌಪದಿಯ ಮಾನಭಂಗ ಮಾಡಿದಾಗ ಈತನು ಎಲ್ಲರೆದುರಿನಲ್ಲಿಯೇ, 'ಅವನ ನೆತ್ತರನ್ನು ಕುಡಿವ' ಪಣತೊಟ್ಟನು. ಅಲ್ಲದೆ ಅದನ್ನು ಕೃತಿಗೆ ಇಳಿಸಿಯೂ ತೋರಿಸಿದನು. ಅದೇ ರೀತಿಯಾಗಿ ಈತನು ದ್ರೌಪದಿಗೆ ತನ್ನ ತೆರೆದ ತೊಡೆಯನ್ನು ತೋರಿಸುವ ದುರ್ಯೋಧನನ ತೊಡೆಯನ್ನೇ ಮುರಿಯುವುದಾಗಿ ಪಣತೊಟ್ಟನು. ಹನುಮಂತನೊಂದಿಗೆ ಭೆಟ್ಟಿ ಆಗಿತ್ತು. ಇವರಿಬ್ಬರೂ ವಾಯುಪುತ್ರರು. ಹನುಮಂತನು ಭೀಮನ ಗರ್ವಹರಣ ಮಾಡಿ ಅವನಿಗೆ ವರವಿತ್ತನು. ಕುಬೇರನೊಂದಿಗೆ ಎದುರಾದ ಯುದ್ಧಸನ್ನಿವೇಶ ಸಾಮೋಪಚಾರದಿಂದ ಮುಕ್ತಾಯಗೊಂಡಿತು. ಚಿತ್ರಸೇನ ಗಂಧರ್ವನು ದುರ್ಯೋಧನನನ್ನು ಸೆರೆಹಿಡಿದಿದ್ದನು. ಆಗ ಯುಧಿಷ್ಠಿರನ ಅಪ್ಪಣೆಯನ್ನು ಪಾಲಿಸಿ ಅವನನ್ನು ಸೆರೆಯಿಂದ ಬಿಡಿಸಿದನು. ಜಯದ್ರಥನು ದ್ರೌಪದಿಯನ್ನು ಓಡಿಸಿಕೊಂಡುಹೋಗಲು ಯತ್ನಿಸಿದನು. ಆಗ ಭೀಮ ಅವನನ್ನು ಒದ್ದು ಕೆಡವಿ, ದ್ರೌಪದಿಯನ್ನು ಬಿಡಿಸಿದನು. ಅಜ್ಞಾತವಾಸದ ಕಾಲಕ್ಕೆ ಈತ ವಿರಾಟನಗರದಲ್ಲಿ ಬಲ್ಲವನಾಗಿ ಇದ್ದನು. ಕೀಚಕನ ಪಾಪದ ಕಣ್ಣು ದ್ರೌಪದಿಯ ಮೇಲೆ ಬಿದ್ದಿತು. ಹೀಗಾಗಿ ಭೀಮನು ಶಕ್ತಿ–ಯುಕ್ತಿಗಳಿಂದ ಅವನನ್ನು ಯಮಲೋಕಕ್ಕೆ ಅಟ್ಟಿದನು. ಕೀಚಕನ ಹಿಂಬಾಲಕರು ದ್ರೌಪದಿಯನ್ನು ಸುಡಲು ಹವಣಿಸಿದರು. ಭೀಮನಿಂದಾಗಿ ಅವರಿಗೆ ಯಶ ಸಿಗಲಿಲ್ಲ.

ಅಜ್ಞಾತವಾಸ ಮುಗಿದ ಬಳಿಕವೂ ಕೌರವರು ಪಾಂಡವರಿಗೆ ನ್ಯಾಯವಾದ ಪಾಲನ್ನು ಕೊಡಲು ಒಪ್ಪಲಿಲ್ಲ. ಮಾತುಕತೆಗಳಿಂದ ಸಮಸ್ಯೆಯನ್ನು ಬಗೆಹರಿಸಲೆಂದು ನಡೆಸಲಾದ ಯತ್ನಗಳು ಭೀಮನಿಗೆ ಸಂತರಾಂ ಹಿಡಿಸಲಿಲ್ಲ. ಮಹಾಭಾರತ ಯುದ್ಧದ ಕಾಲಕ್ಕೆ ಭೀಮನು ಅತುಲನೀಯವಾದ ಸಾಮರ್ಥ್ಯ, ಶೌರ್ಯಗಳನ್ನು ಮೆರೆದನು. ಇವನೊಬ್ಬನೇ ಧೃತರಾಷ್ಟ್ರನ ನೂರು ಜನ ಮಕ್ಕಳನ್ನು ಕೊಂದನು. ಅಲ್ಲದೆ ಎಣಿಕೆಯಿಲ್ಲದಷ್ಟು ಕಲಿಗಳನ್ನೂ ಕೊಂದನು. ಅಶ್ವತ್ಥಾಮನು ಮಲಗಿ ನಿದ್ರೆಹೋಗಿದ್ದ ದ್ರೌಪದಿಯ ಐವರೂ ಮಕ್ಕಳನ್ನು ಕೊಂದನು. ಅದರಿಂದ ಕೆರಳಿದ ದ್ರೌಪದಿಯು ಅಶ್ವತ್ಥಾಮನನ್ನು ಕೊಲ್ಲಲೇಬೇಕೆಂದು ಭೀಮನೆದುರು ಹಟಹಿಡಿದಳು. ಇವನು ಅಶ್ವತ್ಥಾಮನ ಜೀವದಂತಿದ್ದ ಮಣಿಯನ್ನು ಅವನು ಕಿತ್ತಿ ಕೊಡುವಂತೆ ಮಾಡಿದನು.

ಭೀಮನು ಪಾಂಡವರೆಲ್ಲರೊಡಗೂಡಿ ಹಲವಾರು ವರ್ಷಗಳ ಕಾಲ ರಾಜ್ಯವನ್ನಾಳಿ

ಕೊನೆಯಲ್ಲಿ ಅವರೆಲ್ಲರೊಂದಿಗೆ ಕಾಡಿಗೆ ತೆರಳಿದನು. ಈತನೊವ್ಮೆ ನೆಲಕ್ಕೆ ಬೀಳುತ್ತಲೇ ಯುಧಿಷ್ಠಿರನು ಅದಕ್ಕೆ ಕಾರಣ ಈತನ ಅಹಂಕಾರ ಎಂದನು. ಈತ ಬಲು ಮುಂಗೋಪಿ, ಉಗ್ರ. ಯುಧಿಷ್ಠಿರನ ದುರ್ಬಲವಾದ, ಹಿಂಜರಿಕೆಯ ಸ್ವಭಾವ ಈತನಿಗೆ ಎಳ್ಳಷ್ಟೂ ಹಿಡಿಸುತ್ತಿರಲಿಲ್ಲ. ಆದರೂ ಅದೆಂದಿಗೂ ಅವನ ಮಾತು ಮೀರಲಿಲ್ಲ. ಈತನಲ್ಲಿ ಬರಿಯ ದೇಹಸಾಮರ್ಥ್ಯವೊಂದೇ ಇರದೆ ಆತ 'ಬುದ್ಧಿಮಂತಾಂ ವರಿಷ್ಠ'ನೂ ಆಗಿದ್ದನು. ಮಹಾಭಾರತದಲ್ಲಂತೂ ಈ ಸಂಗತಿಯು ಹೆಜ್ಜೆಹೆಜ್ಜೆಗೂ ಅನುಭವಕ್ಕೆ ಬರುತ್ತದೆ. ಈತನಿಗೆ ದ್ರೌಪದಿಯಲ್ಲದೆ ಹಿಡಿಂಬೆ ಹಾಗೂ ಜಲಂಧರಾ ಎಂಬಿಬ್ಬರು ಮಡದಿಯರಿದ್ದರು. ಅವರಿಂದ ಈತನಿಗೆ ಮಕ್ಕಳಾಗಿದ್ದವು. ಧೃತರಾಷ್ಟ್ರ ಎಲ್ಲಕ್ಕೂ ಹೆಚ್ಚಾಗಿ ಹೆದರುತ್ತಿದ್ದುದು ಭೀಮನಿಗೆ ಮಾತ್ರ.

**ಭೀಷ್ಮ :** ಅಷ್ಟವಸುಗಳ ಅಂಶಗಳನ್ನು ಒಳಗೊಂಡು ಶಂತನು–ಗಂಗೆಯರಿಗೆ ಹುಟ್ಟಿದ ಮಗನು. ಈತನ ಹೆಸರು ದೇವವ್ರತ. ಈತನ ಅಸಾಮಾನ್ಯವಾದ ಪಣದಿಂದಾಗಿ ಈತ 'ಭೀಷ್ಮ'ನೆನ್ನಿಸಿದನು. ಇದಲ್ಲದೆ, ಶಂತನುವಿನ ಮಗನೆಂದು ಶಾಂತನವನೆಂದೂ ಗಂಗೆಯ ಮಗನಾದುದರಿಂದ ಗಾಂಗೇಯನೆಂದೂ ಹೆಸರುಗಳಿವೆ. ಈತನ ವೇದಾಧ್ಯಯನ ವಸಿಷ್ಠನಲ್ಲಾಯಿತು. ಶಸ್ತ್ರಾಧ್ಯಯನವು ಬೃಹಸ್ಪತಿ ಹಾಗೂ ಶುಕ್ರಾಚಾರ್ಯರ ಬಳಿ ನಡೆಯಿತು. ಪರಶುರಾಮನಿಂದ ಧನುರ್ವೇದ, ಅಸ್ತ್ರವಿದ್ಯೆ, ರಾಜಧರ್ಮ, ಅರ್ಥಶಾಸ್ತ್ರ ಮೊದಲಾದವುಗಳನ್ನು ಕಲಿತುಕೊಂಡನು. ಎಲ್ಲಕ್ಕೂ ಹೆಚ್ಚಾಗಿ ಈತನೊಬ್ಬ ಧರ್ಮಜ್ಞನೆಂದೂ ಹೆಸರಾದವನು. ಶಂತನುವು ಈತನಿಗೆ ಯುವರಾಜನೆಂದು ಪಟ್ಟಾಭಿಷೇಕವನ್ನು ಮಾಡಿದ್ದನು. ಮಹಾಭಾರತದ ತುಂಬೆಲ್ಲ ಈತನ ವ್ಯಕ್ತಿಮತ್ವ ಅಚ್ಚೊತ್ತಿ ನಿಂತಿದೆ. ಇದಕ್ಕೆ ಕಾರಣ ಈತನ ಅಗಾಧವಾದ ಜ್ಞಾನ, ಧರ್ಮಜ್ಞಬುದ್ಧಿ, ಅತುಲ ಪರಾಕ್ರಮ, ರಾಜಕಾರಣಪಟುತ್ವಗಳಂತೆಯೇ ಈತನ ದೀರ್ಘಾಯುಷ್ಯವೂ ಒಂದು ಮುಖ್ಯ ಕಾರಣ. ಶಂತನು, ವಿಚಿತ್ರವೀರ್ಯ, ಪಾಂಡು, ಧೃತರಾಷ್ಟ್ರ, ಯುಧಿಷ್ಠಿರ, ದುರ್ಯೋಧನಾದಿ ಕುರುಕುಲದ ಐದು ತಲೆಮಾರುಗಳಿಗೆ ಈತ ಕೇವಲ ಸಾಕ್ಷಿಯಾಗಿರದೆ ಅವುಗಳಿಗೆ ಮಾಡಿದವ–ಮಟ್ಟಿದವನೂ ಆಗಿದ್ದನು. ತನ್ನ ತಂದೆಯ ಮನದಿಚ್ಛೆಯನ್ನು ಪೂರೈಸಲೆಂದು ಈತನು ಸ್ವೇಚ್ಛೆಯಿಂದ ಸ್ತ್ರೀಸುಖ, ರಾಜ್ಯಸುಖಗಳನ್ನು ತೊರೆದನು. ತಾನು ಬಾಳಿ ಬದುಕಿರುವವರೆಗೂ ತನ್ನೀ ತ್ಯಾಗದ ವ್ರತವನ್ನು ನಿಷ್ಠೆಯಿಂದ ಪಾಲಿಸಿದನು. ಇವನು ಎಲ್ಲರಿಗೂ ಪಿತಾಮಹನೆಂದು ವಂದನೀಯನಾಗಿದ್ದನು. ಇವನು ಅಂಬೆಯನ್ನು ಗೆದ್ದು ತಂದರೂ ಅವಳ ಕೋರಿಕೆಯ ಮೇರೆಗೆ ಅವಳನ್ನು ಶಾಲ್ವ ದೊರೆಯ ಬಳಿಗೆ ಗೌರವಪೂರ್ವಕವಾಗಿ ಕಳಿಸಿಕೊಟ್ಟನು. ಅವಳು ಮಾತ್ರ ಇವನ ಮೇಲೆ ಸೇಡು ತೀರಿಸಿಕೊಂಡಳು. ಈತ ಕೌರವರ ಬದಿಗಿದ್ದವನಾದರೂ ಈತನಿಗೆ ಪಾಂಡವರ ಬಗೆಗೆ ಬರಿ ಸಹಾನುಭೂತಿಯುಷ್ಟೇ ಅಲ್ಲದೆ ಮಮತೆಯೂ ಇತ್ತು. ಅವರದು ಸತ್ಪಕ್ಷ ಎಂಬ ಭಾವನೆ ಈತನಲ್ಲಿತ್ತು. ಮಹಾಭಾರತ ಯುದ್ಧದ ಕಾಲಕ್ಕೆ ಈತ ಹತ್ತು ದಿನಗಳ ಕಾಲ ಕೌರವ ಸೇನೆಗೆ ದಂಡನಾಯಕನಾಗಿದ್ದನು. ಅತುಲನೀಯವಾದ ಶೌರ್ಯವನ್ನು ಮೆರೆದನು. ಆದರೆ ದುರ್ಯೋಧನ ಮಾತ್ರ ಹೆಜ್ಜೆಹೆಜ್ಜೆಗೂ ಚುಚ್ಚುನುಡಿಗಳಿಂದ ಈತನನ್ನು ಇರಿಯುತ್ತಲಿದ್ದನು. ದುರ್ಯೋಧನನಿಗೆ ಪಾಂಡವರೊಂದಿಗೆ ಒಪ್ಪಂದವನ್ನು ಮಾಡಿ

ಕೊಳ್ಳಲು ಈತ ಪರಿಪರಿಯಿಂದ ಹೇಳಿದರೂ ಆತ ಈತನ ಮಾತನ್ನು ಕೇಳಲೇ ಇಲ್ಲ. 'ಅರ್ಥಸ್ಯ ಪುರುಷೋ ದಾಸಃ' ಎಂಬುದು ಈತನಿಗೆ ತಿಳಿದಿತ್ತಾದರೂ ಈತನು ಅದೆಂದಿಗೂ ಪಕ್ಷಾಂತರವನ್ನು ಕೈಕೊಂಡವನಲ್ಲ. ಈತ ದ್ರೌಪದಿಗೆ ಸರಿಯಾದ ನ್ಯಾಯ ವನ್ನು ಒದಗಿಸಿಕೊಡುವಲ್ಲಿ ಸೋತನು. ಪಾಂಡವರು ತನ್ನ ವೈರಿಪಕ್ಷದವರಾಗಿದ್ದರೂ ಇವನು ಯುಧಿಷ್ಠಿರನನ್ನು 'ಯುದ್ಧದಲ್ಲಿ ಜಯ ಗಳಿಸು' ಎಂದು ಹರಸಿದನು. ಇಷ್ಟೇ ಅಲ್ಲದೆ ತನ್ನ ಸಾವು ಯಾವ ಬಗೆಯಾಗಿ ಬರಲು ಸಾಧ್ಯ ಎನ್ನುವುದನ್ನೂ ಅವನಿಗೆ ಹೇಳಿ ಕೊಟ್ಟನು. ಹೆಣ್ಣುತನಕ್ಕೆ ಯಾವುದೇ ಬಗೆಯಲ್ಲಿ ಹತ್ತಿರವಿದ್ದ ವ್ಯಕ್ತಿಯೊಂದಿಗೆ ಯುದ್ಧ ವನ್ನು ಮಾಡದಿರುವ ಪಣವನ್ನು ತೊಟ್ಟಿದ್ದನು. ಹೀಗಾಗಿ ಶಿಖಂಡಿಯು ಹಿಂದೆ ಅಡಗಿ ಕೊಂಡು ಭೀಷ್ಮನ ಮೇಲೆ ಬಾಣಗಳನ್ನೆಸೆದು ಅವನನ್ನು ಕೊಲ್ಲುವುದು ಅರ್ಜುನನಿಗೆ ಸುಲಭಸಾಧ್ಯವಾಯಿತು. ಶಂತನುವು ಈತನಿಗೆ ಇಚ್ಛಾಮರಣದ ವರವಿತ್ತನು. ಈತನ ಬಗೆಗೆ ಮಾತ್ರ ಅದೊಂದು ಶಾಪವಾಗಿಯೇ ಪರಿಣಮಿಸಿತು. ತನ್ನ ಕರ್ತೃತ್ವದಿಂದ ರೂಪುಗೊಳಿಸಿ, ಕಟ್ಟಿದ, ಬೆಳೆಯಿಸಿದ ಕುರುವಂಶವು ತನ್ನ ಕಣ್ಣೆದುರಿನಲ್ಲಿಯೇ ಮಣ್ಣು ಗೂಡುವುದನ್ನು ಕಾಣುವ ದುರದೃಷ್ಟ ಈತನಿಗೆ ಬಂದೊದಗಿತು. ಶಾಂತಿಪರ್ವ ಹಾಗೂ ಅನುಶಾಸನಪರ್ವಗಳಲ್ಲಿ ಈತನ ಅಗಾಧವಾದ ಜ್ಞಾನ ಪುಟಪುಟಗಳಲ್ಲೂ ಕಂಡು ಬರುತ್ತದೆ. ಈತ ಐವತ್ತೆಂಟು ದಿನಗಳ ಕಾಲ ಶರಪಂಜರದ ಮೇಲೆ ಯಾತನೆ ಯನ್ನುಣ್ಣುತ್ತ ಬಿದ್ದುಕೊಂಡಿದ್ದನು. ದುರ್ಯೋಧನನ ವರ್ತನೆ ಬರೀ ಅನ್ಯಾಯ ದ್ದಾಗಿರದೆ ದುಷ್ಟತನದ್ದೂ ಆಗಿದೆ ಎಂಬ ಸಂಗತಿಯನ್ನು ಭೀಷ್ಮ ಪೂರ್ತಿಯಾಗಿ ಅರಿತಿದ್ದನು. ಅವನ ಉಪ್ಪುಂಡ ಕಾರಣ ತನ್ನ ಸಾವಿನವರೆಗೂ ತೆಪ್ಪಗಿದ್ದನು. ಅವನಿಗೆ ಎರಡುಬಗೆಯಲಿಲ್ಲ. ಅವ್ಯಭಿಚಾರಿಯಾದ ನಿಷ್ಠೆ ಈತನದು. ಇವನ ಬಾಳೇ ಒಂದು ತ್ಯಾಗ. ಶರಶಯ್ಯೆಯಿಂದ ಈತನು ಯುಧಿಷ್ಠಿರನಿಗೆ ಇತ್ತ ಉಪದೇಶವು ಧರ್ಮ, ಸಮಾಜ, ರಾಜಕಾರಣ ಇವೆಲ್ಲವುಗಳ ದೃಷ್ಟಿಯಿಂದ ತುಂಬ ಮಹತ್ವದ್ದು.

**ಭೂರಿಶ್ರವ :** ಕುರುವಂಶದವನಾದ ಸೋಮದತ್ತನ ಮಗನು. ಈತ ದ್ರೌಪದಿಯ ಸ್ವಯಂವರದ ಕಾಲಕ್ಕೆ ಬಂದಿದ್ದನು. ದುರ್ಯೋಧನನಿಗೆ ಪಾಂಡವ ರೊಂದಿಗೆ ಒಪ್ಪಂದವನ್ನು ಮಾಡಿಕೊಳ್ಳಲು ಹೇಳಿದ್ದನು. ಅವನು ಅದನ್ನು ಒಪ್ಪಿ ಕೊಳ್ಳಲಿಲ್ಲ. ಇವನು ಒಂದು ಅಕ್ಷೋಹಿಣಿ ಸೈನ್ಯದೊಡನೆ ಬಂದು ಕೌರವರ ಬದಿಯಿಂದ ಕಾದಿದನು. ಸಾತ್ಯಕಿಯೊಂದಿಗೆ ಘನಘೋರವಾದ ಕಾಳಗ ನಡೆಯಿತು. ಇದೇ ರೀತಿ ಯಾಗಿ ಇವನು ಧೃಷ್ಟಕೇತು, ಭೀಮ, ಶಿಖಂಡಿ ಇವರೊಡನೆ ಕಾದಾಡಿದನು ಇವನು ಮಣಿಮಾನ್ ಹಾಗೂ ಸಾತ್ಯಕಿಯ ಹತ್ತು ಮಕ್ಕಳನ್ನು ಕೊಂದನು. ಅರ್ಜುನನು ಈತನ ಬಲಗೈಯನ್ನು ಕಡಿದು ಚೆಲ್ಲಿದನು. ಹೀಗಾಗಿ ಇವನು ಆಮರಣ ಉಪವಾಸವನ್ನು ಆರಂಭಿಸಿದನು. ಸಾತ್ಯಕಿಯು ಇವನನ್ನು ಕೊಂದನು.

**ಭೃಗು :** ಈ ಹೆಸರಿನ ಹಲವರಿರುವರು. ಇವರನ್ನು ಕುರಿತು ಬೇರೆ ಬೇರೆ ಹೊತ್ತಗೆಗಳಲ್ಲಿ ಭಿನ್ನಭಿನ್ನವಾದ ಮಾಹಿತಿ ದೊರಕುತ್ತದೆ. ಪ್ರಜಾಪತಿಯ ತೇಜಸ್ಸು ಮೂರು ಭಾಗಗಳಾಗಿ ಅವುಗಳಿಂದಾಗಿ ಆದಿತ್ಯ, ಭೃಗು ಹಾಗೂ ಅಂಗಿರಸರು ಹುಟ್ಟಿ ಬಂದರು. ಇದು ಐತರೇಯ ಬ್ರಾಹ್ಮಣದ ಹೇಳಿಕೆ. ತೈತ್ತಿರೀಯ ಉಪನಿಷತ್ತಿನಲ್ಲಿ

ಈತನನ್ನು ವರುಣಪುತ್ರನೆಂದು ಉಲ್ಲೇಖಿಸಲಾಗಿದೆ. ಈತನು ವರುಣನಿಂದ ಬ್ರಹ್ಮಜ್ಞಾನವನ್ನು ಪಡೆದ ಕಾರಣ ಈತನಿಗೆ ವಾರುಣಿಭೃಗು ಎಂದೆನ್ನುತ್ತಾರೆ. ಈತ ಬ್ರಹ್ಮನ ಹೃದಯದಿಂದ ನಿರ್ಮಾಣವಾದನು. ಇವನು ಸ್ವಾಯಂಭುವ ಮನುವಿನ ಅಳಿಯ ಹಾಗೂ ಶಂಕರನ ಷಡ್ಡಕನು. ದಕ್ಷನ ಯಜ್ಞದಲ್ಲಿ ಶಿವ ನಿಂದೆಗೆ ಗುರಿಯಾದಾಗ ಇವನೂ ಶಿವನಿಂದೆಯಲ್ಲಿ ಪಾಲ್ಗೊಂಡಿದ್ದನು. ವೀರಭದ್ರನು ದಕ್ಷನ ಯಜ್ಞವನ್ನು ಹಾಳುಗೆಡವಿದಾಗ ಈತನ ಗಡ್ಡ ಸುಟ್ಟುಹೋಗಿತ್ತು. ದೇವ-ದಾನವರ ಯುದ್ಧ ಸಾಗಿತ್ತು. ದೇವತೆಗಳೆದುರು ದೈತ್ಯರ ಆಟ ನಡೆಯುದಾಯಿತು. ಆಗ ಶುಕ್ರನು ಸಂಜೀವಿನಿಯನ್ನು ದೊರಕಿಸಲೆಂದು ಹೋದನು. ಭೃಗುವೂ ತಪಸ್ಸನ್ನಾಚರಿಸಲು ಶುರುಮಾಡಿದನು. ಭೃಗುವಿನ ಮಡದಿಯು ದೇವತೆಗಳೊಂದಿಗೆ ಹೋರಾಟಕ್ಕಿಳಿದಳು. ಆಗ ವಿಷ್ಣುವು ಅವಳೊಬ್ಬ ಹೆಣ್ಣೆಂಬುದನ್ನೂ ಮರೆತು ಚಕ್ರವನ್ನೆಸೆದು ಅವಳನ್ನು ಕೊಂದನು. ಭೃಗುವು ಸಂಜೀವಿನಿಯಿಂದ ಅವಳನ್ನು ಮತ್ತೆ ಜೀವತಳೆಯುವಂತೆ ಮಾಡಿದನು. ಅಲ್ಲದೆ ವಿಷ್ಣುವಿಗೆ, 'ಬಸಿರಲ್ಲಿದ್ದು ಬವಣೆಪಡಲಿರುವೆ. ಭೂಮಿಯ ಮೇಲೆ ಅವತರಿಸಿ ಬರುವೆ' ಎಂದು ಶಾಪವಿತ್ತನು. ದೇವೀಭಾಗವತದಿಂದ ಈ ಸಂಗತಿ ತಿಳಿದುಬರುತ್ತದೆ. ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಶ್ರೇಷ್ಠರಾರು ?—ಎಂಬುದನ್ನು ನಿರ್ಧರಿಸಿ ತೀರ್ಪನ್ನೀಯುವ ಕೆಲಸ ಭೃಗುವಿನ ಪಾಲಿಗೆ ಬಂದಿತು. ಭೃಗುವು ನಿದ್ರೆಯಲ್ಲಿದ್ದ ವಿಷ್ಣುವಿನ ಎದೆಗೆ ಒದೆತ ಕೊಟ್ಟನು. ವಿಷ್ಣುವು ಕಿಮಿಕ್ ಎನ್ನಲಿಲ್ಲ, ಸಿಟ್ಟಿಗೇಳಲಿಲ್ಲ. ಹೀಗಾಗಿ ಅವನು ಭೃಗುವಿಗೆ ಶ್ರೇಷ್ಠನಾಗಿ ಕಂಡನು. ವಿಷ್ಣುವು ಭೃಗುವಿನ ಲತ್ತಾ-ಪ್ರಹಾರದಿಂದ ತಯಾರಾದ ಕಲೆಯನ್ನು 'ಶ್ರೀವತ್ಸಲಾಂಛನ'ವೆಂದು ಎದೆಯ ಮೇಲೆ ಹೊತ್ತನು.

ಭೃಗುವಿಗೆ ದಿವ್ಯಾ ಹಾಗೂ ಪುಲೋಮಿ ಎಂಬ ಇಬ್ಬರು ಮಡದಿಯರು. ದಿವ್ಯಾಳಿಂದ ಶುಕ್ರ ಹಾಗೂ ಇನ್ನೂ ಹನ್ನೆರಡು ಗಂಡುಮಕ್ಕಳಾದರು. ಪುಲೋಮಿಯ ಮಗ ಚ್ಯವನ. ಭೃಗುಸ್ಮೃತಿ. ಭೃಗುಗೀತಾ, ಭೃಗುಸೂತ್ರ ಮೊದಲಾದ ಹೊತ್ತಗೆಗಳು ಭೃಗುವಿನ ಹೆಸರಿಗಿವೆ. ಇವನು ವಾಸ್ತುಶಾಸ್ತ್ರವನ್ನು ಕುರಿತು ಹೊತ್ತಗೆಯನ್ನು ಬರೆದಿರುವನು.

**ಮಣಿಮಾನ್ :** ಈತ ಕುಬೇರನ ಗೆಳೆಯ. ದಂಡನಾಯಕ. ಈತನೊಬ್ಬ ಯಕ್ಷ ಇಲ್ಲವೆ ರಾಕ್ಷಸನಾಗಿದ್ದನು. ಈತ ಒಂದು ಸಲ ಮುಗಿಲಲ್ಲಿ ಸಂಚರಿಸುತ್ತಿರುವಾಗ ಯಮುನೆಯ ದಡದಲ್ಲಿದ್ದ ಅಗಸ್ತ್ಯನನ್ನು ಅವಮಾನಗೊಳಿಸಿದನು. ಅವನು ಸಿಟ್ಟಿಗೆದ್ದು, 'ಶೀಘ್ರದಲ್ಲಿಯೇ ನೀನು ಮಾನವನ ಕೈಯಿಂದ ಮರಣ ಹೊಂದುವೆ' ಎಂದು ಶಪಿಸಿದನು. ಭೀಮನು ಕುಬೇರವನಕ್ಕೆ ಕಮಲದ ಹೂವುಗಳನ್ನು ತರಲು ಹೋದಾಗ ಈತನನ್ನು ಕೊಂದನು.

**ಮತಂಗ :** ಶಾಪದಿಂದಾಗಿ ಬೇಡನಾಗಿ ಹುಟ್ಟಿದ ಒಬ್ಬ ಪ್ರಾಚೀನ ದೊರೆ. ಬೇಡನಾಗಿದ್ದಾಗ ಒಂದು ಸಲ ಬರ ಬಿದ್ದಿತು. ಆಗ ಇವನು ವಿಶ್ವಾಮಿತ್ರನ ಮಡದಿಯನ್ನು ಸಲಹಿದನು. ಈತನಿಗೆ ಮತ್ತೆ ದೊರೆತನ ಬರುತ್ತಲೇ ಯಜ್ಞವನ್ನು ಕೈಕೊಂಡನು. ಮರುವುಪಕಾರಕ್ಕೆಂದು ವಿಶ್ವಾಮಿತ್ರನು ಈತನ ಪೌರೋಹಿತ್ಯವನ್ನು ಸ್ವೀಕರಿಸಿದನು. ಈ ಯಜ್ಞದ ಕಾಲಕ್ಕೆ ಇಂದ್ರನು ಸೋಮಪ್ರಾಶನಕ್ಕೆಂದು ಬಂದಿದ್ದನು.

**ಮತ್ಸ್ಯ (ರಾಜ) :** ಉಪರಿಚರ ವಸುವಿನ ವೀರ್ಯದಿಂದ ಶಾಪಭ್ರಷ್ಟಳಾದ ಅದ್ರಿಕೆ ಎಂಬ ಮೀನಿಗೆ ಅವಳಿಗಳು ಹುಟ್ಟಿದವು. ಅವುಗಳಲ್ಲಿ ಒಬ್ಬಳೆಂದರೆ ಸತ್ಯವತಿ ಹಾಗೂ ಇನ್ನೊಬ್ಬ ಮತ್ಸ್ಯ (ರಾಜ). ಮೀನುಗಾರನು ಆ ಮೀನನ್ನು ಕೊಯ್ಯುತ್ತಲೇ ಆದರ ಹೊಟ್ಟೆಯಿಂದ ಅವಳಿಗಳು ಹೊರಬಿದ್ದವು. ದೊರೆಯು ಗಂಡುಮಗುವನ್ನು ತನ್ನ ಬಳಿ ಇರಿಸಿಕೊಂಡನು. ಹೆಣ್ಣುಮಗುವನ್ನು ಸಾಕಿ ಸಲಹೆಂದು ಆ ಬೆಸ್ತರವನಿಗೆ ಹೇಳಿದನು. ಈ ಸೂರ್ಯಪುತ್ರನು ಯಮನ ಉಪಾಸಕನಾಗಿದ್ದನು.

**ಮದಯಂತಿ :** ಸೌದಾಸ(ಕಲ್ಮಾಷಪಾದ)ನ ಮಡದಿ. ವಸಿಷ್ಠ ಹಾಗೂ ಅವನ ಮಗ ಶಕ್ತಿ ಇವರ ಶಾಪಗಳಿಂದಾಗಿ ಕಲ್ಮಾಷಪಾದನು ನರಮಾಂಸಭಕ್ಷಕನಾಗಿದ್ದನು. ಈತನು ವಸಿಷ್ಠನ ನೂರು ಮಕ್ಕಳನ್ನು ಕೊಂದನು. ಮಕ್ಕಳನ್ನು ಪಡೆಯಲೆಂದು ಗಂಡನೊಂದಿಗೆ ಕೂಡಿ ಒಂದಾಗಿದ್ದ ಒಬ್ಬಳು ಬ್ರಾಹ್ಮಣ ಹೆಣ್ಣನ್ನು ಅವಳ ಗಂಡನಿಂದ ದೂರ ಮಾಡಿ ಅವಳ ಕಣ್ಣೆದುರಿನಲ್ಲಿಯೇ ಅವನನ್ನು ಕೊಂದುಬಿಟ್ಟನು. ಹೀಗಾಗಿ ಅವಳು ಕಲ್ಮಾಷಪಾದನಿಗೆ ಒಲು ತೀಕ್ಷ್ಣವಾದ ಶಾಪವನ್ನಿತ್ತಳು. ಆದರೆ ಆ ಶಾಪ ತಟ್ಟಿದ್ದು ಮದಯಂತಿಗೆ. ತನ್ನ ಗಂಡನ ಅಪ್ಪಣೆಯ ಮೇರೆಗೆ ಮದಯಂತಿಯು ಪುತ್ರಪ್ರಾಪ್ತಿಗಾಗಿ ವಸಿಷ್ಠನ ಬಳಿಗೆ ಹೋಗಬೇಕಾಯಿತು. ಅವನಿಂದ ಈಕೆಗೆ 'ಅಶ್ಮಕ'ನೆಂಬ ಮಗ ಹುಟ್ಟಿದನು. ಅವನೇ ವಂಶವನ್ನು ಮುಂದುವರಿಸಿದನು. ಗೌತಮನ ಮಡದಿ ಅಹಲ್ಯೆಯು ಉತ್ತಂಕನೆಂಬ ಶಿಷ್ಯನಿಗೆ ಮದಯಂತಿಯ ಕುಂಡಲಗಳನ್ನು ಗುರುದಕ್ಷಿಣೆಯಾಗಿ ತಂದು ಕೊಡೆಂದಳು. ಆಗ ಇವಳು ಅವನಿಗೆ ತನ್ನ ಕುಂಡಲಗಳನ್ನು ಕೊಟ್ಟಳು. ಈ ಕಥೆ ಬಂದುದು ಆಶ್ವಮೇಧಿಕ ಪರ್ವದಲ್ಲಿ.

**ಮಮತೆ :** ಉತಥ್ಯನ ಮಡದಿ. ದೀರ್ಘತಮನ ತಾಯಿ. ಈಕೆ ಬಸಿರಾಗಿದ್ದಾಗ ಇವಳ ಮೈದುನ ಬೃಹಸ್ಪತಿ ಇವಳ ಮೇಲೆ ಅತ್ಯಾಚಾರವನ್ನು ಮಾಡಿದನು. ಬಸಿರಲ್ಲಿದ್ದ ಮಗು ಅದನ್ನು ವಿರೋಧಿಸಿತು. ಬೃಹಸ್ಪತಿ ಹಿಂತೆಗೆಯಲಿಲ್ಲ. ಬದಲು ಅವನು ಆ ಬಸಿರಿಗೇನೆ ಕೊನೆಯವರೆಗೂ ಕತ್ತಲಲ್ಲಿರುವಂತೆ ಶಾಪವಿತ್ತನು. ಮಮತೆ ಹೆತ್ತ ಹುಟ್ಟು ಗುರುಡು ಹುಸುಳೆಯೇ ದೀರ್ಘತಮನು.

ನೋಡಿ : ಶಾಪ, ಕ್ರ. ೩೮, ಬೃಹಸ್ಪತಿ > ಉತಥ್ಯಪುತ್ರ.

**ಮರುತ್ತ :** ಈತನು ರಾಜರ್ಷಿಯಾದ ಸಂವರ್ತನ ಶಿಷ್ಯನು. ಬೃಹಸ್ಪತಿಯು ಈತನ ಪುರೋಹಿತನಾಗಿದ್ದನು. ಇಂದ್ರ ಹಾಗೂ ಈತನಲ್ಲಿ ಯಾವಾಗಲೂ ಪೈಪೋಟಿ ಯಿರುತ್ತಿತ್ತು. ಇವನೆದುರು ಇಂದ್ರನ ಆಟ ನಡೆಯುತ್ತಿರಲಿಲ್ಲ. ಹೀಗಾಗಿ ಇಂದ್ರನು ಬೃಹಸ್ಪತಿಗೆ ಈತನ ಪೌರೋಹಿತ್ಯವನ್ನು ಬಿಟ್ಟುಕೊಡುವಂತೆ ಹೇಳಿದನು. ನಾರದನ ಹೇಳಿಕೆಯಂತೆ ಈತ ಸಂವರ್ತನಲ್ಲಿಗೆ ಹೋದನು. ಯಜ್ಞದ ಋತ್ವಿಜನಾಗುವಂತೆ ಅವನನ್ನು ಕೇಳಿಕೊಂಡನು. ಅವನು ಸ್ವೀಕರಿಸಿದನು. ಇಂದ್ರ ವಿಘ್ನಗಳನ್ನು ತಂದೊಡ್ಡಲು ಹವಣಿಸಿದನು. ಸಂವರ್ತನಿಂದಾಗಿ ಆತನಿಗೆ ಯಶ ದೊರಕಲಿಲ್ಲ. ಈತನು ಇಂದ್ರ, ಬೃಹಸ್ಪತಿ ಮೊದಲಾದ ದೇವತೆಗಳನ್ನೆಲ್ಲ ಗೌರವಪೂರ್ವಕವಾಗಿ ಯಜ್ಞಕ್ಕೆ ಕರೆದನು.

ಹವನ ಮಾಡಿದ ಸೋಮವನ್ನು ಸ್ವೀಕರಿಸುವಂತೆ ಅವರನ್ನು ಕೋರಿದನು. ಮುಂದೆ ಈತ ಹಾಗೂ ಇಂದ್ರ ಗೆಳೆಯರಾದರು.

ರಾವಣನು ಕೂಡ ಮರುತ್ತನ ಯಜ್ಞದಲ್ಲಿ ವಿಘ್ನವನ್ನು ಉಂಟುಮಾಡಿದ್ದನು. ಇವನು ಅವನೊಂದಿಗೆ ಕಾಳಗಕ್ಕೆ ಸಿದ್ಧನಾದನು. ಆದರೆ ಯಜ್ಞದೀಕ್ಷೆಯನ್ನು ಪಡೆದವರು ಹೋರಾಡುವಂತಿರಲಿಲ್ಲ. ಹೀಗಾಗಿ ಸಂವರ್ತನು ಈತನನ್ನು ತಡೆದನು. ತಾನು ಗೆದ್ದೆನೆಂದು ಕೊಂಡು ರಾವಣ ಮರಳಿದನು. ಈತನ ಯಜ್ಞ ಅಭೂತಪೂರ್ವದ್ದಾಗಿತ್ತು. ಮರು ದ್ಗಣವೆಲ್ಲ ಸಂತೋಷಪಟ್ಟಿತು. ಈತನು ಬ್ರಾಹ್ಮಣ, ಗಂಧರ್ವ ಮೊದಲಾದವರಿಗೆ ಅಪಾರ ಸಂಪತ್ತನ್ನು ನೀಡಿದನು. ಯಜ್ಞ ಮುಗಿದ ತರುವಾಯ ಗುರುವಿನ ಅಪ್ಪಣೆಯ ಮೇರೆಗೆ ರಾಜ್ಯವನ್ನು ಆಳಹತ್ತಿದನು. ಇವನಿಗೆ ದಮ ಎಂಬ ಒಬ್ಬನೇ ಒಬ್ಬ ಮಗನು.

**ಮಹಾಭಿಷ :** ಇಕ್ಷ್ವಾಕುಕುಲದಲ್ಲಿ ಹುಟ್ಟಿದ ಸತ್ಯವಾದಿಯೂ, ಸತ್ಯಪರಾಕ್ರಮಿಯೂ ಆದ ದೊರೆ. ಒಂದು ಸಾವಿರ ರಾಜಸೂಯ ಹಾಗೂ ಒಂದು ನೂರು ಅಶ್ವಮೇಧಯಜ್ಞಗಳನ್ನು ಮಾಡಿ ಸ್ವರ್ಗವನ್ನು ಗಳಿಸಿಕೊಂಡಿದ್ದನು. ಒಂದು ಸಲ ಇಂದ್ರಸಭೆಯಲ್ಲಿ ಹಲವಾರು ಜನ ದೇವತೆಗಳು, ಋಷಿಗಳು ಕುಳಿತಿರುವಾಗ ಗಂಗೆ ಅಲ್ಲಿಗೆ ಹೋದಳು. ಗಾಳಿಯಿಂದ ಅವಳ ಮೈಮೇಲಿನ ಬಟ್ಟೆಗಳು ಹಾರಾಡಿದವು. ಎಲ್ಲರೂ ನಾಚಿ ತಲೆತಗ್ಗಿಸಿದರು. ಮಹಾಭಿಷನು ಮಾತ್ರ ನೆಟ್ಟಗಣ್ಣಿನಿಂದ ಅವಳತ್ತ ನೋಡುತ್ತಲೇ ಇದ್ದನು. ಗಂಗೆಯೂ ಅವನನ್ನೇ ನೋಡುತ್ತಲಿದ್ದಳು. ಈ ಸಂಗತಿ ಬ್ರಹ್ಮದೇವನ ಗಮನಕ್ಕೆ ಬಾರದಿರಲಿಲ್ಲ. ಅವನು ಕೆರಳಿದನು. 'ಮೃತ್ಯಲೋಕದಲ್ಲಿ ಹುಟ್ಟಿರಿ' ಎಂದು ಅವರಿಬ್ಬರನ್ನೂ ಶಪಿಸಿದನು. ಅವರಿಬ್ಬರೂ ಅವನನ್ನು ಕ್ಷಮೆ ಕೋರಿದರು. ಕಾಲಾಂತರದಲ್ಲಿ ಮತ್ತೆ ಸ್ವರ್ಗ ಸಿಕ್ಕೀತೆಂದು ಆಶ್ವಾಸನೆಯನ್ನಿತ್ತನು. ಶಾಪದಿಂದಾಗಿ ಮಹಾಭಿಷನು 'ಶಂತನು'ವಾಗಿ ಈ ಮರ್ತ್ಯಲೋಕದಲ್ಲಿ ಹುಟ್ಟಿದನು. ಗಂಗೆ ಅವನ ಮಡದಿಯಾದಳು.

ನೋಡಿ : ಶಾಪ, ಕ್ರ. ೩೭, ಬ್ರಹ್ಮದೇವ > ಮಹಾಭಿಷ.

**ಮಾಂಡವ್ಯ :** ಕೌತ್ಸ್ಯನ ಶಿಷ್ಯ. ಒಬ್ಬ ದೊಡ್ಡ ತಪಸ್ವಿ. ಒಂದು ಸಲ ಈ ಬ್ರಹ್ಮರ್ಷಿಯ ಮೇಲೆ ಕಳವಿನ ಆರೋಪ ಬಂದಿತು. ಶೂಲಕ್ಕೇರಿಸುವ ಶಿಕ್ಷೆ ದೊರೆಯಿತು. ನಿಜವಾದ ಕಳ್ಳ ಸಿಕ್ಕು ಈತ ಬಿಡುಗಡೆಹೊಂದಿದನು. ಅಂದಿನಿಂದ ಮಾಂಡವ್ಯನೆಂದು ಹೆಸರಾದನು. ಶುದ್ಧ ನಡತೆಯುವನು. ಲಿಂಗದೇಹದಿಂದ ಯಮನಲ್ಲಿಗೆ ಹೋದನು. ಇಷ್ಟೊಂದು ಕಠೋರವಾದ ಶಿಕ್ಷೆ ಏಕೆ ದೊರೆಯಿತೆಂದು ಕೇಳಿದನು. ಆಗ ಯಮನು, 'ಚಿಕ್ಕಂದಿನಲ್ಲಿ ನೀನು ಸೂಜಿಯಿಂದ ಒಂದು ಕೀಟಕವನ್ನು ಕೊಂದಿದ್ದೆ. ಆದ್ದರಿಂದ ನಿನಗೀ ಶಿಕ್ಷೆಯಾಯಿತು' ಎಂದು ಹೇಳಿದನು. ಇಷ್ಟೊಂದು ಸಣ್ಣ ತಪ್ಪಿಗಾಗಿ ಎಷ್ಟೊಂದು ದೊಡ್ಡ ಶಿಕ್ಷೆಯೆಂದು ಅವನು ಯಮನಿಗೆ, 'ಒಬ್ಬ ಶೂದ್ರ ಹೆಣ್ಣಿನ ಹೊಟ್ಟೆಯಲ್ಲಿ ಮಗನಾಗಿ ಹುಟ್ಟು' ಎಂದು ಮರುಶಾಪವಿತ್ತನು. ಹೀಗಾಗಿ ಯಮನು ವಿದುರನಾಗಿ ಹುಟ್ಟಿದನು.

ಈತನ ಮೇಲಿನ ಕಳವಿನ ಬೇರೆ ಬೇರೆ ಆರೋಪಗಳ ಕಥೆಗಳು ಬೇರೆ ಬೇರೆ ಹೊತ್ತಗೆಗಳಲ್ಲಿವೆ. ಪಿತೃತರ್ಪಣದಲ್ಲಿ ಈತನನ್ನು ಸಮಾವೇಶಗೊಳಿಸಲಾಗಿದೆ. 'ಮಾಂಡವ್ಯ ಸಂಹಿತಾ' ಎಂಬ ಜ್ಯೋತಿಷ್ಯಶಾಸ್ತ್ರಕ್ಕೆ ಸಂಬಂಧಿಸಿದ ಹೊತ್ತಗೆಯು ಈತನ ಹೆಸರಿನಲ್ಲಿದೆ.

**ಮಾತಲಿ:** ಇಂದ್ರನ ಸಾರಥಿ. ಇವನ ಮಡದಿ ಸುಧರ್ಮಾ. ಅವಳಿಂದ ಇಬ್ಬರು ಮಕ್ಕಳು. ರಾಮ–ರಾವಣರ ಯುದ್ಧದ ಕಾಲಕ್ಕೆ ಈತನು ಇಂದ್ರನ ಹೇಳಿಕೆಯ ಮೇರೆಗೆ ರಥ, ಬಿಲ್ಲು, ಬಾಣಗಳು, ಕವಚಗಳೊಂದಿಗೆ ಶ್ರೀರಾಮನಲ್ಲಿಗೆ ಬಂದನು. ಶ್ರೀರಾಮನ ಸಾರಥ್ಯವನ್ನು ಉತ್ತಮವಾದ ರೀತಿಯಲ್ಲಿ ಮಾಡಿದನು. ರಾವಣನನ್ನು ಕೊಲ್ಲುವ ಕಾರ್ಯದಲ್ಲಿ ಶ್ರೀರಾಮನಿಗೆ ನೆರವಾದನು. ಬ್ರಹ್ಮದೇವನು ರಾವಣನನ್ನು ಕೊಲ್ಲಲೆಂದು ಇತ್ತ ಅಸ್ತ್ರವನ್ನು ಬಳಸುವಂತೆ ಶ್ರೀರಾಮನಿಗೆ ನೆನಪು ಮಾಡಿಕೊಟ್ಟನು. ರಾವಣನ ವಧೆಯನಂತರ ಶ್ರೀರಾಮನು ಮಾತಲಿಯನ್ನು ಸತ್ಕರಿಸಿದನು. ಇಂದ್ರನ ಅಪ್ಪಣೆಯಂತೆ ಈತನು ಅರ್ಜುನನನ್ನು ಸ್ವರ್ಗಕ್ಕೆ ಕರೆತಂದನು. ಈತನ ಮಗಳು ಗುಣಕೇಶಿ. ಇವಳ ಮದುವೆ ಅಲ್ಪಾಯುಷಿಯಾದ ನಾಗಕುಮಾರ ಸುಮುಖನೊಂದಿಗೆ ಆಯಿತು. ಇಂದ್ರನ ಕೃಪೆಯಿಂದ ಅವನಿಗೆ ದೀರ್ಘಾಯುಷ್ಯ ದೊರಕಿತು.

**ಮಾದ್ರಿ:** ಪಾಂಡುವಿನ ಮಡದಿ. ನಕುಲ, ಸಹದೇವರ ತಾಯಿ. ಮದ್ರದೇಶದ ರಾಜ ಶಲ್ಯನ ಸೋದರಿ. ಭೀಷ್ಮನು ಇವಳನ್ನು ಪಾಂಡುವಿಗಾಗಿ ಇವಳ ತಂದೆಯ ಬಳಿ –ಋತಾಯನ—ಬೇಡಿಕೆಯನ್ನು ಒಡ್ಡಿದನು. ಶುಲ್ಕವನ್ನಿತ್ತು ಮದುವೆಮಾಡಿದನು. ದುರ್ವಾಸನಿಂದ ಕುಂತಿಗೆ ಸಿಕ್ಕ ಮಂತ್ರದಿಂದ ಮಾದ್ರಿಗೂ ನೆರವಾಯಿತು. ಅಶ್ವಿನೀಕುಮಾರರನ್ನು ಆವಾಹನೆ ಮಾಡಿದ್ದರಿಂದ ಇವಳಿಗೆ ಅವಳಿಮಕ್ಕಳಾದವು. ಕಿಂದಮ ಋಷಿಯ ಶಾಪದಿಂದಾಗಿ ಪಾಂಡುವು ಸ್ತ್ರೀಸಂಗವನ್ನು ತೊರೆದಿದ್ದನು. ಒಂದು ಸಲ ಮಾತ್ರ ಇವಳ ಅಂದವನ್ನು ಕಂಡು ಪಾಂಡುವಿನ ಕಾಮವಾಸನೆ ಕೆರಳಿ ಕಟ್ಟೊಡೆದು ಅದರಿಂದಾಗಬಹುದಾದ ಭಯಂಕರವಾದ ಪರಿಣಾಮಗಳ ಮರೆವು ಬಂದಿತು. ಮಾದ್ರಿಯ ವಿರೋಧವನ್ನು ಲೆಕ್ಕಿಸದೆಯೇ ಅವನು ಅವಳೊಡನೆ ಸಮಾಗಮವನ್ನು ನಡೆಸಿದನು. ಹೀಗಾಗಿ ಮೃತ್ಯುವನ್ನು ಬರಮಾಡಿಕೊಂಡನು. ಈಕೆ ತನ್ನ ಮಕ್ಕಳನ್ನು ಸಲಹುವಂತೆ ಕುಂತಿಗೆ ಹೇಳಿ ತಾನು ಸತಿ ಹೋದಳು.

**ಮಾರ್ಕಂಡೇಯ:** ಯುಧಿಷ್ಠಿರನ ಒಡ್ಡೋಲಗದ ಒಬ್ಬ ಶ್ರೇಷ್ಠನಾದ ಮುನಿ. ಪಾಂಡವರ ವನವಾಸದ ಕಾಲಕ್ಕೆ ಈತ ಅವರೊಂದಿಗೆ ಇದ್ದನು. ಅವರಿಗೆ ಧರ್ಮೋಪದೇಶವನ್ನು ಮಾಡುತ್ತಿದ್ದನು. ಈತ ದೀರ್ಘಾಯುಷಿ. ಕಾಣಲು ಇಪ್ಪತ್ತೈದರ ಯುವಕನಂತಿದ್ದನು. ಪ್ರಳಯದ ಕಾಲಕ್ಕೂ ಬದುಕಿದ್ದವನು. ಆಗ ನಾರಾಯಣನ ಹೊಟ್ಟೆಯನ್ನು ಹೊಕ್ಕು ವಿಶ್ವರೂಪ ದರ್ಶನವನ್ನು ಪಡೆದನು. ಇವನು ಶ್ರೀಕೃಷ್ಣನನ್ನು ಹೊಗಳಿದನು. ನಚಿಕೇತನು ಈತನಿಗೆ ಶಿವಸಹಸ್ರನಾಮವನ್ನು ಉಪದೇಶಿಸಿದನು. ಇವನು ಅದನ್ನೇ ಮುಂದೆ ಉಪಮನ್ಯುವಿಗೆ ಹೇಳಿಕೊಟ್ಟನು. ಈತನ ಮಡದಿ ಧೂಮೋರ್ಣೆ. ಈತನು ದಾಶರಥಿ ರಾಮ, ಸಾವಿತ್ರಿ, ತ್ರಿಪುರ ಮೊದಲಾದ ಹಲವಾರು ಆಖ್ಯಾನಗಳನ್ನು ಹೇಳಿದ್ದಾನೆ.

**ಮೃಗಿ:** ಒಬ್ಬಳು ಶಾಪಭ್ರಷ್ಟಳಾದ ದೇವಕನ್ಯೆ. ಜಿಂಕೆಯಾಗಿ ಭೂಲೋಕಕ್ಕೆ ಬಂದವಳು. ಊರ್ವಶಿಯನ್ನು ಕಂಡು ವಿಭಾಂಡಕ ಋಷಿಯ ವೀರ್ಯಸ್ಖಲನವಾಯಿತು. ಅದೊಂದು ಹೊಳೆಯಲ್ಲಿ ಬಿದ್ದುಹೋಯಿತು. ಇದೇ ಹೊಳೆಯ ನೀರನ್ನು ಕುಡಿದ

ಒಂದು ಹುಲ್ಲೆಯ ಹೊಟ್ಟೆಯನ್ನು ವೀರ್ಯ ಹೊಕ್ಕಿತು. ಅದು ಗರ್ಭಿಣಿಯಾಯಿತು. ಈ ಹುಲ್ಲೆಯ ಹೊಟ್ಟೆಯಿಂದ ಹುಟ್ಟಿಬಂದವನೇ ಋಷ್ಯಶೃಂಗ. ಆಗ ಈ ದೇವಕನ್ಯೆ ಶಾಪಮುಕ್ತಳಾದಳು.

**ಮೃತ್ಯುದೇವಿ :** ಬ್ರಹ್ಮದೇವನು ಭೂಲೋಕದಲ್ಲಿ ಸಂಹಾರಕಾರ್ಯಕ್ಕಾಗಿ ಇವಳನ್ನು ನಿರ್ಮಿಸಿದನು. ಅವನು ಇವಳಿಗೆ ಸಂಹಾರದ ಕಾರ್ಯವನ್ನು ಒಪ್ಪಿಸಿದಾಗಲೆಲ್ಲ ಇವಳು ಹೆದರಿ ಅಳುತ್ತಿದ್ದಳು. ಪ್ರಜೆಗಳೆಲ್ಲರ ಹಿತವನ್ನು ಬಯಸಿ ಬ್ರಹ್ಮದೇವನು ಇವಳ ಕಣ್ಣೀರನ್ನು ತನ್ನ ಬೊಗಸೆಯಲ್ಲಿ ಹಿಡಿದುಕೊಂಡನು. ಅಲ್ಲದೆ ಇವಳನ್ನು ಮನವೊಲಿಸಲು ಯತ್ನಿಸಿದನು. ಇವಳು ಉಗ್ರವಾದ ತಪಸ್ಸನ್ನು ಗೈದಳು. ಸಂತುಷ್ಟನಾದ ಬ್ರಹ್ಮದೇವನು ಇವಳಿಗೆ ವರ ಕೊಡಲು ಸಿದ್ಧನಾದನು. ಸಂಹಾರಕಾರ್ಯದಲ್ಲಿ ತನ್ನಿಂದ ಅಧರ್ಮ ನಡೆಯಬಹುದಾದ ಹೆದರಿಕೆಯಿದ್ದ ಕಾರಣ ತನ್ನನ್ನು ಈ ಕಾರ್ಯದಿಂದ ಬಿಡುಗಡೆ ಮಾಡೆಂದು ಅವನನ್ನು ಕೋರಿದಳು. ಬ್ರಹ್ಮದೇವನ ಅಪ್ಪಣೆಯನ್ನು ಮೀರಿದರೆ ತನಗೆ ಶಾಪ, ಶಾಸ್ತಿ ತಪ್ಪಿದ್ದಲ್ಲವೆಂಬ ಹೆದರಿಕೆ ಇವಳದು. ಅವನು ಇವಳಿಗೆ ತಿಳಿಹೇಳಿದನು. ಸಂಹಾರದಿಂದ ಅದಾವ ಅಧರ್ಮವೂ ಆಗದೆಂದು ಅವಳಿಗೆ ಆಶ್ವಾಸನೆಯನ್ನು ಇತ್ತನು.

ನೋಡಿ : ಶಾಪ, ಕ್ರ. ೧೭, ಬ್ರಹ್ಮದೇವ > ಮೃತ್ಯುದೇವಿ.

**ಮೇಧಾವಿ :** ವಾಲಧಿ ಋಷಿಗೆ ತಪಸ್ಸಿನಿಂದ ಹುಟ್ಟಿದ ಮಗನು. ತನ್ನ ಮಗ ದೇವತೆಗಳಂತೆ ಅಮರನಾಗಲೆಂಬುದು ಆ ಋಷಿಯ ಬಯಕೆಯಾಗಿತ್ತು. ಆದರೆ ಅದು ಈಡೇರಲಿಲ್ಲ. ಯಾವುದೇ ಮರ್ತ್ಯಪ್ರಾಣಿ ಅಮರತ್ವವನ್ನು ಹೊಂದಲು ಸಾಧ್ಯವಿಲ್ಲ. ಪರ್ವತ ಶಾಶ್ವತಸ್ವರೂಪದ್ದು. ಪರ್ವತಗಳಿರುವವರೆಗೆ ತನ್ನ ಮಗ ಬದುಕಿರಲಿ ಎಂದು ಅವನು ಬೇಡಿಕೊಂಡನು. ಹೀಗಾಗಿ ಮೇಧಾವಿಗೆ ದೀರ್ಘಾಯುಷ್ಯ ದೊರಕಿತು. ಪರ್ವತವಿರುವವರೆಗೆ ತನಗೆ ಸಾವಿಲ್ಲವೆಂಬ ಕಾರಣದಿಂದಾಗಿ ಆತ ಮನಬಂದಂತೆ ನಡೆದುಕೊಳ್ಳಹತ್ತಿದನು. ಋಷಿಗಳನ್ನು ಅವಮಾನಗೊಳಿಸಹತ್ತಿದನು. ಈತ ಧನುಷಾಕ್ಷ ಮುನಿಯನ್ನು ಪೀಡಿಸಿದನು. ಅವನು ಈತನನ್ನು ಸುಟ್ಟು ಬೂದಿಯಾಗೆಂದು ಶಪಿಸಿದನು. ಆದರಿಂದ ಇವನ ಮೇಲೆ ಅದಾವ ಪರಿಣಾಮವೂ ಉಂಟಾಗಲಿಲ್ಲ. ಧನುಷಾಕ್ಷನಿಗೆ ಪರ್ವತವಿರುವವರೆಗೆ ಈತನ ಆಯುಸ್ಸಿದೆ ಎಂದು ತಿಳಿದುಬಂದಿತು. ಹೀಗಾಗಿ ಅವನು ಪರ್ವತವನ್ನು ಒಡೆದು ತುಣುಕುಗಳನ್ನಾಗಿ ಮಾಡುತ್ತಲೇ ಈತನ ಬಾಳೂ ಮುಗಿಯಿತು.

ನೋಡಿ : ಶಾಪ, ಕ್ರ. ೫೭, ಧನುಷಾಕ್ಷ > ಮೇಧಾವಿ.

**ಮೈತ್ರೇಯ :** ಕುಶಾರವ ಹಾಗೂ ಮಿತ್ರಾರ ಮಗ. ಪಾಂಡವರ ವನವಾಸದ ಕಾಲಕ್ಕೆ ಈತನು ಧೃತರಾಷ್ಟ್ರನ ಒಳಿಗೆ ಹೋಗಿ ಪಾಂಡವರಿಗೆ ದ್ರೋಹಬಗೆಯದಿರುವಂತೆ ದುರ್ಯೋಧನನಿಗೆ ಉಪದೇಶವನ್ನಿತ್ತನು. ಅವನು ಅದನ್ನು ಒಪ್ಪಲಿಲ್ಲ. ಇಷ್ಟೇ ಅಲ್ಲದೆ ತನ್ನ ತೊಡೆಯನ್ನು ಚಪ್ಪರಿಸಿ ಅಪಹಾಸ್ಯಗೈದನು. ಮೈತ್ರೇಯ ಕೋಪದಿಂದ ಕೆಂಡದಂತಾಗಿ 'ಈ ನಿನ್ನ ತೊಡೆಯನ್ನು ಭೀಮ ತನ್ನ ಗದೆಯಿಂದ ಒಡೆಯಲಿ!' ಎಂದು ಶಪಿಸಿದನು. ಧೃತರಾಷ್ಟ್ರನು ತನ್ನ ಮಗನ ಬಗೆಗಿನ ಕುರುಡುಪ್ರೇಮದಿಂದಾಗಿ ಮೈತ್ರೇಯನಿಗೆ ಶಾಂತನಾಗುವಂತೆ ಬೇಡಿಕೊಂಡನು. ಮಗನ ತಪ್ಪಿಗಾಗಿ ತಾನು ಕ್ಷಮೆ ಕೇಳಿದನು. ಪಾಂಡವರೊಂದಿಗೆ ಗೆಳೆತನ ಮಾಡಿಕೊಂಡರೆ ಶಾಪ ತಪ್ಪದೆಂದು ಮೈತ್ರೇಯ ನುಡಿದನು.

ಮೈತ್ರೇಯನು ಯುಧಿಷ್ಠಿರನ ಮಯಸಭೆಯ ಪ್ರವೇಶದ ಕಾಲಕ್ಕೂ, ಭೀಷ್ಮನ ದೇಹತ್ಯಾಗದ ಕಾಲಕ್ಕೂ ಹಾಜರಿದ್ದನು. ವಿದುರನಿಗೆ ಉಪದೇಶವನ್ನಿತ್ತಿದ್ದನು. ಪರೀಕ್ಷಿತನನ್ನು ಭೆಟ್ಟಿಯಾಗಿದ್ದನು. ಈತ ವಾರಣಾಸಿಯಲ್ಲಿ ಗುಟ್ಟಾಗಿ ಇದ್ದ ಕಾಲಕ್ಕೆ ವ್ಯಾಸನು ಈತನಿಗೆ ದರ್ಶನ ನೀಡಿದನು. ವ್ಯಾಸನನ್ನು ಗೌರವದಿಂದ ಬರಮಾಡಿಕೊಂಡು ಅವನೊಂದಿಗೆ ತಪ, ದಾನ, ವಿದ್ಯೆ ಮುಂತಾದ ಸಂಗತಿಗಳ ಬಗೆಗೆ ಚರ್ಚಿಸಿದನು.

**ಯದು :** ಯಯಾತಿ-ದೇವಯಾನಿಯರ ಮಗ. ಯಯಾತಿಯ ಚೊಚ್ಚಲು ಮಗ. ಶರ್ಮಿಷ್ಠೆಯ ಮಗನಾದ ಪುರುವು ಯಯಾತಿಯ ಅಚ್ಚುಮೆಚ್ಚಿನವನಾದ್ದರಿಂದ ಈತ ಮನದಲ್ಲಿಯೇ ನೊಂದುಕೊಂಡಿದ್ದನು. ಈತ ಪುರುವನ್ನು ಕಂಡು ಹೊಟ್ಟೆಕಿಚ್ಚು ಪಡುತ್ತಿದ್ದನು. ಯಯಾತಿಯ ಬಗೆಗೆ ಮನದಲ್ಲಿ ಕಹಿಯಿತ್ತು. ಶುಕ್ರಾಚಾರ್ಯನ ಶಾಪದಿಂದ ಯಯಾತಿಗೆ ಒಮ್ಮೆಲೆ ಮುಪ್ಪು ಬಂದಿತ್ತು. ತನ್ನ ಮಕ್ಕಳಲ್ಲಿ ಯಾರಾದರೂ ತನ್ನ ತಾರುಣ್ಯವನ್ನಿತ್ತು, ಮುಪ್ಪನ್ನು ಪಡೆಯಲೆಂದು ಬಯಸಿದನು. ಯದುವನ್ನು ಕೇಳಿದ. ಅವನು ಈ ಬೇಡಿಕೆಯನ್ನು ತಿರಸ್ಕರಿಸಿದನು. ತಂದೆ ಈತನೊಂದಿಗೆ ಎಂದಿಗೂ ಸರಿಯಾಗಿ ನಡೆದುಕೊಂಡುದೆಂಬುದೇ ಇರಲಿಲ್ಲ. ಹೀಗಾಗಿ ಈತ ನಿರಾಕರಿಸಲು ಇದೊಂದು ಕಾರಣವೆನ್ನಿಸಿದೆ. ಇದಲ್ಲದೆ ಯದುವು ಒಬ್ಬ ಬ್ರಾಹ್ಮಣನಿಗೆ ಒಂದು ಮಾತು ಕೊಟ್ಟಿದ್ದನು. ಈತನು ಮುಪ್ಪನ್ನು ಸ್ವೀಕರಿಸಿದ್ದರೆ ಕೊಟ್ಟ ಮಾತಿಗೆ ತಪ್ಪುವ ಸಾಧ್ಯತೆಯಿತ್ತು. ಇದೂ ಅಲ್ಲದೆ ತಂದೆಯು ತನ್ನಿಂದ ಪಡೆದ ತಾರುಣ್ಯದಿಂದ ತಾಯಿಯೊಂದಿಗೆ ಪ್ರಣಯಕೇಳಿಯಲ್ಲಿ ತೊಡಗುವುದು ಈತನಿಗೆ ತಾಯಿಗಂಡತನವಾಗಿ ಪಾಪ ತಟ್ಟೀತೆಂಬ ಹೆದರಿಕೆಯೂ ಈತನಲ್ಲಿ ತಲೆದೋರಿತು. ಕಾರಣಗಳೇನೇ ಇದ್ದರೂ ಯದು ತನಗೆ ತಾರುಣ್ಯವನ್ನು ಕೊಡಲಿಲ್ಲವೆಂಬ ಸಿಟ್ಟು ಯಯಾತಿಯಲ್ಲಿತ್ತು. ಅವನು ಯದುವಿಗೆ ಶಾಪವಿತ್ತನು. 'ನೀನು ಭಯಂಕರವಾದ ರಾಕ್ಷಸ ಹಾಗೂ ಯಾತುಧಾನರನ್ನು ನಿರ್ಮಿಸುವೆ. ಸೋಮಕುಲದಲ್ಲಿ ಹುಟ್ಟಿದ ನಿನ್ನ ವಂಶದಲ್ಲಿ ನಿನ್ನ ದುಷ್ಟ ಸಂತತಿ ಉಳಿಯಲಾರದು. ನಿನ್ನ ಕುಲವೂ ನಿನ್ನಂತೆಯೇ ಉದ್ಧಟತನದ್ದಾಗಲಿ.' ಯದುವೇ ಯಯಾತಿಗೆ ವಾರಸುದಾರನಾಗಿದ್ದನು. ಆದರೆ ಯಯಾತಿ ಈತನಿಗೆ ರಾಜ್ಯವನ್ನು ಕೊಡಲಿಲ್ಲ. ಈತನೂ ರಾಜ್ಯ ಹಾಗೂ ಸಾರ್ವಭೌಮತ್ವಗಳ ಆಸೆಯನ್ನು ತೊರೆದುಬಿಟ್ಟನು. ತಂದೆಯಿಂದ ದೊರೆತ ರಾಜ್ಯದ ಚಿಕ್ಕ ಭಾಗವನ್ನೇ ಒಪ್ಪಿಕೊಂಡನು. ಯದುವಿನಿಂದ ಯಾದವರ ಹುಟ್ಟು. ಮೌಸಲ ಯುದ್ಧದಲ್ಲಿ ಅವರೆಲ್ಲ ಸಾವಿಗೀಡಾದರು.

**ಯಮ :** ಋಗ್ವೇದದಲ್ಲಿ ಈತನ ತಂದೆಯ ಹೆಸರು ವಿವಸ್ವತ ಹಾಗೂ ತಾಯಿಯ ಹೆಸರು ಸರಣ್ಯು ಎಂದು ಕೊಡಲಾಗಿದೆ. ತಾಯಿಯ ಹೆಸರನ್ನು ಹರಿವಂಶ, ಮಾರ್ಕಂಡೇಯ, ಪದ್ಮ, ವಿಷ್ಣು, ಮತ್ಸ್ಯ, ವರಾಹಾದಿ ಪುರಾಣಗಳಲ್ಲಿ ಮಾತ್ರ ಸಂಜ್ಞಾ ಎಂದು ಹೇಳಲಾಗಿದೆ. ಸಂಜ್ಞೆಗೆ ಸೂರ್ಯನ ಬಿಸಿಲಿನ ಕಿರಣಗಳನ್ನು ಸಹಿಸಿಕೊಳ್ಳಲಾಗುತ್ತಿರಲಿಲ್ಲ. ಅವನನ್ನು ಕಂಡಾಗಲೆಲ್ಲ ತನ್ನ ಕಣ್ಣುರೆಪ್ಪೆಗಳನ್ನು ಮುಚ್ಚಿಕೊಳ್ಳುತ್ತಿದ್ದಳು. ಹೀಗಾಗಿ ಅವನು ಅವಳಿಗೆ, 'ನಿನ್ನ ಹೊಟ್ಟೆಯಲ್ಲಿ ಪ್ರಜೆಗಳನ್ನು ಕೊಲ್ಲುವವನಾದ ಯಮ ಹುಟ್ಟಿ ಬರಲಿ' ಎಂದು ಶಾಪವಿತ್ತನು. ಯಮ, ಯಮಿಯರು ಅವಳಿಗಳು. ಋಗ್ವೇದದಲ್ಲಿ ಇವರಿಬ್ಬರ ಕೂಡುವಿಕೆ, ಪ್ರಾರ್ಥನೆ, ಸಂವಾದಗಳ ಉಲ್ಲೇಖ ಬರುತ್ತದೆ. ಈತನು ತನ್ನ

ಬಲತಾಯಿಗೆ (ಛಾಯೆಗೆ) ಒದೆತ ಕೊಟ್ಟನಾದ್ದರಿಂದ 'ನಿನ್ನ ಬಲಗಾಲು ಕಳಚಿ ಬೀಳಲಿ' ಎಂದು ಅವಳು ಇವನಿಗೆ ಶಾಪವಿತ್ತಳು. ತಂದೆಯು ಉಃಶಾಪವನ್ನಿತ್ತನು. ಈತನ ತಪಸ್ಸಿಗಾಗಿ ಬ್ರಹ್ಮದೇವನು ಈತನಿಗೆ ಪಿತೃಗಳ ಒಡೆತನವನ್ನು ನೀಡಿ ಜಗತ್ತಿನಲ್ಲಿ ನಡೆದ ಪಾಪ-ಪುಣ್ಯಗಳ ಮೇಲೆ ಕಣ್ಣಿಡಲು ಹೇಳಿದನು. ಮಾಂಡವ್ಯಋಷಿಯು ನಿರಪರಾಧಿಯಾಗಿದ್ದೂ ಅವನಿಗೆ ಗಲ್ಲುಶಿಕ್ಷೆಯಾಯಿತು. ಹೀಗಾಗಿ ಅವನು ಸಾಯುವ ಮುನ್ನ ಯಮನಿಗೆ, 'ಶೂದ್ರಯೋನಿಯಲ್ಲಿ ಹುಟ್ಟಿ ಬಾ' ಎಂದು ಶಾಪವಿತ್ತನು. ಕುಂತಿಯು ಈತನನ್ನು ಉದ್ದೇಶಿಸಿ ಮಂತ್ರವನ್ನು ಉಚ್ಚರಿಸಿದ್ದರಿಂದ ಹುಟ್ಟಿದ ಮಗನೇ ಯುಧಿಷ್ಠಿರ. ಧರ್ಮನೊಂದಿಗೆ ಈತನ ಸಂಭಾಷಣೆ ನಡೆಯಿತು. ಧರ್ಮ ಸರಿಯಾದ ಉತ್ತರಗಳನ್ನು ನೀಡಿದ್ದರಿಂದ ಯಮನು ಸರೋವರದ ಬಳಿಯಲ್ಲಿ ಸತ್ತುಬಿದ್ದಿದ್ದ ಪಾಂಡವರನ್ನು ಜೀವಂತಗೊಳಿಸಿದನು. ಈತ ಧರ್ಮಶಾಸ್ತ್ರಕಾರನಾಗಿದ್ದನು.

ಈತ ದಕ್ಷಿಣ ದಿಕ್ಕಿನ ಒಡೆಯ. ಕುಂಭಕರ್ಣನಿಂದ ಈತ ಸೋಲನ್ನು ಅನುಭವಿಸಬೇಕಾಯಿತು. ಈತ ರಾವಣನಿಗೆ ಹೆದರಿ ಕಾಗೆಯಾಗಿದ್ದನು. ರಾವಣನು ಹೋದ ತರುವಾಯ ಈತನು ಕಾಗೆಗಳಿಗೆ ವರವಿತ್ತನು. ಅದು, 'ನೀವು ರೋಗಗಳಿಂದ ಮುಕ್ತರಾಗುವಿರಿ. ನಿಮಗೆ ಸ್ವಾಭಾವಿಕವಾದ ಬಗೆಯಲ್ಲಿ ಸಾವು ಬಾರದು. ಮನುಷ್ಯನ ಕೈಯಿಂದ ಕೊಲ್ಲಲ್ಪಡುವವರೆಗೂ ಬದುಕುವಿರಿ' ಎಂಬುದಾಗಿತ್ತು. ರಾವಣ-ಯಮರ ಯುದ್ಧ ಏಳು ಇರುಳುಗಳ ಕಾಲ ಸಾಗಿತ್ತು. ಯಮನು ಕಾಲದಂಡವನ್ನು ಬಳಸಬೇಕೆಂದಿದ್ದನು. ಆದರೆ ಬ್ರಹ್ಮದೇವನು ಅವನನ್ನು ತಡೆದನು. ಇಲ್ಲದಿದ್ದರೆ ಬ್ರಹ್ಮನು ರಾವಣನಿಗಿತ್ತ ವರ ಸುಳ್ಳಾಗ ಬಹುದಿತ್ತು. ಈತನು ಹನುಮಂತನಿಗೆ, 'ನೀನು ನನ್ನ ಕಾಲದಂಡಕ್ಕೂ ಅವಧ್ಯನೆನ್ನಿಸುವೆ. ರೋಗಮುಕ್ತನಾಗಿರು' ಎಂದು ವರವಿತ್ತನು.

**ಯಯಾತಿ :** ಇಕ್ಷ್ವಾಕು ಕುಲದವನಾದ ನಹುಷನ ಮಗನು. ದೈತ್ಯರ ಗುರು ಶುಕ್ರಾಚಾರ್ಯನ ಮಗಳಾದ ದೇವಯಾನಿಯು ಈತನ ಮಡದಿ. ದೈತ್ಯರ ದೊರೆ ವೃಷಪರ್ವನ ಮಗಳಾದ ಶರ್ಮಿಷ್ಠೆ ದೇವಯಾನಿಯ ಜೊತೆಗೆ ಅವಳ ದಾಸಿಯಾಗಿ ಬಂದಿದ್ದಳು. ಯಯಾತಿಯು ಇವಳೊಂದಿಗೂ ವಿವಾಹಸಂಬಂಧವನ್ನು ಇರಿಸಿಕೊಂಡಿದ್ದನು. ಈತನಿಗೆ ಅವಳಿಂದ ಮೂರು ಜನ ಗಂಡುಮಕ್ಕಳಾದರು. ದೇವಯಾನಿಗೆ ಮಾತ್ರ ಇಬ್ಬರೇ ಗಂಡುಮಕ್ಕಳಾದರು. ಶುಕ್ರಾಚಾರ್ಯನು ದೇವಯಾನಿಯನ್ನು ಈತನೊಂದಿಗೆ ಕಳಿಸುವಾಗ ಶರ್ಮಿಷ್ಠೆಯೊಂದಿಗೆ ಹಾಸಿಗೆಯ ನಂಟು ಇರಕೂಡದೆಂದು ಈತನನ್ನು ಎಚ್ಚರಿಸಿದ್ದನು. ದೇವಯಾನಿಯ ದೂರು ಕೇಳಿ ಶುಕ್ರಾಚಾರ್ಯನು ಸಿಟ್ಟಿಗೆದ್ದು ಈತನಿಗೆ ಕೂಡಲೇ ಮುಪ್ಪು ಬರಲೆಂದು ಶಾಪವಿತ್ತನು. ಆಮೇಲೆ ಯಯಾತಿಯ ಕೋರಿಕೆಯ ಮೇರೆಗೆ, 'ಯಾರಾದರೂ ತನ್ನ ತಾರುಣ್ಯವನ್ನು ನಿನಗಿತ್ತು ನಿನ್ನ ಮುಪ್ಪನ್ನು ಪಡೆಯಲೊಪ್ಪಿದರೆ ನಿನಗೆ ಮತ್ತೆ ಯೌವನ ಬರಲು ಸಾಧ್ಯ' ಎಂದು ಶುಕ್ರಾಚಾರ್ಯನು ಹೇಳಿದನು. ಈತನು ತನ್ನ ಮಕ್ಕಳಾದ ಯದು, ದ್ರುಹ್ಯು ಹಾಗೂ ತುರ್ವಸುಗಳನ್ನು ಕೆಲ ಕಾಲದ ಮಟ್ಟಿಗೆ ಯೌವನಕ್ಕಾಗಿ ಕೇಳಿದನು ಅವರೊಪ್ಪಲಿಲ್ಲ. ಈತನು ಅವರನ್ನು ಶಪಿಸಿದನು. ಪುರು ಸಿದ್ಧನಾದನು. ತನ್ನ ಯೌವನವನ್ನು ಈತನಿಗಿತ್ತನು. ಹೀಗಾಗಿ ಆತ ಎಲ್ಲ ಸೋದರರಲ್ಲಿ ಕಿರಿಯನೆನ್ನಿಸಿಯೂ ರಾಜ್ಯವನ್ನು ಪಡೆದನು. ಈತ ಬಲು ಲಂಪಟ. ಹಲವು

ವರ್ಷಗಳ ಕಾಲ ಹೆಣ್ಣಿನ ಸಂಖವನ್ನು ಭೋಗಿಸಿಯೂ ತೃಪ್ತನಾಗಲಿಲ್ಲ. ಪುರುವಿಗೆ ಅವನ ಯೌವನವನ್ನು ಹಿಂತಿರುಗಿ ಕೊಟ್ಟು ತನ್ನ ಮುಪ್ಪನ್ನು ಪಡೆದನು. ಈತ ಕಡುಂಗಲಿಯಾಗಿದ್ದನು. ಬಲು ದುರಹಂಕಾರಿ. ಇಂದ್ರನು ಈತನನ್ನು ಸ್ವರ್ಗದಿಂದ ನೆಲಕ್ಕೆ ದೂಡಿದನು.

ಯಯಾತಿಯು ಹಲವಾರು ಯಜ್ಞಯಾಗಗಳನ್ನು ಮಾಡಿದನು, ರಾಜನೀತಿಯನ್ನು ಸರಿಯಾಗಿ ಪಾಲಿಸುತ್ತಿದ್ದನು. ಈತ ದಾನಶೂರನೂ, ಧರ್ಮವಂತನೂ ಆಗಿದ್ದನು. ಬ್ರಾಹ್ಮಣರಿಗೆ ಹಲವಾರು ಹಸುಗಳನ್ನು ದಾನಮಾಡಿದ್ದನು. ಈತನಿಗೆ ನಾಲ್ಕು ಜನ ಗಂಡುಮಕ್ಕಳಲ್ಲದೆ ಸುಕನ್ಯಾ ಹಾಗೂ ಮಾಧವಿ ಎಂಬಿಬ್ಬರು ಹೆಣ್ಣುಮಕ್ಕಳಿದ್ದರು. ಸುಕನ್ಯೆಯು ಯಯಾತಿಯ ಮಗಳೋ, ಇಲ್ಲವೆ ಶರ್ಯಾತಿಯ ಮಗಳೋ—ಎಂಬ ಬಗೆಗೆ ಹೊತ್ತಗೆಗಳಲ್ಲಿ ಬೇರೆ ಬೇರೆ ಮಾಹಿತಿ ದೊರಕುತ್ತದೆ. ಯಯಾತಿಯ ಕಥೆ ಕೂಡ ಎಲ್ಲ ಗ್ರಂಥಗಳಲ್ಲೂ ಒಂದೇ ಆಗಿಲ್ಲ.

**ಯವಕ್ರೀತ:** ಜವಗೋದಿಯನ್ನು ಕೊಟ್ಟು ಕೊಂಡುಕೊಳ್ಳಲಾದವನೇ ಯವಕ್ರೀತನು. ಭರದ್ವಾಜ ಋಷಿಯ ಮಗನು. ತನಗೂ, ತನ್ನ ಪಿತನಿಗೂ ಬ್ರಾಹ್ಮಣರಿಂದ ಸರಿಯಾದ ಮರ್ಯಾದೆ ಸಲ್ಲಲೆಂದು ಈತನು ಉಗ್ರವಾದ ತಪಸ್ಸನ್ನು ಕೈಕೊಂಡನು. ಈತ ಗುರುವಿನ ನೆರವಿಲ್ಲದೆಯೇ ವೇದಗಳ ಜ್ಞಾನವನ್ನು ಪಡೆಯಬೇಕೆಂಬ ಉತ್ಕಟವಾದ ಬಯಕೆಯನ್ನು ಹೊತ್ತಿದ್ದನು. ಈತನ ದಾರಿ ತಪ್ಪಾದುದೂ, ವ್ಯರ್ಥವಾದುದೂ ಆಗಿದೆಯೆಂದು ಇಂದ್ರನು ಉದಾಹರಣೆಯೊಂದಿಗೆ ಈತನಿಗೆ ಮನದಟ್ಟು ಮಾಡಿಕೊಟ್ಟನು. 'ಬೇರಾರಿಗಿಂತಲೂ ನನ್ನ ಯೋಗ್ಯತೆ ಹೆಚ್ಚಾಗಿರಲಿ' ಎಂಬ ವರವನ್ನು ಕೇಳಿ ಪಡೆದನು. ಅಲ್ಲದೆ, 'ಬೇರಾರಿಗೂ ಪ್ರಾಪ್ತವಾಗಿರದ ವೇದಗಳು ನಿನಗೆ ಪ್ರಾಪ್ತವಾಗಿ ನಿನ್ನ ಮನೋರಥಗಳೆಲ್ಲ ಈಡೇರಲಿ' ಎಂಬುದಾಗಿ ಇನ್ನೊಂದು ವರವನ್ನೂ ನೀಡಿ ಇಂದ್ರನು ಈತನನ್ನು ಅಘೋರವಾದ ತಪಸ್ಸಿನಿಂದ ಹಿಂತಿರುಗಿಸಿದನು.

ಯವಕ್ರೀತನು ತಾನು ಪಡೆದ ವರಗಳನ್ನು ಕುರಿತು ತನ್ನ ತಂದೆ ಭರದ್ವಾಜನೆದುರು ಬಲು ಉತ್ಸಾಹದಿಂದ ಹೇಳಿದರೂ ತಂದೆಯಿಂದ ನಿರಾಶೆಯ ಉತ್ತರವೇ ಕಾದಿತ್ತು. ತಂದೆಯು, ವರವನ್ನು ಪಡೆಯುವದರಿಂದ ಅಹಂಕಾರ ಹೆಚ್ಚುವುದೆಂದೂ, ಆದರಿಂದಾಗಿ ನಾಶ ತಪ್ಪಿದ್ದಲ್ಲವೆಂದೂ ಹೇಳಿದನು. ಇದಕ್ಕಾಗಿ ಅವನು ಪ್ರಾಚೀನ ಕಾಲದ ವಾಲಧಿಯ ಉದಾಹರಣೆಯನ್ನು ನೀಡಿದನು. ಹಾಗೆಯೇ ರೈಭ್ಯನ ಆಶ್ರಯದತ್ತ ತಪ್ಪಿಯೂ ಹೋಗದಂತೆ ಎಚ್ಚರ ನೀಡಿದನು. ಆದರೆ ಈತನು ಆ ಮಾತುಗಳನ್ನು ಕಡೆಗಣಿಸಿದನು. ರೈಭ್ಯನ ಸೊಸೆ ಒಬ್ಬಳೇ ಇರುವುದನ್ನು ಕಂಡು ಅವಳನ್ನು ಕೂಡಿಕೊಂಡನು. ರೈಭ್ಯನು ಒಬ್ಬಳು ಸುಂದರ ಹೆಣ್ಣು ಹಾಗೂ ಒಬ್ಬ ರಾಕ್ಷಸನನ್ನು ನಿರ್ಮಿಸಿ ಯವಕ್ರೀತನನ್ನು ಕೊಲ್ಲಿಸಿದನು.

**ಯಾತುಧಾನಿ :** ವೃಷದರ್ಭನು ಯಜ್ಞಕಾಲಕ್ಕೆ ನಿರ್ಮಿಸಿದ ಒಬ್ಬಳು ಕೃತ್ಯಾ. ವೃಷದರ್ಭನು ಪೃಥ್ವಿಯ ಪ್ರದಕ್ಷಿಣೆ ಮಾಡುವ ಸಪ್ತರ್ಷಿಗಳಿಗೆ ತನ್ನ ಮಗನನ್ನು ಗುರುದಕ್ಷಿಣೆಯಾಗಿ ಕೊಟ್ಟನು. ಆತ ಅಲ್ಪಾಯುಷಿಯಾಗಿದ್ದನು. ಬರ ಬೀಳುತ್ತಲೇ ಋಷಿಗಳು ಅವನ ಮೃತದೇಹವನ್ನು ಆಹಾರಕ್ಕಾಗಿ ಬೇಯಿಸಲು ಇಟ್ಟರು. ಹೀಗೆ ಮಾಡಬೇಡಿರಿ ಎಂದು ದೊರೆಯು ಅವರಿಗೆ ಮೊರೆಯಿಟ್ಟನು. ಅವರು ಒಪ್ಪಲಿಲ್ಲ. ಹೀಗಾಗಿ ಅವನು

ಇವರನ್ನು ನಾಶಪಡಿಸಲೆಂದು ಕೃತ್ಯಾಳನ್ನು ನಿರ್ಮಿಸಿದನು. ಇವಳಿಗೆ ಮನಸಾ ಎಂದು ಹೆಸರಿಟ್ಟು ಸಪ್ತರ್ಷಿಗಳಲ್ಲಿಗೆ ಕಳುಹಿಸಿದನು. ಶುನಃಸಖನು ಇವಳನ್ನು ಕೊಂದನು.

**ಯುಧಿಷ್ಠಿರ :** ಯಮಧರ್ಮನಿಂದ ಕುಂತಿಗೆ ನಿಯೋಗದಿಂದ ಹುಟ್ಟಿದ ಚೊಚ್ಚಲು ಮಗ. ಈತನು ಶರ್ಯಾತಿಯ ಮಗನಾದ ಶುಕ್ರನಿಂದ ಧನುರ್ವೇದವನ್ನು ಕಲಿತನು. ಕೃಪಾಚಾರ್ಯ ಹಾಗೂ ದ್ರೋಣಾಚಾರ್ಯರಿಂದ ಶಸ್ತ್ರವಿದ್ಯೆಯನ್ನು ಪಡೆದನು. ಈತನಿಗೆ ಯುವರಾಜಪಟ್ಟಾಭಿಷೇಕವಾಗುತ್ತಲೇ ದುರ್ಯೋಧನನಿಗೆ ಹೊಟ್ಟೆಕಿಚ್ಚು ಹುಟ್ಟಿ ಅವನು ಪಾಂಡವರನ್ನು ನಾಶಪಡಿಸುವ ಹುಂಚಿಕೆಗಳನ್ನು ಹೂಡಹತ್ತಿದನು. ವಿದುರನ ನೆರವಿನಿಂದಾಗಿ ಪಾಂಡವರ ಅರಗಿನ ಅರಮನೆಯ ಸಾವು ತಪ್ಪಿತು. ಈತನಿಂದ ರಾಜಸೂಯ ಯಜ್ಞ ನಡೆಯಲಿದೆಯೆಂದು ವ್ಯಾಸನು ನುಡಿದಿದ್ದನು. ಇಂದ್ರಪ್ರಸ್ಥ ನಗರಕ್ಕೆ ವೈಭವವನ್ನು ತಂದುಕೊಡುವಲ್ಲಿ ಈತನ ಪಾಲು ಹೆಚ್ಚಿನದು. ಮಯಸಭೆಯು ಈ ನಗರದ ಒಂದು ವೈಶಿಷ್ಟ್ಯವೆನ್ನಿಸಿತ್ತು. ಪಾಂಡವರ ವೈಭವ, ಜನಪ್ರಿಯತೆಗಳೆಲ್ಲ ರಾಜಸೂಯ ಯಜ್ಞದ ಕಾಲಕ್ಕೆ ಕಂಡುಬಂದಿತು. ಇದೆಲ್ಲ ದುರ್ಯೋಧನನ ಕಣ್ಣಲ್ಲಿ ಇರಿಯತೊಡಗಿತು. ಯುದ್ಧಹೂಡಿ ಪಾಂಡವರನ್ನು ಸೋಲಿಸುವುದು ಅವನಿಗೆ ಸಾಧ್ಯವಿರಲಿಲ್ಲ. ಹೀಗಾಗಿ ಕಪಟದಿಂದ ಪಾಂಡವರನ್ನು ದ್ರೌಪದಿಯೊಂದಿಗೆ ಕಾಡಿಗೆ ಅಟ್ಟಿದನು. ಯುಧಿಷ್ಠಿರನ ಜೂಜಾಟದ ಪ್ರೇಮವೇ ಇದಕ್ಕೆ ಮುಖ್ಯ ಕಾರಣ. ದ್ರೌಪದಿಯು ಧೃತರಾಷ್ಟ್ರನಿಂದ ವರವನ್ನು ಪಡೆದು ಒಂದು ಸಲ ಪಾಂಡವರನ್ನೆಲ್ಲ ಸೋಲಿನಿಂದ ಬಿಡಿಸಿದಳು. ಆದರೆ ಯುಧಿಷ್ಠಿರ ಮತ್ತೆ ಜೂಜಾಡಿದನು. ತನ್ನದೆಲ್ಲವನ್ನೂ ಕಳೆದುಕೊಂಡನು. ಈತನ ಧರ್ಮಬುದ್ಧಿ ಪಾಂಡವರನ್ನು ಎಣಿಕೆಯಿಲ್ಲದಷ್ಟು ಸಲ ಸಂಕಟಕ್ಕೆ ಸಿಲುಕಿಸಿತು. ಭೀಮ ತುಂಬುಸಭೆಯಲ್ಲೇ ಕೌರವರಿಗೆ ಪಾಠ ಕಲಿಸಬಹುದಿತ್ತು. ಆದರೆ ಯುಧಿಷ್ಠಿರನಿಂದಾಗಿ ಆತ ತೆಪ್ಪಗಾಗಬೇಕಾಯಿತು. ಈತ ವಿರಾಟನಗರದಲ್ಲಿ ಕಂಕನೆಂದು ಇದ್ದನು. ಭೀಮ, ದ್ರೌಪದಿಯರ ಕೋಪಕ್ಕೆ ಕಡಿವಾಣವನ್ನು ಹಾಕುತ್ತಿದ್ದನು. ಹೀಗಾಗಿ ಪಾಂಡವರ ಸಂಕಟಪರಂಪರೆ ಹೆಚ್ಚುತ್ತಲೇ ಇತ್ತು. ಕೇವಲ ಐದು ಗ್ರಾಮಗಳನ್ನು ಪಡೆದು ಕೌರವರೊಡನೆ ಒಪ್ಪಂದಕ್ಕೆ ಈತ ಸಿದ್ಧನಾಗಿದ್ದನು. ಪಾಂಡವರ ಬಹಳಷ್ಟು ಮಟ್ಟಿಗಿನ ದುಃಖ ದುಮ್ಮಾನಗಳಗೆ ಈತನೇ ಕಾರಣ. ಈತ ಶೀಲವಂತನಾಗಿಯೂ, ಒಳ್ಳೆಯ ನಡತೆಯುವನಾಗಿಯೂ ಎಲ್ಲರ ಗೌರವಕ್ಕೆ ಪಾತ್ರನಾಗಿದ್ದನು. ಈ ಗುಣಗಳ ಅತಿರೇಕದಿಂದಾಗಿ ಪಾಂಡವರಿಗೆ ತುಂಬ ಹಾನಿಯಾಯಿತು. ಭೀಮಾರ್ಜುನರಂಥ ಕಲಿತನವೇನೂ ಈತನಲ್ಲಿರಲಿಲ್ಲ. ಮುಂದಾಳುತನದ ಗುಣಗಳು ಈತನವಲ್ಲ. ಯುದ್ಧದಲ್ಲಿ ಹಲವು ಬಾರಿ ಸೋಲುಂಡವನು. ದ್ರೋಣನು ಯುಧಿಷ್ಠಿರನನ್ನು ಜೀವಂತವಾಗಿ ಹಿಡಿತರುವೆನೆಂದು ಪಣತೊಟ್ಟಿದ್ದನು. ಇದು ಕೈಗೂಡದಿರುವಂತೆ ಮಾಡಿದ ಶ್ರೇಯಸ್ಸು ಭೀಮಾರ್ಜುನರಿಗೆ ಸಲ್ಲತಕ್ಕದ್ದು. ಈತನ ಸದ್ಗುಣವೇ ಈತನ ಸಂಕಟಗಳಿಗೆ ಕಾರಣವಾಯಿತು. ವಿದುರನ ದೇಹಾಂತದ ತರುವಾಯ ಅವನ ಪ್ರಾಣ ಜ್ಯೋತಿಯು ಯುಧಿಷ್ಠಿರನ ದೇಹವನ್ನು ಹೊಕ್ಕಿತು. ಇವನು ಪರೀಕ್ಷಿತನಿಗೆ ಪಟ್ಟಗಟ್ಟಿ ಪಾಂಡವರು ಹಾಗೂ ದ್ರೌಪದಿಯೊಂದಿಗೆ ಸ್ವರ್ಗವನ್ನೇರಿದನು. ಒಬ್ಬೊಬ್ಬರು ಪತನ ಹೊಂದುತ್ತ ಎಲ್ಲಕ್ಕೂ ಕೊನೆಯಲ್ಲಿ ಈತನ ದೇಹಾವಸಾನವಾಯಿತು. ನಲನಂತೆಯೇ ಈತನ ಹೆಸರು ಕೂಡ ಪುಣ್ಯಪುರುಷರ ಪಟ್ಟಿಯಲ್ಲಿದೆ.

**ರಂಭೆ :** ಕಶ್ಯಪ ಹಾಗೂ ಪ್ರಾಧಾರ ಮಗಳು. ಇವಳೊಬ್ಬ ಬಲು ಸುಂದರಳಾದ ಅಪ್ಸರೆಯೆನ್ನಿಸಿದ್ದಳು.

ರಂಭೆಯು ಕುಬೇರನ ಮಗನಾದ ನಲಕೂಬರನೊಂದಿಗೆ ಹೆಂಡತಿಯಂತೆ ಇರುತ್ತಿದ್ದಳು. ಒಂದು ಸಲ ಚೆಂದದ ಒಟ್ವೆಗಳನ್ನುಟ್ಟು, ಸಿಂಗರಿಸಿಕೊಂಡು ಹೊರಟಾಗ ರಾವಣನ ಕಣ್ಣಿಗೆ ಬಿದ್ದಳು. ಅವನು ಕಾಮದಿಂದ ಹುಚ್ಚೆದ್ದು ರತಿಸುಖವನ್ನು ನೀಡೆಂದು ಇವಳನ್ನು ಕೇಳಿದನು. ಅವಳು, 'ನಾನು ನಲಕೂಬರನ ನಲ್ಲೆ. ಅವನನ್ನು ಕೂಡಿಕೊಳ್ಳಲೆಂದು ಹೊರಟಿದ್ದೇನೆ. ನಾನು ನಿನ್ನ ಸೊಸೆ' ಎಂದು ಅವನಿಗೆ ಹೇಳಿದಳು. ಇಷ್ಟಾಗಿಯೂ ರಾವಣ ಅವಳನ್ನು ಅತ್ಯಾಚಾರಕ್ಕೆ ಗುರಿಪಡಿಸಿಯೇ ಬಿಟ್ಟನು.

ಶ್ವೇತ ಮುನಿ ಹಾಗೂ ಒಬ್ಬ ರಾಕ್ಷಸಿಯ ನಡುವೆ ಒಂದು ಕಾಳಗ ನಡೆಯಿತು. ಆಗ ವಿಶ್ವಾಮಿತ್ರನ ಶಾಪಕ್ಕೆ ಗುರಿಯಾಗಿ ಶಿಲೆಯಾದ ರಂಭೆ ಹಾಗೂ ಆ ರಾಕ್ಷಸಿ ಇವರಿಬ್ಬರೂ ವಾಯ್ವಾಸ್ತ್ರದಿಂದಾಗಿ ಹೋಗಿ ಕಪಿತೀರ್ಥದಲ್ಲಿ ಬಿದ್ದರು. ಆದರಿಂದಾಗಿ ಅವರಿಬ್ಬರೂ ಉದ್ಧಾರಹೊಂದಿದರು. ಮಹಾಭಾರತದ ಉದ್ಯೋಗಪರ್ವದಲ್ಲಿಯ ಉಲ್ಲೇಖದ ಮೇಲಿಂದ ಈಕೆ ತುಂಬುರುವಿನ ಮಡದಿಯಾಗಿದ್ದಳೆಂದು ಕಂಡುಬರುತ್ತದೆ. ಅವನು ಇವಳೊಂದಿಗೆ ನಂಟನ್ನಿಟ್ಟುಕೊಂಡ ಕಾರಣ ಶಾಪ ತಟ್ಟಿ ವಿರಾಧ ರಾಕ್ಷಸನಾದನು. ಈ ಕಥೆಯನ್ನು ಗುರುತಿಸಿದರೆ ಆತ ಈಕೆಯ ಗಂಡನಾಗಿರಲಿಕ್ಕಿಲ್ಲ ಎಂದೆನ್ನಿಸುತ್ತದೆ.

ಅರ್ಜುನನ ಹುಟ್ಟಿನ ಕಾಲಕ್ಕೆ, ಇಂದ್ರಸಭೆಗೆ ಅವನನ್ನು ಸ್ವಾಗತಿಸುವ ಹೊತ್ತಿಗೆ ಇವಳು ಕುಣಿದಿದ್ದಳು. ಇದೇ ರೀತಿ ಕುಬೇರನ ಒಡ್ಡೋಲಗಕ್ಕೆ ಅಷ್ಟಾವಕ್ರನನ್ನು ಬರಮಾಡಿಕೊಳ್ಳುವ ಕಾಲಕ್ಕೂ ಈಕೆ ನರ್ತಿಸಿದ್ದಳು.

**ರಾಜಧರ್ಮ :** ಕಶ್ಯಪನ ಮಗ. ಬ್ರಹ್ಮದೇವನ ಗೆಳೆಯ. ಈತ ನಾಡೀಜಂಘನೆಂಬ ಹೆಸರಿನಿಂದ ಗುರುತಿಸಲ್ಪಡುತ್ತಿದ್ದನು. ಈತನು ಗೌತಮನಿಗೆ ಉಪಕಾರವನ್ನೆಸಗಿದ್ದರೂ ಆತ ಕೃತಘ್ನನಾಗಿ ಈತನನ್ನು ಕೊಂದುಬಿಟ್ಟನು. ಸುರಭಿಯ ಹಾಲಿನ ನೊರೆಯಿಂದಾಗಿ ಈತ ಮತ್ತೆ ಜೀವತಳೆದನು.

ನೋಡಿ : ಶಾಪ, ಕ್ರ. ೧೦೪, ಬ್ರಹ್ಮದೇವ > ರಾಜಧರ್ಮ (ಬಕಪಕ್ಷಿ).

**ರಾವಣ :** ಪುಲಸ್ತ್ಯನ ಮಗ ವಿಶ್ರವ ಹಾಗೂ ಸುಮಾಲಿ ರಾಕ್ಷಸನ ಮಗಳು ಕೇಕಸಿ ಇವರ ಮಗನು. ಕುಬೇರನ ಒಲಸೋದರ. ಈತನ ತಾಯಿಯು ಈತನಿಗೆ ಕುಬೇರನಂತಾಗಲು ಹೇಳಿದಳು. ಹೀಗಾಗಿ ಈತನು ಗೋಕರ್ಣಕ್ಷೇತ್ರದಲ್ಲಿ ಹತ್ತುಸಾವಿರ ವರ್ಷಗಳ ಕಾಲ ಉಗ್ರವಾದ ತಪಸ್ಸನ್ನು ಆಚರಿಸಿದನು. ಒಂದು ಸಾವಿರ ವರ್ಷ ಮುಗಿಯುತ್ತಲೇ ಈತ ತನ್ನ ಒಂದು ತಲೆಯನ್ನು ಅಗ್ನಿಯಲ್ಲಿ ಹವನ ಮಾಡುತ್ತಿದ್ದನು. ಈ ಬಗೆಯಾಗಿ ಈತ ತನ್ನ ಹತ್ತನೆಯ ತಲೆಯನ್ನು ಅರ್ಪಿಸುವ ಮುನ್ನ ಬ್ರಹ್ಮದೇವನು ಪ್ರಸನ್ನನಾದನು. ಈತನಿಗೆ ಸೀಮಿತವಾದ ಅವಧ್ಯತನವನ್ನು ದಯಪಾಲಿಸಿದನು. ಪದ್ಮ ಪುರಾಣದ ಹೇಳಿಕೆಯಂತೆ ಈ ವರವನ್ನಿತ್ತವನು ಶಂಕರನು. ಬ್ರಹ್ಮದೇವನು ಇನ್ನೊಂದು ವರವನ್ನಿತ್ತು ಹವನ ಮಾಡಿದ ತಲೆಗಳೆಲ್ಲವನ್ನೂ ಮರಳಿ ಈತನಿಗೆ ಕೊಟ್ಟು ಈತನನ್ನು 'ದಶಾನನ', 'ದಶಗ್ರೀವ'ನನ್ನಾಗಿ ಮಾಡಿದನು. ಈತನು ಕುಬೇರನ ಲಂಕೆಯನ್ನು ವಶಪಡಿಸಿಕೊಂಡು ತಾನೇ ಲಂಕಾಧೀಶನಾದನು. ಮಯನ ಮಗಳು ಮಂಡೋದರಿ ಈತನ

ಮಡದಿ. ಈತನಿಗೆ ಇವಳಲ್ಲದೆ ಒಂದು ಸಾವಿರ ಮಡದಿಯರಿದ್ದರು. ಮಂಡೋದರಿಯಿಂದ ಹುಟ್ಟಿದವನೇ ಮೇಘನಾದ. ಅತಿಕಾಯ, ತ್ರಿಶಿರ, ನರಾಂತಕ, ದೇವಾಂತಕರೆಂದು ಇನ್ನೂ ಕೆಲವು ಜನ ಮಕ್ಕಳಿದ್ದರು. ಕುಂಭಕರ್ಣ ಹಾಗೂ ವಿಭೀಷಣರು ಇವನ ಇಬ್ಬರು ಒಡ ಹುಟ್ಟಿದವರು. ಶೂರ್ಪಣಖಿ ಈತನ ತಂಗಿ. ಈತ ಬಲು ಬಲಾಢ್ಯನಾಗಿದ್ದನು. ವರದಿಂದಾಗಿ ಎಲ್ಲರಿಗೂ ಅಜೇಯನೆನ್ನಿಸಿದ್ದನು. ಈತನು ಕುಬೇರನೊಂದಿಗೆ ಕಾದಾಡಿ ಅವನ ಪುಷ್ಪಕ ವಿಮಾನವನ್ನು ಪಡೆದನು. ಹಲವು ಜನ ರಾಜರುಗಳನ್ನು ಸೋಲಿಸಿದನು. ಈತನು ಶಂಕರನ ಬಗೆಗೆ ಅಗೌರವದ ಉದ್ಗಾರವನ್ನು ಹೊರಡಿಸುತ್ತಲೇ ನಂದೀಶ್ವರನು ಇವನಿಗೆ ಸರಿಯಾಗಿ ಎಚ್ಚರ ನೀಡಿದನು. ಇವನು ತನ್ನ ಕಾಲಿನ ಹೆಬ್ಬೆರಳಿನಿಂದ ಬೆಟ್ಟವನ್ನು ಕಿತ್ತೆಸೆಯುತ್ತಿದ್ದನು. ಶಂಕರನು ಈತನ ಕೈ ಹಿಸುಕಿ ಇವನ ಗರ್ವಹರಣ ಮಾಡಿದನು. ಯಮನೊಡನೆಯ ಕಾಳಗದಲ್ಲಿ ಈತನಿಗೆ ಸಾವು ಬಂದಿತ್ತು. ಬ್ರಹ್ಮದೇವನ ಮಧ್ಯಸ್ಥಿಕೆ ಯಿಂದಾಗಿ ಯಮನು ಹಿಂತೆಗೆದುಕೊಂಡನು. ಈತನಿಗೆ ನಿವಾತಕವಚರ ಮೇಲೆ ಜಯ ಗಳಿಸುವುದು ಸಾಧ್ಯವಿಲ್ಲೆಂಬುದನ್ನರಿತು ಬ್ರಹ್ಮದೇವನು ಅವನೊಂದಿಗೆ ಗೆಳೆತನ ಉಂಟಾಗುವಂತೆ ಮಾಡಿದನು. ಈತನು ವಾಲಿಯೊಂದಿಗೆ ಕಾಳಗಕ್ಕೆ ಹೋಗಿದ್ದಾಗ ಅವನು ಈತನನ್ನು ಬಗಲಲ್ಲಿರಿಸಿಕೊಂಡು ಹೋದನು. ರಾವಣನು ಅವನ ಸಾಮರ್ಥ್ಯ ವನ್ನರಿತು ಅಗ್ನಿಯ ಸಾಕ್ಷಿಯಿಂದ ಅವನೊಂದಿಗೆ ಗೆಳೆತನವನ್ನು ಮಾಡಿದನು.

ರಾವಣ ಹೆಣ್ಣುಗಳ ಮೇಲೆ ಅತ್ಯಾಚಾರವನ್ನು ಕೈಕೊಳ್ಳುವಲ್ಲಿ ಬಲು ಪಳಗಿದವನಾಗಿ ದ್ದನು. ಈತನು ಹಲವು ಜನ ಸಾಧ್ವಿಯರನ್ನು ಅವರ ಇಚ್ಛೆಯ ವಿರುದ್ಧವಾಗಿ ಉಪ ಭೋಗಿಸಿದನು. ಆಗತ್ಯ ಕಂಡಲ್ಲಿ ಇದಕ್ಕಾಗಿ ಅವರ ಬಂಧುಬಳಗದವರನ್ನು ಕೊಲ್ಲಲೂ ಈತ ಹಿಂಜರಿದವನಲ್ಲ. ಪುಂಜಿಕಸ್ಥಲೆ ಹಾಗೂ ರಂಭೆಯರ ಮೇಲೆ ಅತ್ಯಾಚಾರಗೈದು ಬ್ರಹ್ಮದೇವ ಹಾಗೂ ನಲಕೂಬರರ ಶಾಪಗಳಿಗೆ ಪಾತ್ರನಾದನು. ಈತನು ವೇದವತಿ ಯೊಂದಿಗೆ ಅಸಭ್ಯವಾಗಿ ನಡೆದುಕೊಳ್ಳುತ್ತಲೇ ಆಕೆ ಈತನಿಂದ ಭ್ರಷ್ಟಳಾಗುವ ಬದಲು ಆತ್ಮದಹನದ ದಾರಿಯನ್ನು ಸ್ವೀಕರಿಸಿದಳು. ಅಲ್ಲದೆ ಈತನನ್ನು ಕೊಲ್ಲಲೆಂದೇ ಇನ್ನೊಮ್ಮೆ ಹೆಣ್ಣಾಗಿ ಹುಟ್ಟಿಬರಲು ಪಣತೊಟ್ಟಳು. ವಿಭೀಷಣನು ಹೆಣ್ಣುಗಳ ಹರಣಕ್ಕಾಗಿ ಒಪ್ಪದೆ ರಾವಣನನ್ನು ನಿಂದಿಸಿದನು.

ರಾವಣನು ವಾನವನನ್ನು ಕಸದಂತೆ ಕಾಣುತ್ತಿದ್ದನು. ತಾನು ರಾಮನನ್ನು ಸಹಜವಾಗಿ ಗೆಲ್ಲುವೆನೆಂಬ ಹೆಮ್ಮೆ, ಜಂಬ ಆತನಿಗಿತ್ತು. ತನ್ನ ಸೇನೆಯಲ್ಲಿದ್ದ ಅತಿರಥ, ಮಹಾರಥಿಗಳು ಒಬ್ಬರಾದಮೇಲೊಬ್ಬರು ಸಾವನ್ನಪ್ಪತೊಡಗಿದ್ದುದನ್ನು ಪ್ರತ್ಯಕ್ಷ ಕಂಡನು. ಅದರಲ್ಲೂ ಅತಿಕಾಯ, ಕುಂಭಕರ್ಣರ ಕೊಲೆಯಿಂದಾಗಿ ಈತನ ಸಾಹಸ ಉಡುಗಿತು. ಸಾವಿನ ತರುವಾಯ ಹಗೆತನ ಇರದೆಂಬುದರಿಂದಾಗಿ ರಾಮನು ಯಥಾಸಾಂಗವಾಗಿ ಈತನ ಅಂತ್ಯ ವಿಧಿಗಳನ್ನು ಪೂರೈಸಿದನು. ಬ್ರಹ್ಮದೇವ ಹಾಗೂ ಶಂಕರರ ವರಗಳಿಂದಾಗಿ ಈತನ ಜಂಬ, ಮದೋನ್ಮತ್ತತೆ, ಮನಬಂದಂತೆ ನಡೆದುಕೊಳ್ಳುವುದು ಹಾಗೂ ಕಾರ್ಯಗಳೆಲ್ಲ ತುಂಬ ಹೆಚ್ಚಿಕೊಂಡವು. ಶಂಕರನಿಂದ ದೊರೆತ ಚಂದ್ರಹಾಸ ಖಡ್ಗ ಹಾಗೂ ಬ್ರಹ್ಮದೇವನಿತ್ತ ಸಿದ್ಧಿಮಂತ್ರಗಳಿಂದಾಗಿ ಈತ ಮನಬಂದಂತೆ ನಡೆದುಕೊಳ್ಳುತ್ತಿದ್ದನು.

**ರುಕ್ಮಿ :** ಭೀಷ್ಮಕ ರಾಜನ ಮಗ. ಶ್ರೀಕೃಷ್ಣನ ಮಡದಿ ರುಕ್ಮಿಣಿಯ ಸೋದರ. ಶ್ರೀಕೃಷ್ಣನು ರುಕ್ಮಿಣಿಯನ್ನು ಹಿಡಿಸಿಕೊಂಡು ಹೋದ ಕಾರಣ ಈತನು ಅವನನ್ನು ಕೊಲ್ಲಲು ಪಣತೊಟ್ಟಿದ್ದನು. ಆದರೆ ಶ್ರೀಕೃಷ್ಣನೆದುರು ಸೋಲಬೇಕಾಗಿ ಬಂದುದು ಈತನಿಗೇನೆ. ಸಹದೇವನು ಈತನಿಂದ ಯುಧಿಷ್ಠಿರನಿಗೆ ಕಪ್ಪಕಾಣಿಕೆಗಳು ದೊರೆಯುವಂತೆ ಮಾಡಿದನು. ಅರ್ಜುನನ ಗಾಂಡೀವ ಬಿಲ್ಲಿನಂತೆ ತೇಜಃಪುಂಜವಾದ ವಿಜಯ ಎಂಬ ಒಂದು ಬಿಲ್ಲು ಈತನ ಬಳಿಯಿತ್ತು. ಈತನು ಮಹಾಭಾರತ ಯುದ್ಧದಲ್ಲಿ ಪಾಲ್ಗೊಳ್ಳಲಿಲ್ಲ. ದುರ್ಯೋಧನ ಹಾಗೂ ಅರ್ಜುನರು ಈತನನ್ನು ತಮ್ಮ ತಮ್ಮ ಬದಿಗೆ ತೆಗೆದುಕೊಳ್ಳಲು ಒಪ್ಪದಿದ್ದುದೇ ಇದಕ್ಕೆ ಕಾರಣ.

**ರುಚಿ :** ಮಹರ್ಷಿ ದೇವಶರ್ಮನ ಬಲು ರೂಪವತಿಯಾದ ಮಡದಿ. ಇಂದ್ರ ಈಕೆಗಾಗಿ ಬಲು ಹಂಬಲಿಸುತ್ತಲಿದ್ದನು. ದೇವಶರ್ಮನು ಯಜ್ಞಕಾರ್ಯಕ್ಕಾಗಿ ಪಯಣ ಹೋಗುವ ಮುನ್ನ ಇವಳ ರಕ್ಷಣೆಯ ಹೊಣೆಯನ್ನು ತನ್ನ ಶಿಷ್ಯ ವಿಪುಲನ ಮೇಲೆ ಹೊರಿಸಿದ್ದನು. ಇಂದ್ರನು ಅವಳಿಗಾಗಿ ಹೊಂಚುಹಾಕಿರುವುದನ್ನು ಶಿಷ್ಯನಿಗೆ ಹೇಳಿದನು. ಅವನು ರುಚಿಯ ದೇಹವನ್ನು ತನ್ನ ಯೋಗಸಾಮರ್ಥ್ಯದಿಂದ ಹೊಕ್ಕು ಇಂದ್ರನಿಂದ ಅವಳನ್ನು ಕಾಪಾಡಿದನು. ವಿಪುಲನ ಸಾಮರ್ಥ್ಯದಿಂದಾಗಿ ಇಂದ್ರನ ಕಾಮಾತುರತೆಯ ಆಟ ನಡೆಯಲಿಲ್ಲ. ರುಚಿಯೂ ಕೂಡ ಇಂದ್ರನೊಡನೆ ಕೂಡಿಕೊಳ್ಳಲು ಆತುರಳಾಗಿದ್ದಳು. ಆದರೆ ವಿಪುಲನು ಅವಳನ್ನೂ ತಡೆಹಿಡಿದನು. ಇವಳಿಗೂ ತನ್ನ ಗಂಡನೊಂದಿಗೆ ಸ್ವರ್ಗ ಸಿಕ್ಕಿತು.

**ರುಮಣ್ವಾನ (ಸುಷೇಣ, ವಸು) :** ಜಮದಗ್ನಿಗೆ ರುಮಣ್ವಾನ, ಸುಷೇಣ, ವಸು, ವಿಶ್ವಾವಸು ಹಾಗೂ ಪರಶುರಾಮರೆಂಬ ಐವರು ಗಂಡುಮಕ್ಕಳು. ಜಮದಗ್ನಿಯು ತನ್ನ ಮಕ್ಕಳಿಗೆ ತನ್ನ ಮಡದಿ ರೇಣುಕೆಯ ತಲೆ ಕಡಿಯಲು ಹೇಳಿದನು. ರುಮಣ್ವಾನ, ಸುಷೇಣ, ವಸು ಇವರು ಅದಕ್ಕೊಪ್ಪಿಕೊಳ್ಳಲಿಲ್ಲ. ತಂದೆಯ ಶಾಪಕ್ಕೆ ಗುರಿಯಾಗಿ ಪಶು ಪಕ್ಷಿಗಳಂತೆ ಜಡಬುದ್ಧಿಯುವರಾದರು. ಪರಶುರಾಮನು ತಂದೆಯ ಅಪ್ಪಣೆಯಂತೆ ತಾಯಿಯನ್ನು ಕೊಂದನು. ತಂದೆಯನ್ನು ಸಂತೋಷಗೊಳಿಸಿ ತಾಯಿಯನ್ನು ಬದುಕಿಸುವಂತೆ ಕೋರಿದನು. ಅವನಿಂದ ವರವನ್ನು ಪಡೆದು ತನ್ನ ತಾಯಿ, ಸೋದರರನ್ನೆಲ್ಲ ಬದುಕಿಸಿ ಶಾಪ ಮುಕ್ತರನ್ನಾಗಿ ಮಾಡಿದನು.

**ರುರು :** ಭೃಗುಕುಲದ ಪ್ರಮಿತಿ ಋಷಿ ಹಾಗೂ ಘೃತಾಚಿ ಅಪ್ಸರೆಯರ ಮಗ. ಪ್ರಮದ್ವರೆಯೆಂಬ ಒಬ್ಬ ಸುಂದರಳಾದ ಹೆಣ್ಣಿನೊಂದಿಗೆ ಈತನ ಮದುವೆ ನಿಗದಿತವಾಗಿತ್ತು. ಅವನು ಅವಳನ್ನು ತುಂಬ ಪ್ರೇಮಿಸುತ್ತಿದ್ದನು. ಆದರೆ ಮದುವೆಗೆ ಮೊದಲೇ ಅವಳು ಹಾವು ಕಚ್ಚಿದ್ದರಿಂದ ಸತ್ತುಹೋದಳು. ರುರುವು ತನ್ನ ಅರ್ಧ ಆಯುಸ್ಸನ್ನು ಅವಳಿಗಿತ್ತು ಅವಳನ್ನು ಬದುಕಿಸಿದನು. ಅಂದಿನಿಂದ ಅವನು ಕಂಡ ಹಾವುಗಳನ್ನೆಲ್ಲ ಬಡಿದು ಕೊಲ್ಲಲಾರಂಭಿಸಿದನು. ಒಂದು ಸಲ ಶಾಪಭ್ರಷ್ಟನಾದ ಸಹಸ್ರಪಾತ ಋಷಿಯು ಡುಂಡುಭನ (ಎರೆಹುಳು) ರೂಪದಲ್ಲಿ ಈತನಿಗೆ ಕಂಡನು. ಈತನು ಅವನನ್ನೂ ಕೊಲ್ಲಲೆಂದು ಕೈಯೆತ್ತಿದನು. ಅದಕ್ಕೆ ಅವನು ನಂಜಿಲ್ಲದ ಹಾವುಗಳನ್ನು ಸುಮ್ಮನೆ

ಕೊಲ್ಲುವುದು ಸರಿಯಲ್ಲವೆಂದನು. ಅವನು ತನ್ನ ಶಾಪದ ಕಥೆಯನ್ನು ಈತನಿಗೆ ಹೇಳಿದನು. ಈತನನ್ನು ಕಂಡು ಆತ ಶಾಪಮುಕ್ತನಾದನು. ಇವನ ಮಗ ಶುನಕ.

**ರೇಣುಕಾ :** ಇಕ್ಷ್ವಾಕು ಕುಲದ ರೇಣುವಿನ ಕನ್ಯೆ. ಜಮದಗ್ನಿಯ ಮಡದಿ. ರೇಣು ಕನ್ಯಾಕಾಮೇಷ್ಟಿಯನ್ನು ಮಾಡಿದನು. ಆಗ ಈಕೆ ಯಜ್ಞಕುಂಡದಿಂದ ಹುಟ್ಟಿಬಂದಳೆಂದು ರೇಣುಕಾಮಹಾತ್ಮೆಯಲ್ಲಿ ಹೇಳಲಾಗಿದೆ. ಬೇರೆ ಬೇರೆ ಗ್ರಂಥಗಳಲ್ಲಿ ಇವಳ ಹೆಸರುಗಳು ಬೇರೆಬೇರೆಯಾಗಿವೆ. ಇವಳಿಗೆ ರುಮಣ್ವಾನ, ವಸು, ವಿಶ್ವಾವಸು, ಸುಷೇಣ ಹಾಗೂ ಪರಶುರಾಮರೆಂಬ ಐವರು ಮಕ್ಕಳು. ಪರಶುರಾಮನು ತನ್ನ ತಂದೆಯ ಅಪ್ಪಣೆಯ ಮೇರೆಗೆ ಇವಳ ತಲೆಯನ್ನು ಕತ್ತರಿಸಿ ಚೆಲ್ಲಿದನು. ಮತ್ತೆ ಅವನ ವರದಿಂದಾಗಿಯೇ ಈಕೆ ಜೀವತಳೆದಳು.

**ರೈಭ್ಯ** ವಿಶ್ವಾಮಿತ್ರನ ಒಬ್ಬ ಮಗ. ಭರದ್ವಾಜ ಋಷಿಯ ಗೆಳೆಯ. ಮಹಾಭಾರತದಲ್ಲಿ ಈತನ ತಂದೆಯ ಹೆಸರು ಅಂಗಿರಸ ಋಷಿ ಎಂದು ಇದೆ. ಈತನಿಗೆ ಅರ್ವಾವಸು ಹಾಗೂ ಪರಾವಸು ಎಂಬ ಮಕ್ಕಳಿಬ್ಬರು. ಒಂದು ಸಲ ಭರದ್ವಾಜನ ಮಗ ಯವಕ್ರೀತನು ರೈಭ್ಯನ ಸೊಸೆ—ಪರಾವಸುವಿನ ಮಡದಿಯ ಮೇಲೆ ಅತ್ಯಾಚಾರವನ್ನು ಎಸಗಿದನು. ಹೀಗಾಗಿ ರೈಭ್ಯನು ಆತನನ್ನು ಒಬ್ಬ ರಾಕ್ಷಸನಿಂದ ಕೊಲ್ಲಿಸಿದನು. ಭರದ್ವಾಜನ ಶಾಪದಿಂದಾಗಿ ಮಗನಿಂದ—ಪರಾವಸು—ತಪ್ಪಿ ರೈಭ್ಯನು ಕೊಲೆಯಾದನು. ಎರಡನೆಯ ಮಗನು ಮಂತ್ರಸಾಮರ್ಥ್ಯದಿಂದ ಅವನನ್ನು ಮತ್ತೆ ಜೀವಂತನನ್ನಾಗಿ ಮಾಡಿದನು.

**ರೋಹಿಣಿ :** ಪ್ರಾಚೇತಸ ದಕ್ಷನ ಅರವತ್ತು ಜನ ಕನ್ಯೆಯರಲ್ಲಿ ಇಪ್ಪತ್ತೇಳು ಕನ್ಯೆಯರ ಮದುವೆ ಸೋಮ(ಚಂದ್ರ)ನೊಡನೆ ಆಯಿತು. ಅವರಲ್ಲೊಬ್ಬಳು ಈಕೆ. ಚಂದಿರನ ಹೆಂಡಂದಿರಲ್ಲೆಲ್ಲ ಈಕೆಯೇ ಎಲ್ಲರಿಗೂ ಹೆಚ್ಚಿನ ಚೆಲುವೆ. ಹೀಗಾಗಿ ಅವನ ಮನದನ್ನೆ. ಸೋಮ ತನ್ನೆಲ್ಲ ವೇಳೆಯನ್ನು ಇವಳೊಬ್ಬಳ ಜೊತೆಯಲ್ಲಿಯೇ ಕಳೆಯ ಹತ್ತಿದನು. ಸ್ವಾಭಾವಿಕವಾಗಿಯೇ ಉಳಿದವರತ್ತ ಉದಾಸೀನ ತೋರಿದಂತಾಗುತ್ತಿತ್ತು. ಅವರೆಲ್ಲ ಕೆರಳುವುದೂ ಅಷ್ಟೇ ಸ್ವಾಭಾವಿಕವಾಗಿತ್ತು. ಅವರೆಲ್ಲ ತಮ್ಮ ಅಸಮಾಧಾನವನ್ನು ತಂದೆಯ ಎದುರು ತೋಡಿಕೊಂಡರು. ಅವನು ಎರಡು-ಮೂರು ಬಾರಿ ಈ ಬಗೆಗೆ ಚಂದಿರನನ್ನು ಎಚ್ಚರಿಸಿ ಎಲ್ಲರೊಂದಿಗೂ ಸಮನಾಗಿ ನಡೆದುಕೊಳ್ಳುವಂತೆ ಹೇಳಿದನು. ಅವನಾದರೋ ಮಾವನ ಮಾತನ್ನು ಅಲಕ್ಷ್ಯಮಾಡಿಬಿಟ್ಟನು. ಹೀಗಾಗಿ ಕೊನೆಗೆ ದಕ್ಷನು ಅವನಿಗೆ 'ನೀನು ಕ್ಷಯರೋಗಿಯಾಗು !' ಎಂದು ಶಾಪವಿತ್ತನು. ಸೋಮನಿಂದ ರೋಹಿಣಿಗೆ ಬುಧನೆಂಬ ಮಗ ಹುಟ್ಟಿದನು. ಗೌರೀವ್ರತದಿಂದಾಗಿ ಇವಳಿಗೆ ಮುಂಗಿಲಲ್ಲಿ ಭದ್ರವಾದ ಸ್ಥಾನ ಸಿಕ್ಕಿದೆ ಎಂದು ಭವಿಷ್ಯಪುರಾಣ ಹೇಳುತ್ತದೆ.

**ಲೋಕಪಾಲರು :** ಎಂಟು ದಿಕ್ಕುಗಳಿಗಿರುವ ಎಂಟು ಜನ ಲೋಕಪಾಲರು.

ಇಂದ್ರೋ ವಹ್ನಿಃ ಪಿತೃಪತಿಃ (ಯಮಃ) ನೈಋತೋ ವರುಣೋ ಮರುತ್ (ವಾಯುಃ)
ಕುಬೇರ ಈಶಃ ಪತಯಃ ಪೂರ್ವಾದಿನಾಂ ದಿಶಾಂ ಕ್ರಮಾತ್ । —ಅಮರಕೋಶ

ಇಂದ್ರ, ಅಗ್ನಿ, ವರುಣ ಹಾಗೂ ಯಮ ಇವರು ದಮಯಂತಿಯ ಸ್ವಯಂವರಕ್ಕಾಗಿ ಬಂದಿದ್ದರು. ಅವರು ನಲನನ್ನು ದೂತನನ್ನಾಗಿ ಮಾಡಿ ಅವಳ ಬಳಿಗೆ ಕಳಿಸಿದ್ದರು. ಸ್ವಯಂವರಮಂಟಪದಲ್ಲೂ ಅವರು ನಲನ ಮಾರುವೇಷದಲ್ಲಿ ಅವನ ಪಕ್ಕದಲ್ಲಿ ಕುಳಿತಿದ್ದರು. ದಮಯಂತಿಯು ನಲನಿಗೆ ವರಮಾಲೆಯನ್ನು ತೊಡಿಸುತ್ತಲೇ ಇವರೆಲ್ಲ ಅವನಿಗೆ ವರವಿತ್ತರು.

**ಲೋಪಾಮುದ್ರಾ** :- ವಿದರ್ಭದ ದೊರೆಗೆ ಮಕ್ಕಳಿರಲಿಲ್ಲ. ಅವನು ಮಕ್ಕಳಿಗಾಗಿ ತಪಸ್ಸಿಗೆ ಕುಳಿತನು. ಅಗಸ್ತ್ಯನು ಸಂಕಲ್ಪದಿಂದ ಬಲು ಲಾವಣ್ಯವತಿಯಾದ ಒಬ್ಬ ಕನ್ಯೆಯನ್ನು ನಿರ್ಮಿಸಿ ಅವನಿಗೆ ಕೊಟ್ಟನು. ಅವಳು ಬೆಳೆದು ದೊಡ್ಡವಳಾಗುತ್ತಲಂತೂ ಇನ್ನಷ್ಟು ಚೆಲುವೆಯಾಗಿ ಕಾಣಹತ್ತಿದಳು. ಅವಳು ತನಗೆ ಬೇಕೆಂದು ಅಗಸ್ತ್ಯನು ಬೇಡಿಕೆಯನ್ನು ಹಾಕಿದನು. ಆದರೆ ರಾಜವೈಭವದಲ್ಲಿ ಬೆಳೆದವಳು, ಇವಳನ್ನು ಒಬ್ಬ ಋಷಿಗೆ ಕೊಡುವ ಮನಸ್ಸು ರಾಜನಿಗಿರಲಿಲ್ಲ. ಋಷಿಯ ಶಾಪದ ಹೆದರಿಕೆಯಿಂದಾಗಿ ನಿರಾಕರಿಸುವಂತೆಯೂ ಇರಲಿಲ್ಲ. ತಂದೆಯ ಇಕ್ಕಟ್ಟನ್ನು ಅರಿತ ಲೋಪಾಮುದ್ರೆಯು ಅಗಸ್ತ್ಯನನ್ನು ಮನದಿಂದಲೇ ಒಪ್ಪಿ, ಒಲಿದು ತಂದೆಗೆ ಹೇಳಿದಳು. ಮದುವೆಯು ತರು ವಾಯು ನಾರುಬಟ್ಟೆಗಳು, ಜಿಗರೆಯ ಚರ್ಮಗಳೊಂದಿಗೆ ಆಶ್ರಮದ ಬಾಳನ್ನು ಸವೆಯಿಸಬೇಕಾಯಿತು. ಇವಳು ತನ್ನ ಅಂದಚೆಂದ, ರೂಪುಲಾವಣ್ಯಗಳಿಂದ ಋಷಿಯ ಮನವನ್ನು ಸೂರೆಗೊಂಡಳು. ಇನ್ನು ರಾಜೈಶ್ವರ್ಯ ದೊರಕಲಿ ಎಂದು ತನ್ನ ಬಯಕೆಯನ್ನು ಅವನೆದುರು ವ್ಯಕ್ತಪಡಿಸಿದಳು. ಅಲ್ಲದೆ ಅವಳಿಗೆ ಒಬ್ಬನೇ ಒಂದು ಮಗು ಸಾಕಿತ್ತು. ಋಷಿಯು ತನ್ನ ತಪೋಬಲದಿಂದ ಅವಳ ಇವೆರಡೂ ಬಯಕೆಗಳನ್ನು ಈಡೇರಿಸಿದನು. ಮಗನ ಹೆಸರು ದೃಢಸ್ಯು ಹಾಗೂ ಇಧ್ಮವಾಹ ಎಂದಿತ್ತು. ಇವಳ ಬಳಿ ಅಡಿಗೆಯನ್ನು ಸಿದ್ಧಪಡಿಸುವ ಒಂದು ತಟ್ಟೆಯಿತ್ತು. ಆನಂದರಾಮಾಯಣದಲ್ಲಿ ಈ ಸಂಗತಿ ನಮೂದಿತವಾಗಿದೆ. ಭಾಗವತದಲ್ಲಿ ಇವಳ ಹಾಗೂ ಮಗನ ಹೆಸರುಗಳು ಬೇರೆಯಾಗಿವೆ

**ವಡವಾಮುಖ** : ಒಬ್ಬ ಋಷಿ. ಕಡಲಿನಲ್ಲಿಯ ಅಗ್ನಿಗೂ ಇದೇ ಹೆಸರು. ಕಡಲು ಜಲರೂಪದ ಹವಿಸ್ಸನ್ನು ವಡವಾಮುಖನಿಗೆ ಕೊಡುತ್ತದೆ ಎಂಬ ಒಂದು ಗ್ರಹಿಕೆಯಿದೆ. ಈತನಿಂದಾಗಿಯೇ ಕಡಲ ನೀರು ಉಪ್ಪಾದುದು. ಇವನೊಬ್ಬನೇ ಅವನ್ನು ಕುಡಿಯಲು ಸಾಧ್ಯ. ಈತನನ್ನು ನಾರಾಯಣನ ಒಂದು ಅವತಾರ ಎಂದು ತಿಳಿಯಲಾಗುತ್ತದೆ.

**ವರ್ಗಾ** : ಕುಬೇರನ ನಲ್ಲೆ. ಒಬ್ಬ ಅಪ್ಸರೆ. ಯಾವನೋ ಒಬ್ಬ ಋಷಿಯ ಶಾಪದಿಂದಾಗಿ ಸೌಭದ್ರವೆಂಬ ಸರೋವರದಲ್ಲಿ ಮೊಸಳೆಯ ಜನ್ಮವನ್ನು ತಳೆದಳು. ಇವಳ ಆಯುಸ್ಸು ನೂರು ವರ್ಷಗಳದಿತ್ತು. ಶ್ರೇಷ್ಠ ವ್ಯಕ್ತಿಯ ದರ್ಶನದಿಂದಾಗಿ ಮುಕ್ತಿ ದೊರೆಯಲಿದೆಯೆಂಬ ಉಃಶಾಪ ಇವಳಿಗಿತ್ತು. ಅದು ಅರ್ಜುನನ ದರ್ಶನದಿಂದ ಈಡೇರಿತು. ಇವಳಂತೆಯೇ ಇವಳ ಕೆಲವು ಜನ ಗೆಳತಿಯರಾದ ಸೌರಭೇಯಿ, ಸಾಮೀಚಿ, ಬುದ್ಬುದಾ ಹಾಗೂ ಲತಾ ಇವರು ಕೂಡ ಬೇರೊಂದು ಸರೋವರಗಳಲ್ಲಿ ಮೊಸಳೆಗಳಾಗಿ ಕಾಲಕಳೆಯುತ್ತಿದ್ದರು. ಇವಳ ಕೋರಿಕೆಯ ಮೇರೆಗೆ ಅರ್ಜುನನು ಅವರೆನ್ನೂ ಶಾಪದಿಂದ ಬಿಡುಗಡೆ ಮಾಡಿದನು. ಇವೆಲ್ಲ ಸರೋವರಗಳು ನಾರೀತೀರ್ಥಗಳೆಂದು ಹೆಸರಾಗಿವೆ.

**ವರಿಷ್ಠ** : ಚಾಕ್ಷುಷ ಮನುವಿನ ಮಗನು. ಈತನು ಇಂದ್ರನ ಸಹಸ್ರವಾರ್ಷಿಕ ಯಜ್ಞದಲ್ಲಿ ಗೃತ್ಸಮದ್ ಸಾಮವನ್ನು ತಪ್ಪಾಗಿ ಉಚ್ಚರಿಸುತ್ತಿದ್ದನು. ವರಿಷ್ಠನು ಅದನ್ನು ಕೇಳಿ ಹದಿನೆಂಟು ನೂರು ವರ್ಷಗಳ ಕಾಲ ಬಲು ಭಯಂಕರವೂ, ಕಷ್ಟದ್ದೂ ಆದ ಅವಸ್ಥೆಯಲ್ಲಿ ಕೊಳೆಯುತ್ತ ನರಳುವ ಶಾಪವನ್ನಿತ್ತನು.

**ವಸಿಷ್ಠ** : ಪ್ರಾಚೀನ ಗ್ರಂಥಗಳಲ್ಲಿ 'ವಸಿಷ್ಠ' ಹೆಸರಿನಿಂದ ಕಂಡುಬರುವ ಉಲ್ಲೇಖಗಳೆಲ್ಲ ಒಂದೇ ವ್ಯಕ್ತಿಯವಾಗಿರಲಿಕ್ಕಿಲ್ಲ. ವಸಿಷ್ಠನು ಋಗ್ವೇದದ ಏಳನೆಯ ಮಂಡಲದ ದ್ರಷ್ಟಾರನಾಗಿದ್ದು ಈತನು ಸೂಕ್ತಗಳನ್ನು ರಚಿಸಿರುವುದು ಮಂತ್ರಗಳಲ್ಲಿ ಕಂಡುಬರುತ್ತದೆ. ಮಿತ್ರಾವರುಣರ ತೇಜಸ್ಸಿನಿಂದಾಗಿ ಕುಂಭ ಇಲ್ಲವೆ ಕಮಲದಲ್ಲಿ ಹುಟ್ಟಿ ಬಂದನು. ವಸಿಷ್ಠ–ವಿಶ್ವಾಮಿತ್ರರ ಜಗಳ ಋಗ್ವೇದದಲ್ಲೂ ಕಂಡುಬರುತ್ತದೆ. ಈತ ಸುದಾಸನ ಪುರೋಹಿತನಾಗಿದ್ದನು. ಹೀಗಾಗಿ ವಸಿಷ್ಠ–ವಿಶ್ವಾಮಿತ್ರರಲ್ಲಿ ಜಗಳಕ್ಕಿಟ್ಟು ಕೊಂಡಿತು. ಕರ್ದಮ ಪ್ರಜಾಪತಿಯ ಮಗಳು ಅರುಂಧತಿ ಹಾಗೂ ದಕ್ಷನ ಮಗಳು ಊರ್ಜಾ ಇವರು ಈತನ ಮಡದಿಯರು. ವಸಿಷ್ಠನು ಕಾಮಧೇನುವಿನ ನೆರವಿನಿಂದ ವಿಶ್ವಾಮಿತ್ರನನ್ನು ತನ್ನ ಆಶ್ರಮಕ್ಕೆ ಬಲು ಚೆನ್ನಾಗಿ ಬರಮಾಡಿಕೊಂಡನು. ಅವನು ತನಗೆ ಕಾಮಧೇನು ಬೇಕೆಂದನು. ಈತ ಇಲ್ಲೆಂದನು. ಅವನು ಬಲವಂತರಿಂದ ಹಸುವನ್ನು ಒಯ್ಯಲು ಯತ್ನಿಸಿದನು. ಆಗ ಕಾಮಧೇನುವಿನ ಮೈಯಿಂದ ಪಲ್ಲವ ಮೊದಲಾದ ಮ್ಲೇಂಛರು ಹೊರಬಂದರು. ಅವರು ವಿಶ್ವಾಮಿತ್ರನನ್ನು ಸೋಲಿಸಿದರು. ಬ್ರಹ್ಮತೇಜಸ್ಸು ಕ್ಷತ್ರಿಯತೇಜಸ್ಸಿಗಿಂತಲೂ ಹಿರಿದಾದುದು ಎಂಬುದು ಆ ದಿನ ವಿಶ್ವಾಮಿತ್ರನಿಗೆ ಕಂಡುಬಂದಿತು, ಮನದಟ್ಟಾಯಿತು. ಈತನ ಹೆಸರಿನಿಂದ ವಸಿಷ್ಠಸ್ಮೃತಿ, ವಸಿಷ್ಠ ತಂತ್ರ, ವಸಿಷ್ಠಪುರಾಣ ಮುಂತಾದ ಹಲವಾರು ಹೊತ್ತಗೆಗಳಿವೆ.

ವಸಿಷ್ಠನು ನಿಮಿ ಹಾಗೂ ಸೌದಾಸ ರಾಜರಿಗೆ ಶಾಪಗಳನ್ನಿತ್ತಿರುವನು. ನಿಮಿಯ ಮರುಶಾಪ ಈತನಿಗೆ ತಟ್ಟಿದೆ. ದುರ್ವಾಸಋಷಿಯು ಒಂದು ಸಂವತ್ಸರಕಾಲ ವಸಿಷ್ಠನ ಆಶ್ರಮದಲ್ಲಿ ವಾಸವಾಗಿದ್ದನು. ವಸಿಷ್ಠನು ದಶರಥನ ಮನೆಯ ಧಾರ್ಮಿಕ ವಿಧಿಗಳೆಲ್ಲವನ್ನೂ ಪೂರೈಸುತ್ತಿದ್ದನು. ಶ್ರೀರಾಮನು ಮಹಾಪ್ರಸ್ಥಾನವನ್ನಿಟ್ಟಾಗಲೂ ಈತನು ಧಾರ್ಮಿಕ ವಿಧಿಗಳನ್ನು ನೆರವೇರಿಸಿದನು.

ವಸಿಷ್ಠನಿಗೆ ಮಹೋದಯ ಮೊದಲಾದ ನೂರು ಜನ ಗಂಡುಮಕ್ಕಳು ಇದ್ದರು. ವಿಶ್ವಾಮಿತ್ರನು ಅವರೆಲ್ಲರನ್ನೂ ಕೊಂದುಬಿಟ್ಟನು.

**ವಾಮದೇವ** : ಇಂದ್ರನ ಒಡ್ಡೋಲಗದ ಒಬ್ಬ ಮಹರ್ಷಿ. ಒಂದು ಸಲ ಪರೀಕ್ಷಿತನ ಮಗ ಶಲರಾಜನು ಬೇಟೆಗಾಗಿ ಹೋಗಿದ್ದನು. ಅವನು ಒಂದು ಕಾಡು ಮೃಗವನ್ನು ಬೆನ್ನಟ್ಟಿಹೋದನು. ಆದರೆ ಬೇಟೆ ಸಿಕ್ಕಲಿಲ್ಲ. ಅದನ್ನು ಬೆನ್ನಟ್ಟಲು ರಥಕ್ಕೆ ಬೇಕಿದ್ದ ಕುದುರೆ ಈತನ ಬಳಿಯಿರಲಿಲ್ಲ. ಅಂಥ ಜಾತಿಯ ಕುದುರೆಗಳು ವಾಮದೇವನ ಬಳಿ ಇರುವುದಾಗಿ ಸಾರಥಿ ಹೇಳಿದನು. ದೊರೆಯು ವಾಮದೇವನಿಂದ ಕೆಲಕಾಲಕ್ಕಾಗಿ ಈ ಕುದುರೆಗಳನ್ನು ಕೇಳಿ ಪಡೆದನು. ತನ್ನ ಕೆಲಸವಾದಬಳಿಕ ಅವುಗಳನ್ನು ಹಿಂತಿರುಗಿಸಲು ಒಡಂಬಡಲಿಲ್ಲ. ವಾಮದೇವನು ಈತನನ್ನು ತನ್ನ ಕುದುರೆಗಳಿಗಾಗಿ ಕೇಳಿದನು. ದೊರೆ ಇಲ್ಲೆಂದನು. ಕೆರಳಿದ ವಾಮದೇವನು ದೊರೆಯನ್ನು ಕೊಲ್ಲಲು

ಸಿದ್ಧನಾದನು. ಆದರೆ ಬ್ರಾಹ್ಮಣನನ್ನು ಕೊಲ್ಲುವುದು ಸರಿಯಲ್ಲವೆಂದು ರಾಕ್ಷಸನ ಕೈಲಿ ಅವನನ್ನು ಕೊಲ್ಲಿಸಿದನು. ಶಲನ ತಪ್ಪಿಂದಿರೂ ಕೂಡ ಕುದುರೆಗಳನ್ನು ಹಿಂತಿರುಗಿಸಲು ಒಪ್ಪಲಿಲ್ಲ. ಇಷ್ಟೇ ಅಲ್ಲದೆ ನಂಜಿನ ಬಾಣವನ್ನೆಸೆದು ವಾಮದೇವನನ್ನೇ ಕೊಲ್ಲಲು ಸಂಚುಹೂಡಿದರು. ವಾಮದೇವನ ಶಾಪದಿಂದಾಗಿ ಅದೇ ಬಾಣದಿಂದಾಗಿ ಅವನ ಮಗ ಶ್ಯೇನಜಿತ ಸಾವನ್ನಪ್ಪಿದನು. ಎರಡನೆಯ ಬಾಣವನ್ನೆಸೆಯಲಾಗಿ ವಾಮದೇವನು ಅದನ್ನು ಸ್ತಂಭಿತಗೊಳಿಸಿದನು. ಹೀಗಾಗಿ ದೊರೆಯು ತನ್ನ ಸೋಲನ್ನು ಒಪ್ಪಿಕೊಂಡನು. ವಾಮದೇವನು ಅದೇ ಬಾಣವನ್ನು ರಾಣಿಗೆ ಸ್ಪರ್ಶಿಸೆಂದು ರಾಜನಿಗೆ ಹೇಳಿದನು. ಅವಳಿಗೆ ವರವೀಯುವುದಾಗಿಯೂ ಹೇಳಿದನು. ತನ್ನ ಗಂಡನು ಎಲ್ಲ ಪಾಪಗಳಿಂದಲೂ ಮುಕ್ತನಾಗಲೆಂದು ಅವಳು ವರವನ್ನು ಕೇಳಿಕೊಂಡಳು. ದೊರೆಯು ವಾಮದೇವನಿಗೆ ಅವನ ಕುದುರೆಗಳನ್ನು ಹಿಂತಿರುಗಿ ಕೊಟ್ಟನು.

**ವಾಲಖಿಲ್ಯ :** ಇದೊಂದು ಋಷಿಸಮುದಾಯದ ಹೆಸರು. ಕಶ್ಯಪ ತನಗೆ ಮಕ್ಕಳಾಗಲೆಂದು ಈ ಯಜ್ಞವನ್ನು ಮಾಡುತ್ತಲಿದ್ದನು. ಗಂಧರ್ವರು ಈತನಿಗೆ ನೆರವಾಗಲೆಂದು ಬಂದಿದ್ದರು. ಸಮಿಧೆಯನ್ನು ತರುವ ಕೆಲಸವನ್ನು ಒಪ್ಪಿಸಲಾಯಿತು. ಆವನು ಗಂಡ್ಸದಷ್ಟೆತ್ತರ ಸಮಿಧೆಯನ್ನು ತಂದುಹಾಕಿದನು. ವಾಲಖಿಲ್ಯರು ಒಂದೊಂದೇ ಈ ಸಮಿಧೆಯನ್ನು ತರುತ್ತಿರುವುದನ್ನು ಕಂಡು ಇಂದ್ರನು ಅವರನ್ನು ಕುಚೋದ್ಯಕ್ಕೆ ಈಡುಮಾಡಿದನು. ಹೀಗಾಗಿ ಅವರು ಕೆರಳಿ ಬೇರೊಬ್ಬ ಇಂದ್ರ ಬೇಕೆಂದು ಸಂಕಲ್ಪವನ್ನು ತೊಟ್ಟರು. ಇಂದ್ರ ಗಾಬರಿಯಾಗಿ ಕಶ್ಯಪನನ್ನು ಮೊರೆಹೊಕ್ಕನು. ಕಶ್ಯಪನು ಇವರೆಲ್ಲರಿಗೂ ತಿಳಿಹೇಳಿದನು. ವಾಲಖಿಲ್ಯರು ಇನ್ನೊಬ್ಬ ಇಂದ್ರನನ್ನು ನಿರ್ಮಿಸಲು ಯತ್ನಿಸುವುದು ಬೇಡವೆಂದು ಹೇಳಿದನು. ಅವರ ಸಂಕಲ್ಪವು ಸುಳ್ಳಾಗದಿರಲೆಂದು ಹಕ್ಕಿಗಳ ಇಂದ್ರನಾದ ಖಗೇಂದ್ರ ಗರುಡನನ್ನು ನಿರ್ಮಿಸುವುದಾಗಿ ಮಾತುಕೊಟ್ಟನು. ವಾಲಿಖಿಲ್ಯ ಋಷಿಗಳ ತಪಸ್ಸಿನಿಂದಾಗಿ ವಿನತೆ ಹಾಗೂ ಕಶ್ಯಪ ಇವರಿಗೆ ಇಬ್ಬರು ಮಕ್ಕಳಾದರು. ಅವರೇ ಅರುಣ ಹಾಗೂ ಗರುಡರು. ಅವರಿಬ್ಬರೂ ಮೂರೂ ಲೋಕಗಳನ್ನು ಆಳುವವರೆನ್ನಿಸಿದರು. ಇದೇ ರೀತಿಯಾಗಿ ಕಶ್ಯಪನು ಬ್ರಾಹ್ಮಣರಿಗೆ ಅಗೌರವ ತೋರದಿರುವಂತೆ ಇಂದ್ರನನ್ನು ಎಚ್ಚರಿಸಿದನು.

**ವಾಲ್ಮೀಕಿ :** ಸಂಸ್ಕೃತ ಭಾಷೆಯ ಆದಿಕವಿ. ಈತನ ಚರಿತ್ರೆಯ ಪ್ರಾಮಾಣಿಕವಾದ ಮಾಹಿತಿ ದೊರೆತಿಲ್ಲ.

ವಾಲ್ಮೀಕಿ ಒಬ್ಬ ಬ್ರಹ್ಮರ್ಷಿ. ಸುಮತಿ ಎಂಬ ಒಬ್ಬ ಬ್ರಾಹ್ಮಣನ ಮಗ. ಇವನು ಚಿಕ್ಕವನಿರುವಾಗಲೇ ಇವನ ತಾಯಿತಂದೆಗಳು ಇವನನ್ನು ಒಬ್ಬ ಬೇಡರವನ ಬಳಿಯಿಟ್ಟು ತಪಸ್ಸಿಗೆಂದು ಹೊರಟುಹೋದರು. ಈತನು ಬೇಡನ ಅಪ್ಪಣೆಪಡೆದು ತನ್ನ ಬ್ರಾಹ್ಮಣತ್ವವನ್ನು ಮರೆತು ಕಳ್ಳತನಕ್ಕೆ ಇಳಿದನು. ಜನ ಈತನನ್ನು ಬೆಸ್ತರವ ಎನ್ನತೊಡಗಿದರು. ಒಂದು ಬಾರಿ ಕೆಲವು ಜನ ಋಷಿಗಳು ಇವನಿದ್ದ ಎಡೆಯಲ್ಲಿ ಹೊರಟಿದ್ದರು. ಈತನು ಅವರನ್ನು ತಡೆದು ಸುಲಿಯಲು ಆರಂಭಿಸಿದನು. ಋಷಿಗಳು ಇವನಿಗೆ ಉಪದೇಶವನ್ನಿತ್ತರು. ಈತನಿಗೆ ಉಪರತಿ ಆಯಿತು. ಋಷಿಗಳಿಂದ ದೊರೆತ ರಾಮನ ಮಂತ್ರವನ್ನು ಜಪಿಸಲು ಆರಂಭಿಸಿದನು, ಒಂದಡೆಯಲ್ಲಿ ನಿಂತುಕೊಂಡು ಹಲವು ವರ್ಷ ತಪಸ್ಸನ್ನು

ಆಚರಿಸಿದ್ದರಿಂದ ಈತನ ಮೈಮೇಲೆ ಹುತ್ತ ಬೆಳೆಯಿತು. ಅದೇ ಮಹರ್ಷಿಗಳು ಬಂದು ಹುತ್ತವನ್ನು ದೂರ ಸರಿಸಿದರು. 'ವಾಲ್ಮೀಕಿ' ಎಂದು ಇವನಿಗೆ ಹೆಸರು ಕೊಟ್ಟರು. ಈ ಕಥೆ ಸ್ಕಂದಪುರಾಣದ್ದು.

ವಾಲ್ಮೀಕಿಯು ತಮಸಾ ನದಿಯ ದಡದಲ್ಲಿ ಆಶ್ರಮವನ್ನು ಸ್ಥಾಪಿಸಿ ಅಧ್ಯಾಪನವನ್ನು ಆರಂಭಿಸಿದನು. ಈತನ ಶಿಷ್ಯಪರಿವಾರ ಬಲುದೊಡ್ಡದು. ಭರದ್ವಾಜ ಮುಖ್ಯ ಶಿಷ್ಯ. ಶ್ರೀರಾಮನು ಸೀತೆಯನ್ನು ವನದಲ್ಲಿ ಬಿಟ್ಟಾಗ ಈತನು ಅವಳನ್ನು ಸಲಹಿದನು. ಆಗ ಅವಳು ಬಸಿರೆ. ಮುಂದೆ ಇದೇ ಆಶ್ರಮದಲ್ಲಿ ಹೆರಿಗೆಯಾಯಿತು. ಲವ, ಕುಶರು ಹುಟ್ಟಿದರು. ಈತನೇ ಆ ಮಕ್ಕಳನ್ನು ಸಾಕಿ ಸಲಹಿ ಅವರಿಗೆ ವಿದ್ಯಾಭ್ಯಾಸವನ್ನು ಹೇಳಿ ಕೊಟ್ಟನು. ಇವನು ಒಬ್ಬ ಋಷಿಯೊಂದಿಗೆ ವಾಖಂಡವಾದವನ್ನು ಕೈಕೊಂಡು ಬ್ರಹ್ಮಹತ್ಯೆಯ ದೋಷಕ್ಕೆ ಗುರಿಯಾದನು. ಮಹಾದೇವನ ಉಪಾಸನೆಯಿಂದಾಗಿ ಅದರಿಂದ ಬಿಡುಗಡೆಹೊಂದಿದನು.

ವಾಲ್ಮೀಕಿ ಒಬ್ಬ ವಿದ್ವಾಂಸನಾದ ಬ್ರಾಹ್ಮಣನಾಗಿದ್ದನೆಂದೇ ವಾಲ್ಮೀಕಿರಾಮಾಯಣದಲ್ಲಿ ಉಲ್ಲೇಖಿಸಲಾಗಿದೆ. 'ಪ್ರಾಚೇತಸೋಽಹಂ ದಶಮಃ ಪುತ್ರೋ ರಾಘವನಂದನ' (ಉತ್ತರಕಾಂಡ, ೯೬-೧೮)—ಎಂಬ ಶ್ಲೋಕದಲ್ಲಿ ವಾಲ್ಮೀಕಿಯೇ ತನ್ನ ಹುಟ್ಟಿನ ಕಥೆಯನ್ನು ಹೇಳಿದ್ದಾನೆ. ವಾಲ್ಮೀಕಿಯು ಶ್ರೀರಾಮನ ಸಮಕಾಲೀನ ಇಲ್ಲವೆ ಅನಂತರದವನಿದ್ದಂತೆ ಕಾಣುತ್ತದೆ.

**ವಾಸುಕಿ :** ಕಶ್ಯಪ ಹಾಗೂ ಕದ್ರುವಿನ ಮಗ. ಆಸ್ತಿಕನ ಸೋದರಮಾವ. ತನ್ನ ತಾಯಿಯ ಶಾಪಕ್ಕೀಡಾದ್ದರಿಂದ ಈತ ಬಲುಚಿಂತೆಯಲ್ಲಿ ಮುಳುಗಿದ್ದನು. ಏಲಾಪತ್ರನೆಂಬ ನಾಗನ ಹೇಳಿಕೆಯ ಮೇರೆಗೆ ಈತನು ತನ್ನ ತಂಗಿ ಜರತ್ಕಾರುವನ್ನು ಋಷಿ ಜರತ್ಕಾರುವಿಗೆ ಕೊಟ್ಟು ಮದುವೆಮಾಡಿದನು. ಬ್ರಹ್ಮದೇವನೂ ಈ ಮದುವೆಗೆ ಅನುಕೂಲನೇ ಆಗಿದ್ದನು. ಆತನ ಒಪ್ಪಿಗೆಯೂ ಇದ್ದಿತು. ಜನಮೇಜಯನ ಸರ್ಪಯಜ್ಞಕ್ಕೆ ಹಲವಾರು ಹಾವುಗಳು ಬಂದು ಬಂದು ಬೆಂಕಿಗೆ ಬೀಳತೊಡಗಿದವು. ಇವನು ಆಸ್ತಿಕನ ನೆರವು ಕೇಳಿದನು. ಈತ ನಾಗಗಳ ದೊರೆಯಾಗಿದ್ದನು. ಆರ್ಯಕನ ಪ್ರಾರ್ಥನೆಯ ಮೇರೆಗೆ ಭೀಮಸೇನನಿಗೆ ದಿವ್ಯವಾದ ರಸಪಾನವನ್ನು ದೊರಕಿಸಿಕೊಡಿರೆಂದು ಈತನು ನಾಗರಿಗೆ ಅಪ್ಪಣೆಯಿತ್ತನು. ಈತನು ವರುಣೋಪಾಸಕನಾಗಿದ್ದನು. ಸಮುದ್ರಮಂಥನದ ಕಾಲಕ್ಕೆ ಈತ ಹಗ್ಗವಾಗಿದ್ದನು. ತ್ರಿಪುರದಹನದ ಕಾಲಕ್ಕೆ ಶಂಕರನ ಬಿಲ್ಲಿಗೆ ಹೆದೆಯಾಗಿದ್ದನು. ಕರ್ಣಾರ್ಜುನರ ಕಾಳಗದಲ್ಲಿ ಈತನ ಬೆಂಬಲ ಅರ್ಜುನನಿಗೆ. ಈತನು ಸ್ಕಂದನಿಗೆ ಜಯ-ಮಹಾಜಯರೆಂಬ ಇಬ್ಬರು ಪಾರ್ಷದರನ್ನು ಕೊಟ್ಟನು. ಹಾವುಗಳಲ್ಲಿ ತಾನು ವಾಸುಕಿಯೆಂದು ಶ್ರೀಕೃಷ್ಣ ನುಡಿದಿದ್ದಾನೆ.

**ವಿಚಿತ್ರವೀರ್ಯ :** ಸತ್ಯವತಿ, ಶಂತನುವಿನ ಮಗ. ಭೀಷ್ಮನು ಈತನಿಗಾಗಿ ಕಾಶಿರಾಜನ ಹೆಣ್ಣುಮಕ್ಕಳನ್ನು ಓಡಿಸಿ ತಂದನು. ಅಂಬಿಕೆ ಹಾಗೂ ಅಂಬಾಲಿಕೆಯರೊಂದಿಗೆ ಈತನ ಮದುವೆ ನಡೆಯಿತು. ಚಿತ್ರಾಂಗದ ಅಲ್ಪಾಯುಷಿಯಾಗಿದ್ದನು. ಹೀಗಾಗಿ ಭೀಷ್ಮನು ಚಿಕ್ಕವನಾದ ಈತನನ್ನೇ ಗದ್ದುಗೆಯನ್ನೇರಿಸಿದನು. ರಾಜ್ಯಾಡಳಿತೆ

ಯನ್ನು ತಾನೇ ನೋಡಿಕೊಳ್ಳುತ್ತಿದ್ದನು. ಈತ ಬಲು ವಿಷಯಾಸಕ್ತನಾಗಿದ್ದನು. ಮಕ್ಕಳಾಗುವ ಮೊದಲೇ ಕ್ಷಯಬೇನೆಗೆ ತುತ್ತಾದನು.

**ವಿದುರ :** ಅಣಿಮಾಂಡವ್ಯ ಋಷಿಯ ಶಾಪದಿಂದಾಗಿ ಯಮಧರ್ಮನಿಗೆ ವಿದುರನ ಜನ್ಮ ಬಂದಿತು. (ನೋಡಿ : ಶಾಪ, ಕ್ರ. ೬—ಅಣಿಮಾಂಡವ್ಯ > ಯಮಧರ್ಮ.) ಧೃತ ರಾಷ್ಟ್ರ ಹುಟ್ಟುಗುರುಡನು ; ಪಾಂಡು ರೋಗಿ. ಹೀಗಾಗಿ ಇವರಿಬ್ಬರೂ ಪಟ್ಟವ ನ್ನೇರಲು ಯೋಗ್ಯರೆನ್ನಿಸಿರಲಿಲ್ಲ. ಸತ್ಯವತಿಯು ನಿಯೋಗದಿಂದ ಇನ್ನೊಬ್ಬ ಮಗನನ್ನು ಹೆರಲೆಂದು ಅಂಬಿಕೆಯನ್ನು ವ್ಯಾಸನಲ್ಲಿಗೆ ಕಳುಹಿಸಿದಳು. ಆದರೆ ಅಂಬಿಕೆಯು ತನ್ನ ಬದಲು ಒಬ್ಬಳು ದಾಸಿಯನ್ನು ಅವನ ಬಳಿಗೆ ಕಳುಹಿಸಿದಳು. ಅವಳಿಂದ ಹುಟ್ಟಿದವನೇ ವಿದುರನು. ಈತ ಜ್ಞಾನಿಯೂ, ಧಾರ್ಮಿಕ ಪ್ರವೃತ್ತಿಯವನೂ ಆಗಿದ್ದನು. ಈತ ಮುಂಧೋರಣೆಯುವ, ನಿಃಸ್ಪೃಹ ಹಾಗೂ ಸ್ಪಷ್ಟ ಮಾತಿನವನಾಗಿದ್ದರಿಂದ ಧೃತರಾಷ್ಟ್ರ ಯಾವಾಗಲೂ ಈತನಿಂದ ಸಲಹೆಯನ್ನು ಪಡೆಯುತ್ತಿದ್ದನು. ಈತನು ಧೃತರಾಷ್ಟ್ರನಿಗೆ ಅವನ ತಪ್ಪುಗಳನ್ನು ದಾಕ್ಷಿಣ್ಯ ಬಿಟ್ಟು ಎತ್ತಿತೋರಿಸುತ್ತಿದ್ದನು. ಅವನು ಹಲವು ಬಾರಿ ಈತನನ್ನು ಅಪಮಾನಗೊಳಿಸುತ್ತಿದ್ದನು. ಈತ ಕೌರವರ ಬದಿಗಿದ್ದರೂ ಪಾಂಡವರ ಬಗೆಗೆ ತುಂಬ ಮಮತೆ ಈತನಿಗೆ. ಪಾಂಡವರನ್ನು ಅರಗಿನರಮನೆಯ ಸಂಕಟದಿಂದ ಪಾರುಮಾಡಿದ ಪೂರ್ತಿ ಯಶಸ್ಸು ಈತನದೇ. ಈ ಬಗೆಗೆ ಸರಿಯಾದ ಸಮಯಕ್ಕೆ ಪಾಂಡವರಿಗೆ ಸುಳಿವನ್ನಿತ್ತಿದ್ದನು. ಈತನು ಧೃತರಾಷ್ಟ್ರನಿಗಿತ್ತ ಉಪದೇಶವು ವಿದುರನೀತಿ ಎಂದು ಹೆಸರಾಗಿದೆ. ಕೌರವರು ಪಾಂಡವರೊಂದಿಗೆ ಒಪ್ಪಂದಕ್ಕೆ ಒಪ್ಪದಿರಲು ಈತ ಎದ್ದು ತೀರ್ಥಾಟನೆಗೆ ಹೋಗಿಬಿಟ್ಟನು. ಪಾಂಡವರು ರಾಜ್ಯವನ್ನು ಪಡೆದ ಬಳಿಕ ಈತನು ಕೆಲಕಾಲ ಅವರೊಂದಿಗೆ ಇದ್ದನು. ಮುಂದೆ ಧೃತರಾಷ್ಟ್ರನೊಂದಿಗೆ ಹಸ್ತಿನಾಪುರ ವನ್ನು ತೊರೆದು ಕಾಡಿಗೆ ಹೋದನು. ಒಬ್ಬ ಭಾಗವತನಂತೆ ಈತನು ಪ್ರಭಾಸಕ್ಷೇತ್ರದಲ್ಲಿ ದೇಹಬಿಟ್ಟನು. ಈತ ಯುಧಿಷ್ಠಿರನ ಕಣ್ಣಲ್ಲಿ ಕಣ್ಣಿಟ್ಟು ನೋಡಿ ಅವನ ದೇಹವನ್ನು ಹೊಕ್ಕನೆಂದು ಮಹಾಭಾರತ ಹೇಳುತ್ತದೆ. ಶಾಪಮುಕ್ತಿಯಾದನಂತರ ಈತನಿಗೆ ಸ್ವರ್ಗ ಸಿಕ್ಕಿತು. ಯುಧಿಷ್ಠಿರನು ಈತನ ದೇಹಕ್ಕೆ ಅಂತ್ಯವಿಧಿಗಳನ್ನು ಒದಗಿಸುವುದರಲ್ಲಿದ್ದನು. ಆದರೆ ಆಕಾಶವಾಣಿಯು ಆತನನ್ನು ತಡೆಹಿಡಿಯಿತು. (ನೋಡಿ : ಆಶ್ರಮವಾಸಿಕಪರ್ವ, ೨೬/೩೧-೩೩).

ಪಿತೃಸಾವರ್ಣ್ಯದಿಂದಾಗಿ ವಿದುರ ಬ್ರಾಹ್ಮಣನೆನ್ನಿಸಿದರೂ ಅವನ ಹಡೆದ ತಾಯಿ ಶೂದ್ರಳಾದುದರಿಂದ ಈತನ ಜಾತಿ ಯಾವುದೆಂದು ನಿರ್ಧರಿಸಲಾಗದು. ಈತನ ಮಡದಿ ಪಾರಸವಿ. ಇವಳು ಕ್ಷತ್ರಿಯ ದೇವಕ ದೊರೆಯ ಮಗಳಾಗಿದ್ದಳು.

**ವಿನತಾ :** ಕಶ್ಯಪನ ಮಡದಿ. ಅರುಣ-ಗರುಡರ ತಾಯಿ. ಈಕೆ ದಕ್ಷಪ್ರಜಾ ಪತಿಯ ಕನ್ಯೆ. ಈಕೆ ಉಚ್ಚೈಃಶ್ರವ ಕುದುರೆಯ ಬಾಲದ ಬಣ್ಣವನ್ನು ಕುರಿತು ತನ್ನ ಸವತಿ ಕದ್ರುವಿನೊಡನೆ ಪಂಥ ಕಟ್ಟಿ ಸೋತು ಅವಳ ಅಡಿಯಾಳಾದಳು. ಗರುಡನು ಅಮೃತವನ್ನು ಪಡೆದು ತಂದು ಇವಳನ್ನು ದಾಸ್ಯದಿಂದ ಬಿಡುಗಡೆಗೊಳಿಸಿದನು.

**ವಿಪುಲ :** ಭೃಗುವಂಶದ ಒಬ್ಬ ಋಷಿ. ದೇವಶರ್ಮನ ಶಿಷ್ಯ. ಇಂದ್ರನಿಂದ ತನ್ನ ಮಡದಿಯನ್ನು ಕಾಪಾಡುವ ಹೊಣೆಯನ್ನು ದೇವಶರ್ಮ ಈತನಿಗೆ ಒಪ್ಪಿಸಿದ್ದನು.

ಇಂದ್ರ ಮಾಯಾವಿ. ಯಾವುದೇ ಮಾರುವೇಷದಲ್ಲಿ ಬಂದು ಈತನ ಗುರುಪತ್ನಿಯನ್ನು ಕೆಡಿಸುವನೆಂಬ ಹೆದರಿಕೆ ಈತನಲ್ಲಿತ್ತು. ಹೀಗಾಗಿ ತನ್ನ ಯೋಗಬಲದಿಂದ ಗುರುಪತ್ನಿಯ ದೇಹವನ್ನು ಹೊಕ್ಕನು. ಅವಳನ್ನು ಕಾಪಾಡಿದನು. ದೇವಶರ್ಮನು ಈತನ ಒಳ್ಳೆಯ ಉದ್ದೇಶವನ್ನು ಅರ್ಥಮಾಡಿಕೊಂಡನು. ಆದರೆ ವಿಪುಲನು ಈ ಸಂಗತಿಯನ್ನು ಗುರುವಿಗೆ ಹೇಳಿದ್ದರಿಂದ ಅವನಿಗೆ ಪಾಪ ತಗಲಿತು. ತರುವಾಯ ಒಪ್ಪಿಕೊಂಡನು. ಪಾಪದಿಂದ ಬಿಡುಗಡೆಹೊಂದಿದನು. ಕಾಲಾಂತರದಲ್ಲಿ ಸ್ವರ್ಗಪ್ರಾಪ್ತಿ ಆಯಿತು.

**ವಿಶ್ವಾವಸು :** ಇವನೊಬ್ಬ ಋಷಿ. ಮಹರ್ಷಿಯಾದ ಸಂಪ್ರತೀಕನ ಸೋದರನ ಶಾಪದಿಂದಾಗಿ ಈತ ಹೇಗೋ ಹುಟ್ಟಿಬಂದನು. ಗರುಡನು ಈತನನ್ನು ತಿಂದುಬಿಟ್ಟನು.

**ವಿರಾಟ :** ಮತ್ಸ್ಯದೇಶದ ದೊರೆ. ಕೇಕಯದ ಅರಸುಗುವರಿ ಸುದೇಷ್ಣೆ ಈತನ ಮಡದಿ. ಪಾಂಡವರು ವೇಷಮರೆಸಿ ತಮ್ಮ ಅಜ್ಞಾತವಾಸದ ಕಾಲಾವಧಿಯನ್ನು ಈತನ ಆಸರೆಯಲ್ಲಿ ಕಳೆದರು. ಕೀಚಕ ಈತನ ದಂಡನಾಯಕ. ಭೀಮನು ಆತನನ್ನು ಕೊಂದನು. ಹೀಗಾಗಿ ಸುಶರ್ಮನು ಕೆರಳಿ ವಿರಾಟನ ಮೇಲೇರಿಬಂದನು. ಮಾರುವೇಷದ ಪಾಂಡವರು ಈತನ ನೆರವಿಗೆ ನಿಂತರು. ಸುಶರ್ಮನು ವಿರಾಟನನ್ನು ಸೆರೆಹಿಡಿದನು. ಭೀಮನು ಈತನನ್ನು ಸೆರೆಯಿಂದ ಬಿಡಿಸಿದನು. ದುರ್ಯೋಧನನು ವಿರಾಟನ ಮೇಲೆ ದಾಳಿಯಿಟ್ಟಾಗ ಬೃಹನ್ನಳೆಯಾಗಿದ್ದ ಅರ್ಜುನನು ವಿರಾಟನ ಮಗ ಉತ್ತರಕುಮಾರನಿಗೆ ನೆರವಾಗಿ ದುರ್ಯೋಧನನನ್ನು ಸೋಲಿಸಿದನು. ಕಂಕ (ಯುಧಿಷ್ಠಿರ) ಹಾಗೂ ವಿರಾಟರು ಜೂಜಾಟವನ್ನು ಆಡುವಾಗ ರಾಜನು ದಾಳಗಳನ್ನು ಕಂಕನ ಮೂಗಿನ ಮೇಲೆ ಎಸೆದನು. ನೆತ್ತರು ಸುರಿಯಹತ್ತಿತು. ಉತ್ತರೆಯು ಇದನ್ನು ಕಂಡಳು. ತನ್ನ ಅಪ್ಪನಿಗೆ ಕ್ಷಮೆ ಕೇಳೆಂದಳು. ಪಾಂಡವರ ನಿಜವಾದ ಸ್ವರೂಪವನ್ನು ತಿಳಿದ ಒಳಿಕ ವಿರಾಟ ನಾಚಿ ನೀರಾದನು. ಅವರೊಡನೆ ಸ್ನೇಹದ ನಂಟು ಬೆಳೆಯಲೆಂದು ಅಭಿಮನ್ಯುವಿಗೆ ಉತ್ತರೆಯನ್ನು ಕೊಟ್ಟು ಮದುವೆಮಾಡಿದನು. ಮಹಾಭಾರತ ಯುದ್ಧದಲ್ಲಿ ಈತ ಪಾಂಡವರ ಬದಿಯಿಂದ ಕಾದಾಡಿದನು. ದ್ರೋಣಾಚಾರ್ಯನು ಇವನನ್ನು ಕೊಂದನು.

**ವಿವಸ್ವಾನ :** ಋಗ್ವೇದವು ಈತನನ್ನು ಒಬ್ಬ ಬೇರೆ ದೇವತೆಯೆಂದು ಉಲ್ಲೇಖಿಸುತ್ತದೆ. ವಿವಸ್ವಾನ ಹಾಗೂ ಸೂರ್ಯರು ಒಬ್ಬನೆಯೋ ಇಲ್ಲವೆ ಬೇರೆಬೇರೆಯೋ? ಎಂಬುದು ಸಂದೇಹಾಸ್ಪದವಾದ ಸಂಗತಿಯಾಗಿದೆ. ಸೂರ್ಯನು ಅದಿತಿಯ ಮಗನಾದ್ದರಿಂದ ಆದಿತ್ಯನೆಂದು ಖಚಿತವಾದ ಉಲ್ಲೇಖವಿದೆ. ಆದರೆ ವಿವಸ್ವಾನನನ್ನು ಕುರಿತು ಅಂಥದೇನೂ ಇಲ್ಲ. ಮನುವನ್ನು ಸೂರ್ಯಪುತ್ರನೆನ್ನದೆ ವೈವಸ್ವತಮನು ಎಂದೆನ್ನಲಾಗಿದೆ. ಕುಂತಿ, ಹನುಮಂತ, ಸುಗ್ರೀವ, ಕರ್ಣ ಇವರು ಸೂರ್ಯನೊಂದಿಗೆ ನಂಟು ಇರುವವರು. ಸೂರ್ಯ ಎಂಬುದು ಸಾಮಾನ್ಯ ನಾಮವಾಗಿದ್ದು ವಿವಸ್ವಾನ ಈತನು ಹನ್ನೆರಡು ಜನ ಆದಿತ್ಯರಲ್ಲಿ ಒಬ್ಬನು. ವಿವಸ್ವಾನನು ಕಶ್ಯಪ ಹಾಗೂ ಅದಿತಿಯರ ಕೊನೆಯ ಮಗ. ತ್ವಷ್ಟನ ಮಗಳು ಸರಣ್ಯು ಇವಳು ಈತನ ಮಡದಿ--ಎಂದು ಋಗ್ವೇದ ಹೇಳುತ್ತದೆ. ಮತ್ಸ್ಯಪುರಾಣದ ಹೇಳಿಕೆಯಂತೆ ವಿಶ್ವಾತ್ರ ಸಂಜ್ಞಾ, ರಾಶಿ ಹಾಗು ಪ್ರಭಾ ಎಂಬ ಮೂವರು ಮಡದಿಯರ ಹೆಸರುಗಳಿವೆ. ಬೇರೆ ಬೇರೆ ಪುರಾಣಗಳಲ್ಲಿ ಇನ್ನೂ ಬೇರೆ ಬೇರೆ ಹೆಸರುಗಳಿವೆ. ರಾಹು ಎಂಬ ದೈತ್ಯನು ದೇವತೆಗಳೊಡನೆ ಅಮೃತವನ್ನು ಸೇವಿಸಲು ಕುಳಿತು

ದನ್ನು ಈತನು ಕಂಡನು. ಹೀಗಾಗಿ ಆತನ ಗುಟ್ಟು ರಟ್ಟಾಯಿತು. ಆದುದರಿಂದ ರಾಹುವು ಈತನನ್ನು ಮರೆಮಾಡುತ್ತಾನೆ. ಈತನಿಂದ ಸಂಜ್ಞೆಗೆ ಮೂರು ಜನ ಮಕ್ಕಳಾದರು. ಆದರೆ ಅವಳು ಈತನ ತೇಜಸ್ಸನ್ನು ಸಹಿಸಿಕೊಳ್ಳಲಾರದವಳಾಗಿದ್ದಳು. ಆಗ ಅವಳು ತನ್ನ ದೇಹದಿಂದ ಛಾಯೆಯನ್ನು ನಿರ್ಮಿಸಿದಳು. ತನ್ನ ಬದಲು ಅವಳನ್ನಿರಿಸಿ ತಾನು ತನ್ನ ತವರಿಗೆ ಹೊರಟುಹೋದಳು. ಸೂರ್ಯನಿಗೆ ಬಹುಕಾಲದವರೆಗೆ ಈ ಗುಟ್ಟು ತಿಳಿಯಲೇ ಇಲ್ಲ. ಒಂದು ಬಾರಿ ಅವಳು ಯಮನಿಗೆ ಶಾಪವಿತ್ತಳು. ಅದು ಅವನಿಗೆ ತಟ್ಟಿತು. ತಾಯಿಯ ಶಾಪ ಮಗನಿಗೆ ತಟ್ಟದೆಂಬುದು ಆತನಿಗೆ ಗೊತ್ತಿತ್ತು. ಹೀಗಾಗಿ ಇವಳು ಸಂಜ್ಞೆಯಲ್ಲವೆಂಬುದನ್ನು ಗುರುತಿಸಿದನು.

ಸಂಜ್ಞೆಯು ಒಂದು ಸಾವಿರ ವರ್ಷಗಳವರೆಗೆ ತನ್ನ ತಂದೆಯ ಬಳಿ ಉಳಿದಳು. ತರುವಾಯದಲ್ಲಿ ವಿವಸ್ವಾನನಿಗೆ ಚೆನ್ನಾದ ರೂಪು ಬರಲೆಂದು ಉತ್ತರಕುರುನಾಡಿನಲ್ಲಿ ತಪಸ್ಸನ್ನು ಆಚರಿಸತೊಡಗಿದಳು. ಅವಳು ವಡವೆಯ (ಹೆಣ್ಣುಕುದುರೆ) ರೂಪವನ್ನು ಧರಿಸಿದ್ದಳು ಹೀಗಾಗಿ ವಿವಸ್ವಾನನು ಗಂಡುಕುದುರೆಯಾಗಿ ಅವಳೊಡನೆ ಸಮಾಗಮ ವನ್ನು ಮಾಡಿದನು. ಅವಳು ಅವನ ವೀರ್ಯವನ್ನು ಮೂಗಿನಿಂದ ಹೊರಚೆಲ್ಲಿದಳು. ಆದರಿಂದಾಗಿ ನಾಸತ್ಯ ಹಾಗೂ ದಸ್ರ ಎಂಬ ಅವಳಿಗಳು ಹುಟ್ಟಿದವು. ಇವರೇ ದೇವತೆಗಳ ವೈದ್ಯರಾದ ಅಶ್ವಿನೀಕುಮಾರರು. ಇವರಲ್ಲದೆ ಅವಳಿಂದ (ವೈವಸ್ವತ) ಮನು, ಯಮ, ಹಾಗೂ ಯಮುನಾ ಎಂಬ ಮೂವರು ಮಕ್ಕಳು ಹುಟ್ಟಿದರು. ಛಾಯೆಯಿಂದ (ಸಾವರ್ಣಿ) ಮನು, ಶನಿ, ತಪತಿ; ಅಶ್ವಿನಿಯಿಂದ ಅಶ್ವಿನಿಕುಮಾರರು ಹಾಗೂ ವಿಷ್ಣು; ಪ್ರಭೆಯಿಂದ ಪ್ರಭಾತ ಹಾಗೂ ದೇವತೆಯಿಂದ ದೈವತರೆಂಬ ಮಕ್ಕಳಾದರು. ಕೆಲವು ಪುರಾಣಗಳು ವಿವಸ್ವಾನ್ ಈತ ಬ್ರಹ್ಮದೇವನ ವಂಶದ ಮರೀಚನ ಮಗನೆಂದು ತಿಳಿಸು ತ್ತವೆ. ಈತನಿಂದಲೇ ಚಂದ್ರ–ನಕ್ಷತ್ರಗಳು ಹುಟ್ಟಿವೆ ಎಂದು ತಿಳಿಯಲಾಗಿದೆ.

ನೋಡಿ : ಸೂರ್ಯ (ಆದಿತ್ಯ).

**ವಿಶ್ವಾಮಿತ್ರ :** ಗಾಧಿಯ ಮಗ. ಬಲು ಮುಂಗೋಪಿ. ಬಲು ಕಟ್ಟುನಿಟ್ಟಿನವ. ಉಗ್ರತಪಸ್ವಿಯು ತನ್ನ ಮನದಿಚ್ಛೆಯನ್ನು ಪೂರ್ತಿಗೊಳಿಸಿಕೊಳ್ಳುವವ. ಈತ ಮರು ಸೃಷ್ಟಿಯನ್ನು ನಿರ್ಮಿಸುವ ಸಾಮರ್ಥ್ಯವುಳ್ಳವನಾಗಿದ್ದನು. ವಸಿಷ್ಠನಿಗೂ ಈತನಿಗೂ ಜಗಳವಿತ್ತು. ಈತ ಒಂದು ಬಾರಿ ವಸಿಷ್ಠನ ಆಶ್ರಮಕ್ಕೆ ಹೋಗಿದ್ದನು. ಅವನು ಕಾಮಧೇನುವಿನ ನೆರವಿನಿಂದ ಈತನನ್ನು ಬಲು ಚೆನ್ನಾಗಿ ಬರಮಾಡಿಕೊಂಡನು. ಈತ ಕಾಮಧೇನು ಬೇಕೆಂದನು. ವಸಿಷ್ಠ ಇಲ್ಲೆಂದನು. ಈತ ಅದನ್ನು ಎಳೆದೊಯ್ಯಲು ಹವಣಿಸಿದನು. ಆಗ ಅದರ ಹೊಟ್ಟೆಯಿಂದ ಶಕ, ಬರ್ಬರ ಮೊದಲಾದ ಸೇನೆ ಹೊರ ಬಂದಿತು. ಅವರು ವಿಶ್ವಾಮಿತ್ರನನ್ನು ಸೋಲಿಸಿದರು. ಆದರಿಂದಾಗಿ ಬ್ರಹ್ಮತೇಜಸ್ಸು ಕ್ಷತ್ರಿಯ ತೇಜಸ್ಸಿಗಿಂತ ಮೇಲಿನದೆಂಬುದು ಈತನಿಗೆ ಅರ್ಥವಾಯಿತು. ಅದನ್ನು ಪಡೆಯಲೆಂದು ತಪಸ್ಸಿಗೆ ಕುಳಿತನು. ಬ್ರಹ್ಮಪದವನ್ನು ಪಡೆದನು. ಅದಕ್ಕೆ ವಸಿಷ್ಠ ಒಪ್ಪಿಗೆಯನ್ನೂ ಮಾನ್ಯತೆಯನ್ನೂ ಪಡೆದನು. ಈತನು ತನ್ನ ಹಾಗೂ ವಸಿಷ್ಠನ ಮಕ್ಕಳಿಗೆ ಶಾಪವಿತ್ತನು. ತ್ರಿಶಂಕುವು ಸದೇಹವಾಗಿ ಸ್ವರ್ಗವನ್ನು ಬಯಸಿದ್ದನು. ಆದರೆ ಪೂರ್ತಿ ಗಾಗಿ ಈತ ಯಜ್ಞವನ್ನು ಕೈಕೊಂಡನು. ಅವನನ್ನು ಸ್ವರ್ಗಕ್ಕೆ ಕಳುಹಿಸಿದನು. ಅಲ್ಲಿಂದ

ಅವನನ್ನು ಕೆಳಕ್ಕೆ ದೂಡಲಾಯಿತು. ವಿಶ್ವಾಮಿತ್ರನ ಯತ್ನ ಅಯಶಸ್ವಿಯಾಯಿತು. ಅಂಬರೀಷನು ಶುನಃಶೇಪನನ್ನು ಯಜ್ಞಪಶುವಾಗಿ ಕೊಂಡುಕೊಂಡನು. ತನ್ನನ್ನು ಒಯ್ಯುತ್ತಿರುವಾಗ ಅವನು ತನ್ನನ್ನು ಬದುಕಿಸೆಂದು ತನ್ನ ಸೋದರಮಾವನಾದ ವಿಶ್ವಾಮಿತ್ರನನ್ನು ಮೊರೆಹೊಕ್ಕನು. ಆಗ ಈತನು ತನ್ನೊಬ್ಬ ಮಗನನ್ನು ಬಲಿಕೊಟ್ಟು ಶುನಃಶೇಪನನ್ನು ಉಳಿಸಲು ಯತ್ನಿಸಿದನು. ಮಕ್ಕಳು ಒಲ್ಲೆಂದ ಕಾರಣ ಈತನ ಯತ್ನ ಸಫಲವಾಗಲಿಲ್ಲ. ವಿಶ್ವಾಮಿತ್ರನು ಆತನಿಗೆ ಎರಡು ಗಾಥೆಗಳನ್ನು ಹೇಳಿಕೊಟ್ಟು ಅವನ ಜೀವವನ್ನು ಉಳಿಸಿದನು. ಇಂದ್ರನು ಈತನ ತಪೋಭಂಗ ಮಾಡಲೆಂದು ರಂಭೆಯನ್ನು ಕಳಿಸಿದ್ದನು. ಇವನು ಆಕೆಗೆ ಶಾಪವಿತ್ತನು.

ರಾಮಲಕ್ಷ್ಮಣರ ಪರಾಕ್ರಮವನ್ನು ಮೆಚ್ಚಿಕೊಂಡು ವಿಶ್ವಾಮಿತ್ರನು ಬಲಾ ಹಾಗೂ ಅತಿಬಲಾ ಎಂಬ ವಿದ್ಯೆಗಳನ್ನೂ, ಬಲಂಪ್ರಭಾವಿಯಾದ ಹಲವಾರು ಅಸ್ತ್ರಗಳನ್ನೂ ಅವರಿಗೆ ಕೊಟ್ಟನು. ರಾಮಲಕ್ಷ್ಮಣ ಮೊದಲಾದವರ ಮದುವೆಗಳನ್ನು ಗೊತ್ತುಮಾಡು ವಲ್ಲಿ ಈತನ ಪಾಲು ದೊಡ್ಡದು.

ತಾಟಕಾವನದ ಬಳಿ ವಿಶ್ವಾಮಿತ್ರನ ಆಶ್ರಮವಿತ್ತು. ಅದರ ಹೆಸರು ಸಿದ್ಧಾಶ್ರಮ. ಈತನಿಗೆ ನೂರು ಜನ ಮಕ್ಕಳು. ಮಧುಚ್ಛಂದ ನಡುವಿನವನು. ಋಗ್ವೇದದ ಮೂರನೆಯ ಮಂಡಲವನ್ನು ಈತ ಹಾಗೂ ಈತನ ಕುಲದವರೇ ಬರೆದಿದ್ದಾರೆ. ಅದನ್ನು ಕೌಶಿಕ ಎಂಬ ಹೆಸರಿನಿಂದ ಗುರುತಿಸಲಾಗುತ್ತದೆ.

**ವಿಶ್ವಾಮಿತ್ರನ ಗಂಡುಮಕ್ಕಳು :** ಇವರ ಸಂಖ್ಯೆ ಬೇರೆ ಬೇರೆ ಗ್ರಂಥ ಗಳಲ್ಲಿ ಬೇರೆ ಬೇರೆ ಆಗಿದೆ. ವಿಶ್ವಾಮಿತ್ರನಿಗೆ ೧೦೧ ಮಕ್ಕಳು. ಇವರಲ್ಲಿ ಮಧುಚ್ಛಂದ ಈತ ನಡುವಿನವನು. ವಿಶ್ವಾಮಿತ್ರನು ಶುನಃಶೇಪನನ್ನು ಹರಿಶ್ಚಂದ್ರನ ಯಜ್ಞದಿಂದ ಬಿಡುಗಡೆಗೊಳಿಸಿದನು. ಅಲ್ಲದೆ ಅವನಿಗೆ 'ದೇವರಾತ'ನೆಂದು ಹೆಸರಿಟ್ಟನು. ಶುನಃಶೇಪ ನನ್ನು ಹಿರಿತನದಿಂದ ಗೌರವಿಸಿರೆಂದು ವಿಶ್ವಾಮಿತ್ರನು ತನ್ನ ಮಕ್ಕಳಿಗೆ ಹೇಳಿದನು. ಅವರಲ್ಲಿ ಐವತ್ತು ಜನ ಒಪ್ಪಲಿಲ್ಲ. ಮ್ಲೇಂಛರಾಗಿರೆಂದು ಅವರನ್ನು ಶಪಿಸಿದನು. ಕಿರಿಯ ಐವತ್ತು ಜನ ಮಕ್ಕಳು ಆತನನ್ನು ಗೌರವದಿಂದ ಕಾಣಲು ಒಪ್ಪಿದರು. ವಿಶ್ವಾಮಿತ್ರನು ಅವರನ್ನು ಹರಸಿದನು. ಹಿರಿಯ ಮಕ್ಕಳ ಗೋತ್ರ ವಿಶ್ವಾಮಿತ್ರ ಎಂದೂ ಕಿರಿಯರದು ಕುಶಿಕ ಎಂದೂ ಗುರುತಿಸಲ್ಪಡಹತ್ತಿತು. ಭಾಗವತದಲ್ಲಿ ಇದರ ವಿವರ ಬಂದಿದೆ. ವಿಶ್ವಾಮಿತ್ರನು ತನ್ನ ಮಾತುಮೀರುವ ಮಕ್ಕಳನ್ನು ಅಶ್ವ, ಪುಂಡ್ರ, ಶಬರ, ಪುಲಿಂದ, ಮೂತಿಬರನ್ನಾಗಿ ಮಾಡಿದನೆಂದು ಐತರೇಯ ಬ್ರಾಹ್ಮಣದಲ್ಲಿ ಬಂದಿದೆ.

**ವಿಶ್ವಾವಸು :** ಕಶ್ಯಪ ಹಾಗೂ ಪ್ರಾಧಾರ ಮಗ. ಗಂಧರ್ವರ ದೊರೆ. ಅರ್ಜುನನ ಹುಟ್ಟಿನ ಕಾಲಕ್ಕೆ ಗಂಧರ್ವರೊಂದಿಗೆ ಈತನೂ ಹಾಜರಿದ್ದನು. ಈತನು ಸೋಮ ಹಾಗೂ ಚಾಕ್ಷುಷೀ ವಿದ್ಯೆಗಳನ್ನು ಬಲ್ಲವನು. ಆದರಿಂದಾಗಿ ಚಿತ್ರರಥನನ್ನು ನಿರ್ಮಿಸಿದನು. ಬ್ರಾಹ್ಮಣನೊಬ್ಬನ ಶಾಪದಿಂದಾಗಿ ಈತ ಕಬಂಧನೆಂಬ ರಾಕ್ಷಸನಾಗಿದ್ದನು. ರಾಮಲಕ್ಷ್ಮಣರು ಈತನ ಕೈಗಳನ್ನು ಕಡಿದರು. ಶ್ರೀರಾಮನ ದರ್ಶನದಿಂದಾಗಿ ಈತ ಶಾಪಮುಕ್ತನಾದನು. ಈತ ಇಂದ್ರಸಭೆ, ಕುಬೇರಸಭೆಗಳಲ್ಲಿ ಹಾಜರಿರುತ್ತಿದ್ದನು. ಈತ ದ್ರೌಪದಿಯ ಸ್ವಯಂವರವನ್ನು ಕಾಣಲು ಬಂದಿದ್ದನು. ಈತನಿಂದಾಗಿ ಮೇನಕೆಗೆ

ಪ್ರಮದ್ವರಾ ಎಂಬ ಮಗಳು ಹುಟ್ಟಿದಳು. ಯಾಜ್ಞವಲ್ಕ್ಯನು ಈತನಿಗೆ ಉಪದೇಶವಿತ್ತನು.

**ವೃಷದರ್ಭ:** ಈತನೊಬ್ಬ ಶೀಲವಂತನೂ, ನೀತಿವಂತನೂ ಆದ ದೊರೆಯಾಗಿದ್ದನು. ಒಂದು ಸಲ ಒಬ್ಬ ಬ್ರಾಹ್ಮಣನು ಸೇದುಕನ ಬಳಿ ದಕ್ಷಿಣೆಯನ್ನು ಕೇಳಲು ಬಂದನು. ಅವನು ಬ್ರಾಹ್ಮಣನನ್ನು ತನ್ನ ನೆಚ್ಚಿನ ಗೆಳೆಯ ವೃಷದರ್ಭನಲ್ಲಿಗೆ ಕಳುಹಿಸಿದನು. ಬ್ರಾಹ್ಮಣನಿಗೆ ಒಂದು ಸಾವಿರ ಕುದುರೆಗಳ ದಕ್ಷಿಣೆ ಬೇಕಿತ್ತು. ವೃಷದರ್ಭ ಚಿನ್ನ, ಬೆಳ್ಳಿಗಳನ್ನು ಮಾತ್ರ ದಾನವಾಗಿ ಕೊಡುತ್ತಿದ್ದನು. ಇನ್ನೇನನ್ನೂ ಕೊಡುತ್ತಿರಲಿಲ್ಲ. ಇದನ್ನು ತಿಳಿದೂ ಸೇದುಕ ಆ ಬ್ರಾಹ್ಮಣನನ್ನು ವೃಷದರ್ಭನಲ್ಲಿಗೆ ಕಳಿಸಿದ್ದನು. ಇದರಿಂದಾದ ಪರಿಣಾಮವೇದರೆ ವೃಷದರ್ಭನು ಆ ಬ್ರಾಹ್ಮಣನನ್ನು ಹಿಡಿದು ಚೆನ್ನಾಗಿ ಥಳಿಸಿದನು. ಬ್ರಾಹ್ಮಣ ತಾನು ನಿರಪರಾಧಿಯೆಂದು ಪರಿಪರಿಯಾಗಿ ಹೇಳಿದನು. ವೃಷದರ್ಭನು ಆತನಿಗೆ ತನ್ನ ಒಂದು ದಿನದ ಆದಾಯವನ್ನು ದಾನವಾಗಿ ಕೊಟ್ಟನು. ಈ ದುಡ್ಡು ಒಂದು ಸಾವಿರ ಕುದುರೆಗಳ ಬೆಲೆಗಿಂತ ಎಷ್ಟೋ ಪಟ್ಟು ಹೆಚ್ಚಾಗಿತ್ತು.

**ವೃಷಾದರ್ಭಿ:** ಶಿಬಿರಾಜನ ಮಗ. ಸಪ್ತರ್ಷಿಗಳು ಪೃಥ್ವಿಯನ್ನು ಪ್ರದಕ್ಷಿಣೆ ಮಾಡಿ ಬಂದಾಗ ಈತನು ಅವರಿಗೆ ತನ್ನ ಮಗನನ್ನು ದಕ್ಷಿಣೆಯಾಗಿ ಕೊಟ್ಟನು. ಇದನ್ನು ಕುರಿತು ಒಂದು ವಿಚಿತ್ರವಾದ ಕಥೆಯಿದೆ. ಆ ಮಗು ಸತ್ತುಹೋಗಿತ್ತು. ಬರ ಬಿದ್ದ ಕಾರಣ ಸಪ್ತರ್ಷಿಗಳು ಆ ಹೆಣವನ್ನೇ ಬೇಯಿಸುತ್ತಿದರು. ವೃಷದರ್ಭ ಅವರನ್ನು ತಡೆಯಲು ಯತ್ನಿಸಿದನು ಆದರೆ ಯಶ ಸಿಗಲಿಲ್ಲ. ಆಗ ಅವನೊಬ್ಬ ಕೃತ್ಯಾಳನ್ನು ಹುಟ್ಟಿಸಿದನು. ಆ ಹೆಣ್ಣುದೆವ್ವಕ್ಕೆ ಸಪ್ತರ್ಷಿಗಳನ್ನು ಕೊಲ್ಲಲು ಹೇಳಿದನು. ಅವಳಿಂದ ಈ ಕೆಲಸ ಆಗಲಿಲ್ಲ. ಬದಲು ಸಪ್ತರ್ಷಿಗಳ ಬಳಿಯಿದ್ದ ಶುನಃಶೇಪನು ಅವಳನ್ನೇ ಕೊಂದು ನಾಶಪಡಿಸಿದನು. ಈತನ ಹೆಸರು ಬೇರೆ ಬೇರೆ ಗ್ರಂಥಗಳಲ್ಲಿ ಭಿನ್ನಭಿನ್ನವಾಗಿದೆ. ಮಹಾಭಾರತದಲ್ಲಿ ವೃಷದರ್ಭ ಹಾಗೂ ವೃಷದರ್ಭಿ ಎಂಬ ಹೆಸರುಗಳಿವೆ. ಭಾಗವತದಲ್ಲಿ ವೃಷಾದರ್ಭನೆಂದೂ, ಮತ್ಸ್ಯಪುರಾಣದಲ್ಲಿ ಪೃಥುದರ್ಭನೆಂದೂ ಹೆಸರುಗಳಿವೆ.

**ವೃಷಸೇನ:** ಕರ್ಣನ ಮಗ. ದುರ್ಯೋಧನನ ಸೇನೆಯ ಒಬ್ಬ ಶ್ರೇಷ್ಠನಾದ ರಥಿ. ಈತನು ಶತಾನಿಕ ಮೊದಲಾದ ದ್ರೌಪದಿಯ ಮಕ್ಕಳೊಡನೆ ಯುದ್ಧಮಾಡಿದನು, ಅಭಿಮನ್ಯುವು ಈತನನ್ನು ಸೋಲಿಸಿದನು. ಈತನ ಧ್ವಜವು ಸುವರ್ಣಮಯವಾದುದೂ ರತ್ನಖಚಿತವಾದುದೂ ಆಗಿತ್ತು. ಅದರ ಮೇಲೆ ನವಿಲಿನ ಲಾಂಛನವಿತ್ತು. ಈತ ದ್ರುಪದನನ್ನು ಸೋಲಿಸಿದನು. ಸಾತ್ಯಕಿಗೆ ಈತ ಸೋತನು. ನಕುಲನೊಂದಿಗೆ ಘನಘೋರವಾದ ಕಾಳಗ ನಡೆಯಿತು. ಆದರೆ ಈತನಿಗೆ ಗೆಲವು ಸಿಗಲಿಲ್ಲ. ದ್ರೋಣಾಚಾರ್ಯನ ಸಾವಿನ ತರುವಾಯ ಈತ ರಣಾಂಗಣದಿಂದ ಓಟಕಿತ್ತನು. ಅರ್ಜುನನೊಡನೆ ಹೋರಾಡುತ್ತ ಮರಣಹೊಂದಿದನು.

**ವೃಷ್ಣಿ ವೀರರು:** ಯಾದವರಲ್ಲಿಯ ಒಂದು ಜಾತಿಯ ಹೆಸರು. ಅದರ ವೀರರೆಲ್ಲ ವೃಷ್ಣಿವೀರರು. ಇವರು ಅಂಧಕ ಹಾಗೂ ಭೋಜ ದೊರೆಯೊಡನೆ ನಂಟಿದ್ದವರು. ಇವರು ದ್ರೌಪದಿಯ ಸ್ವಯಂವರಕ್ಕೆ ಬಂದಿದ್ದ ಉಲ್ಲೇಖ ಇದೆ. ಶ್ರೀಕೃಷ್ಣ ಇದೇ

ಕುಲದವನು. ಗಾಂಧಾರಿಯು ಶ್ರೀಕೃಷ್ಣನಿಗಿತ್ತ ಶಾಪದಲ್ಲಿ (ನೋಡಿ: ಶಾಪ, ಕ್ರ. ೯೮. ಸ್ತ್ರೀಪರ್ವ/೨೫)—

ತವಾಪ್ಯೇವಂ ಹತಸುತಾ ನಿಹತಜ್ಞಾತಿಬಾಂಧವಾಃ ।
ಸ್ತ್ರಿಯಃ ಪರಿಪತಿಷ್ಯಂತಿ ಯಥೈತಾ ಭರತಸ್ತ್ರಿಯಃ ॥ ೪೬ ॥

—ಉಲ್ಲೇಖಿಸಲಾದುದು ವೃಷ್ಣಿವಂಶವೇ. ಹೀಗಾಗಿ ಈ ಶಾಪ ಅವರನ್ನೂ ತಟ್ಟಿತು. ಯಾದವರು ಸಾಂಬನಿಗೆ ಹೆಣ್ಣುವೇಷ ತೊಡಿಸಿ ಋಷಿಗಳನ್ನು ಕಿಚೋದ್ಯಕ್ಕೆ ಈಡುಮಾಡಿದರು. ಅದರಿಂದಾಗಿ ಅವರು ಋಷಿಗಳ ಶಾಪಕ್ಕೆ ಈಡಾದರು. (ಶಾಪ, ಕ್ರ. ೫, ಬ್ರಾಹ್ಮಣ >ವೃಷ್ಣಿವೀರರು). ಮಹಾಭಾರತದಲ್ಲಿ ಶ್ರೀಕೃಷ್ಣನನ್ನು ವೃಷ್ಣಿಕುಲಶ್ರೇಷ್ಠ, ವೃಷ್ಣಿಪತಿ, ವೃಷ್ಣಿಪ್ರವರ, ವೃಷ್ಣಿವೀರ, ವೃಷ್ಣಿನಂದನ ಮುಂತಾದ ಹೆಸರುಗಳಿಂದ ಸಂಬೋಧಿಸಲಾಗಿದೆ.

**ವೇದ (ಋಷಿ):** ಧೌಮ್ಯ ಋಷಿಯ ಒಬ್ಬ ಶಿಷ್ಯನು. ಜನಮೇಜಯನ ಉಪಾಧ್ಯಾಯ. ಈತನ ಗುರುನಿಷ್ಠೆ ಅನನ್ಯಸಾಧಾರಣವಾದುದು. ಈತನಿಗೆ ಗುರುವಿನ ಆಶೀರ್ವಾದವಿತ್ತು. ಒಂದು ಸಲ ಈತನು ಪಯಣಹೋಗುವ ಮುನ್ನ ಆಶ್ರಮದ ವ್ಯವಸ್ಥೆಯನ್ನು ತನ್ನ ಶಿಷ್ಯ ಉತ್ತಂಕನಿಗೆ ಒಪ್ಪಿಸಿದನು. ಅವನು ಅದನ್ನೆಲ್ಲ ಚೊಕ್ಕಟವಾಗಿ ನೋಡಿಕೊಂಡನು. ಆದರಿಂದ ಈತನಿಗೆ ಸಂತೋಷವಾಯಿತು. ಹೀಗಾಗಿ ಅವನಿಗೆ ಗೃಹಸ್ಥಧರ್ಮವನ್ನು ಪಡೆಯಲು ಒಪ್ಪಿಗೆಯನ್ನಿತ್ತನು. ಗುರುಪತ್ನಿಯು ಕೇಳಿದುದನ್ನು ಗುರುದಕ್ಷಿಣೆಯಾಗಿ ಕೊಡೆಂದು ಹೇಳಿದನು. ಉತ್ತಂಕನು ಅವಳ ಕೇಳಿಕೆಯ ಮೇರೆಗೆ ಬಲು ಕಷ್ಟದಿಂದ ಪೌಷ್ಯನ ಮಡದಿಯ ರತ್ನಕುಂಡಲಗಳನ್ನು ಗುರುದಕ್ಷಿಣೆಯಾಗಿ ಇವಳಿಗೆ ತಂದೊಪ್ಪಿಸಿದನು.

ವೇದನು ತನ್ನ ಗುರುಗೃಹದಲ್ಲಿ ತುಂಬ ಕಷ್ಟಪಟ್ಟಿದ್ದನು. ಈತನು ತನ್ನ ಶಿಷ್ಯರಿಗೆ ಮಾತ್ರ ಅಂತಹ ಕಷ್ಟಗಳಾಗದ ಹಾಗೆ ನೋಡಿಕೊಂಡನು. ಈ ಬಗೆಗೆ ಆತ ತುಂಬ ಜಾಗ್ರತೆ ವಹಿಸುತ್ತಿದ್ದನು.

**ವೇದಮುನಿಗಳ ಮಡದಿ:** ಇವಳ ಹೆಸರಿನ ಉಲ್ಲೇಖ ಕಂಡುಬಾರದು. ವೇದಮುನಿಗಳು ಪಯಣಹೋಗುವಾಗ ಮನೆಯ ಆಡಳಿತೆಯನ್ನೆಲ್ಲ ತಮ್ಮ ಪ್ರಿಯ ಶಿಷ್ಯ ಉತ್ತಂಕನಿಗೆ ಒಪ್ಪಿಸಿದ್ದರು. ಅವರಿಲ್ಲದ ಕಾಲಕ್ಕೆ ಅವರ ಮಡದಿ ಮುಟ್ಟಾದಳು. ಮನೆಯ ಹೆಂಗಳೆಯರೆಲ್ಲ ಉತ್ತಂಕನಿಗೆ ಅವಳ ಋತುಕಾಲವನ್ನು ಸಫಲಗೊಳಿಸುವಂತೆ ಹೇಳಿದರು. ಅವನು ಅದನ್ನು ನಿರಾಕರಿಸಿಬಿಟ್ಟನು. ಮನೆಯ ಆಡಳಿತೆಯೆಂದರೆ ಇಂಥ ಕೃತ್ಯವಲ್ಲ ಎಂದು ಅವನು ಅವರೆಲ್ಲರಿಗೆ ಖಡಾಖಂಡಿತವಾಗಿ ಹೇಳಿದನು. ಈತನ ಈ ನಡತೆ ಗುರುವಿಗೆ ತುಂಬ ಹಿಡಿಸಿತು.

**ವೈಶಂಪಾಯನ:** ವ್ಯಾಸನ ಶಿಷ್ಯ. ಇವನು ಜನಮೇಜಯನಿಗೆ ಭಾರತವನ್ನು ಹೇಳಿದನು. ಸೌತಿಯು ಅದನ್ನು ಆಲಿಸಿದನು. ಅದರಲ್ಲಿ ಹೆಚ್ಚಿನದನ್ನು ಸೇರಿಸಿ ಅವನು ಅದನ್ನು ಮಹಾಭಾರತವನ್ನಾಗಿ ಮಾಡಿದನು. ವ್ಯಾಸನು ವೇದಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ತನ್ನ ನಾಲ್ಕು ಜನ ಶಿಷ್ಯರಿಗೆ ಕೊಟ್ಟುಬಿಟ್ಟನು. ಯಜುರ್ವೇದವು

ವೈಶಂಪಾಯನನಿಗೆ ದೊರಕಿತು. ಅವನು ಅದನ್ನು ೮೬ ಸಂಹಿತೆಗಳನ್ನಾಗಿ ಮಾಡಿ ತನ್ನ ೮೬ ಜನ ಶಿಷ್ಯರಿಗೆ ಕೊಟ್ಟನು. ಯಾಜ್ಞವಲ್ಕ್ಯನು ವೈಶಂಪಾಯನನ ಸೋದರಳಿಯನೂ ಅಹುದು, ಆತನ ಶಿಷ್ಯನೂ ಅಹುದು. ಇವರಿಬ್ಬರಲ್ಲಿ ಮತಭಿನ್ನತೆ ಉಂಟಾಗಿ ಅವನು ವೈಶಂಪಾಯನನಿತ್ತ ಸಂಹಿತೆಯನ್ನು ಬಿಟ್ಟುಬಿಟ್ಟನು. ಉಳಿದ ಶಿಷ್ಯರೆಲ್ಲ ಕೂಡಿ ತಿತ್ತಿರಿ ಹಕ್ಕಿಗಳ ರೂಪದಲ್ಲಿ ಈ ಸಂಹಿತೆಯನ್ನು ಜತನ ಮಾಡಿದರು. ಹೀಗಾಗಿ ಈ ಸಂಹಿತೆ ತೈತ್ತಿರೀಯ ಸಂಹಿತೆಯೆಂದು ಹೆಸರಾಗಿದೆ. ಮೇರುಪರ್ವತದ ಮೇಲೆ ಋಷಿಗಣಗಳ ಸಭೆಯನ್ನು ಯೋಜಿಸಲಾಗಿತ್ತು. ವೈಶಂಪಾಯನ ಅದಕ್ಕ ಹಾಜರಿರಲಿಲ್ಲ. ಹೀಗಾಗಿ ಈತನ ಪಾದಸ್ಪರ್ಶದಿಂದಾಗಿ ಸೋದರಳಿಯನ ಕೊಲೆಯಾಯಿತು. ಇದು ಬಾಲಹತ್ಯೆ ಹಾಗೂ ಬ್ರಹ್ಮಹತ್ಯೆಯಾಗಿತ್ತು. ಜನಮೇಜಯನು ವಾಜಸನೇಯನಿಂದ ಅಶ್ವಮೇಧ ಯಜ್ಞವನ್ನು ಮಾಡಿಸಿದ್ದರಿಂದ ವೈಶಂಪಾಯನನು ಅವನಿಗೆ ಶಾಪವಿತ್ತನು. ಈತ ಪುರಾಣಕಥೆಗಳನ್ನು ಇಂಪಾಗಿ ಹೇಳುವವನೆಂದು ಹೆಸರಾಗಿದ್ದನು.

**ಬೇಡ :** ಬೇಟೆಯಾಡಿ ಬದುಕುವ ಒಂದು ಬಣ. ದಮಯಂತಿಯು ನಿರ್ಜನವಾದ ಕಾಡಿನಲ್ಲಿ ಅಲೆದಾಡುವಾಗ ಒಂದು ಹೆಬ್ಬಾವು ಅವಳನ್ನು ಸುತ್ತಿ ತನ್ನ ತೆಕ್ಕೆಗೆ ತೆಗೆದು ಕೊಂಡಿತು. ಅದನ್ನು ಕಂಡು ಬೇಡನೊಬ್ಬನು ಅವಳನ್ನು ಈ ಪ್ರಾಣಸಂಕಟದಿಂದ ಪಾರು ಮಾಡಿದನು. ಆಮೇಲೆ ಅವಳ ಅಂದಕ್ಕೆ ಮರುಳಾಗಿ ಅವಳ ಮೇಲೆ ಅತ್ಯಾಚಾರವನ್ನು ಕೈಕೊಳ್ಳಲು ಹವಣಿಸಿದನು. ಅವಳ ಶಾಪಕ್ಕೀಡಾಗಿ ಸತ್ತುಬಿದ್ದನು.

**(ದ್ವೈಪಾಯನ) ವ್ಯಾಸ :** ಪರಾಶರ, ಸತ್ಯವತಿಯರ ಮಗ. ಯಮುನಾ ದ್ವೀಪದಲ್ಲಿ ಈತನ ಜನ್ಮವಾಯಿತು, ಹೀಗಾಗಿ ದ್ವೈಪಾಯನ. ಬದರೀವನದಲ್ಲಿ ಜನ್ಮ, ಹೀಗಾಗಿ ಬಾದರಾಯಣ. ವೇದಗಳನ್ನು ವಿಂಗಡಿಸಿದವನು. ಹೀಗಾಗಿ ವೇದವ್ಯಾಸ. ಕಪ್ಪು ಬಣ್ಣದವ, ಹೀಗಾಗಿ ಕೃಷ್ಣದ್ವೈಪಾಯನ. ಇಂಥ ಹಲವಾರು ಹೆಸರುಗಳಿಂದ ಪ್ರಸಿದ್ಧನು. ಇವನು 'ಜಯ' ಎಂಬ ಚರಿತ್ರೆಯನ್ನು ಬರೆದನು. ವೈಶಂಪಾಯನನು ಇದನ್ನೇ ಜನಮೇಜಯನಿಗೆ 'ಭಾರತ' ಎಂಬುದಾಗಿ ಹೇಳಿದನು. ಸೌತಿಯು ಅದನ್ನೇ ಹೆಚ್ಚಿಸಿ 'ಮಹಾಭಾರತ'ವನ್ನಾಗಿ ಮಾಡಿದನು. ಈತನು ಗಣೇಶನನ್ನು ಒಲಿಸಿಕೊಂಡು ತನ್ನ ಬರವಣಿಗೆಯವನನ್ನಾಗಿ ಮಾಡಿಕೊಂಡನು. ಈತ ಪರಮಜ್ಞಾನಿ, ಉಗ್ರತಪಸ್ವಿ. ತನ್ನ ತಾಯಿ ಸತ್ಯವತಿಯ ಇಚ್ಛೆಯಂತೆ ಈತನು ವಿಚಿತ್ರವೀರ್ಯನ ವಿಧವೆಯರೊಂದಿಗೆ ನಿಯೋಗವನ್ನು ಮಾಡಿದನು. ಈತನಿಂದ ಧೃತರಾಷ್ಟ್ರ, ಪಾಂಡು ಹಾಗೂ ದಾಸಿಯ ಹೊಟ್ಟೆಯಿಂದ ವಿದುರರು ಹುಟ್ಟಿದರು. ಇವನು ತನ್ನ ಶಿಷ್ಯಂದಿರಾದ ಪೈಲ, ವೈಶಂಪಾಯನ, ಜೈಮಿನಿ, ಸುಮಂತರಿಗೆ ವೇದಗಳನ್ನು ನಾಲ್ಕು ಭಾಗಗಳನ್ನಾಗಿ ವಿಂಗಡಿಸಿ ಕೊಟ್ಟನು. ಈತ ಗಾಂಧಾರಿಗೆ ನೂರು ಜನ ಗಂಡುಮಕ್ಕಳಾಗಲೆಂದು ವರವಿತ್ತಿದ್ದನು. ಗಾಂಧಾರಿಯ ಬಯಕೆಯ ಮೇರೆಗೆ ಅವಳಿಗೊಬ್ಬಳು ಮಗಳು ಕೂಡ ಹುಟ್ಟಿದಳು. ದ್ರೌಪದಿಯ ಮದುವೆಯ ಕಾಲಕ್ಕೆ ದ್ರುಪದ ಹಾಗೂ ಧೃಷ್ಟದ್ಯುಮ್ನರು ಗೊಂದಲ ದಲ್ಲಿ ಸಿಲುಕಿದ್ದರು. ಈತನು ಅವರ ಸಂದೇಹಗಳನ್ನು ಪರಿಹರಿಸಿ ಐವರೂ ಪಾಂಡವ ರೊಡನೆ ಅವಳ ಮದುವೆ ನಡೆಯುವಂತೆ ನೋಡಿಕೊಂಡನು. ಈತನು ಯುಧಿಷ್ಠಿರನ ಯಜ್ಞದ ಕಾಲಕ್ಕೆ ಬ್ರಹ್ಮನ ಕಾರ್ಯವನ್ನು ನೆರವೇರಿಸಿದನು. ಇವನು ಕೌರವ-ಪಾಂಡವರು

ಸಂಕಟಕ್ಕೆ ಸಿಕ್ಕಿಹಾಕಿಕೊಂಡಾಗಲೆಲ್ಲ ತಾನು ಪ್ರಕಟವಾಗಿ ಅವುಗಳನ್ನು ಪರಿಹರಿಸಿದನು, ಅವರಿಗೆ ಉಪದೇಶವಿತ್ತನು. ಗಾಂಧಾರಿಯು ಯುಧಿಷ್ಠಿರನನ್ನು ಶಪಿಸಬೇಕೆಂದುಕೊಂಡಾಗ ಈತನೇ ಅವಳನ್ನು ತಡೆದನು.

ಈತನ ಮಗ ಶುಕದೇವ. ಜಾಬಾಲಿ ಋಷಿಯ ಮಗಳು ವಟಿಕಾ ಈತನ ಮಡದಿ. ಶುಕದೇವನಿಗೆ ಹಲವು ವಿದ್ಯೆಗಳನ್ನು ಹೇಳಿಕೊಟ್ಟನು. ಶುಕನಿಗೆ ಸದೇಹಸ್ವರ್ಗ ಸಿಗುತ್ತಲೇ ವಿರಹದಿಂದಾಗಿ ಈತ ವ್ಯಾಕುಲನಾದನು. ರುದ್ರನು ಈತನನ್ನು ಸಮಾಧಾನಪಡಿಸಿದನು. ಈತನು ಯುಧಿಷ್ಠಿರನಿಗೆ ಅಶ್ವಮೇಧಯಜ್ಞವನ್ನು ಮಾಡುವಂತೆ ಸೂಚಿಸಿದನು. ಹದಿನೆಂಟು ಪುರಾಣಗಳು, ಎಂಟು ವ್ಯಾಕರಣಗಳು, ಭಾಗವತ, ಬ್ರಹ್ಮಸೂತ್ರ ಮೊದಲಾದ ಹಲವಾರು ಗ್ರಂಥಗಳ ಕರ್ತೃ. ಜೈಮಿನಿಯು ಬ್ರಹ್ಮಸೂತ್ರವನ್ನು ಮೊದಲಿಗೆ ಬರೆದನು. ತರುವಾಯ ವ್ಯಾಸನು ಅದರ ಮೇಲೆ ಸಂಸ್ಕಾರವನ್ನು ಮಾಡಿದನೆಂದು ನಂಬಲಾಗಿದೆ.

ವ್ಯಾಸನು ತನ್ನ ತಪಸ್ಸಾಮರ್ಥ್ಯದಿಂದ ಜನಮೇಜಯನಿಗೆ ಅವನ ತಂದೆಯ ದರ್ಶನವನ್ನು ಮಾಡಿಸಿದನು. ಇದೇ ರೀತಿ ಗಾಂಧಾರಿ, ಕುಂತಿ, ಧೃತರಾಷ್ಟ್ರಾದಿಗಳಿಗೆ ಅವರವರ ಮೃತಬಂಧುಬಾಂಧವರ ದರ್ಶನವನ್ನು ಮಾಡಿಸಿದನು.

**ಶಕುನಿ :** ಗಾಂಧಾರ ದೇಶದ ಸುಬಲ ರಾಜನ ಮಗ. ಗಾಂಧಾರಿಯ ಅಣ್ಣ. ಮೋಸದ ಜೂಜಿನಲ್ಲಿ ನೇರಿತವ. ದುರ್ಯೋಧನನಿಗಾಗಿ ಎರಡು ಸಲ ಪಾಂಡವರೊಡನೆ ಜೂಜಾಡಿ ಅವರನ್ನು ಕಾಡಿಗೆ ಅಟ್ಟುವಲ್ಲಿ ಬಹುಮಟ್ಟಿನ ಹೊಣೆಗಾರ. ದುರ್ಯೋಧನನೊಂದಿಗೆ ಯುಧಿಷ್ಠಿರನ ರಾಜಸೂಯ ಯಜ್ಞಕ್ಕೆ ಹೋಗಿದ್ದನು. ಘೋಷಯಾತ್ರೆಯ ಕಾಲಕ್ಕೆ ದುರ್ಯೋಧನನೊಂದಿಗೆ ಈತನೂ ಸೆರೆಸಿಕ್ಕಿದ್ದನು. ಇವನು ನಕುಲ, ಸಹದೇವ, ಅಭಿಮನ್ಯು, ಧೃಷ್ಟದ್ಯುಮ್ನ, ಅರ್ಜುನ, ಇವರೊಂದಿಗೆ ಕಾದಾಡಿದವನು. ಭೀಮನು ಈತನ ಐದು ಜನ ಸೇವಕರನ್ನು ಯಮಸದನಕ್ಕೆ ಅಟ್ಟಿದನು. ಸಹದೇವನು ಇವನನ್ನು ಹಾಗೂ ಇವನ ಮಗ ಉಲೂಕನನ್ನು ಸಹ ಕೊಂದನು.

**ಶಕ್ತಿ :** ವಸಿಷ್ಠ-ಅರುಂಧತಿಯರ ಹಿರಿಯ ಮಗ. ಮಂತ್ರದ್ರಷ್ಟಾರನಾಗಿದ್ದನು. ಪುರಾಣಗಳಲ್ಲಿ ಈತನ ಮಂತ್ರಶಕ್ತಿಯ ಸಾಮರ್ಥ್ಯಗಳ ಉಲ್ಲೇಖಗಳಿವೆ. ಈತನ ಮಡದಿ ಅದೃಶ್ಯಂತಿ. ಈಕೆ ಬಸಿರಾಗಿದ್ದಾಗಲೇ ಈತ ಮಡಿದನು. ಈತನ ಸಾವನ್ನು ಕುರಿತಾದ ಋಗ್ವೇದದ ಕಥೆಯು ಮಹಾಭಾರತದ ಕಥೆಗಿಂತ ಭಿನ್ನವಾಗಿದೆ. ಶಕ್ತಿಯು ಸೌದಾಸನ ಯಜ್ಞದ ಕಾಲಕ್ಕೆ ವಿಶ್ವಾಮಿತ್ರನನ್ನು ಸೋಲಿಸಿದನು. ಹೀಗಾಗಿ ಜಮದಗ್ನಿಯು ವಿಶ್ವಾಮಿತ್ರನಿಗಾಗಿ ಸೂರ್ಯನಿಂದ ಸರ್ಪಸು ವಿದ್ಯೆಯನ್ನು ಪಡೆದನು. ಅದರಿಂದ ವಿಶ್ವಾಮಿತ್ರನ ಸಾಮರ್ಥ್ಯ ಮರಳಿ ಬರುವಂತಾಯಿತು. ವಿಶ್ವಾಮಿತ್ರನು ಸೌದಾಸನ ನೆರವಿನಿಂದ ಈತನನ್ನು ಸುಟ್ಟುಬಿಟ್ಟನು. ಪುರಾಣದ ಕಥೆಯು ಹೇಳಿಕೆಯಂತೆ ಕಲ್ಮಾಷಪಾದನು ಕೊಂದ ವಸಿಷ್ಠನ ನೂರು ಮಕ್ಕಳಲ್ಲಿ ಈತನೂ ಒಬ್ಬ. ಮಹಾಭಾರತದಲ್ಲಿ ಶಕ್ತಿಯು ಕಲ್ಮಾಷಪಾದನಿಗೆ ನರಮಾಂಸಭಕ್ಷಕನಾಗೆಂದು ಶಾಪವಿತ್ತನು. (ಶಾಪ, ಕ್ರ. ೪೦-ಆದಿ/ ೧೭೬). ಅವನು ಈ ಕೆಲಸವನ್ನು ಶಕ್ತಿಯನ್ನು ತಿನ್ನುವುದರಿಂದಲೇ ಆರಂಭಿಸಿದನೆಂದು ಹೇಳಲಾಗಿದೆ. ಈತನ ಮಗ ಪರಾಶರ.

**ಶಚಿ (ಇಂದ್ರಾಣಿ) :** ಪುಲೋಮನ ಮಗಳು. ಇಂದ್ರನ ಮಡದಿ. ಜಯಂತನ ತಾಯಿ. ಈಕೆಯ ಅಂಶದಿಂದಲೇ ದ್ರೌಪದಿಯ ಜನ್ಮವಾಯಿತೆಂದು ಆದಿಪರ್ವದಲ್ಲಿ ಹೇಳಲಾಗಿದೆ. ಈಕೆ ಬ್ರಹ್ಮದೇವನ ಉಪಾಸಕಿ. ಆತನ ಓಲಗದಲ್ಲಿರುತ್ತಿದ್ದಳು. ನಹುಷನಿಗೆ ಹೆದರಿ ಬೃಹಸ್ಪತಿಯನ್ನು ಮೊರೆಹೊಕ್ಕಳು. ನಹುಷನನ್ನು ಗಂಡನನ್ನಾಗಿ ಸ್ವೀಕರಿಸಲು ಒಪ್ಪಲಿಲ್ಲ. ತನ್ನ ಚಾತುರ್ಯದಿಂದ ನಹುಷನನ್ನು ಕೇಳಿ ಕಾಲಾವಧಿಯನ್ನು ಪಡೆದಳು. ಋಷಿಗಳು ಹೊತ್ತುತಂದ ಪಲ್ಲಕ್ಕಿಯಲ್ಲಿ ಕುಳಿತು ಬಂದರೆ ಅವನನ್ನು ಬರಮಾಡಿಕೊಂಡು ತಾನು ಒಪ್ಪಿಕೊಳ್ಳುವುದಾಗಿ ಹೇಳಿಕಳಿಸಿದಳು. ನಹುಷ ಆ ರೀತಿಯಾಗಿ ಹೊರಟನು. ಭೃಗುವಿನ ಶಾಪ ತಟ್ಟಿ ಹಾವಾಗಿ ಭೂಮಿಗೆ ಬಂದು ಬಿದ್ದನು. ಹೀಗಾಗಿ ಇವಳ ಮೇಲೆ ಬರಬಹುದಾದ ಸಂಕಟ ತಪ್ಪಿತು. ಇವಳನ್ನು ಸಂತೋಷಪಡಿಸಲೆಂದು ಇಂದ್ರನು ಕರ್ಣನ ಕುಂಡಲಗಳನ್ನು ಕೇಳಿದನು. ಈಕೆಯ ಹೆಸರಿನ ಒಂದು ಸೂಕ್ತವಿದೆ. ಅದರಲ್ಲಿ ಸವತಿಯ ನಾಶದ ಬಗೆಗೆ ಪ್ರಾರ್ಥನೆ ಇದೆ. ಇವಳು ಸೂರ್ಯನೊಂದಿಗೆ ಸಂಭಾಷಣೆಯನ್ನು ನಡೆಯಿಸಿದ ಉಲ್ಲೇಖ ಅನುಶಾಸನಪರ್ವದಲ್ಲಿದೆ.

**ಶಂತನು (ಶಾಂತನು) :** ಪ್ರತೀಪ ಹಾಗೂ ಸುನಂದೆಯರ ಮಗ. ಹಿಂದಿನ ಜನ್ಮದ ಮಹಾಭಿಷ. ಬ್ರಹ್ಮದೇವನ ಶಾಪದಿಂದಾಗಿ ಮಾನವಜನ್ಮ ಬಂದಿತು. ಈತನ ಸ್ಪರ್ಶದಿಂದ ಮುಪ್ಪಿನವರಿಗೆ ಯೌವನ ಬರುತ್ತಿತ್ತು. ಅದರಿಂದಾಗಿ ಈತನಿಗೆ 'ಶಾಂತನು' ಎಂಬ ಹೆಸರು ಬಂದಿತು. ಗಂಗೆಯು ಪ್ರತೀಪನೊಂದಿಗೆ ಮದುವೆಯಾಗಬಯಸುತ್ತಲೇ ಈತನು ಅವಳನ್ನು ಸೊಸೆಯಾಗಿ ಸ್ವೀಕರಿಸಲು ಒಪ್ಪಿಕೊಂಡನು. ಅವಳೂ ಕೂಡ ಕೆಲವು ಶರತ್ತುಗಳೊಂದಿಗೆ ಪ್ರತೀಪನ ಕೋರಿಕೆಯನ್ನು ಮನ್ನಿಸಿದಳು. ಶಂತನುವು ಇವಳ ಸ್ವರ್ಗೀಯ ಸೌಂದರ್ಯಕ್ಕೆ ಮಾರುಹೋಗಿದ್ದನು. ಈತನು ಅವಳ ಶರತ್ತುಗಳನ್ನೆಲ್ಲ ಒಪ್ಪಿಕೊಂಡನು. ಅವಳನ್ನು ಮಡದಿಯಾಗಿ ಸ್ವೀಕರಿಸಿದನು. ಏನಿದ್ದರೂ ತನ್ನನ್ನು ವಿರೋಧಿಸಕೂಡದು. ಶರತ್ತುಗಳನ್ನು ಮುರಿದರೆ ತಾನು ಅವನನ್ನು ಬಿಟ್ಟುಹೋಗುವುದಾಗಿ ಹೇಳಿದ್ದಳು. ಅವಳು ಶಂತನುವಿನೊಂದಿಗೆ ಏಕನಿಷ್ಠಳಾಗಿ ಇದ್ದಳು. ಅವನಿಗೆ ತುಂಬ ಸುಖವನ್ನು ನೀಡಿದಳು. ಅಷ್ಟವಸುಗಳಿಗೆ ತಾನಿತ್ತ ಮಾತಿನಂತೆ ಅವಳು ಹುಟ್ಟಿದ ಹಸುಳೆಯನ್ನು ನೀರಿಗೆ ಬಿಟ್ಟುಬಿಡುತ್ತಿದ್ದಳು. ಹೀಗೆ ಏಳು ಮಕ್ಕಳನ್ನು ಗಂಗೆಗೆ ಅರ್ಪಿಸಿದಳು. ಶಂತನು ಈ ಕ್ರೂರಕೃತ್ಯವನ್ನು ಸಹಿಸದಾದನು. ಆದರೆ ಅಸಹಾಯನಾಗಿದ್ದನು. ಎಂಟನೆಯ ಹೆರಿಗೆಯ ಕಾಲಕ್ಕೆ ಆತ ತನ್ನ ವಿರೋಧವನ್ನು ಪ್ರಕಟಿಸುತ್ತಲೇ ಗಂಗೆ ಆತನನ್ನು ತೊರೆದು ಹೋಗಿಬಿಟ್ಟಳು. ಈ ಮಗುವೇ ಭೀಷ್ಮ. ಶಂತನುವಿನ ಕಾಮಲಾಲಸೆ ಅತೃಪ್ತವಾಗಿತ್ತು. ಆತ ಸತ್ಯವತಿಯೊಡನೆ ಮದುವೆಯಾಗಬಯಸುತ್ತಿರುವುದನ್ನು ಭೀಷ್ಮ ಕಂಡುಕೊಂಡನು. ಹೀಗಾಗಿ ಅವನು ರಾಜ್ಯಸುಖ, ಹೆಣ್ಣಿನ ಸುಖಗಳನ್ನು ತೊರೆದು ತನ್ನ ತಂದೆಯ ಬಯಕೆಯನ್ನು ಪೂರ್ತಿಗೊಳಿಸಿದನು. ತಂದೆಯು ಅವನ ಅತುಲನೀಯವಾದ ತ್ಯಾಗವನ್ನು ಕಂಡು ಅವನಿಗೆ ಇಚ್ಛಾಮರಣದ ವರವನ್ನಿತ್ತನು. ಶಂತನುವಿಗೆ ಸತ್ಯವತಿಯಿಂದ ಚಿತ್ರಾಂಗದ ಹಾಗೂ ವಿಚಿತ್ರವೀರ್ಯರೆಂಬ ಇಬ್ಬರು ಗಂಡುಮಕ್ಕಳು.

**ಶರಭ :** ಪ್ರಾಚೀನ ಕಾಲದ ಒಂದು ಬಲು ಕ್ರೂರವಾದ ಕಾಡುಪ್ರಾಣಿ. ಇದಕ್ಕೆ

ಎಂಟು ಕಾಲುಗಳು. ಮೇಲ್ಬದಿಗೆ ಕಣ್ಣುಗಳಿದ್ದವು. ಇದು ಸಿಂಹಕ್ಕಿಂತಲೂ ಭಯಂಕರ, ಅವುಗಳನ್ನು ಕೊಲ್ಲುವ ಪ್ರಾಣಿಯೆಂದು ತಿಳಿಯಲಾಗುತ್ತದೆ.

ನೋಡಿ : ಶಾಪ, ಕ್ರ. ೧೦೨, ಮುನಿ > ಶರಭ.

**ಶರ್ಮಿಷ್ಠೆ :** ದೈತ್ಯರ ದೊರೆಯಾದ ವೃಷಪರ್ವನ ಮಗಳು. ದೈತ್ಯರ ಗುರು ಶುಕ್ರಾಚಾರ್ಯನ ಮಗಳಾದ ದೇವಯಾನಿಯು ದಾಸಿ, ಹಾಗೂ ಅವಳ ಸವತಿ. ಇವಳು ದೇವಯಾನಿಯೊಂದಿಗೆ ಜಗಳವಾಡಿ ದೇವಯಾನಿಯನ್ನು ಒಂದು ಬಾವಿಗೆ ನೂಕಿದ್ದಳು. ಶುಕ್ರಾಚಾರ್ಯ ಕಿಡಿಕಿಡಿಯಾದನು. ತನ್ನ ಪಂಗಡದವರ ಹಿತಕ್ಕಾಗಿಯೆಂದು ಈಕೆ ದೇವ ಯಾನಿಯ ದಾಸ್ಯತ್ವವನ್ನು ಒಪ್ಪಿಕೊಂಡಳು. ಅವಳೊಂದಿಗೆ ಯಯಾತಿಯ ಅರಮನೆಗೆ ಹೋದಳು. ಶುಕ್ರಾಚಾರ್ಯನು ದೇವಯಾನಿಗೆ, 'ಶರ್ಮಿಷ್ಠೆಯನ್ನು ಶಯನದ ಕೆಲಸ ಗಳಿಗಾಗಿ ಎಂದಿಗೂ ಕರೆಯಬೇಡ' ಎಂದು ತಾಕೀತು ಕೊಟ್ಟಿದ್ದನು. ಇಷ್ಟಾಗಿಯೂ ಇವಳಿಗೆ ಯಯಾತಿಯಿಂದ ಮೂರು ಗಂಡುಮಕ್ಕಳಾದವು. ರಾಮಾಯಣದಲ್ಲಿ ಪುರು ಒಬ್ಬನ ಉಲ್ಲೇಖ ಮಾತ್ರ ಇದೆ. ಈಕೆ ಯಯಾತಿಗೆ ಬೇಕಾದವಳಾಗಿದ್ದಳು.

೧

**ಶಲ :** ಮಂಡೂಕರಾಜನ ಮಗಳು ಸುಶೋಭನೆ ಹಾಗೂ ಪರೀಕ್ಷಿತರ ಮಗನು. ಈತ ಒಂದು ಸಲ ಬೇಟೆಗೆ ಹೋದಾಗ ಈತನ ಕುದುರೆಗಳು ತುಂಬ ಬಳಲಿದವು. ಆಗ ಸಾರಥಿಯ ಹೇಳಿಕೆಯಂತೆ ವಾಮದೇವನಿಂದ ಎರಡು ಕುದುರೆಗಳನ್ನು ಪಡೆದನು. ಅವು ಗಳನ್ನು ತಿರುಗಿ ಕೊಡುವುದಾಗಿ ಮಾತುಕೊಟ್ಟಿದ್ದನು. ಆದರೆ ತನ್ನ ಕೆಲಸವಾಗುತ್ತಲೆ ಆತ ಕೇಳಿದರೂ ಈ ಕುದುರೆಗಳನ್ನು ಹಿಂದಕ್ಕೆ ಕೊಡಲಿಲ್ಲ. ಅವು ತನ್ನವೇ ಎಂದು ಸುಳ್ಳು ಹೇಳಹತ್ತಿದನು. ವಾಮದೇವನಿಗೆ ಸಿಟ್ಟು ಬಂದಿತು. ಅವನು ರಾಕ್ಷಸನ ಕೈಯಿಂದ ಈತ ನನ್ನು ಕೊಲೆ ಮಾಡಿಸಿದನು ಈತನಿಗೆ ದಲ ಹಾಗೂ ಬಲರೆಂಬ ಸೋದರರಿದ್ದರು.

೨

ಸೋಮದತ್ತನ ಮಗನು. ಭೂರಿಶ್ರವನ ಸೋದರ. ಈತ ಕೌರವರಲ್ಲಿ ಒಬ್ಬ ಮುಖ್ಯ ನಾದ ಯೋಧ. ಭೀಷ್ಮ, ಜಯದ್ರಥರ ರಕ್ಷಣೆ ಈತನ ಕೆಲಸ. ಈತ ದ್ರೌಪದಿಯ ಸ್ವಯಂವರ ಹಾಗೂ ಯುಧಿಷ್ಠಿರನ ರಾಜಸೂಯ ಯಜ್ಞದ ಕಾಲಕ್ಕೆ ಹಾಜರಿದ್ದನು.

**ಶಲ್ಯ :** ಋತಾಯನನ ಮಗ. ಮದ್ರ ದೇಶದ ದೊರೆ. ಪಾಂಡುವಿನ ಮಡದಿ ಮಾದ್ರಿಯು ಈತನ ಸೋದರಿ. ಪಾಂಡವರಿಗೆ ತೀರ ಹತ್ತಿರದ ನಂಟುಳ್ಳವ. ದುರ್ಯೋಧನನ ಕಾರಸ್ಥಾನಕ್ಕೆ ಬಲಿಯಾಗಿ ಮಹಾಭಾರತ ಯುದ್ಧದಲ್ಲಿ ಕೌರವರ ಬದಿಯಿಂದ ಹೋರಾಡಿದನು. ಒಳ್ಳೆಯ ಅತಿರಥಿ. ಶ್ರೀಕೃಷ್ಣನೊಂದಿಗೆ ಪೈಪೋಟಿಗೆ ಇಳಿದವನು. ತಾನು ಕರ್ಣನ ತೇಜೋಭಂಗ ಮಾಡುವುದಾಗಿ ಯುಧಿಷ್ಠಿರನಿಗೆ ಮಾತು ಕೊಟ್ಟಿದ್ದನು. ಕರ್ಣನ ಸಾರಥಿಯ ಪದವನ್ನು ಸ್ವೀಕರಿಸಿದ ಬಳಿಕ ಅವನನ್ನು ಕೊಂಕು ನುಡಿಗಳಿಂದ ಇರಿದೇ ಇರಿದನು. ಶಲ್ಯನು ವಿರಾಟ ಮತ್ತು ಶ್ರುತಕೀರ್ತಿ ಇವರನ್ನು ಸೋಲಿ

ಸಿದನು. ಭೀಮನೊಡನೆಯ ಕಾಳಗದಲ್ಲಿ ಈತ ಸೋತನು. ಕರ್ಣನ ಸಾವಿನ ತರುವಾಯ ದುರ್ಯೋಧನನು ಅಶ್ವತ್ಥಾಮನ ಹೇಳಿಕೆಯಂತೆ ಈತನನ್ನು ಸೇನಾಪತಿಯಾಗಿ ಮಾಡಿದನು. ಈತ ಗದಾಯುದ್ಧದಲ್ಲಿ ಪಳಗಿದವನು. ಯುಧಿಷ್ಠಿರನೊಂದಿಗೆ ಹೋರಾಡು ವಾಗ ತನ್ನ ಪರಾಕ್ರಮವನ್ನು ಮೆರೆದನು. ಗೆಲವು ಮಾತ್ರ ಸಿಗಲಿಲ್ಲ. ಅಷ್ಟೇ ಅಲ್ಲದೆ ಸೋದರರೊಂದಿಗೆ ಯುಧಿಷ್ಠಿರನ ಕೈಯಿಂದ ಈತನಿಗೆ ಸಾವು ಬಂದಿತು. ಈತ ಅರ್ಧದಿವಸ ಮಾತ್ರ ಸೇನಾಪತಿಯಾಗಿದ್ದನು.

**ಶಾಲ್ವ :** ಕಾಶಿರಾಜನ ಮಗಳು ಅಂಬೆಯು ಶಾಲ್ವನಿಗೆ ಒಲಿದಿದ್ದಳು. ಈತ ಅಂಬಾ, ಅಂಬಿಕಾ, ಅಂಬಾಲಿಕೆಯರ ಸ್ವಯಂವರಕ್ಕೆ ಬಂದಿದ್ದನು. ಭೀಷ್ಮನು ಈ ಮೂವರನ್ನೂ ರಥದಲ್ಲಿ ಕರೆದೊಯ್ದನು. ವಿಚಿತ್ರವೀರ್ಯನಿಗಾಗಿ ಬೇಕಿದ್ದರು. ಶಾಲ್ವ ಭೀಷ್ಮನೊಂದಿಗೆ ಕಾದಾಡಿ ಸೋತನು. ಅಂಬೆ ಶಾಲ್ವನಲ್ಲಿಗೆ ಹೋಗುವೆನೆನ್ನುತ್ತಲೇ ಭೀಷ್ಮನು ಅವಳನ್ನು ಕಳುಹಿಸಿಕೊಟ್ಟನು. ಶಾಲ್ವನು ಇವಳನ್ನು ಸ್ವೀಕರಿಸಲಿಲ್ಲ. ಈತ ಕೌರವರ ಬದಿಯಿಂದ ಹೋರಾಡುತ್ತಿರುವಾಗ ಸಾತ್ಯಕಿ ಈತನನ್ನು ಕೊಂದನು.

**ಶಿಖಂಡಿ :** ಹುಟ್ಟಿನಿಂದ ಹೆಣ್ಣು. ಕುಬೇರನ ಕೃಪೆಯಿಂದಾಗಿ ಪುರುಷತ್ವವನ್ನು ಪಡೆದಳು. ಪಾಂಚಾಲರಾಜ ದ್ರುಪದನ ಮಗ. ಭೀಷ್ಮನನ್ನು ಕೊಲ್ಲಲೆಂದು ಅಂಬೆಯು ಉಗ್ರವಾದ ತಪಸ್ಸನ್ನು ಗೈದಳು. ಶಂಕರನ ವರದಿಂದಾಗಿ ಶಿಖಂಡಿನಿ ಎಂದು ಹುಟ್ಟಿ ಬಂದಳು. ಇವಳು ಕನ್ಯೆಯಾಗಿದ್ದರೂ ಚಿಕ್ಕಂದಿನಿಂದಲೇ ಇವಳನ್ನು ಗಂಡಿನಂತೆ ಬೆಳೆಯಿಸ ಲಾಯಿತು. ಅಷ್ಟೇ ಅಲ್ಲದೆ ಹಿರಣ್ಯವರ್ಮನ ಮಗಳೊಂದಿಗೆ ಈಕೆಯ ಮದುವೆಯೂ ಆಯಿತು. ಸ್ಥೂಣಾಕರ್ಣ ಯಕ್ಷನು ಕೆಲವು ಸಮಯಕ್ಕಾಗಿ ಇವಳಿಂದ ಹೆಣ್ಣುತನವನ್ನು ಪಡೆದು ಇವಳಿಗೆ ತನ್ನ ಗಂಡುತನವನ್ನಿತ್ತಿದ್ದನು. ಕುಬೇರನಿಗೆ ಸ್ಥೂಣಾಕರ್ಣನ ಈ ನಡತೆ ಎಳ್ಳಷ್ಟೂ ಹಿಡಿಸಲಿಲ್ಲ. ಹೀಗಾಗಿ ಕಾಯಂ ಆಗಿ ಹೆಣ್ಣಾಗಿಯೇ ಇರು ಎಂದು ಅವನಿಗೆ ಶಾಪವಿತ್ತನು. ಆದರಿಂದಾಗಿ ಶಿಖಂಡಿಯ ಗಂಡುತನ ಕೊನೆಯವರೆಗೂ ಉಳಿದುಬಿಟ್ಟಿತು. ದ್ರೋಣನು ಈತನಿಗೆ ಬಿಲ್ಲುವಿದ್ಯೆಯನ್ನು ಕಲಿಸಿದನು. ಈತ ಪಾಂಡವರ ಒಂದು ಅಕ್ಷೋಹಿಣಿ ಸೈನ್ಯದ ಮುಖ್ಯಸ್ಥನಾಗಿದ್ದನು. ಹೆಣ್ಣು ಇಲ್ಲವೆ ಮೊದಲಲ್ಲಿ ಹೆಣ್ಣಿದ್ದ ವ್ಯಕ್ತಿ ಯೊಡನೆ ತಾನು ಕಾದಾಡಲಾರೆನೆಂದು ಭೀಷ್ಮ ಪಣತೊಟ್ಟಿದ್ದನು. ಹೀಗಾಗಿ ಅರ್ಜುನನು ಶಿಖಂಡಿಯನ್ನು ಮುಂದೆ ಮಾಡಿ ಭೀಷ್ಮನನ್ನು ಕೊಲ್ಲಲು ಸಾಧ್ಯವಾಯಿತು.

ಷಣ್ಮುಖನು ಅಂಬೆಗೆ ಒಂದು ಮಾಲೆಯನ್ನಿತ್ತಿದ್ದನು. ಅದನ್ನು ಕೊರಳಲ್ಲಿ ಧರಿಸು ವವರು ಭೀಷ್ಮನನ್ನು ಕೊಲ್ಲುವರೆಂದು ನುಡಿದಿದ್ದನು. ಅಂಬೆ ಆ ಮಾಲೆಯನ್ನು ದ್ರುಪದನ ಅರಮನೆಯಲ್ಲಿ ಎಸೆದಿದ್ದಳು. ಶಿಖಂಡಿಯು ಅದನ್ನು ತೊಟ್ಟನು. ಹೀಗಾಗಿ ಅವನು ಭೀಷ್ಮನನ್ನು ಕೊಲ್ಲಲು ಸಾಧ್ಯವಾಯಿತೆಂದು ಒಂದು ಕಥೆಯಿದೆ. ಮಹಾಭಾರತ ಯುದ್ಧದ ಹದಿನೆಂಟನೆಯ ದಿನದಂದು ಅಶ್ವತ್ಥಾಮನು ಶಿಖಂಡಿಯನ್ನು ಕೊಂದನು.

**ಶಿಬಿ :** ಉಶೀನರ ಹಾಗೂ ಮಾಧವಿಯರ ಮಗನು. ಬ್ರಹ್ಮಾಂಡ ಹಾಗೂ ವಾಯು ಪುರಾಣಗಳಲ್ಲಿ ತಾಯಿಯ ಹೆಸರು ದೃಷದ್ವತಿ ಎಂದಾಗಿದೆ. ಈತ ಮಂತ್ರದ್ರಷ್ಟಾರ ನಾಗಿದ್ದನು. ಅಗ್ನಿಯು ಈತನನ್ನು ಪರೀಕ್ಷೆಗೆ ಒಡ್ಡಲು ನಿರ್ಧರಿಸಿದನು. ಅವನು ಪಾರಿವಾಳ

ವಾದನು; ಇಂದ್ರನು ಗಿಡುಗನಾದನು. ಗಿಡುಗವು ಪಾರಿವಾಳವನ್ನು ಬೆನ್ನಟ್ಟಿತು. ಪಾರಿವಾಳವು ಶಿಬಿಗೆ ಶರಣುಹೋಯಿತು. ಈತನು ಅದಕ್ಕೆ ರಕ್ಷಣೆಯನ್ನಿತ್ತನು. ಗಿಡುಗವು ಬಂದು 'ಪಾರಿವಾಳ ನನ್ನ ಆಹಾರ. ನನಗೆ ಅದನ್ನಾದರೂ ಕೊಡು, ಇಲ್ಲವಾದರೆ ನಿನ್ನ ಮೈಯಿಂದ ಅಷ್ಟು ತೂಕದ ಮಾಂಸವನ್ನಾದರೂ ಕೊಡು' ಎಂದು ಕೇಳಿತು. ಶಿಬಿಯು ತನ್ನ ದೇಹದಿಂದ ಮಾಂಸವನ್ನು ಕಿತ್ತಿ ಕೊಡಹತ್ತಿದನು. ತನ್ನ ಇಡಿಯ ದೇಹವನ್ನೇ ತೆರೆ ಬೇಕಾಯಿತು. ಆದರೂ ಆ ಪಾರಿವಾಳವನ್ನು ಕಾಪಾಡಿದನು. ಆಮೇಲೆ ಅಗ್ನಿ, ಇಂದ್ರರು ತಮ್ಮ ನಿಜವಾದ ರೂಪದಲ್ಲಿ ಪ್ರಕಟವಾದರು. ಈತನನ್ನು ಕೊಂಡಾಡಿದರು. ಈತನ ಹಿರಿಮೆಯ ಕಥೆಗಳು ಬೇರೆಡೆಗಳಲ್ಲೂ ಕಂಡುಬರುತ್ತವೆ. ಇಂದ್ರನು ಕೆಲಕಾಲ ಇಂದ್ರ ಪದವನ್ನು ಕಾಯಲು ಈತನಿಗೆ ಒಪ್ಪಿಸಿದ್ದನು. ಈತ ಸಂಪನ್ನನು, ಉದಾರಬುದ್ಧಿಯವನು, ಪರಾಕ್ರಮಿಯಲ್ಲದೆ ಉತ್ತಮವಾದ ದೊರೆಯೆನ್ನಿಸಿದ್ದನು. ಯಯಾತಿಗೆ ಸ್ವರ್ಗಪ್ರವೇಶಕ್ಕೆಂದು ಈತನು ಅಂತರಿಕ್ಷದಲ್ಲಿಯ ಪ್ರದೇಶವನ್ನು ಕೊಟ್ಟುಬಿಟ್ಟನು. ಪದ್ಮಪುರಾಣದ ಹೇಳಿಕೆಯ ಮೇರೆಗೆ ಬ್ರಹ್ಮದೇವನ ಯಜ್ಞದ ಪ್ರತಿಷ್ಠಾತೃವಾಗಿದ್ದನು.

**ಶುಕ್ರಾಚಾರ್ಯ :** ಬ್ರಹ್ಮ ಹಾಗೂ ಮತ್ಸ್ಯಪುರಾಣಗಳ ಅಭಿಪ್ರಾಯದಂತೆ ಈತನು ಭೃಗು ಹಾಗೂ ಪುಲೋಮಾರ ಮಗನು. ಬ್ರಹ್ಮಾಂಡಪುರಾಣವು ಭೃಗುವಿನಿಂದ ದಿವ್ಯೆಗೆ ಹುಟ್ಟಿದ ಮಗ ಶುಕ್ರನೇ ಶುಕ್ರಾಚಾರ್ಯನೆಂದು ಹೇಳುತ್ತದೆ. ಈತನ ತಾಯಿ ತಂದೆಗಳ ಹೆಸರುಗಳು ಬೇರೆಬೇರೆಡೆಗಳಲ್ಲಿ ಬೇರೆಬೇರೆಯೇ ಆಗಿವೆ. ಶುಕ್ರಾಚಾರ್ಯ, ಭಾರ್ಗವ, ಉಶನಸ, ಕಾವ್ಯರೆಲ್ಲ ಒಬ್ಬನೇ ವ್ಯಕ್ತಿ. ಹಾಗೆ ನೋಡಿದರೆ ಭಾರ್ಗವವು ಕುಲದ ಹೆಸರು. ಈತ ದಾನವರ ಪುರೋಹಿತನಾಗಿದ್ದನು. ಈತನಿಗೆ ಭೃಗುವಿನಿಂದ ಸಂಜೀವಿನೀವಿದ್ಯೆ ಪ್ರಾಪ್ತವಾಯಿತು. ದೇವ-ದಾನವರ ಯುದ್ಧದಲ್ಲಿ ಇದರ ಲಾಭ ದಾನವರಿಗಾಯಿತು. ದೇವತೆಗಳ ಗುರುವಾದ ಬೃಹಸ್ಪತಿಯ ಮಗ ಕಚನು ಸಂಜೀವಿನೀ ವಿದ್ಯೆಯನ್ನು ಪಡೆಯಲೆಂದು ಶುಕ್ರಾಚಾರ್ಯನ ಬಳಿಗೆ ಬಂದನು. ಈತನ ಶಿಷ್ಯನಾದನು. ಅವನಿಗೆ ವಿದ್ಯೆ ಸಿಕ್ಕಿತು. ಆದರೆ ದೇವಯಾನಿಯ ಶಾಪದಿಂದಾಗಿ ಫಲಕಾರಿಯಾಗಲಿಲ್ಲ. ಬಲಿಯು ವಾಮನನಿಗೆ ಮೂರು ಹೆಜ್ಜೆಗಳಷ್ಟು ನೆಲವನ್ನು ದಾನವಾಗಿ ಕೊಡದಿರಲೆಂದು ಈತನು ಗಿಂಡಿಯ ಬಾಯಲ್ಲಿ ಬಂದು ಮುಂದುಡಿಕೊಂಡು ಕುಳಿತಿದ್ದನು. ಈತನ ಮಗಳು ದೇವಯಾನಿಯು ಯಯಾತಿಯ ಮಡದಿ. ಆತ ತನ್ನ ಮಗಳೊಡನೆ ನಿಷ್ಠೆಯಿಂದ ನಡೆದುಕೊಳ್ಳುತ್ತಿಲ್ಲವೆಂದು ತಿಳಿದುಬರುತ್ತಲೇ ಆತನಿಗೆ ತತ್‌ಕ್ಷಣ ಮುಪ್ಪು ಬರಲೆಂದು ಶಾಪವಿತ್ತನು.

ಶುಕ್ರಾಚಾರ್ಯ ಕೆಲವು ಸೂಕ್ತಗಳ ದ್ರಷ್ಟಾರನೆನ್ನಿಸಿದ್ದನು. ಈತ ಸಾವಿರಾರು ವರ್ಷಗಳ ಕಾಲ ತಪಗೈದು ಶಂಕರನನ್ನು ಒಲಿಸಿಕೊಂಡನು. ಅವನಿಂದ ಪ್ರಜೇಶತ್ವ, ಧನೇಶತ್ವ ಹಾಗೂ ಅಮರ್ತ್ಯತ್ವಗಳನ್ನು ಕೇಳಿ ಪಡೆದನು. ಈತ ಧರ್ಮಶಾಸ್ತ್ರಕಾರನಾಗಿದ್ದನು. ಉಶನಸ ಧರ್ಮಶಾಸ್ತ್ರ, ಔಶನಸ ಸ್ಮೃತಿಗಳು ಈತನ ಹೆಸರಿಗಿದ್ದ ಹೊತ್ತಗೆಗಳು. ರಾಜನೀತಿಯನ್ನು ಕುರಿತಾಗಿ ಶುಕ್ರನೀತಿ ಎಂಬ ಹೊತ್ತಗೆಯಿದೆ. ಶತಪರ್ವಾ, ಅಂಗಿ, ಊರ್ಜಸ್ವತಿ, ಜಯಂತಿ, ಗೌ ಎಂಬ ಹಲವು ಜನ ಮಡದಿಯರು ಈತನಿಗಿದ್ದರು. ಜಯಂತಿಯಿಂದ ಹುಟ್ಟಿದ ಮಗಳು ದೇವಯಾನಿ. ಈತನಿಗೆ ಇನ್ನೂ ಹಲವು ಜನ ಮಕ್ಕಳಿದ್ದರು.

**ಶುನಃಶೇಪ :** ಭೃಗುಕುಲದಲ್ಲಿ ಹುಟ್ಟಿದ ಋಚೀಕನ ಮಗ. ಹರಿಶ್ಚಂದ್ರನಿಗೆ ಮಕ್ಕಳಿರಲಿಲ್ಲ. ಮಗ ಹುಟ್ಟಿದರೆ ನರಬಲಿಯನ್ನು ಕೊಡುವುದಾಗಿ ವರುಣದೇವತೆಯನ್ನು ಬೇಡಿಕೊಂಡಿದ್ದನು. ಮಗ ಹುಟ್ಟಿ ಹಲವು ವರ್ಷಗಳಾದರೂ ತಾನು ಬೇಡಿಕೊಂಡ ಕಾಣಿಕೆಯನ್ನು ಒಪ್ಪಿಸಲಿಲ್ಲ. ಹರಿಶ್ಚಂದ್ರನಿಗೆ ಉದರರೋಗವಾಯಿತು. ಆಗ ಅವನ ಮಗ ರೋಹಿತನು ನರಬಲಿಯನ್ನು ಕೊಡಲೆಂದು ಋಚಿಯಿಂದ ಶುನಃಶೇಪನನ್ನು ಕೊಂಡುಕೊಂಡನು. ಈತ ವಿಶ್ವಾಮಿತ್ರನ ಸೋದರಳಿಯ. ತನ್ನನ್ನು ಕಾಪಾಡೆಂದು ಅವನು ತನ್ನ ಸೋದರಮಾವನನ್ನು ಮೊರೆಹೊಕ್ಕನು. ವಿಶ್ವಾಮಿತ್ರನು ಅವನನ್ನು ತನ್ನ ಮಗನಂತೆಯೇ ಬಗೆದು ಯಜ್ಞಸ್ತಂಭದಿಂದ ಆತನನ್ನು ಬಿಡಿಸಿ ತಂದನು. ಅವನಿಗೆ 'ದೇವರಾತ'ನೆಂದು ಹೆಸರಿಟ್ಟನು. ಈ ಸಂಗತಿ ಐತರೇಯ ಬ್ರಾಹ್ಮಣದಲ್ಲಿ ಉಲ್ಲೇಖಿತವಾಗಿದೆ. ಬೇರೆ ಹೊತ್ತಗೆಗಳಲ್ಲಿ ಈ ಕಥೆ ತುಸುಮಟ್ಟಿಗೆ ವ್ಯತ್ಯಾಸವನ್ನು ಹೊಂದಿದೆ.

ಅಂಬರೀಷನು ತನ್ನ ಯಜ್ಞದಲ್ಲಿ ಬಲಿ ಕೊಡಲೆಂದು ಶುನಃಶೇಪನನ್ನು ಕೊಂಡುಕೊಂಡನೆಂದು ವಾಲ್ಮೀಕಿರಾಮಾಯಣದಲ್ಲಿ ಹೇಳಲಾಗಿದೆ. ಈತನನ್ನು ಋಚೀಕನಿಂದ ಬೆಲೆತೆತ್ತು ಕೊಂಡುಕೊಳ್ಳಲಾಯಿತು (ಬಾಲಕಾಂಡ/೬೨). ಮಹಾಭಾರತದ ಉಲ್ಲೇಖಗಳಲ್ಲಿ ಯಜ್ಞ ಹರಿಶ್ಚಂದ್ರನದಾಗಿತ್ತೆಂದಿದೆ (ಅನುಶಾಸನ/೩).

**ಶುನಃಸಖ :** ಸಪ್ತರ್ಷಿಗಳು ಪ್ರತಿಗ್ರಹವನ್ನು ತೆಗೆದುಕೊಳ್ಳಲು ಒಪ್ಪದ್ದರಿಂದ ವೃಷದರ್ಭನು ಹೆಣ್ಣುರಾಕ್ಷಸನಿಂದ ಅವರನ್ನು ಕೊಲ್ಲಿಸುವ ಸಂಚುಹೂಡಿದ್ದನು. ಇಂದ್ರನು ಶುನಃಸಖನೆಂದು ಸನ್ಯಾಸಿಯ ರೂಪ ಪಡೆದು ಆ ಹೆಣ್ಣುದೆವ್ವವನ್ನು ಕೊಂದನು. ಸಪ್ತರ್ಷಿಗಳ ಜೀವ ಉಳಿಯಿತು.

**ಶೂರಸೇನ :** ಈತನು ಯದುವಂಶದವನಾದ ದೇವಮೀಢನ ಮಗನು. ವಸುದೇವನ ತಂದೆ. ಈತನ ಮಗಳ ಹೆಸರು ಪೃಥಾ. ಈತನು ತನ್ನ ಮೊದಲ ಮಗುವನ್ನು ತನ್ನ ಗೆಳೆಯ ಕುಂತಿಭೋಜನಿಗೆ ಕೊಡುವುದಾಗಿ ಮಾತುಕೊಟ್ಟಿದ್ದನು. ಆ ಪ್ರಕಾರ ಪೃಥೆಯನ್ನು ಕುಂತಿಭೋಜನಿಗೆ ಒಪ್ಪಿಸಿದನು. ಇವಳೇ ಮುಂದೆ ಕುಂತಿ ಎಂಬುದಾಗಿ ಹೆಸರಾದವಳು. ಕೆಲವೆಡೆಗಳಲ್ಲಿ ಈತನನ್ನು 'ಚಿತ್ರರಥ'ನೆಂದು ಉಲ್ಲೇಖಿಸಲಾಗಿದೆ. ಅದು ಈತನ ಇನ್ನೊಂದು ಹೆಸರಾಗಿರಲೂ ಸಾಧ್ಯ.

**ಶೃಂಗಿ :** ಅಂಗಿರಸ ಕುಲದ ಶಮೀಕ ಋಷಿಯ ಮಗ. ಈತನು ಚಿಕ್ಕ ವಯಸ್ಸಿನಲ್ಲಿಯೇ ದೊಡ್ಡ ತಪಸ್ಸನ್ನು ಆಚರಿಸಿದನು. ಪರೀಕ್ಷಿತನು ಮೌನವ್ರತವನ್ನು ಆಚರಿಸುತ್ತಿದ್ದ ಶಮೀಕನ ಮೈಮೇಲೆ ಸತ್ತ ಹಾವನ್ನೆಸೆದನು. ಅದನ್ನು ಕಂಡು ಶೃಂಗಿಯು 'ಏಳನೆಯ ದಿನ ನಿನಗೆ ಸಾವು ಬಂದೀತು' ಎಂದು ಅವನಿಗೆ ಶಾಪವಿತ್ತನು. ವ್ಯಾಸನು ಶಮೀಕ ಹಾಗೂ ಶೃಂಗಿಯನ್ನು ಆವಾಹನೆ ಮಾಡಿ ಜನಮೇಜಯನಿಗೆ ಅವರ ದರ್ಶನವನ್ನು ಮಾಡಿಸಿದನು. ಶೃಂಗಿಗೆ 'ಗವಿಜಾತ' ಎಂದೂ ಹೆಸರಿದೆ.

**ಶ್ರೀಕೃಷ್ಣ :** ಮಹಾಭಾರತದ ಸೂತ್ರಧಾರ. ಬಹು ಪ್ರಭಾವಿಯಾದ ವ್ಯಕ್ತಿ. ವಸುದೇವ–ದೇವಕಿಯರ ಮಗ. ಪಾಂಡವರ ಸಖ. ಅವರ ಸೋದರಮಾವನ ಮಗನೂ ಅಹುದು. ಈತನಿಗೆ ಪಾಂಡವರ ಬಗೆಗೆ ತುಂಬ ಮಮತೆ. ಅರ್ಜುನನೆಂದರೆ ಈತನಿಗೆ

ಬಲು ಅಕ್ಕರೆ. ಅರ್ಜುನ-ಶ್ರೀಕೃಷ್ಣರನ್ನು ನರನಾರಾಯಣರ ಅವತಾರವೆಂದು ತಿಳಿಯಲಾಗುತ್ತದೆ. ತ್ಯಾಗ, ಭೋಗ ಹಾಗೂ ಯೋಗಗಳ ಅಪೂರ್ವ ಸಂಗಮವೆಂದರೆ ಈತನ ವ್ಯಕ್ತಿಮತ್ವ. ಭಾರತೀಯರಿಗೆಲ್ಲ ಈತನ ಬಾಲಲೀಲೆಗಳೆಂದರೆ ಬಲು ಮುದ್ದು. ಈತನ ಯೌವನದ ಶೃಂಗಾರದ ಮೋಡಿ ಕವಿಗಳಿಗೆ ನಿತ್ಯನೂತನವಾದುದು. ಈತ ಹಾಡಿದ 'ಗೀತೆ' ಏಳು ಕಡಲುಗಳಾಚೆಗೂ ಹೋಗಿ ತಲುಪಿದೆ. ಇದೊಂದು ಕಾಲಾತೀತವಾದ ಅಕ್ಷರ ಸಾಹಿತ್ಯದಲ್ಲಿಯ ಅಮೌಲ್ಯವಾದ ರತ್ನವೆನ್ನಿಸಿದೆ.

ಶ್ರೀಕೃಷ್ಣ ಪರಾಕ್ರಮಿಯಾದ ಯೋಧನಾಗಿದ್ದನು. ಈತನ ಬುದ್ಧಿಚಾತುರ್ಯ ಅದ್ವಿತೀಯವಾದುದು. ಪಾಂಡವರು ಈತನ ನೆರವಿಲ್ಲದೆ ಹೋಗಿದ್ದರೆ ತಮ್ಮ ಸಂಕಟಗಳಿಂದ ಪಾರಾಗುವುದು ಕಷ್ಟದ್ದಿತ್ತು. ಭೀಷ್ಮ, ದ್ರೋಣ, ಕರ್ಣ, ದುರ್ಯೋಧನರ ವಧೆಗಳ ಕಾಲಕ್ಕೆ ಶ್ರೀಕೃಷ್ಣನಿತ್ತ ಸಲಹೆಗಳಿಂದಾಗಿಯೇ ಪಾಂಡವರಿಗೆ ಯುಶಸ್ಸು ಸಿಗಲು ಸಾಧ್ಯವಾಯಿತು. ಈತ ಉತ್ತಮನಾದ ರಾಜಕಾರಣಪಟುವಾಗಿದ್ದನು. ಕೃಷ್ಣನ ಮಧ್ಯಸ್ಥಿಕೆಯು ಆತನ ರಾಜಕೀಯದ ಒಂದು ಮುಖ್ಯವಾದ ಭಾಗವೆನ್ನಿಸಿತು. ನಿರುತ್ಸಾಹಿಯಾದ ಅರ್ಜುನನಿಗೆ ಆತನ ಕರ್ತವ್ಯ ಹಾಗೂ ಧರ್ಮಗಳನ್ನು ತಿಳಿಸಿ ಹೇಳಿದನು. ಅವನನ್ನು ಯುದ್ಧಕ್ಕೆ ಸಜ್ಜಾಗುವಂತೆ ಮಾಡಿದನು. ಯುದ್ಧಕಾಲದಲ್ಲಿ ಆತನ ಜೊತೆಗಿದ್ದು ಅವನನ್ನು ಕಾರ್ಯಪ್ರವಣನನ್ನಾಗಿ ಮಾಡುತ್ತ ಅವನನ್ನು ಕಾಪಾಡಿದನು ಕೂಡ. ಜಯದ್ರಥನ ವಧೆಯ ಸನ್ನಿವೇಶದಲ್ಲಿ ತನ್ನ ಯೋಗಸಾಮರ್ಥ್ಯವನ್ನು ಬಳಸಿ ಅರ್ಜುನನ ಅಗ್ನಿಪ್ರವೇಶವನ್ನು ತಪ್ಪಿಸಿದನು. ಅಶ್ವತ್ಥಾಮನ ಅಸ್ತ್ರಪ್ರಯೋಗದಿಂದಾಗಿ ಹುಟ್ಟಿದ ಸತ್ತ ಶಿಶುವನ್ನು ಬದುಕಿಸಿದನು. ನಿರ್ವಂಶವಾಗಲಿದ್ದ ಪಾಂಡವರ ಕುಲವನ್ನು ಉಳಿಸಿದನು. ರಣನೀತಿಯ ಈತನ ಜ್ಞಾನ ಪಾಂಡವರಿಗೆ ಯಾವಾಗಲೂ ಉಪಯುಕ್ತವೆನ್ನಿಸಿತು.

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।

ಎಂಬ ಬಿರುದನ್ನು ತನ್ನ ಕೃತಿಯಿಂದಲೇ ಸಿದ್ಧ ಮಾಡಿ ತೋರಿಸಿದನು. ಪಾಂಡವರ ಬದಿಯು ನ್ಯಾಯುದ್ದು, ಅವರು ಸತ್‌ಪ್ರವೃತ್ತರಾಗಿದ್ದರೆಂದೇ ಈತನು ಅವರಿಗೆ ಬೆಂಬಲ ನೀಡಿದನು. ಈತನ ಬಾಳೆಲ್ಲ ಪವಾಡಗಳಿಂದ ತುಂಬಿಹೋಗಿದೆ. ಈತನು ಉಗ್ರತಪಸ್ಸಿನ ಮೂಲಕ ಮಹಾದೇವನನ್ನು ಒಲಿಸಿಕೊಂಡು ಅವನಿಂದ ವರಗಳನ್ನು ಪಡೆದನು. ಇವೆಂದರೆ, ಧರ್ಮದ ಬಗೆಗೆ ದೃಢವಾದ ಶ್ರದ್ಧೆ, ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸುವುದು, ಉತ್ಕೃಷ್ಟವಾದ ಯಶ, ಶ್ರೇಷ್ಠ ಸಾಮರ್ಥ್ಯ, ಯೋಗದ ಬಗೆಗೆ ಲವಲವಿಕೆ ಹಾಗೂ ಯೋಗಸಿದ್ಧಿ, ಶಂಕರನ ಸಾನ್ನಿಧ್ಯ, ಅಗ್ನಿಯಂತಹ ತೇಜಸ್ಸು, ಅಪರಾಜಿತತೆ ಮೊದಲಾದ ಹಲವಾರು ವರಗಳು ದೊರೆತ ಪ್ರಸ್ತಾಪ ಅನುಶಾಸನಪರ್ವ ಅಧ್ಯಾಯ ೧೪, ೧೫ ಹಾಗೂ ೧೮ರಲ್ಲಿದೆ. ಈತನಿಗೆ ಗಾಂಧಾರಿಯಿಂದ ಶಾಪವೂ ಸಿಕ್ಕಿದೆ. ಬಲು ದಾಹಕವಾದ ಶಾಪವದು (ನೋಡಿ : ಶಾಪ. ಕ್ರ. ೯೮-ಗಾಂಧಾರಿ > ಶ್ರೀಕೃಷ್ಣ).

**ಶ್ರೀಮಾನ್ ಋಷಿ :** ದತ್ತಾತ್ರೇಯನ ಮೊಮ್ಮಗ, ನಿಮಿಯ ಮಗ. ಮಹಾತಪಸ್ವಿ. ಈತನು ಒಂದು ಸಾವಿರ ವರ್ಷಗಳ ಕಾಲ ಕಠೋರವಾದ ತಪಸ್ಸನ್ನು ಆಚರಿಸಿದನು. ಈತನ ಸಾವಿನಿಂದಾಗಿ ನಿಮಿಗೆ ಬಲು ದುಃಖವಾಯಿತು. ಅವನು ಮಗನ

ಔರ್ಧ್ವದೈಹಿಕ ಸಂಸ್ಕಾರಗಳನ್ನು ಮಾಡಿದನು. ಶ್ರಾದ್ಧಕರ್ಮವನ್ನು ಮಾಡಿ ಈ ತಂದೆಯು ತನ್ನ ಮಗನಿಗೆ ಪಿಂಡದಾನವನ್ನು ಮಾಡಿದನು. ಹೀಗೆ ಮಾಡುವುದು ಧರ್ಮ ಸಮ್ಮತವಲ್ಲ ಎಂದೆನಿಸಿ ಹೆದರಿದನು. ಇದರಲ್ಲಿ ತಪ್ಪೇನೂ ಇಲ್ಲವೆಂದು ಅತ್ರಿ ಋಷಿಗಳು ಹೇಳಿದರು.

**ಶ್ರೀರಾಮ :** ಅಯೋಧ್ಯೆಯ ದೊರೆಯಾದ ದಶರಥನು ಪುತ್ರಕಾಮೇಷ್ಟಿ ಯಜ್ಞ ವನ್ನು ಮಾಡಿದನು. ಯಜ್ಞಪುರುಷನು ಅವನಿಗೆ ಪಾಯಸವನ್ನಿತ್ತನು. ಈತನ ಮೂವರೂ ಮಡದಿಯರು ಅದನ್ನು ಸೇವಿಸಿ ಬಸಿರಾದರು. ನಾಲ್ಕು ಜನ ಗಂಡು ಮಕ್ಕಳು ಹುಟ್ಟಿದರು. ಕೌಸಲ್ಯೆಯಿಂದ ಹುಟ್ಟಿದವನೇ ಚೊಚ್ಚಲು ಮಗನಾದ ಶ್ರೀರಾಮ. ಈತನನ್ನು ವಿಷ್ಣುವಿನ ಅವತಾರ ಎಂದು ತಿಳಿಯಲಾಗುತ್ತದೆ. ರಾಜಪುರೋಹಿತನಾದ ವಸಿಷ್ಠನಿಂದ ಶ್ರೀರಾಮನಿಗ ಶಸ್ತ್ರಗಳು ಹಾಗೂ ಶಾಸ್ತ್ರಗಳ ಜ್ಞಾನ ಸಿಕ್ಕಿತು. ವಿಶ್ವಾಮಿತ್ರನು ಯಜ್ಞರಕ್ಷಣೆಗೆಂದು ದಶರಥನ ಬಳಿ ಈತನಿಗಾಗಿ ಕೇಳಿದನು. ಆತನಿಂದ ಇವನಿಗೆ ಹಲವು ವಿದ್ಯೆಗಳು, ಅಸ್ತ್ರಗಳು, ಕಥೆಗಳು ದೊರೆತವು. ಇವನು ತಾಟಕಾ ಹಾಗೂ ಸುಬಾಹುಗಳನ್ನು ಕೊಂದನು. ಮಾರೀಚನನ್ನು ಹಾರಿಸಿಬಿಟ್ಟನು. ಮಿಥಿಲಾನಗರದ ಜನಕನ ಬಳಿಯಿದ್ದ ಶಿವನ ಬಿಲ್ಲನ್ನು ಮುರಿದನು. ಜನಕನ ಮಗಳಾದ ಸೀತೆಯೊಡನೆ ಈತನ ಮದುವೆಯಾಯಿತು. ದಶರಥನು ಈತನನ್ನು ಯುವರಾಜ ಪಟ್ಟಕ್ಕೆ ಕುಳ್ಳಿರಿಸುವ ಸಿದ್ಧತೆಯಲ್ಲಿದ್ದನು. ಆಗ ಕೈಕೇಯಿಯು ಹಿಂದಕ್ಕೆ ದಶರಥನಿಂದ ತನಗೆ ದೊರೆತ ಎರಡು ವರಗಳನ್ನು ಬಳಸಿ ಶ್ರೀರಾಮನನ್ನು ಹದಿನಾಲ್ಕು ವರ್ಷಗಳ ವನವಾಸಕ್ಕೆ ಅಟ್ಟಿದಳು. ಲಕ್ಷ್ಮಣ ಹಾಗೂ ಸೀತೆ ಈತನನ್ನು ಹಿಂಬಾಲಿಸಿದರು. ಪುತ್ರವಿಯೋಗದಿಂದಾಗಿ ದಶರಥ ಮರಣಹೊಂದಿದನು. ಶ್ರೀರಾಮ ಕಾಡಿಗೆ ಹೊರಟಾಗ ಭರತ ಅಯೋಧ್ಯೆಯಲ್ಲಿರಲಿಲ್ಲ. ಬಂದ ಬಳಿಕ ನಡೆದುದೆಲ್ಲವನ್ನು ಕೇಳಿ ಬಲುದುಃಖಿತನಾದನು.

ರಾವಣನು ಸೀತೆಗೆ ಕಾಂಚನಮೃಗದ ಆಸೆಯನ್ನು ತೋರಿಸಿ ಅವಳನ್ನು ಓಡಿಸಿಕೊಂಡು ಲಂಕೆಗೆ ಒಯ್ದನು. ತನ್ನ ಮಡದಿಯಾಗೆಂದು ಅವಳ ಮನವೊಲಿಸಲು ಯತ್ನಿಸಿದನು. ಅವಳನ್ನು ತುಂಬ ಪೀಡಿಸಿದನು. ಅವಳು ಮಾತ್ರ ಅವನಿಗೆ ವಶವಾಗಲಿಲ್ಲ. ಶ್ರೀರಾಮನು ಲಕ್ಷ್ಮಣನ ನೆರವಿನಿಂದ ಸೀತೆಯನ್ನು ಕಂಡುಹಿಡಿಯಲು ಬಹಳ ಹೆಣಗಿದನು. ಸುಗ್ರೀವ ನೊಂದಿಗೆ ಗೆಳೆತನವನ್ನು ಬೆಳೆಸಿ ವಾಲಿಯನ್ನು ಕೊಂದನು. ಹನುಮಂತನಂತಹ ನಿಷ್ಠಾವಂತ ನಾದ ಸಖ, ಭಕ್ತನನ್ನು ಪಡೆದನು. ವಿಭೀಷಣನನ್ನು ತನ್ನತ್ತ ಒಲಿಸಿಕೊಂಡು ವಾನರರ ನೆರವಿನಿಂದ ಲಂಕೆಯ ಮೇಲೆ ಏರಿಹೋದನು. ರಾವಣನನ್ನು ಕೊಂದು ಸೀತೆಯನ್ನು ಬಿಡುಗಡೆ ಮಾಡಿದನು. ಅಗ್ನಿದಿವ್ಯದಿಂದ ಅವಳ ಶುದ್ಧತೆ ಮನದಟ್ಟಾದ ತರುವಾಯವೇ ಅವಳನ್ನು ಸ್ವೀಕರಿಸಿದನು. ವಿಭೀಷಣನಿಗೆ ಲಂಕೆಯ ರಾಜ್ಯವನ್ನು ಕೊಟ್ಟು ಅಯೋಧ್ಯೆಗೆ ಮರಳಿದನು. ಭರತನು ಕಾಯ್ದಿಟ್ಟು ಕಾಪಾಡಿದ ರಾಜ್ಯವನ್ನು ಪಡೆದನು. ಸೀತೆಯ ಬಗೆಗೆ ತನಗಾವ ಸಂದೇಹ ಇಲ್ಲವೆಂದಾಗಲೂ ಕೇವಲ ಜನನಿಂದೆಯನ್ನು ತಪ್ಪಿಸಲೆಂದು ಬಸಿರೆ ಯಾಗಿದ್ದ ಅವಳನ್ನು ಬಿಟ್ಟುಬಿಟ್ಟನು. ಅವಳು ವಾಲ್ಮೀಕಿ ಆಶ್ರಮದಲ್ಲಿ ಲವಕುಶರನ್ನು ಹೆತ್ತಳು. ಕಾಲನು ಬಂದು ಶ್ರೀರಾಮನ ಅವತಾರಕಾರ್ಯ ಮುಗಿದುದಾಗಿ ಅರುಹಿದನು. ಆ ಪ್ರಕಾರವಾಗಿ ಶ್ರೀರಾಮನು ಮಹಾಪ್ರಸ್ಥಾನವನ್ನಿಟ್ಟನು.

**ಶಂಕರ (ಶಿವ, ರುದ್ರ, ಮಹಾದೇವ) :** ಕಂದು ಬಣ್ಣದ ಜಡೆ, ಶತ್ರು ಸಂಹಾರಕ ಹಾಗೂ ಪರಾಕ್ರಮಿಯಾದ ದೇವತೆಯೆಂದರೆ ರುದ್ರ. ಪ್ರಾಣಿಗಳ ಜೀವಗಳನ್ನು ಕಸಿದುಕೊಳ್ಳುವವನು. ಹೀಗಾಗಿ ಹೆದರಿಕೆಯನ್ನು ಹುಟ್ಟಿಸುವವನು. ಶತಪಥ ಬ್ರಾಹ್ಮಣದಲ್ಲಿ ಅಗ್ನಿಗೆ ರುದ್ರ ಎಂದೆನ್ನಲಾಗಿದೆ. ಶರ್ವ, ಭವ, ಪಶುಪತಿ ಎಂಬುದಾಗಿಯೂ ಹೆಸರುಗಳುಂಟು. ವಿಷ್ಣುಪುರಾಣದ ಹೇಳಿಕೆಯಂತೆ ಈತ ಬ್ರಹ್ಮದೇವನ ಹುಬ್ಬಿನಿಂದ ಹುಟ್ಟಿದನು. ಮತ್ಸ್ಯಪುರಾಣದಲ್ಲಿ ಈತನನ್ನು ಅರ್ಧನಾರೀದೇಹಧಾರಿ ಎಂದು ಬಣ್ಣಿಸಲಾಗಿದೆ. ಒಟ್ಟಿನಲ್ಲಿ ಹನ್ನೊಂದು ಜನ ರುದ್ರರಿದ್ದು ಬೇರೆ ಬೇರೆ ಹೊತ್ತಗೆಗಳಲ್ಲಿ ಅವರಿಗೆ ಬೇರೆ ಬೇರೆ ಹೆಸರುಗಳಿವೆ.

ದಕ್ಷನ ಮಗಳು ಸತಿ ಇವಳು ಈತನ ಮಡದಿ. ಇವಳೇ ಹಿಮಾಲಯನ ಮಗಳು ಪಾರ್ವತಿ(ಉಮೆ)ಯಾಗಿ ಹುಟ್ಟಿದಳು. ಈತನು ಅವಳೊಂದಿಗೆ ಮದುವೆಯಾದನು. ಒಂದು ಸಲ ಈತನು ಬ್ರಹ್ಮದೇವನಿಂದ ನಿರ್ಮಿಸಲ್ಪಟ್ಟ ಅಪ್ಸರೆಯನ್ನು ಕಂಡು ಮರುಳಾದನು. ಈತನ ಪಕ್ಕದಲ್ಲಿಯೇ ಪಾರ್ವತಿಯಿದ್ದ ಕಾರಣ ಅಪ್ಸರೆಯತ್ತ ಹೊರಳಿ ನೋಡುವುದು ಮುಜುಗರ ತಂದಿತು. ಹೀಗಾಗಿ ಅವಳ ದರ್ಶನಸುಖವನ್ನು ಪಡೆಯಲೆಂದು ಈತನಿಗೆ ನಾಲ್ಮೊಗಗಳು ಹುಟ್ಟಿಕೊಂಡವು. ನಾರದನಿಂದ ಪಾರ್ವತಿಗೆ ಈ ವಾರ್ತೆ ತಲುಪಿತು. ಅವಳು ಇವನ ಕಣ್ಣುಗಳನ್ನು ಮುಚ್ಚಿದಳು. ಆಗ ಈತನಿಗೆ ಮೂರನೆಯ ಕಣ್ಣು ದೊರಕಿತು. ಈತನು ವೀರಭದ್ರನ ಕೈಯಿಂದ ದಕ್ಷನ ಯಜ್ಞವನ್ನು ಹಾಳುಗೆಡವಿದನು. ಭೈರವನಿಂದ ಬ್ರಹ್ಮದೇವನ ಐದನೆಯ ತಲೆಯನ್ನು ಕಡಿಸಿಹಾಕಿದ್ದರಿಂದ ಈತನಿಗೆ ಬ್ರಹ್ಮಹತ್ಯೆಯ ದೋಷ ತಟ್ಟಿತು. ಈತನು ಭೂತಪಿಶಾಚಿಗಳ ಅಧಿಪತಿಯಾಗಿದ್ದು ಈತನ ವಾಸ ಸ್ಮಶಾನದಲ್ಲಿ. ಭೂತಪಿಶಾಚಿಗಳ ಗಣಗಳ ಅಧಿಪತಿಗಳೆಂದರೆ ವೀರಭದ್ರ ಮೊದಲಾದ ಈತನ ಮಕ್ಕಳೇ. ಈತನು ಗಂಧಮಾದನ ಪರ್ವತದ ಮೇಲೆ ಬೀಳುತ್ತಲಿದ್ದ ಗಂಗೆಯನ್ನು ತನ್ನ ತಲೆಯ ಜಡೆಯ ಮೇಲೆ ಹೊತ್ತನು. ಹೀಗಾಗಿ ಅವಳನ್ನು ಈತನ ಮಡದಿಯೆಂದು ತಿಳಿಯಲಾಗುತ್ತದೆ. ಈತನ ವಾಸಸ್ಥಾನಗಳ ಬಗೆಗೆ ಮತಭಿನ್ನತೆಗಳುಂಟು. ಮೇರುಪರ್ವತ, ಉತ್ತರಧ್ರುವ, ಕೈಲಾಸ, ಹಿಮಾಲಯ ಎಂಬುದಾಗಿ ಹಲವು ತಾಣಗಳನ್ನು ಹೆಸರಿಸಲಾಗುತ್ತದೆ.

ಮಹಾದೇವ, ಹರ, ಶಂಕರ ಇವು ಕೂಡ ಈತನ ಹೆಸರುಗಳೇ. ಮಕ್ಕಳನ್ನು ಪಡೆಯಲೆಂದು ಈತನು ಬಹಳಷ್ಟು ಕಾಲ ಪಾರ್ವತಿಯ ಜೊತೆಗೆ ಇದ್ದ ಕಾರಣ ದೇವತೆಗಳಲ್ಲಿ ಹೆದರಿಕೆ ಹುಟ್ಟಿತು. ಅವರು ರತಿಕ್ರೀಡೆಯಲ್ಲಿ ತಡೆಯನ್ನು ಉಂಟುಮಾಡಿದರು. ಹೀಗಾಗಿ ಪಾರ್ವತಿಯು (ಉಮೆಯು) ದೇವತೆಗಳಿಗೆ ಶಾಪವನ್ನಿತ್ತಳು. ಭಗೀರಥನ ತಪಸ್ಸಿಗೆ ಸಂತುಷ್ಟನಾದ ಶಿವನು ಅವನಿಚ್ಛೆಯ ಮೇರೆಗೆ ಮುಗಿಲಿನಿಂದ ಸುರಿವ ಗಂಗೆಯನ್ನು ತನ್ನ ತಲೆಯ ಮೇಲೆ ಹೊತ್ತನು. ಕಡಲನ್ನು ಕಡೆದು ಹೊರಬಂದ ನಂಜನ್ನು ಕುಡಿದನು. ಹನುಮಂತ ಹಾಗೂ ಮಧು ದೈತ್ಯರಿಗೆ ವರಗಳನ್ನಿತ್ತನು. ಪಾರ್ವತಿಯನ್ನು ಕಂಡು ಕಣ್ಣುಮಿಂಟುಕಿಸಿದ್ದರಿಂದ ಕುಬೇರನು ಅವಳ ಶಾಪಕ್ಕೀಡಾಗಿ ಅವನ ಎಡಗಣ್ಣು ಸುಟ್ಟು ಬೂದಿಯಾಯಿತಲ್ಲದೆ ಬಲಗಣ್ಣು ಕಂದುಬಣ್ಣದ್ದಾಯಿತು. ಹೀಗಾಗಿ ಅವನು ಮಹಾದೇವನೊಂದಿಗೆ ಸ್ನೇಹ ಗಳಿಸಿದನು. ಒಂದು ಬಾರಿ ಶಿವನು ಪಾರ್ವತಿಯೊಂದಿಗೆ ಒಂದು

ಪರ್ವತದ ಮೇಲೆ ಕ್ರೀಡೆಯಲ್ಲಿದ್ದನು. ನಂದೀಶ್ವರನು ರಾವಣನಿಗೆ ಪ್ರವೇಶವನ್ನು ನಿರಾಕರಿಸಿದನು. ಕೆರಳಿದ ರಾವಣ ಪರ್ವತವನ್ನೇ ಕಿತ್ತಸೆಯಲು ಸಿದ್ಧನಾದನು. ಆಗ ಈತನು ಕಾಲಿನ ಹೆಬ್ಬೆರಳಿನಿಂದ ರಾವಣನ ಕೈಗಳನ್ನು ಅದುಮಿ ಹಿಡಿದು ಅವನ ಯೋಚನೆಯನ್ನು ಮಣ್ಣುಗೂಡಿಸಿದನು. ರಾವಣನು ತಪಸ್ಸಿನಿಂದ ಈತನನ್ನು ಸಂತೋಷ ಪಡಿಸಿದನು. ಹೀಗಾಗಿ ಇವನು ರಾವಣನಿಗೆ ಚಂದ್ರಹಾಸ ಎಂಬ ಖಡ್ಗವನ್ನೂ ಉಳಿದ ಆಯುಸ್ಸನ್ನೂ ಶರತ್ತಿನೊಂದಿಗೆ ಇತ್ತನು. ಇಲರಾಜನಿಗೆ ಹೆಣ್ಣುತನ ಬಂದಾಗ ಕರ್ದಮನು ಶಿವಪ್ರಿಯ ಅಶ್ವಮೇಧಯಜ್ಞವನ್ನು ಮಾಡಿ ಈತನನ್ನು ಒಲಿಸಿಕೊಂಡನು. ಹೀಗಾಗಿ ಇಲನಿಗೆ ಮತ್ತೆ ಗಂಡುತನ ಬಂದಿತು.

ಮಹಾಭಾರತದಲ್ಲಿ ಎಲ್ಲಕ್ಕೂ ಹೆಚ್ಚಿನ ವರಗಳನ್ನಿತ್ತವನೆಂದರೆ ಶಂಕರನು. ಇವುಗಳ ಸಂಖ್ಯೆ ೩೦ಕ್ಕೂ ಮಿಕ್ಕಿದೆ.

**ಶ್ವೇತಕೇತು :** ಉದ್ದಾಲಕ ಋಷಿಯ ಮಗ. ಉದ್ದಾಲಕನು ತನ್ನ ಒಬ್ಬ ಶಿಷ್ಯನಿಂದ ತನ್ನ ಮಡದಿಗೆ ಹುಟ್ಟಿಸಿದನೆಂಬ ಒಂದು ವಿಚಿತ್ರವಾದ ಉಲ್ಲೇಖವಿದೆ. ಹನ್ನೆರಡು ವರ್ಷದವನಿದ್ದಾಗ ಈತನ ಉಪನಯನ ಆಯಿತು. ಈತನ ಅಧ್ಯಯನ ಇಪ್ಪತ್ತನಾಲ್ಕು ವರ್ಷಗಳವರೆಗೆ ಸಾಗಿತು. ಈತ ಸೊಕ್ಕಿನವನಾಗಿದ್ದನು. ತಂದೆಯು ಉಪದೇಶವಿತ್ತು ಈತನನ್ನು ಮೆತ್ತಗೆ ಮಾಡಿದನು. ಯಾಜ್ಞವಲ್ಕ್ಯನು ಈತನನ್ನು ಸೋಲಿಸಿದನು. ಈತ ಜ್ಞಾನಿಯಾಗಿದ್ದನು. ಈತನು ಹೆಣ್ಣು–ಗಂಡುಗಳ ವೈವಾಹಿಕ ಜೀವನಕ್ಕೆ ಕೆಲವು ನಿಯಮಗಳನ್ನು ಹಾಗೂ ಕಟ್ಟುಪಾಡುಗಳನ್ನು ಹಾಕಿಕೊಟ್ಟನು. ಈತನು ಬ್ರಾಹ್ಮಣರೊಂದಿಗೆ ಸಂಳ್ಳು ರೀತಿಯಲ್ಲಿ ನಡೆದುಕೊಳ್ಳುತ್ತಿದ್ದನು. ಹೀಗಾಗಿ ಉದ್ದಾಲಕನು ಈತನನ್ನು ತ್ಯಜಿಸಿದನು. ಅಷ್ಟಾವಕ್ರ ಈತನ ಸೋದರಳಿಯನು. ದೇವಲ ಋಷಿಯ ಮಗಳು ಸುವರ್ಚಲೆ ಈತನ ಮಡದಿ. ಈತನು ಅವಳೊಂದಿಗೆ ಸಾಕಷ್ಟು ಆಧ್ಯಾತ್ಮಿಕ ಚರ್ಚೆಯನ್ನು ಕೈಕೊಂಡಿದ್ದಾನೆ.

**ಸಂವರ್ತ :** ಮಹರ್ಷಿ ಅಂಗಿರಸನ ಮಗ. ಬೃಹಸ್ಪತಿ ಹಾಗೂ ಉತಥ್ಯರ ಸೋದರ. ಬ್ರಹ್ಮದೇವ ಹಾಗೂ ಇಂದ್ರನ ಒಡ್ಡೋಲಗಗಳಲ್ಲಿ ಈತನಿಗಾಗಿ ಸ್ಥಾನವಿತ್ತು. ಬೃಹಸ್ಪತಿಯು ದೇವತೆಗಳ ಪೌರೋಹಿತ್ಯವನ್ನು ಸ್ವೀಕರಿಸಿದ ತರುವಾಯ ಮಾನವರ ಪೌರೋಹಿತ್ಯವನ್ನು ಬಿಟ್ಟುಬಿಟ್ಟನು. ಅವರ ಯಜ್ಞಗಳಲ್ಲಿ ಪಾಲ್ಗೊಳ್ಳುವುದನ್ನೂ ನಿಲ್ಲಿಸಿದನು. ತನ್ನ ಯಜ್ಞದ ಪೌರೋಹಿತ್ಯವನ್ನು ಸ್ವೀಕಸಿಸಬೇಕೆಂದು ಮರುತ್ತನು ಅವನನ್ನು ಕೋರಿದರೆ ಅವನದನ್ನು ನಿರಾಕರಿಸಿದನು. ಮರುತ್ತನು ಸಂವರ್ತನ ಶರತ್ತುಗಳನ್ನು ಒಪ್ಪಿಕೊಂಡು ಅವನಿಂದ ಯಜ್ಞವನ್ನು ಮಾಡಿಸಿದನು. ಈತನು ಅಗ್ನಿಗೆ ಅವನನ್ನು ಸುಟ್ಟುಹಾಕುವುದಾಗಿ ಬೆದರಿಕೆ ಹಾಕಿದ್ದನು. ಅದೇ ರೀತಿಯಾಗಿ ಇಂದ್ರನ ವಜ್ರವನ್ನು ಸ್ತಂಭನಗೊಳಿಸಿದನು. ಇಂದ್ರನನ್ನು ಮರುತ್ತನ ಯಜ್ಞಮಂಟಪಕ್ಕೆ ಕರೆತರಿಸಿ ಅವನಿಗೆ ಉಪದೇಶವಿತ್ತನು. ದೇವತೆಗಳ ಪಾಲನ್ನು ನಿಗದಿತಪಡಿಸಿದನು. ರಾವಣನು ಮರುತ್ತನ ಯಜ್ಞಕ್ಕೆ ತಡೆಯುಂಟುಮಾಡಲು ಹವಣಿಸಿದನು. ಆದರೆ ಯಶ ಸಿಗಲಿಲ್ಲವೆಂದು ವಾಲ್ಮೀಕಿ ರಾಮಾಯಣದಲ್ಲಿ ನಮೂದಿತವಾಗಿದೆ.

**ಸಂಶಪ್ತಕ :** ಇದೊಂದು ಕ್ಷತ್ರಿಯಕುಲನಾಮ. ತ್ರಿಗರ್ತದ ರಾಜ ಸುಶರ್ಮನು ಸತ್ಯವರ್ಮ, ಸತ್ಯವ್ರತ, ಸತ್ಯೇಷು ಹಾಗೂ ಸತ್ಯಕರ್ಮ ಎಂಬ ಈ ನಾಲ್ವರು ಸೋದರ

ರೊಂದಿಗೆ ಬೆಂಕಿಯನ್ನು ಸಾಕ್ಷಿಗಿಟ್ಟು ಅರ್ಜುನನನ್ನು ಕೊಲ್ಲುವುದಾಗಿ ಪಣತೊಟ್ಟಿದ್ದರಿಂದ 'ಸಂಶಪ್ತಕ'ರೆಂದು ಹೆಸರು ಬಂದಿತು. ಇವರೆಲ್ಲರೂ ರಾಕ್ಷಸಪ್ರವೃತ್ತಿಯರಾಗಿದ್ದರು. ಇವರು ಅರ್ಜುನನನ್ನು ಕಾಳಗಕ್ಕಾಗಿ ಆಹ್ವಾನಿಸುತ್ತಲೇ ಅವನು ತಕ್ಷಣ ಒಪ್ಪಿಕೊಂಡನು, ಅಲ್ಲದೆ ಅವರೆಲ್ಲರನ್ನು ಸದೆಬಡಿದನು.

**ಸಗರಪುತ್ರರು :** ಶಂಕರನ ವರದಾನದಿಂದಾಗಿ ಸಾಗರನಿಗೆ ಅವನ ಮಡದಿ ಸುಮತಿಯಿಂದ ಅರವತ್ತುಸಾವಿರ ಗಂಡುಮಕ್ಕಳು ಹುಟ್ಟಿದರು. ಇವರು ಸಗರಪುತ್ರರೆಂದು ಹೆಸರಾದವರು. ಎರಡನೆಯ ಮಡದಿಯಾದ ಕೇಶಿನಿಗೆ ಅಸಮಂಜನೆಂಬ ಒಬ್ಬನೇ ಒಬ್ಬ ಮಗ ಹುಟ್ಟಿದನು. ಅಶ್ವಮೇಧಯಜ್ಞದ ಕಾಲಕ್ಕೆ ಕುದುರೆಗಳನ್ನು ಕಾಯುತ್ತಿರುವಾಗ ಕಪಿಲನ ಕ್ರೋಧದಿಂದಾಗಿ ಈ ಅರವತ್ತುಸಾವಿರ ಸಗರಪುತ್ರರು ಒಂದೇ ಕಾಲಕ್ಕೆ ಸುಟ್ಟು ಬೂದಿಯಾದರು. ಇವರನ್ನು ಉದ್ಧರಿಸಲೆಂದು ಗಂಗೆಯನ್ನು ಕರೆತರುವ ಕೆಲಸವನ್ನು ಮಾಡಿದವರು ಅಸಮಂಜನ ಮಗನಾದ ಅಂಶುಮಾನ ಮತ್ತು ಮೊಮ್ಮಗ ದಿಲೀಪ ಇವರು. ಅವರಿಗೆ ಯಶ ದೊರೆಯಲಿಲ್ಲ. ಸಗರಪುತ್ರರ ಮರಿಮಗನಾದ ಭಗೀರಥನು ಅವರನ್ನು ಉದ್ಧರಿಸಿದನು.

**ಸತ್ಯ :** ಒಬ್ಬ ಬ್ರಾಹ್ಮಣ. ವಿದರ್ಭ ದೇಶದಲ್ಲಿದ್ದ. ಹೊಲಗಳಲ್ಲಿ ಬಿದ್ದಿರುವ ಕಾಳುಕಡಿಗಳನ್ನು ಆಯ್ದು ಹೊಟ್ಟೆಹೊರೆಯುತ್ತಿದ್ದನು. ಒಂದು ಯಜ್ಞವನ್ನು ಮಾಡಬೇಕೆಂದುಕೊಂಡನು. ಈ ಬ್ರಾಹ್ಮಣನ ಹೆಸರು 'ಸತ್ಯ'. ರುಚಿಯಿಲ್ಲದ, ಸಪ್ಪೆಯಾದ ತೊಪ್ಪಲು ಪಲ್ಯ ಆತನ ಆಹಾರವಾಗಿತ್ತು. ಈತ ವಾನಪ್ರಸ್ಥವನ್ನು ಸ್ವೀಕರಿಸಿದ್ದನು. ಈತನ ಬಾಳಿನಲ್ಲಿ ಅಹಿಂಸೆಗೆ ಹಿರಿದಾದ ಸ್ಥಾನವಿತ್ತು. ಆದರೆ ಒಂದು ಸಲ ಈತನ ಮನದಲ್ಲಿ ಹಿಂಸಾಪ್ರಧಾನವಾದ ಯಜ್ಞವನ್ನು ಮಾಡಬೇಕೆಂಬ ಬಯಕೆ ಹುಟ್ಟಿತು. ಈತನ ಮಡದಿ ಪುಷ್ಕರಧಾರಿಣಿ. ಇವಳಿಗೆ ಗಂಡನ ಯೋಚನೆ ಹಿಡಿಸಲಿಲ್ಲ. ಅವನ ಹೇಳಿಕೆಯಂತೆ ನಡೆದುಕೊಳ್ಳದಿದ್ದರೆ ತನ್ನನ್ನು ಶಪಿಸುವನೆಂಬ ಹೆದರಿಕೆ ಬೇರೆ. ಹೀಗಾಗಿ ಯಜ್ಞದಲ್ಲಿ ಅವನೊಂದಿಗೆ ಯಜ್ಞಪತ್ನಿಯಾಗಿ ನಡೆದುಕೊಳ್ಳುತ್ತಿದ್ದಳು. ಈತನ ಬಳಿ ಯಜ್ಞದ ಪಶುವಿಗಾಗಿ ಬೇಕಿದ್ದ ಹಣವಿರಲಿಲ್ಲ. ಹತ್ತಿರದಲ್ಲೇ ಇದ್ದ ಪರ್ಣಾದನೆಂಬ ಒಂದು ಜಿಂಕೆಯು ಯಜ್ಞಪಶುವಾಗಲು ಒಪ್ಪಿಕೊಂಡಿತು. ಆದರೆ ಸತ್ಯನು ಒಪ್ಪಿಕೊಳ್ಳಲಿಲ್ಲ. ಆಗ ಜಿಂಕೆಯು, 'ನೀನು ನನ್ನನ್ನು ಕೊಲ್ಲುವುದರಿಂದ ನನಗೆ ಸದ್ಗತಿ ದೊರಕಲಿದೆ. ಆದ್ದರಿಂದ ಹಿಂಜರಿಯದಿರು' ಎಂದಿತು. ಸತ್ಯನ ಮನ ಮಾರ್ಪಾಟುಗೊಂಡಿತು. ಆ ಜಿಂಕೆಯನ್ನು ಹಿಂಸಿಸಬೇಕೆಂದು ಅನ್ನಿಸುತ್ತಿದ್ದಂತೆಯೇ ಈತನ ತಪಸ್ಸು ನಾಶವಾಯಿತು.

**ಸತ್ಯಭಾಮೆ :** ಸತ್ರಾಜಿತನ ಕನ್ಯೆ. ಶ್ರೀಕೃಷ್ಣನ ಪಟ್ಟದ ರಾಣಿ. ನರಕಾಸುರನ ವಧೆಯ ತರುವಾಯ ಶ್ರೀಕೃಷ್ಣನೊಂದಿಗೆ ಇಂದ್ರಲೋಕಕ್ಕೆ ಹೋಗಿದ್ದಳು. ಅದಿತಿಯು ಇವಳಿಗೆ 'ಶ್ರೀಕೃಷ್ಣನು ಮಾನವನಾಗಿ ಪೃಥ್ವಿಯ ಮೇಲೆ ಇರುವವರೆಗೆ ಮುಪ್ಪು ಬಾರದು' ಎಂದು ವರವಿತ್ತಳು. ಶ್ರೀಕೃಷ್ಣನು ಇವಳಿಗಾಗಿ ಸ್ವರ್ಗದಿಂದ ಪಾರಿಜಾತದ ಮರವನ್ನು ತಂದನು. ಪಾಂಡವರು ಕಾಮ್ಯಕವನದಲ್ಲಿ ಇದ್ದ ಕಾಲಕ್ಕೆ ಈಕೆಯೂ ಶ್ರೀಕೃಷ್ಣನ ಜೊತೆಗೆ ಅವರನ್ನು ಕಾಣಲೆಂದು ಹೋಗಿದ್ದಳು. ಅಲ್ಲಿ ಇವಳು ದ್ರೌಪದಿಗೆ, 'ಗಂಡನನ್ನು ಹೇಗೆ

ವಶಪಡಿಸಿಕೊಳ್ಳಬೇಕು?' ಎಂಬ ಬಗೆಗೆ ಉಪದೇಶವನ್ನಿತ್ತಳು. ಶ್ರೀಕೃಷ್ಣನ ನಿಧನದ ತರುವಾಯ ಈಕೆ ತಪೋವನದಲ್ಲಿ ತಪಸ್ಸಿಗೆ ಕುಳಿತಳು.

೧

ಸತ್ಯವತಿ : ಬ್ರಹ್ಮದೇವನ ಶಾಪದಿಂದಾಗಿ 'ಅದ್ರಿಕಾ' ಅಪ್ಸರೆಯು ಮೀನಾದಳು. ಉಪರಿಚರವಸುವಿನ ವೀರ್ಯಸ್ಖಲನವಾಗಿದ್ದ ನೀರನ್ನು ಕುಡಿದು ಇವಳು ಬಸಿರಾದಳು. ಆ ಮೀನಿನ ಹೊಟ್ಟೆಯಿಂದ ಹುಟ್ಟಿಬಂದ ಕಾರಣಕ್ಕಾಗಿ ಇವಳ ಮೈಗೂ ಮೀನಿನ ವಾಸನೆ ಬರುತ್ತಿತ್ತು. ಹೀಗಾಗಿ 'ಮತ್ಸ್ಯಗಂಧಾ' ಎಂದೆನ್ನಿಸಿದಳು. ದೊರೆಯು ಅಪ್ಪಣೆಯು ಮೇರೆಗೆ ಒಬ್ಬ ಬೆಸ್ತರವನು ಇವಳನ್ನು ಸಾಕಿ ಸಲಹಿದನು. ಅವನು ಇವಳ ಹೆಸರನ್ನು 'ಸತ್ಯವತಿ' ಎಂದಿಟ್ಟನು. ಈಕೆ ಬಲು ಚೆಲುವೆಯಾಗಿದ್ದಳು. ಯಮುನಾ ನದಿಯಲ್ಲಿ ನಾವೆಯನ್ನು ನಡೆಸುತ್ತಿದ್ದಳು. ಒಂದು ಸಲ ಪರಾಶರ ಋಷಿಯು ನಾವೆಯನ್ನೇರಿ ಕುಳಿತನು. ಇವಳ ಸೌಂದರ್ಯದಿಂದಾಗಿ ಕಾಮಮೋಹಿತನಾದನು. ಹಗಲುಹೊತ್ತಿನಲ್ಲಿಯೇ ಕತ್ತಲನ್ನು ನಿರ್ಮಿಸಿ ಇವಳೊಂದಿಗೆ ಸಮಾಗಮವನ್ನು ಮಾಡಿದನು. ಈಕೆ ಬಸಿರಾದಳು. 'ವ್ಯಾಸ'ನನ್ನು ಹೆತ್ತಳು. ಗಂಡುಮಗುವನ್ನು ಹೆತ್ತು ಕೂಡ ಅವಳು ಕುಮಾರಿಯಾಗಿಯೇ ಉಳಿಯುವಳೆಂದೂ, ಅವಳ ಮೈವಾಸನೆ ಇಲ್ಲದಂತಾಗುವುದೆಂದೂ ಪರಾಶರನು ಅವಳಿಗೆ ವರವಿತ್ತನು. ಅವಳು 'ಯೋಜನಗಂಧಾ' ಎನ್ನಿಸಿದಳು. ಮೀನುಗಾರನು ಕೆಲವು ಶರತ್ತುಗಳನ್ನೊಡ್ಡಿ ಅವಳ ಮದುವೆಯನ್ನು ಶಂತನುವಿನೊಂದಿಗೆ ಮಾಡಿಕೊಟ್ಟನು. ಶಂತನುವಿನಿಂದ ಈಕೆಗೆ ಇಬ್ಬರು ಗಂಡುಮಕ್ಕಳು—ಚಿತ್ರಾಂಗದ ಹಾಗೂ ವಿಚಿತ್ರವೀರ್ಯ. ಇವರೇ ಗದ್ದುಗೆಯ ವಾರಸುದಾರರಾಗಬೇಕೆಂದು ಮದುವೆಗಾಗಿ ಅವಳ ಶರತ್ತಿತ್ತು. ಹೀಗಾಗಿ ಭೀಷ್ಮನು ಹೆಣ್ಣು ಹಾಗೂ ರಾಜ್ಯದ ಸುಖಗಳ ಆಸೆಯನ್ನು ಬಿಡಬೇಕಾಯಿತು. ಸತ್ಯವತಿಯ ದುರದೃಷ್ಟಕ್ಕೆ ಅವಳ ಮಕ್ಕಳಿಬ್ಬರೂ ನಿಪುತ್ರಿಕರೆನ್ನಿಸಿದರು, ಸತ್ತುಹೋದರು. ಹೀಗಾಗಿ ಇವಳು ತನ್ನ ಮಗ ವ್ಯಾಸನಿಂದ ತನ್ನ ಸೊಸೆ ಅಂಬಿಕೆ, ಅಂಬಾಲಿಕೆಯರಿಗೆ ನಿಯೋಗ ಮಾಡಿಸಿ ಮಕ್ಕಳನ್ನು ಹುಟ್ಟಿಸುವ ಹೊತ್ತು ಬಂದಿತು.

೨

ಗಾಧಿರಾಜನ ಮಗಳು. ವಿಶ್ವಾಮಿತ್ರನ ಸೋದರಿ. ಗಾಧಿಯು ಋಚೀಕನಿಂದ ಒಂದು ಸಾವಿರ ಕಪ್ಪು ಕಿವಿಯ ಕುದುರೆಗಳನ್ನು ವಿವಾಹಶುಲ್ಕವಾಗಿ ಪಡೆದು ಅವನೊಂದಿಗೆ ಸತ್ಯವತಿಯು ಮದುವೆಯನ್ನು ಮಾಡಿಕೊಟ್ಟನು. ಗಂಡನು ಇವಳು ಬಯಸಿದಂತಹ ಮಗನನ್ನು ಪಡೆಯಲಿ ಎಂದು ವಿಶಿಷ್ಟ ರೀತಿಯಿಂದ ಅಭಿಮಂತ್ರಿಸಿದ ಚರುವನ್ನು ಇವಳಿಗೆ ಇತ್ತನು. ಅದನ್ನು ಸೇವಿಸಲು ಹೇಳಿದನು. ಇವಳ ತಾಯಿಗಾಗಿಯೂ ಆಗಲೇ ಇನ್ನೊಂದು ಚರುವನ್ನೂ ಕೊಟ್ಟಿದ್ದನು. ತಾಯಿಯು ಮಗಳಿಗೆ ಮೋಸಮಾಡಿ ಚರುಗಳನ್ನು ಅದಲು ಬದಲು ಮಾಡಿದಳು. ಇವಳ ಹೊಟ್ಟೆಯಿಂದ ಒಬ್ಬ ಕ್ಷಾತ್ರಪುತ್ರ ಹುಟ್ಟಿಬರಲಿದ್ದನು. ಇವಳ ವಿಯಕೆಯು ಮೇರೆಗೆ ಕ್ಷಾತ್ರಪ್ರವೃತ್ತಿಯ ಮಗನ ಬದಲು ಮೊಮ್ಮಗನು ಹುಟ್ಟಿದನು. ಅವನೇ ಪರಶುರಾಮ.

**ಸತ್ಯವಾನ :** ಶಾಲ್ವಪತಿ ದ್ಯುಮತ್ಸೇನನ ಮಗ. ಮದ್ರರಾಜ ಅಶ್ವಪತಿಯ ಮಗಳಾದ ಸಾವಿತ್ರಿಯು ಸತ್ಯವಾನನಿಗೆ ಒಲಿದಿದ್ದಳು. ಈತ ಅಲ್ಪಾಯುಷಿ ಎಂಬುದನ್ನು ನಾರದನು ಹೇಳಿದನು. ಆದರೂ ಅವಳು ತನ್ನ ನಿರ್ಧಾರದಿಂದ ವಿಚಲಿತಳಾಗದೆ ಅವನನ್ನೇ ಮದುವೆಯಾದಳು. ಸತ್ಯವಾನನು ಬಲು ಆಜ್ಞಾಧಾರಕನಾಗಿದ್ದನು. ತನ್ನ ತಾಯಿತಂದೆಗಳ ಮೇಲೆ ತುಂಬ ಮಮತೆಯಿತ್ತು. ನಾರದನ ಹೇಳಿಕೆಯಂತೆ ಮದುವೆಯ ತರುವಾಯ ಗೊತ್ತಾದ ದಿನ ಈತನಿಗೆ ಸಾವು ಬಂದಿತು, ಸಾವಿತ್ರಿಯು ಯಮನೊಡನೆ ವಾದ ಹೂಡಿ ಈತನ ಪ್ರಾಣವನ್ನು ಉಳಿಸಿ ಗೆದ್ದಳು.

**ಸನತ್ಕುಮಾರ :** ಬ್ರಹ್ಮದೇವನ ಮಾನಸಪುತ್ರ. ಒಬ್ಬ ಋಷಿ. ಒಬ್ಬ ದೊಡ್ಡ ಯೋಗಿ. ಬ್ರಹ್ಮದೇವನ ಓಲಗದಲ್ಲಿರುತ್ತಿದ್ದನು. ಈತನು ಬ್ರಹ್ಮದೇವನ ಉಪಾಸನೆಯನ್ನು ಕೈಕೊಂಡು ಅವನಿಂದ ಸಾತ್ವತಧರ್ಮದ ಜ್ಞಾನವನ್ನು ಗ್ರಹಿಸಿದನು. ಪ್ರದ್ಯುಮ್ನನಾಗಿ ಭೂಮಿಯ ಮೇಲೆ ಅವತರಿಸಿ ಬಂದನು. ಗಂಗೆಯ ದಡದಲ್ಲಿರುವ ಕನಖಲ ಕ್ಷೇತ್ರದಲ್ಲಿ ಈತನಿಗೆ ಸಿದ್ಧಿಯು ಪ್ರಾಪ್ತವಾಯಿತು. ಈತನು ಅತ್ರಿ-ಗೌತಮರ ವಾದಗಳ ಕಾಲಕ್ಕೆ ಶೀರ್ಷನ್ನಿತ್ತನು. ಪುರೂರವ, ವಿಭಾಂಡಕ, ವೃತ್ರಾಸುರ, ಗಂಧರ್ವರಾಜನಾದ ವಿಶ್ವಾವಸು ಹಾಗೂ ಇನ್ನೂ ಹಲವು ಜನ ಋಷಿಗಳಿಗೆ ಉಪದೇಶವಿತ್ತನು. ಈತ ಯೋಗವೇತ್ತನೂ. ಸಾಂಖ್ಯ–ಜ್ಞಾನ–ವಿಶಾರದನೂ, ಮೋಕ್ಷಧರ್ಮ–ಪ್ರವರ್ತಕನೂ, ಧರ್ಮಶಾಸ್ತ್ರದ ಆಚಾರ್ಯನೂ ಆಗಿದ್ದನು.

**ಸರಮಾ, ಸಾರಮೇಯ :** ದೇವಶುನಿ. ಸ್ವರ್ಗದಲ್ಲಿರುವ ಒಂದು ಹೆಣ್ಣು ನಾಯಿ. ಮಂತ್ರದ್ರಷ್ಟಾರವಾದುದು. ಸಾರಮೇಯರು ಇದರ ಮಕ್ಕಳು. ಜನಮೇಜಯನ ಯಜ್ಞಮಂಟಪದ ಬಳಿ ಹೊರಟಾಗ ಅವನ ಸೋದರರು ಸಾರಮೇಯನನ್ನು ಅಕಾರಣ ಕೋಲಿನಿಂದ ಹೊಡೆದರು. ಹೀಗಾಗಿ ಈ ಹೆಣ್ಣುನಾಯಿಯು ಜನಮೇಜಯರಾಜನಲ್ಲಿಗೆ ದೂರಲೆಂದು ಹೋಯಿತು.ಅವನಾರೂ ಸಮಾಧಾನಕರವಾದ ಉತ್ತರವನ್ನೀಯಲಾಗಲಿಲ್ಲ. ಹೀಗಾಗಿ ಇದು, 'ಯಜ್ಞದಲ್ಲಿ ಕಲ್ಪಿಸಲಾಗದ ವಿಘ್ನಗಳು ಬರಲಿ' ಎಂದು ಜನಮೇಜಯನಿಗೆ ಶಾಪವನ್ನಿತ್ತಿತು. ಬ್ರಹ್ಮದೇವನ ಓಲಗದಲ್ಲಿ ಈ ನಾಯಿ ಇರುತ್ತಿತ್ತು.

**ಸಹದೇವ :** ಐವರು ಪಾಂಡವರಲ್ಲಿ ಕೊನೆಯವ. ಅಶ್ವಿನೀಕುಮಾರರಿಂದ ಮಾದ್ರಿಗೆ ನಿಯೋಗವಾಗಿ ಹುಟ್ಟಿದ ಅವಳಿಗಳಲ್ಲಿ ಕಿರಿಯ. ಈತ ಹುಟ್ಟುವ ಕಾಲಕ್ಕೆ ಈತ ದೊಡ್ಡ ಮನುಷ್ಯನಾಗಲಿರುವನೆಂದು ಆಕಾಶವಾಣಿಯಾಯಿತು. ಈತ ದ್ರೋಣಾಚಾರ್ಯರಿಂದ ಶಸ್ತ್ರಾಸ್ತ್ರವಿದ್ಯೆಗಳನ್ನು ಗಳಿಸಿದನು. ಶುಕ್ರನಿಂದ ಬಿಲ್ಲುವಿದ್ಯೆ ಬಂದಿತು. ಈತನಿಗೆ ದ್ರೌಪದಿಯಲ್ಲದೆ ಇನ್ನು ಮೂವರು ಹೆಂಡಂದಿರಿದ್ದರು. ರಾಜಸೂಯ ಯಜ್ಞದ ಕಾಲಕ್ಕೆ ಹಲವು ಜನ ರಾಜರನ್ನು ಅಂಕಿತಕ್ಕೊಳಪಡಿಸಿದನು. ದಕ್ಷಿಣ ದಿಕ್ಕನ್ನು ಪಾದಾಕ್ರಾಂತ ಮಾಡಿ ಯುಧಿಷ್ಠಿರನಿಗೆ ವಿಪುಲವಾದ ಸಂಪತ್ತನ್ನು ತಂದುಕೊಟ್ಟನು. ಭೀಷ್ಮನ ಅಪ್ಪಣೆಯ ಮೇರೆಗೆ ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನು ಸಲ್ಲಿಸಿದನು. ಶಕುನಿಯನ್ನು ಕೊಲ್ಲುವುದಾಗಿ ಪಣತೊಟ್ಟು ಅವನನ್ನು ಕೊಂದುಬಿಟ್ಟನು. ಅಜ್ಞಾತವಾಸದ ಕಾಲಕ್ಕೆ ವಿರಾಟನಗರದಲ್ಲಿ ತಂತಿಪಾಲನಾಗಿದ್ದನು. ಮಹಾಭಾರತಯುದ್ಧದಲ್ಲಿ ಅತುಲನೀಯವಾದ ಶೌರ್ಯವನ್ನು ಮೆರೆದನು. ಅಂದವಾದ ರೂಪುಳ್ಳವನಾಗಿದ್ದನು, ಉತ್ತಮನಾದ ರಥಿಯಾಗಿದ್ದನು.

**ಸಹಸ್ರಪಾತ (ಡುಂಡುಭ) :** ಒಬ್ಬ ಮಹಾಋಷಿ. ಬ್ರಾಹ್ಮಣನ ಶಾಪದಿಂದಾಗಿ ಈತನಿಗೆ ಎರೆಹುಳುವಿನ ಜನ್ಮಬಂದಿತ್ತು. ಪಾಂಡವರೊಂದಿಗೆ ದ್ವೈತವನದಲ್ಲಿದ್ದನು. ರುರುವಿನ ವಾಗ್ದತ್ತವಧು ಪ್ರಮದ್ವರೆಯು ಹಾವು ಕಡಿದು ಸತ್ತ ಕಾರಣ ಈತ ಕಂಡ ಹಾವುಗಳನ್ನೆಲ್ಲ ಕೊಲ್ಲಲು ಆರಂಭಿಸಿದನು. ಸಹಸ್ರ ಪಾತನನ್ನೂ ಕೊಲ್ಲಲು ಬಂದನು. ಈತ ತಾನು ನಿರ್ವಿಷ, ನಿರಪರಾಧಿಯಾಗಿರುವುದಾಗಿ ಹೇಳಿದನು. ರುರು ಇವನನ್ನು ಬಿಟ್ಟುಕೊಟ್ಟನು. ಈತನು ರುರುವಿಗೆ ಅಹಿಂಸೆಯನ್ನು ಉಪದೇಶಿಸಿದನು. ಈತನಲ್ಲಿ ಯುಧಿಷ್ಠಿರನ ಬಗೆಗೆ ತುಂಬ ಗೌರವವಿತ್ತು.

**ಸಾತ್ಯಕಿ :** ಯುಯುಧಾನನು ಶಿನಿಯ ಮೊಮ್ಮಗನು. ಈತ ಸತ್ಯಕನ ಮಗನಾದ್ದರಿಂದ ಸಾತ್ಯಕಿಯೆನ್ನಿಸಿದ್ದಾನೆ. ದ್ರೌಪದಿಯ ಸ್ವಯಂವರಕ್ಕೆ ಬಂದಿದ್ದನು. ಅರ್ಜುನನಿಂದ ಬಿಲ್ಲುವಿದ್ಯೆಯನ್ನು ಕಲಿತನು. ಶ್ರೀಕೃಷ್ಣನು ಮಧ್ಯಸ್ಥಿಕೆಗೆಂದು ಹೊರಟಾಗ ಈತನು ಸುಸಜ್ಜಿತವಾದ ರಥದಲ್ಲಿ ಅವನನ್ನು ಕರೆದೊಯ್ದನು. ಕೌರವರೊಂದಿಗೆ ಯುದ್ಧ ಮಾಡಬೇಕೆಂಬ ಲವಲವಿಕೆ, ಈರ್ಷೆ ಈತನಲ್ಲಿ ತುಂಬಿದ್ದವು. ಯುಧಿಷ್ಠಿರನ ಏಳು ಜನ ದಂಡನಾಯಕರಲ್ಲಿ ಒಬ್ಬ. ಇವನೊಬ್ಬ ಮಹಾರಥಿ. ಯುದ್ಧದಲ್ಲಿ ಶಕುನಿಯ ಸೈನ್ಯಕ್ಕೆ ಮಣ್ಣು ಮುಕ್ಕಿಸಿದನು. ಭೂರಿಶ್ರವನು ಈತನ ಮಕ್ಕಳನ್ನೆಲ್ಲ ಕೊಂದನು. ಈತ ಅವನ ಮೇಲೆ ತುಂಬ ಕೆರಳಿದನು. ಈತನು ದ್ರೋಣ, ಕೃತವರ್ಮ, ದುರ್ಯೋಧನರನ್ನು ಸೋಲಿಸಿದನು. ಭೂರಿಶ್ರವನೊಂದಿಗಿನ ಕಾಳಗದಲ್ಲಿ ಈತ ತುಂಬ ಕಷ್ಟಕ್ಕೆ ಸಿಲುಕಿಕೊಂಡನು. ಅರ್ಜುನನು ಭೂರಿಶ್ರವನ ತೋಳುಗಳನ್ನು ಕತ್ತರಿಸಿ ಚೆಲ್ಲಿದನು. ಭೂರಿಶ್ರವನು ಆ ಅವಸ್ಥೆಯಲ್ಲಿ ಪ್ರಾಯೋಪವೇಶನವನ್ನು ಕೈಕೊಂಡಾಗ ಸಾತ್ಯಕಿಯು ಅವನನ್ನು ಕೊಂದನು. ಈತನು ಕೃತವರ್ಮನನ್ನು ಕೊಲ್ಲುವುದಾಗಿ ಪಣತೊಟ್ಟಿದ್ದನು. ಅದನ್ನು ಪೂರ್ತಿಗೊಳಿಸಿಯೂ ಬಿಟ್ಟನು. ಈತನು ಎಚ್ಚರಗೇಡಿಯಂತೆ ಕಂಡಕಂಡವರನ್ನೆಲ್ಲ ಕೊಲ್ಲುತ್ತ ನಡೆದಾಗ ಈತನ ಮೇಲೆ ಎಂಜಲುಪಾತ್ರೆಗಳನ್ನು ಎಸೆಯಲಾಯಿತು. ಅದರಿಂದಾಗಿ ಈತ ಸತ್ತುಹೋದನು. ಶ್ರೀಕೃಷ್ಣ ಹಾಗೂ ಅರ್ಜುನರ ಮೇಲೆ ಈತನಿಗೆ ಎಲ್ಲಿಲ್ಲದ ಮಮತೆ.

**ಸಾಧ್ವಿ :** ಆರಟ್ಟ ದೇಶದ ಒಬ್ಬಳು ಸಾಧ್ವಿ. ಇವಳ ಹೆಸರನ್ನು ಉಲ್ಲೇಖಿಸಲಾಗಿಲ್ಲ. ವಯಸ್ಸಿನಲ್ಲಿ ಚಿಕ್ಕವಳಾಗಿದ್ದಳೆಂದೂ, ಬಂಧುಬಾಂಧವರು ತನಗಿರುವುದಾಗಿಯೂ ಹೇಳಿಕೊಳ್ಳುತ್ತಾಳೆ. ಕಳ್ಳರು ಇವಳ ಮೇಲೆ ಅತ್ಯಾಚಾರವನ್ನೆಸಗಿದರು. ಇವಳು ಅವರೆಲ್ಲರಿಗೆ, 'ನಿಮ್ಮ ಕುಲದಲ್ಲಿಯ ಹೆಣ್ಣುಗಳೆಲ್ಲ ಹಾದರಗಿತ್ತಿಯರಾಗಲಿ' ಎಂದು ಶಾಪವಿತ್ತಳು.

ನೋಡಿ : ಶಾಪ, ಕ್ರ. ೯೧, ಸಾಧ್ವಿ > ಕಳ್ಳರು.

**ಸಾಂಬ :** ಶ್ರೀಕೃಷ್ಣ–ಜಾಂಬವತಿಯರ ಮಗ. ಈತ ಉಪಮನ್ಯುವಿನ ಉಪದೇಶದಂತೆ ಶಿವನ ಉಪಾಸನೆಯನ್ನು ಕೈಕೊಂಡನು. ಹೀಗಾಗಿ 'ಸಾಂಬ' ಎಂದು ಹೆಸರು ಬಂದಿತು. ಈತನು ದುರ್ಯೋಧನನ ಮಗಳು ಲಕ್ಷ್ಮಣೆಯನ್ನು ಸ್ವಯಂವರಮಂಟಪದಿಂದ ಓಡಿಸಿಕೊಂಡು ಬಂದನು. ಅವಳನ್ನು ಮದುವೆ ಆದನು. ಹರಿವಂಶದಲ್ಲಿ ಇವನ ಮಡದಿಯ ಹೆಸರು ಗುಣವತಿ ಎಂದಾಗಿದೆ. ಯಾದವರು ದುರ್ವಾಸ ಋಷಿಯನ್ನು ಕುಚೋದ್ಯಕ್ಕೆ ಈಡುಮಾಡಲೆಂದು ಸಾಂಬನಿಗೆ ಹೆಣ್ಣಿನ ವೇಷ ತೊಡಿಸಿದರು. ಈ ಹೆಣ್ಣು ಬಸಿರಾಗಿದ್ದು ಇವಳಿಗೆ ಹೆಣ್ಣು ಹುಟ್ಟುವುದೋ, ಗಂಡೋ ?—ಎಂದು ಋಷಿಯನ್ನು

ಕೇಳಿದರು. ಅದಕ್ಕೆ ದುರ್ವಾಸನು, 'ಇವಳು ಒಂದು ಒನಕೆಯನ್ನು ಹೆರಲಿರುವಳು. ಅದು ನಿಮ್ಮೆಲ್ಲರನ್ನು ನಾಶಪಡಿಸಲಿದೆ' ಎಂದು ಸಿಟ್ಟಿನಿಂದ ಹೇಳಿದನು. ಸಾಂಬನ ಹೆಣ್ಣುವೇಷ ವನ್ನು ಕಳಚಲಾಗಿ ಅದರಲ್ಲಿಂದ ಒಂದು ಕಬ್ಬಿಣದ ಒನಕೆ ಹೊರಬಿದ್ದಿತು. ಯಾದವರು ಹೆದರಿ ಅದನ್ನು ಕಡಲಿಗೆ ಎಸೆದರು. ಈತನು ಪ್ರಭಾಸಕ್ಷೇತ್ರದಲ್ಲಿ ಮೈರೇಯಕ ಎನ್ನುವ ಮದ್ಯವನ್ನು ಸೇವಿಸಿ ಪ್ರದ್ಯುಮ್ನನೊಂದಿಗೆ ಸೆಣಸಾಡುತ್ತ ಮಡಿದುಹೋದನು.

ಸಾಂಬ ಬಲು ರೂಪುಳ್ಳವನಾಗಿದ್ದನು. ಹೀಗಾಗಿಯೇ ಶ್ರೀಕೃಷ್ಣನ ಹಲವು ಜನ ಮಡದಿಯರು ಈತನಿಗೆ ಮರುಳಾಗಿದ್ದರೆಂದು ನಾರದನು ಶ್ರೀಕೃಷ್ಣನ ಗಮನಕ್ಕೆ ತಂದು ಕೊಟ್ಟನು. ಹೀಗಾಗಿ ಶ್ರೀಕೃಷ್ಣನು ಸಾಂಬನಿಗೆ ಕುಷ್ಠರೋಗವಾಗಲೆಂದು ಶಾಪವಿತ್ತನು. ಸೂರ್ಯೋಪಾಸನೆಯಿಂದಾಗಿ ಈತನ ರೋಗ ಗುಣವಾಯಿತು—ಎಂದು ಬೇರೆ ಗ್ರಂಥ ಗಳಲ್ಲಿ ಹೇಳಲಾಗಿದೆ. ಮಹಾಭಾರತದಲ್ಲಿ ಈ ಶಾಪವನ್ನು ಕುರಿತು ಉಲ್ಲೇಖವಿಲ್ಲ.

**ಸಾವಿತ್ರಿ :** ಮದ್ರ ದೇಶದ ರಾಜ ಅಶ್ವಪತಿ ಹಾಗೂ ರಾಣಿ ಮಾಲತಿಯರ ಮಗಳು. ವಸಿಷ್ಠನ ಹೇಳಿಕೆ ಹಾಗೂ ಆಕಾಶವಾಣಿಯ ಸೂಚನೆಯ ಮೇರೆಗೆ ಅಶ್ವಪತಿಯು ಹತ್ತು ಲಕ್ಷ ಗಾಯತ್ರೀ ಜಪಗಳನ್ನು ಮಾಡಿದನು. ಅದರ ಫಲವೆಂದೇ ಅವನಿಗೆ ಇಂತಹ ಗುಣವಂತೆಯೂ ರೂಪುಸಂಪನ್ನಳೂ ಆದ ಮಗಳು ಹುಟ್ಟಿದಳು. ಆತ ಬಲು ಹಣವಂತನಾಗಿದ್ದನು. ಹೀಗಾಗಿ ಇವನ ಮನೆತನದೊಂದಿಗೆ ನಂಟು ಬೆಳೆಸಲು ಯಾರೂ ಸಾಹಸಪಡುತ್ತಿರಲಿಲ್ಲ. ಹೀಗಾಗಿ ಸಾವಿತ್ರಿಗೆ ಬೇಡಿಕೆ ಬರಲೇಯಿಲ್ಲ. ಆದ್ದರಿಂದ ಅವಳು ತಾನಾಗಿಯೇ ವರಸಂಶೋಧನೆಗಾಗಿ ಹೊರಟಳು. ಶಾಲ್ವ ದೇಶದ ರಾಜ ದ್ಯುಮತ್ಸೇನನು ರಾಜ್ಯವನ್ನು ಕಳೆದುಕೊಂಡು ತನ್ನ ಮಡದಿ ಹಾಗೂ ಮಗನೊಂದಿಗೆ ಕಾಡಿನಲ್ಲಿ ವಾಸ ವಾಗಿದ್ದನು. ಸಾವಿತ್ರಿಗೆ ಈತನ ಮಗನಾದ ಸತ್ಯವಾನನ ಸದ್ಗುಣಗಳು ತಿಳಿದಿದ್ದವು. ಅವನನ್ನು ಕಾಣುತ್ತಲೇ ಅವನಿಗೆ ಒಲಿದಳು. ಅವನನ್ನು ಮದುವೆಯಾಗುವುದಾಗಿ ತನ್ನ ತಾಯಿತಂದೆಗಳಿಗೆ ಹೇಳಿದಳು. ಆಗ ನಾರದ ಮುನಿಯೂ ಅಲ್ಲಿದ್ದನು. ಅವನು ಅವಳ ಆಯ್ಕೆ ಉತ್ತಮವಾದುದೇ ಆದರೂ ಸತ್ಯವಾನ ಅಲ್ಪಾಯುಷಿಯಾಗಿರುವನೆಂಬುದನ್ನು ಹೇಳಿದನು. ಈ ಮಾತು ಕೇಳಿ ಸಾವಿತ್ರಿ ತನ್ನ ನಿರ್ಧಾರದಿಂದ ಕದಲಲಿಲ್ಲ. ಎಲ್ಲರೂ ಅವಳಿಗೆ ತಿಳಿಹೇಳಲು ಯತ್ನಿಸಿದರೂ ಅದೆಲ್ಲ ವ್ಯರ್ಥವಾಯಿತು. ಅವಳು ಸತ್ಯವಾನ ನನ್ನೇ ಮದುವೆ ಆದಳು.

ಈಕೆಗೆ ಸತ್ಯವಾನ ಸಾಯಲಿರುವ ದಿನ ಗೊತ್ತಿತ್ತು. ಅದಕ್ಕೂ ಮೊದಲು ಮೂರು ದಿನಗಳಿಂದಲೇ ತ್ರಿರಾತ್ರವ್ರತವನ್ನು ಆರಂಭಿಸಿದಳು. ಅನ್ನನೀರುಗಳನ್ನು ಬಿಟ್ಟುಬಿಟ್ಟಳು. ಯಾವಾಗಲೂ ಸತ್ಯವಾನನೊಂದಿಗೆ ಇರಹತ್ತಿದಳು. ಆ ದಿನ ಸತ್ಯವಾನ ಕಟ್ಟಿಗೆ ತರಲೆಂದು ಕಾಡಿಗೆ ಹೋದನು. ಸಾವು ಇವನನ್ನು ಮುತ್ತಿಕೊಂಡಿತು. ಈಕೆ ಯಮನೊಂದಿಗೆ ಮಾತ ನಾಡಿದಳು. ಯಮ ಸಂತುಷ್ಟನಾಗಿ ಇವಳಿಗೆ ವರವಿತ್ತನು. ಸತ್ಯವಾನನ ಸಾವು ತಪ್ಪಿತು. ಈ ವರಗಳಿಂದಾಗಿ ಮಾವನಿಗೆ ಕಣ್ಣುಗಳು ಹಾಗೂ ರಾಜ್ಯ, ತನಗೆ ನೂರು ಜನ ಗಂಡು ಮಕ್ಕಳು ದೊರೆತರು. ಈಕೆ ಚತುರಸಂಭಾಷಣಾಗಾರ್ತಿಯಾಗಿದ್ದಳು. ತನ್ನ ಅವಿಚಲವಾದ ನಿಷ್ಠೆ ಹಾಗೂ ಪಾತಿವ್ರತ್ಯಗಳಿಂದಾಗಿ ತಾನು ಬಯಸಿದುದನ್ನು ಪಡೆದಳು. ಈಕೆಯು ಕೆಚ್ಚು ಹೊಗಳುವಂಥದೇ.

**ಸೀತೆ :** ಈಕೆ ಸೀರಧ್ವಜ ಜನಕನ ಮಗಳಾದ್ದರಿಂದ ಜಾನಕಿ. ನೇಗಿಲು ಹೊಡೆವಾಗ ನೆಲದಿಂದ ಮೇಲೆ ಬಂದಳೆಂದು ಭೂಮಿಕನ್ಯೆ ಸೀತೆ. ಹಿಂದಿನ ಜನ್ಮದ ವೇದವತಿ. ಇವಳೇ ರಾಮನ ಅವತಾರದ ಕಾಲಕ್ಕೆ ಸೀತೆಯಾಗಿ ಬಂದಳೆಂದು ನಂಬಲಾಗಿದೆ. ಇದೇ ರೀತಿಯಾಗಿ ಇವಳು ಮಂಡೋದರಿಯ ಮಗಳು, ಅಯೋನಿಜೆ ಎಂಬೆಲ್ಲ ಹಲವಾರು ಆಖ್ಯಾನಗಳು ಇವಳನ್ನು ಕುರಿತಾಗಿವೆ. ಈಕೆ ಮದುವೆ ವಯಸ್ಸಿಗೆ ಬಂದಳು. ಆಗ ಜನಕನು ಶಿವನ ಬಿಲ್ಲಿನ ಪಣವೊಡ್ಡಿ ಸರಿಯಾದ ವರನನ್ನು ಆಯ್ಕೆಮಾಡಲು ನಿರ್ಧರಿಸಿದನು. ಶ್ರೀರಾಮನು ಸಹಜವಾಗಿ ಈ ಬಿಲ್ಲನ್ನೆತ್ತಿದ್ದನು. ದಶರಥನ ಒಪ್ಪಿಗೆ ಪಡೆದು ಸೀತೆಯನ್ನು ಮಡದಿಯನ್ನಾಗಿ ಮಾಡಿಕೊಂಡನು. ಈಕೆ ಲಾವಣ್ಯವತಿ. ಬಲು ಚುರುಕು ಬುದ್ಧಿವಂತೆ. ನಿಷ್ಠಾವಂತಳು. ಶ್ರೀರಾಮನನ್ನು ಅಪಾರವಾಗಿ ಪ್ರೀತಿಸುವವಳು. ಆತನ ನೋವುನಲಿವುಗಳಲ್ಲಿ ಬೆರೆತು ಒಂದಾದವಳು. ಅವನ ಬಾಳಸಂಗಾತಿಯಾಗಿದ್ದಳು. ಶ್ರೀರಾಮ ಯುವರಾಜನಾಗಲಿರುವುದನ್ನು ಕೇಳಿ ಸಂತಸಪಟ್ಟಳು. ಆದರೆ ಅವನಿಗೆ ಕಾಡಿಗೆ ಹೋಗುವ ಹೊತ್ತು ಬರುತ್ತಲೇ ಅಷ್ಟೇ ಸಂತೋಷದಿಂದ ಅವನೊಡನೆ ಹೊರಟುಬಿಟ್ಟಳು. ಗಂಡನನ್ನು ಪರದೈವವೆಂದು ಬಗೆದಿದ್ದಳು. ರಾವಣ ಇವಳನ್ನು ಇವಳ ಇಚ್ಛೆಗೆ ಎದುರಾಗಿ ಎತ್ತಿ ಒಯ್ದುನು. ವಿರಾಧನು ಇವಳನ್ನೆತ್ತಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡದ್ದರಿಂದ ಈಕೆ ಪರಪುರುಷನ ಸ್ಪರ್ಶವನ್ನು ತಪ್ಪಿಸಲಾಗಲಿಲ್ಲ. ಇವಳಿಗೆ ಲಕ್ಷ್ಮಣನ ಸೇವಾಭಾವ, ಶುದ್ಧಾಚರಣ, ನಿಷ್ಠೆ ಹಾಗೂ ನಿಷ್ಪಾಪದ ಭಾವಗಳು ತಿಳಿದಿದ್ದವು. ಆದರೂ ಅವನು ಶ್ರೀರಾಮನನ್ನು ಹುಡುಕಲೆಂದು ಹೊರಡಲು ಹಿಂದೇಟು ಹಾಕುತ್ತಿರುವುದನ್ನು ಕಂಡು ಅವನನ್ನು ಬಲು ಕಟುವಾದ ಮಾತುಗಳಿಂದ ಕಟುಕಿದಳು. ಅವನನ್ನು ಈ ರೀತಿ ನೋಯಿಸುವುದು ಇವಳಿಗೆ ಶೋಭಿಸುವ ಮಾತಲ್ಲ. ಬಂಗಾರದ ಜಿಗರೆಗಾಗಿ ಈಕೆ ಆಸೆಪಡುವುದು ಹೆಣ್ಣಿಗೆ ತಕ್ಕ ಮಾತೇ ಸರಿ. ಆದರೆ ಅದಕ್ಕಾಗಿ ಇವಳು ತೆರಬೇಕಾಗಿ ಬಂದ ಬೆಲೆ ತುಂಬ ದುಬಾರಿ. ಲಂಕೆಯಲ್ಲಿರುವಾಗಲೂ ಶ್ರೀರಾಮನ ಬಗೆಗೆ ಅವ್ಯಭಿಚಾರಿಯಾದ ನಿಷ್ಠೆಯನ್ನು ಹೊತ್ತೇ ಇದ್ದಳು. ರಾವಣನ ಕೊಲೆಯಾದ ಬಳಿಕ ಶ್ರೀರಾಮನನ್ನು ಕಾಣಲು ಬಲು ಕಾತರಿಸಿದಳು. ಆದರೆ ಶ್ರೀರಾಮನ ಕಠೋರವಾದ ನುಡಿಗಳನ್ನು ಕೇಳಿ ಕಳವಳಪಟ್ಟಳು. ತನ್ನ ಶುದ್ಧತೆಯನ್ನು ಸಿದ್ಧಮಾಡಿ ತೋರಿಸಲೆಂದು ಅಗ್ನಿದಿವ್ಯ ಮಾಡಿದಳು. ಈಕೆಯ ಬಸಿರಿನ ಬಯಕೆಯನ್ನು ಈಡೇರಿಸಲೆಂದು ಶ್ರೀರಾಮ ಇವಳನ್ನು ತೊರೆದುದು ವಾಸ್ತವವಾಗಿ ಜನನಿಂದೆಗೆ ಹೆದರಿ. ಸೀತೆ ಬಲು ನೊಂದುಕೊಂಡಳು. ವಾಲ್ಮೀಕಿಯು ಈಕೆಯನ್ನು ಬರಮಾಡಿಕೊಂಡನು, ಆಸರೆಯಿತ್ತನು. ಸೀತೆ ಲವ-ಕುಶರನ್ನು ಹೆತ್ತಳು. ವಾಲ್ಮೀಕಿಯು ತನ್ನ ತಪಸ್ಸಿನ ಮೇಲೆ ಆಣೆಯಿಟ್ಟು ಇವಳು ಶುದ್ಧಳಾಗಿರುವಳೆಂಬುದಾಗಿ ಸಾರಿದನು.

'ನಿನ್ನ ಹೊಟ್ಟೆಯನ್ನು ಹೊಗಲು ದಾರಿ ಕೊಡು, ತಾಯೇ !' ಎಂದು ಸೀತೆ ಒರಲಿ ಭೂದೇವಿಯನ್ನು ಬೇಡಿಕೊಂಡಳು. ಆದರ ಮೂಲಕ ತನ್ನ ಶುದ್ಧವಾದ ಶೀಲವನ್ನು ಸಿದ್ಧಪಡಿಸಿ ತೋರಿಸಿದಳು. ಕರ್ತವ್ಯನಿಷ್ಠೆಯಲ್ಲಿ ಇವಳು ಶ್ರೀರಾಮನಿಗಿಂತ ಎಳ್ಳಷ್ಟೂ ಕಡಿಮೆಯವಳಾಗಿರಲಿಲ್ಲ.

**ಸುಗ್ರೀವ :** ಋಕ್ಷರಜಸ್ ಎಂಬ ವಾನರನ ಗ್ರೀವದಿಂದ (ಕತ್ತಿನಿಂದ) ಹುಟ್ಟಿದವನಾದ್ದರಿಂದ ಸುಗ್ರೀವನೆನ್ನಿಸಿದನು. ವಾಲಿಯ ತಮ್ಮ. ದುಂದುಭಿ ಎಂಬ ಮಾಯಾ ರಾಕ್ಷಸ

ನೊಂದಿಗೆ ಕಾಳಗ ಆಗುವವರೆಗೂ ಈ ಸೋದರರಲ್ಲಿ ಒಕ್ಕಟ್ಟಿತ್ತು. ಮುಂದೆ ಮಾತ್ರ ಒಡಕು ಹುಟ್ಟಿತು. ವಾಲಿಯು ಈತನ ಮಡದಿಯನ್ನು ಅಪಹರಿಸಿ ಇವನನ್ನು ಗಡೀಪಾರು ಮಾಡಿಬಿಟ್ಟನು. ಅಂದಿನಿಂದ ಈತ ಋಷ್ಯಮೂಕ ಪರ್ವತದ ಮೇಲೆ ವಾಸವಾಗಿದ್ದನು. ಶ್ರೀರಾಮನಿಗೂ, ಇವನಿಗೂ ಮೊದಲು ಭೆಟ್ಟಿಯಾದುದು ಇಲ್ಲಿಯೇ. ಇಬ್ಬರಲ್ಲೂ ಗೆಳೆತನ ಕುದುರಿತು. ಸೀತೆಯನ್ನು ಕಂಡುಹಿಡಿವಲ್ಲಿ ಶ್ರೀರಾಮನಿಗೆ ತಾನು ನೆರವಾಗುವುದಾಗಿ ಅಗ್ನಿಸಾಕ್ಷಿಯಿಂದ ಪಣತೊಟ್ಟನು. ಶ್ರೀರಾಮನು ಕೂಡ ವಾಲಿಯನ್ನು ಕೊಂದು ಈತನಿಗೆ ರಾಜ್ಯವನ್ನು ಮರಳಿ ಕೊಡಿಸುವುದಾಗಿ ಮಾತುಕೊಟ್ಟನು. ಮದೋನ್ಮತ್ತನಾದ ವಾಲಿಯನ್ನು ಕೊಂದು ಈತನಿಗೆ ರಾಜ್ಯವನ್ನು ಮರಳಿ ಕೊಡಿಸುವುದಾಗಿ ಮಾತು ಕೊಟ್ಟನು. ಮದೋನ್ಮತ್ತನಾದ ವಾಲಿಯನ್ನು ಕೊಂದನು. ಸುಗ್ರೀವನಿಗೆ ಕಿಷ್ಕಿಂಧೆಯ ರಾಜ್ಯವನ್ನು ಮರಳಿ ದೊರಕಿಸಿಕೊಟ್ಟನು. ಹನುಮಂತನಿಂದ ಸೀತೆ ಲಂಕೆಯಲ್ಲಿರುವುದು ತಿಳಿದುಬರುತ್ತಲೇ ಈತನು ಹಿರಿದಾದ ಸೇನಾಪಡೆಯೊಂದಿಗೆ ಶ್ರೀರಾಮನಿಗೆ ನೆರವಿತ್ತನು. ತನ್ನ ಪ್ರಾಣವನ್ನೇ ಪಣಕ್ಕೊಡ್ಡಿ ರಾವಣ, ಕುಂಭಕರ್ಣರೊಂದಿಗೆ ಹೋರಾಡಿದನು. ಈತನ ಹೇಳಿಕೆಯ ಮೇರೆಗೆ ಹನುಮಂತನು ಲಂಕೆಯನ್ನು ಸುಟ್ಟುಬಿಟ್ಟನು. ಇವನು ಕುಂಭ, ಮಹೋದರ, ವಿರೂಪಾಕ್ಷರನ್ನು ಕೊಂದನು. ಶ್ರೀರಾಮ ತನ್ನ ಪಟ್ಟಾಭಿಷೇಕದ ಕಾಲಕ್ಕೆ ಈತನನ್ನು ಯಥೋಚಿತವಾಗಿ ಸತ್ಕರಿಸಿದನು. ಇವನು ವಾಲಿಯ ಮಗ ಅಂಗದನಿಗೆ ಕಿಷ್ಕಿಂಧೆಯ ರಾಜ್ಯಪದವನ್ನಿತ್ತು ಶ್ರೀರಾಮನೊಂದಿಗೆ ತನ್ನ ಬಾಳಿನ ಕೊನೆಯ ದಿನಗಳನ್ನು ಕಳೆದನು, ಜೀವ ಬಿಟ್ಟನು.

**ಸುಜಾತೆ :** ಉದ್ದಾಲಕನ ಮಗಳು. ಕಹೋಡನ ಮಡದಿ. ಅಷ್ಟಾವಕ್ರನ ತಾಯಿ. ಗಂಡ ದುಡ್ಡನ್ನು ಗಳಿಸಿ ತರಬೇಕೆಂದು ಈಕೆ ಹಟತೊಟ್ಟಳು. ಹೀಗಾಗಿ ಕಹೋಡನು ಜನಕರಾಜನಲ್ಲಿಗೆ ಹೋದನು. ಅವನ ಬಂದಿಯು ವಾದದಲ್ಲಿ ಈತನನ್ನು ಸೋಲಿಸಿ ಇವನಿಗೆ ಜಲಸಮಾಧಿಯನ್ನಿತ್ತನು. ಇವಳು ಕಹೋಡನ ಸಾವಿನ ಗುಟ್ಟನ್ನು ಬಹುಕಾಲದ ತನಕ ತನ್ನ ಮಗನಿಗೆ ಹೇಳಿರಲಿಲ್ಲ. ಅಷ್ಟಾವಕ್ರನ ಸೋದರಮಾವನಾದ ಶ್ವೇತಕೇತುವು ಅವನಿಗೆ, ಉದ್ದಾಲಕ ಆವನ ತಂದೆಯಾಗಿರದೆ ಅಜ್ಜನಾಗಿರುವನೆಂದು ಹೇಳಿದನು. ಆಗ ನಡೆದುದನ್ನೆಲ್ಲ ಈಕೆ ಮಗನಿಗೆ ಹೇಳಲೇಬೇಕಾಯಿತು.

**ಸುದರ್ಶನ :** ಅಗ್ನಿ ಹಾಗೂ ದುರ್ಯೋಧನರ ಮಗಳಾದ ಸುದರ್ಶನೆಯರ ಮಗ. ಈತನ ಮಡದಿ ಓಘವತಿ. ಇವರಿಬ್ಬರೂ ಅತಿಥಿಧರ್ಮವನ್ನು ಬಲು ಕರಾರುವಾಕ್ಕಾಗಿ ಆಚರಿಸುತ್ತಿದ್ದರು. ಅತಿಥಿಗಳ ಬಯಕೆಗಳನ್ನು ಈಡೇರಿಸುವುದನ್ನೇ ಧರ್ಮವೆಂದು ಬಗೆದಿದ್ದರು. ಇವರನ್ನು ಪರೀಕ್ಷಿಸಲೆಂದು ಯಮನು ಬ್ರಾಹ್ಮಣರೂಪದಲ್ಲಿ ಬಂದನು. ತನ್ನ ಕಾಮವಾಸನೆಯನ್ನು ಪೂರ್ತಿಗೊಳಿಸೆಂದು ಓಘವತಿಯನ್ನು ಕೇಳಿದನು. ಅವಳು ಅದನ್ನು ಪೂರ್ತಿಗೊಳಿಸಿದಳು. ಯಮನು ನಾಚಿಕೊಂಡು ಇದ್ದುದನ್ನು ಇದ್ದ ಹಾಗೆ ಹೇಳಿದನು. ಈತನಿಗೆ ಕೋಪವಂತೂ ಬರಲೇಯಿಲ್ಲ. ಬದಲು ತನ್ನ ಮಡದಿಯು ಕೈಕೊಂಡ ವ್ರತದಂತೆಯೇ ನಡೆದುಕೊಂಡಿರುವಳೆಂದು ಹೇಳಿದನು.

**ಸುದೇಷ್ಣೆ :** ಕೇಕಯ ರಾಜನ ಮಗಳು. ವಿರಾಟರಾಜನ ಮಡದಿ. ದ್ರೌಪದಿಯು ಅಜ್ಞಾತವಾಸದ ಕಾಲಕ್ಕೆ ಇವಳ ಬಳಿ ಸೈರಂಧ್ರಿಯಾಗಿ ಇದ್ದಳು. ದ್ರೌಪದಿಯ ಶರತ್ತು

ಗಳೆಲ್ಲವನ್ನೂ ಈಕೆ ಒಪ್ಪಿಕೊಂಡಿದ್ದಳು. ಕೀಚಕ ಇವಳ ಮಲಸೋದರ. ಅವನ ಕಣ್ಣು ಸೈರಂಧ್ರಿಯ ಮೇಲೆ ಬಿದ್ದಿತು. ಅವನ ಹಟದಿಂದಾಗಿ ಈಕೆಯು ಸೈರಂಧ್ರಿಯನ್ನು ಕೀಚಕನಲ್ಲಿಗೆ ಕಳುಹಿಸಿದಳು. ವಿರಾಟನು ಸೈರಂಧ್ರಿಯನ್ನು ಹೊರದೂಡಿದ ತರುವಾಯವೂ ಈಕೆ ಅವಳ ಕೋರಿಕೆಯಂತೆ ಹದಿಮೂರು ದಿನಗಳವರೆಗೆ ಅವಳಿಗೆ ಆಸರೆಯನ್ನಿತ್ತಳು. ಇವಳಿಗೆ ಉತ್ತರೆ ಹಾಗೂ ಉತ್ತರಾ ಎಂಬಿಬ್ಬರು ಮಕ್ಕಳು.

**ಸುಂದೋಪಸುಂದರು :** ಹಿರಣ್ಯಕಶಿಪುವಿನ ಕುಲದ ನಿಕುಂಭನ ತಪಸ್ವಿಯಾದ ಮಕ್ಕಳು—ಸುಂದ ಹಾಗೂ ಉಪಸುಂದರು. ಇವರಿಗೆ ಬ್ರಹ್ಮದೇವನ ವರ ಸಿಕ್ಕಿತ್ತು. ಅದರಿಂದಾಗಿ ಮಾಯೆ, ಅಸ್ತ್ರವಿದ್ಯೆ, ಬಯಸಿದಂತಹ ರೂಪವನ್ನು ತಳೆಯುವುದು ಅಲ್ಲದೆ ಒಬ್ಬನಿಗೆ ಇನ್ನೊಬ್ಬನಿಂದಲ್ಲದೆ ಇನ್ನಾರಿಂದಲೂ ಸಾವು ಬಾರದೆಂಬ ಆಶ್ವಾಸನೆಗಳು ದೊರೆತಿದ್ದವು. ಇವರಿಬ್ಬರೂ ಒಬ್ಬರನ್ನೊಬ್ಬರು ತುಂಬ ಪ್ರೀತಿಸುತಿದ್ದರು. ಒಂದೇ ಯೋಚನೆಯಿಂದ ನಡೆದುಕೊಳ್ಳುತ್ತಿದ್ದರು. ವರದಿಂದಾಗಿ ಇವರಿಗೆ ಮಿತಿಯಿಲ್ಲದ ಸಾಮರ್ಥ್ಯ ಪ್ರಾಪ್ತವಾಗಿತ್ತು. ಇವರು ಅದನ್ನು ತಮ್ಮ ಮನಬಂದಂತೆ ಬಳಸಹತ್ತಿದರು. ಇವರಿಂದಾಗಿ ಋಷಿಗಳು ಜೀವ ಹಿಡಿದುಕೊಂಡಿರುವುದು ತುಂಬ ಕಷ್ಟಕರವಾಯಿತು. ಯಜ್ಞಯಾಗಗಳನ್ನು ಪೂರ್ತಿಗೊಳಿಸುವುದು ಒಂದು ಸಮಸ್ಯೆಯಾಯಿತು. ಹೀಗಾಗಿ ಬ್ರಹ್ಮದೇವನು ಯೋಚನೆಗೀಡಾದನು. ತನ್ನ ವರಕ್ಕೆ ಬಾಧೆ ತಟ್ಟದ ಹಾಗೆ ಇವರನ್ನು ನಾಶಪಡಿಸಲು ಒಂದು ಹಂಚಿಕೆಯನ್ನು ಹೂಡಿದನು. ಅವನು ತಿಲೋತ್ತಮೆ ಎಂಬ ಒಬ್ಬ ಅನುಪಮಳಾದ ಅಂದಗಾತಿಯನ್ನು ನಿರ್ಮಿಸಿದನು. ಇವಳು ಅವರಿಬ್ಬರನ್ನೂ ತನ್ನತ್ತ ಒಲಿಸಿಕೊಂಡಳು. ಹೀಗಾಗಿ ಇಬ್ಬರಲ್ಲೂ ಹಗೆತನ ಹುಟ್ಟಿತು. ಇಬ್ಬರೂ ಕಾದಾಡಿ ಅಸು ನೀಗಿದರು.

**ಸುಪ್ರತೀಕ :** ಸುಪ್ರತೀಕ ಹಾಗೂ ವಿಭಾವಸು ಈ ಅಣ್ಣತಮ್ಮಂದಿರು ಮಹರ್ಷಿಗಳಾಗಿದ್ದರು. ಒಂದು ಸಲ ಸುಪ್ರತೀಕನು ದುಡ್ಡಿನಲ್ಲಿ ತನಗೆ ಪಾಲು ಬೇಕೆಂದು ಒತ್ತಾಯ ಮಾಡಿದನು. ವಿಭಾವಸು ಕೆರಳಿ ಈತನಿಗೆ ಶಾಪವನ್ನಿತ್ತನು. ಅದರಿಂದಾಗಿ ಈತ ಆನೆಯಾಗಿ ಹುಟ್ಟಿದನು. ಈತನ ಶಾಪದಿಂದಾಗಿ ವಿಭಾವಸುವು ಆಮೆಯ ಜನ್ಮ ತಳೆದನು. ಇವರಿಬ್ಬರೂ ಆನೆ, ಆಮೆಗಳಾದರೂ ಇವರಲ್ಲಿ ಜಗಳ ತಪ್ಪಲಿಲ್ಲ. ಕೊನೆಯಲ್ಲಿ ಗರುಡನು ಇವರಿಬ್ಬರನ್ನೂ ತಿಂದುಹಾಕಿದನು.

**ಸುಪ್ರಭಾ :** ವದಾನ್ಯಋಷಿಯ ರೂಪವತಿಯಾದ ಮಗಳು. ಅಷ್ಟಾವಕ್ರನು ಇವಳನ್ನು ಕಂಡು ಮರುಳಾದನು. ಋಷಿಯ ಬಳಿ ಇವಳಿಗಾಗಿ ಬೇಡಿಕೆಯನ್ನು ಮುಂದಿಟ್ಟನು. ಋಷಿಯು ಇವನನ್ನು ಪರೀಕ್ಷಿಸಲೆಂದು ಉತ್ತರ ದಿಶೆಗೆ ಹೋಗಲು ಹೇಳಿದನು. ಅಲ್ಲಿ ತಾನನುಭವಿಸಿದುದನ್ನು ಋಷಿಗೆ ಹೇಳಿದನು (ಅನುಶಾಸನ/೧೯). ಸಂತುಷ್ಟನಾದ ಋಷಿಯು ಸುಪ್ರಭೆಯನ್ನು ಅವನಿಗೆ ಕೊಟ್ಟು ಮದುವೆಯನ್ನು ಮಾಡಿದನು.

**ಸುರಭಿ :** ಇದಕ್ಕೆ ಕಾಮಧೇನು ಎಂದೂ ಹೆಸರು. ಇದನ್ನು ದಕ್ಷಕನ್ಯೆಯೆಂದೂ ತಿಳಿಯಲಾಗುತ್ತದೆ. ಕಶ್ಯಪನಿಂದ ಇವಳಿಗೆ 'ನಂದಿನಿ' ಎಂಬ ಹಸು ಹುಟ್ಟಿತು. ಅದೇ

ವಸಿಷ್ಠನ ಹೋಮಧೇನು. ಇದು ಬೃಹಸ್ಪತಿಯನ್ನು ಉಪಾಸನೆಗೈಯುತ್ತಿತ್ತು. ಇದು ತಪಸ್ವಿನಿ ಎನ್ನಿಸಿತ್ತು. ಇದು ಅಮರತ್ವವನ್ನು ಪಡೆಯಿತು. ಬ್ರಹ್ಮದೇವನು ಉಂಡು ತೃಪ್ತನಾಗಿ ತೇಗಿದಾಗ ಇದು ಹುಟ್ಟಿಬಂದದ್ದೆಂಬ ಒಂದು ಕಥೆಯೂ ಇದೆ. ಇದರ ಕೆಚ್ಚಲಿನಿಂದ ಸೋರಿದ ಹಾಲಿನಿಂದಲೇ ಕ್ಷೀರಸಾಗರ ತಯಾರಾಯಿತೆಂಬ ನಂಬಿಕೆಯಿದೆ.

**ಸುಶರ್ಮಾ :** ತ್ರಿಗರ್ತ ದೇಶದ ದೊರೆ. ಈತ ದ್ರೌಪದಿಯ ಸ್ವಯಂವರಕ್ಕೆ ಹಾಜರಿದ್ದನು. ತ್ರಿಗರ್ತರು ಈತನ ಮುಂದಾಳ್ತನದಲ್ಲಿ ವಿರಾಟನ ಹಸುಗಳನ್ನು ಓಡಿಸಿ ಕೊಂಡು ಹೋದರು. ಅದರಿಂದಾಗಿ ಯುದ್ಧವಾಯಿತು. ಅವರಲ್ಲಿ ಭೀಮನು ಸುಶರ್ಮ ನನ್ನು ಸೆರೆಹಿಡಿದನು. ಯುಧಿಷ್ಠಿರನ ಹೇಳಿಕೆಯ ಮೇರೆಗೆ ಇವನನ್ನು ಬಿಟ್ಟುಕೊಟ್ಟನು. ಈತ ಕೌರವಸೇನೆಯಲ್ಲಿದ್ದನು. ಈತನು ಅರ್ಜುನ, ಧೃಷ್ಟದ್ಯುಮ್ನ. ಚೇಕಿತಾನರೊಂದಿಗೆ ಕಾದಾಡಿದನು. ಅರ್ಜುನನನ್ನು ಕೊಲ್ಲಲು ಪಣತೊಟ್ಟ ಸಂಶಪ್ತಕರಲ್ಲಿ ಈತನೂ ಒಬ್ಬ. ಅರ್ಜುನನಿಂದ ಈತ ಕೊಲ್ಲಲ್ಪಟ್ಟನು.

**ಸುಶೋಭನೆ :** ಮಂಡೂಕರಾಜ ಆಯು ಈತನ ಚೆಲುವೆಯಾದ ಮಗಳು. ಇಕ್ಷ್ವಾಕು ಕುಲದ ರಾಜ ಪರೀಕ್ಷಿತ ಇವಳನ್ನು ಕಂಡು ಮರುಳಾದನು. ಅವನು ತನ್ನ ಮನದ ಬಯಕೆಯನ್ನು ಇವಳಿಗೆ ಹೇಳಿದನು. ಈಕೆ ಶರತ್ತಿನೊಂದಿಗೆ ಒಪ್ಪಿಗೆಯಿತ್ತಳು. ದೊರೆಯು ಇವಳಿಗೆ ಎಂದಿಗೂ ನೀರು ಕಾಣದ ಹಾಗೆ ವ್ಯವಸ್ಥೆಯನ್ನು ಮಾಡತಕ್ಕದ್ದು. ಅಂದರೇನೆ ತಾನು ಮದುವೆಗೆ ಸಿದ್ಧಳು ಎಂದು ಹೇಳಿದಳು. ರಾಜ ಒಪ್ಪಿದ. ಸುಖದಿಂದ ಸಂಸಾರ ಸಾಗಿತ್ತು. ಒಂದು ಸಲ ತಪ್ಪಿ ಬಾವಿಯ ನೀರು ಕಾಣುತ್ತಲೇ ಈಕೆ ಅದರಲ್ಲಿ ಹಾರಿಕೊಂಡಳು. ಮಾಯವಾಗಿಬಿಟ್ಟಳು. ಆವಳೊಬ್ಬ ಮೋಸಗಾರ್ತಿ ಎಂದೂ, ಈಗಾಗಲೇ ಇವಳು ಹಲವು ಜನ ರಾಜರುಗಳಿಗೆ ಮೋಸ ಮಾಡಿರುವುದಾಗಿಯೂ ಆಯುವುಇವಳಿಗಿತ್ತ ಶಾಪದಿಂದ ತಿಳಿದುಬರುತ್ತದೆ.

**ಸೂರ್ಯ (ಆದಿತ್ಯ) :** ಆದಿತ್ಯವು ವೈವಸ್ವತ ಮನ್ವಂತರದಲ್ಲಿದ್ದ ದೇವತೆಗಳ ಒಂದು ಸಮೂಹದ ಹೆಸರು. ಅದಿತಿಯ ಹನ್ನೆರಡು ಜನ ಮಕ್ಕಳು ಹನ್ನೆರಡು ತಿಂಗಳು ಗಳ ದ್ಯೋತಕರೆನಿಸಿದ್ದಾರೆ. ಇಂದ್ರನು ಅದಿತಿಯ ಮಗನು, ಆದರೂ ಈತನನ್ನು ಬೇರೆ ಯಾಗಿಯೇ ಎಣಿಸಲಾಗುತ್ತದೆ. ಅದಿತಿಯ ಒಂದು ಅವಳಿಯಲ್ಲಿ ಈತನ ಹೆಸರು ಇದೆ. ತನ್ನ ಹೊಟ್ಟೆಯಿಂದ ಸಾಧ್ಯದೇವನು ಹುಟ್ಟಿಬರಲೆಂಬುದಕ್ಕಾಗಿ ಅದಿತಿಯು ಬ್ರಹ್ಮನನ್ನು ಉದ್ದೇಶಿಸಿ ಅನ್ನವನ್ನು ಬೇಯಿಸುತ್ತಿದ್ದಳು. ಆಹುತಿಯನ್ನಿತ್ತು ಉಳಿದ ಅನ್ನವನ್ನು ತಾನು ಉಣ್ಣುತ್ತಿದ್ದಳು. ಹೀಗಾಗಿ ಪ್ರತಿಸಲವೂ ಇವಳಿಗೆ ಅವಳಿಮಕ್ಕಳು ಹುಟ್ಟುತ್ತಿ ದ್ದವು. ದ್ವಾದಶಾದಿತ್ಯರು ಎಂದರೇನೆ ಸಾಧ್ಯದೇವತೆಗಳು.

ನೋಡಿ : ವ್ಯಕ್ತಿವಿಶೇಷ: ವಿವಸ್ವಾನ.

**ಸಂಜಯ :** ಒಬ್ಬ ಪ್ರಾಚೀನ ರಾಜ. ಈತ ಯಮಸಭೆಯಲ್ಲಿದ್ದು ಯಮನ ಉಪಾಸನೆಯನ್ನು ಮಾಡುತ್ತಿದ್ದನು. ಪರ್ವತ ಹಾಗೂ ನಾರದ ದೇವರ್ಷಿಗಳು ಈತನ ಸ್ನೇಹಿತರು. ಬ್ರಾಹ್ಮಣರು ಮಕ್ಕಳನ್ನು ಪಡೆಯಲೆಂದು ನಾರದನನ್ನು ಆರಾಧಿಸಿ ಅವನಿಂದ ವರಗಳನ್ನು ಪಡೆದುಕೊಂಡರು. ಈತನಿಗೆ ಸುವರ್ಣಷ್ಠೀವಿ ಎಂಬ ಮಗನು ಹುಟ್ಟಿದನು. ಕಳ್ಳರು ಆತನನ್ನು ಕೊಂದರು. ಈತನಿಗೆ ಬಲು ದುಃಖವಾಯಿತು. ನಾರದನು ಈತನ

ಮಗನನ್ನು ಜೀವಿತಗೊಳಿಸಿ ಈತನನ್ನು ದುಃಖದಿಂದ ಬಿಡುಗಡೆಮಾಡಿದನು. ಸಂಜಯನು ಪರ್ವತಋಷಿಯ ಬಳಿ ಪುತ್ರಪ್ರಾಪ್ತಿಗಾಗಿ ವರವನ್ನು ಕೇಳಿದನು. ಆದರಿಂದಾಗಿ ಈತನಿಗೆ ಮಗ ಹುಟ್ಟಿದನು. ಅವನೂ ಸಾವನ್ನಪ್ಪಿದನು. ನಾರದನ ಕೃಪೆಯಿಂದ ಅವನೂ ಜೀವ ತಳೆದನು.

**ಸೇದುಕ :** ಅಸ್ತ್ರೋಪಾಸ್ತ್ರಗಳಲ್ಲಿ ನುರಿತವನಾದ ಒಬ್ಬ ದೊರೆ. ನೀತಿವಂತನು. ವೃಷದರ್ಭನ ಸಮಕಾಲೀನನು. ವೃಷದರ್ಭನು ಬೆಳ್ಳಿ-ಬಂಗಾರಗಳಲ್ಲದೆ ಇನ್ನೇನನ್ನೂ ದಾನವಾಗಿ ಕೊಡುವುದಿಲ್ಲೆಂಬುದು ಈತನಿಗೆ ಗೊತ್ತಿತ್ತು. ಆದರೂ ಕಪ್ಪು ಕಿವಿಗಳ ಒಂದು ಸಾವಿರ ಕುದುರೆಗಳನ್ನು ಗುರುದಕ್ಷಿಣೆಯಾಗಿ ಕೊಡಲೆಂದು ದಾನ ಕೇಳಲು ಒಬ್ಬ ಬ್ರಾಹ್ಮಣನನ್ನು ವೃಷದರ್ಭನಲ್ಲಿಗೆ ಕಳಿಸಿಕೊಟ್ಟನು. ಬ್ರಾಹ್ಮಣ ನಿರಪರಾಧನಿದ್ದೂ ವೃಷದರ್ಭನಿಂದ ಹೊಡೆತಗಳನ್ನು ತಿನ್ನಬೇಕಾಯಿತು.

**ಸೋಮ :** ಸೋಮನೆಂದರೆ ಚಂದ್ರ. ಈತನು ದಕ್ಷನ ಇಪ್ಪತ್ತೇಳು ಜನ ಕನ್ಯೆಯರನ್ನು ಮದುವೆಯಾಗಿದ್ದನು. ಅವರೆಲ್ಲರಲ್ಲಿ ರೋಹಿಣಿ ಈತನ ಅಚ್ಚುಮೆಚ್ಚಿನವಳು. ಹೀಗಾಗಿ ಉಳಿದವರತ್ತ ಅಷ್ಟಾಗಿ ಗಮನವಿರುತ್ತಿರಲಿಲ್ಲ. ದಕ್ಷನು ಎಲ್ಲರೊಂದಿಗೆ ಸರಿಸಮನಾಗಿ ನಡೆದುಕೊಳ್ಳಲೆಂದು ಎರಡು-ಮೂರು ಸಲ ಈತನಿಗೆ ಹೇಳಿ ನೋಡಿದನು. ಈತ ಉದಾಸೀನ ಮಾಡಿಬಿಟ್ಟನು. ದಕ್ಷನು ಈತನಿಗೆ ಕ್ಷಯಬೇನೆಯಾಗಲೆಂದು ಶಾಪವಿತ್ತನು. ಸೋಮನು ಪ್ರಭಾಸಕ್ಷೇತ್ರದಲ್ಲಿ ಮಿಂದು ಬಂದ ಕಾರಣ ಮತ್ತೆ ತನ್ನ ತೇಜಸ್ಸನ್ನು ಪಡೆದನು. ದೇವತೆಗಳು ಚಂದ್ರನಿಗಾಗಿ ದಕ್ಷನ ಬಳಿ ಉಃಶಾಪಕ್ಕಾಗಿ ಕೇಳಿದರು. ಆದರಿಂದಾಗಿ ತಿಂಗಳಲ್ಲಿ ಅರೆತಿಂಗಳು ಕ್ಷಯಹೊಂದುವನೆಂದೂ, ಅರೆತಿಂಗಳು ವೃದ್ಧಿಯನ್ನು ಹೊಂದುವನೆಂದೂ ಮಹಾಭಾರತವು ಹೇಳುತ್ತದೆ. ಈತನು ದೇವತೆಗಳೊಂದಿಗೆ ಅಮೃತವನ್ನು ಕುಡಿಯುತ್ತಲಿದ್ದ ರಾಹುವನ್ನು ಗುರುತಿಸಿದನು. ವಿಷ್ಣುವು ಅವನ ತಲೆ ಹಾರಿಸಿದನು. ಹೀಗಾಗಿ ಗ್ರಹಣದ ವೇಳೆಗೆ ರಾಹು ಚಂದ್ರನನ್ನು ಮುತ್ತಿಕೊಳ್ಳುತ್ತಾನೆ. ಈತನು ಮನುವಿನಿಂದ ಚಾಕ್ಷುಷೀ ವಿದ್ಯೆಯನ್ನು ಕಲಿತನು. ಈತನು ಮುಂದೆ ಅದನ್ನು ವಿಶ್ವಾವಸುವಿಗೆ ಕಲಿಸಿದನು. ಸಪ್ತರ್ಷಿಗಳು ಪೃಥ್ವಿಯನ್ನು ದೋಹನ ಮಾಡಿದಾಗ ಈತನು ವತ್ಸನಾಗಿದ್ದನು. ಈತನು ತನ್ನ ಮಗಳಾದ ಭದ್ರೆಯನ್ನು ಉತಥ್ಯನಿಗೆ ಕೊಟ್ಟು ಮದುವೆಮಾಡಿದನು. ತನ್ನ ಸಾವಿನ ಬಳಿಕ ಅಭಿಮನ್ಯುವು ಸೋಮನಲ್ಲಿ ವಿಲೀನನಾದನು.

**ಸೋಮಕ :** ಸೂರ್ಯನ ಮಗನಾದ ಯಮನ ಉಪಾಸಕನಾದ ಒಬ್ಬ ಪ್ರಾಚೀನ ರಾಜ. ಈತನಿಗೆ ನೂರು ಜನ ಮಡದಿಯರು. ಒಬ್ಬನೇ ಮಗನಿದ್ದನು. ಅವನು ಈತನ ಮುಪ್ಪಿನಲ್ಲಿ ಹುಟ್ಟಿದವನು. ತನಗೆ ಹಲವು ಜನ ಗಂಡುಮಕ್ಕಳಾಗಲೆಂದು ಈತ ಬಯಸಿದ್ದನು. ಅದಕ್ಕಾಗಿ ಏನು ಬೇಕಿದ್ದುದನ್ನೆಲ್ಲ ಮಾಡಲು ಸಿದ್ಧನಿದ್ದನು. ಈತನ ಪುರೋಹಿತನು ಅದಕ್ಕಾಗಿ ಇದ್ದ ಒಬ್ಬ ಮಗನಾದ ಜಂತುವನ್ನು ಬಲಿಕೊಡಲು ಹೇಳಿದನು. ರಾಜನು ನರಮೇಧಯಜ್ಞವನ್ನು ಮಾಡಿ ತನ್ನ ಮಗನನ್ನೇ ಯಜ್ಞಪಶು ಮಾಡಿ ಅವನ ಮಾಂಸದಿಂದ ಹವನವನ್ನು ಮಾಡಿದನು. ಆದರಿಂದ ಹೊರಬಿದ್ದ ಹೊಗೆಯು ರಾಣಿಗಳೆಲ್ಲರ ಹೊಟ್ಟೆಯನ್ನು ಹೊಕ್ಕು ಅವರೆಲ್ಲ ಬಸಿರಾದರು. ಮುಂದೆ ಈತನಿಗೆ ನೂರು ಜನ ಗಂಡುಮಕ್ಕಳಾದರು. ಮಾನವನನ್ನು ಕೊಂದುದಕ್ಕಾಗಿ ಆ ಬ್ರಾಹ್ಮಣ ಮಾತ್ರ ನರಕಕ್ಕೆ ಹೋಗು

ಮಂತಾಯಿತು. ಸೋಮಕನಿಗೆ ಸ್ವರ್ಗಪ್ರಾಪ್ತಿಯಾಗಿತ್ತು. ಆದರೆ ಅವನು ಯಮನನ್ನು ಬೇಡಿಕೊಂಡು ತನ್ನ ಪುರೋಹಿತನೊಡನೆ ನರಕದಲ್ಲಿಯೇ ಉಳಿದನು. ಕಾಲಾಂತರದಲ್ಲಿ ಇವರಿಬ್ಬರಿಗೂ ಸದ್ಗತಿ ಪ್ರಾಪ್ತವಾಯಿತು.

**ಸೋಮದತ್ತ :** ಕುರುವಂಶದ ಮಹಾರಾಜನಾದ ಪ್ರತೀಪನ ಮೊಮ್ಮಗನು. ಬಾಹ್ಲೀಕನ ಮಗನು. ಘಟೋತ್ಕಚನು ಈತನ ಧ್ವಜವನ್ನು ಹಿಡಿದೆಳೆದನು. ಶಿನಿಯು ಈತನನ್ನು ಸೋಲಿಸಿದನು. ಈತನಿಗೆ ಶಂಕರನ ವರದಾನ ಲಭಿಸಿತ್ತು, ಭೂರಿ, ಭೂರಿಶ್ರವ ಹಾಗೂ ಶಲರೆಂಬ ಮೂರು ಜನ ಗಂಡುಮಕ್ಕಳು ಈತನಿಗೆ. ಭೂರಿಶ್ರವನ ಸಾವಿನ ಸೇಡು ತೀರಿಸಿಕೊಳ್ಳಲೆಂದು ಈತನು ಶಿನಿಯ ಮಗನಾದ ಸಾತ್ಯಕಿಯ ಮೇಲೆ ಏರಿಹೋದನು. ಈತನೇ ಸೋಲನ್ನು ಅನುಭವಿಸಬೇಕಾಯಿತು. ಈತನು ಸಾತ್ಯಕಿಯೊಡನೆ ಮತ್ತೆ ಮತ್ತೆ ಕಾಳಗ ಹೂಡಿದನು. ಆದರೂ ಯಶ ದೊರಕಲಿಲ್ಲ. ಬದಲು ಸಾತ್ಯಕಿಯಿಂದಲೇ ಈತನಿಗೆ ಸಾವು ಬಂದಿತು.

**ಸೋಮಶ್ರವ :** ಒಬ್ಬ ತಪಸ್ಯಾಪರಾಯಣನಾದ ಋಷಿ. ಶ್ರುತಶ್ರವ ಋಷಿಗೆ ಹೆಣ್ಣುನಾಗರಹಾವಿನ ಹೊಟ್ಟೆಯಿಂದ ಹುಟ್ಟಿದ ಮಗ. ಈತ ತನ್ನ ಮಗನಾಗಲೆಂದು ಜನಮೇಜಯನು ಶ್ರುತಶ್ರವನನ್ನು ಕೋರಿದನು. ಯಾರು ಏನನ್ನು ಕೇಳಿದರೂ ಅದನ್ನವನಿಗೆ ಕೊಡುವ ಶರತ್ತಿನೊಂದಿಗೆ ಈತನು ಜನಮೇಜಯನ ಪೌರೋಹಿತ್ಯವನ್ನು ಒಪ್ಪಿಕೊಂಡನು. ಹೀಗಾಗಿ ಆಸ್ತಿಕನು ಸರ್ಪಸತ್ರವನ್ನು ನಿಲ್ಲಿಸೆಂದು ಕೇಳಿಕೊಳ್ಳುತ್ತಲೇ ಜನಮೇಜಯನು ಅದನ್ನು ಒಪ್ಪಿಕೊಳ್ಳಲೇಬೇಕಾಯಿತು. ಈತ ಮೌನವ್ರತಿಯಾಗಿದ್ದನು.

**ಸೌತಿ :** ರೋಮಹರ್ಷಣನ ಮಗ ಉಗ್ರಶ್ರವನೇ ಸೌತಿ ಎಂಬ ಹೆಸರಿನಿಂದ ಪ್ರಸಿದ್ಧನು. ಈತನು ಶೌನಕಾದಿ ಋಷಿಗಳಿಗೆ ಮಹಾಭಾರತವನ್ನು ಹೇಳಿದನು. ಇಂದು ನಮ್ಮೆದುರು ಇರುವ ಮಹಾಭಾರತದಲ್ಲಿ ಸೌತಿಯು ಬರೆದು ಬೆಳೆಯಿಸಿದ ಭಾಗವು ಸಾಕಷ್ಟಿದೆ. ಬಲರಾಮನಿಂದ ತಂದೆಯು ಸಾವು ಬಂದ ತರುವಾಯ 'ಈತನು ಪುರಾಣಗಳನ್ನು ಹೇಳುವನು' ಎಂದು ಕಣಿ ನುಡಿದಿದ್ದನು.

**ಸೌದಾಸ (ಕಲ್ಮಾಷಪಾದ) :** ಸುದಾಸರಾಜನ ಮಗನು. ವಸಿಷ್ಠನಿಗೆ ಮರು ಶಾಪವನ್ನು ಕೊಡಲೆಂದು ಕೈಯಲ್ಲಿ ಹಿಡಿದಿದ್ದ ಉದಕವನ್ನು ಈತನು ತನ್ನ ಕಾಲುಗಳ ಮೇಲೆಯೇ ಚೆಲ್ಲಿಕೊಂಡ ಕಾರಣ ಅವು ಚಿತ್ರವಿಚಿತ್ರವಾದ ಬಣ್ಣಗಳನ್ನು ತಳೆದವು. ಹೀಗಾಗಿ ಈತನಿಗೆ ಕಲ್ಮಾಷಪಾದನೆಂಬ ಹೆಸರು ಬಂದಿತು. ಹಿಂತಿರುಗಿ ಬರುವಾಗ ಈತನಿಗೂ, ವಿಶ್ವಾಮಿತ್ರನ ಮಗ ಶಕ್ತಿಗೂ ಭೆಟ್ಟಿಯಾಯಿತು. ದಾರಿ ಬಲು ಇಕ್ಕಟ್ಟಿನದಿತ್ತು. ಒಂದು ಸಲಕ್ಕೆ ಒಬ್ಬನೇ ಅಲ್ಲಿಂದ ದಾಟಬಹುದಿತ್ತು. ಈತನು ಶಕ್ತಿಗೆ ಪಕ್ಕಕ್ಕೆ ಸರಿಯಲು ಹೇಳಿದನು. ಅವನಂತೂ ಸರಿಯಲೇ ಇಲ್ಲ. ಬದಲು 'ದಾರಿ ಬ್ರಾಹ್ಮಣರದು, ಮೊದಲಿಗೆ ರಾಜನೇ ದಾರಿ ಬಿಡತಕ್ಕದ್ದೆಂದು ಧರ್ಮವು ಹೇಳುವುದು' ಎಂದನು. ರಾಜನು ಶಕ್ತಿಯನ್ನು ರಾಕ್ಷಸನಂತೆ ಥಳಿಸಿದನು. 'ನೀನು ನರಮಾಂಸಭಕ್ಷಕ ರಾಕ್ಷಸನಾಗು' ಎಂದು ಬ್ರಾಹ್ಮಣ ಶಾಪವಿತ್ತನು. ಈ ಪ್ರಸಂಗ ಮಹಾಭಾರತದ್ದು. ವಿಶ್ವಾಮಿತ್ರನು ಈತನ ಯಜ್ಞವನ್ನು ಒಪ್ಪಿಕೊಂಡಿದ್ದರಿಂದ ವಸಿಷ್ಠ-ವಿಶ್ವಾಮಿತ್ರರಲ್ಲಿ ಜಗಳಕ್ಕಿಟ್ಟುಕೊಂಡಿತು ಹಗೆಗಳಾ

ದರು. ಶಾಪವನ್ನೀಯುವವನು ವಸಿಷ್ಠನ ಮಗನಾದ ಶಕ್ತಿ ಎಂಬುದು ತಿಳಿಯುತ್ತಲೇ ಈತನು ಉಃಶಾಪವನ್ನು ಕೇಳಿದನು. ನರಮಾಂಸಭಕ್ಷಕನಾಗೆಂದು ಶಾಪವಿತ್ತ ಶಕ್ತಿಯನ್ನೇ ಈತನು ತಿಂದು ನರಮಾಂಸಭಕ್ಷಣೆಗೆ ಆರಂಭ ಮಾಡಿದನು. ಇವನು ವಸಿಷ್ಠನ ನೂರು ಜನ ಮಕ್ಕಳನ್ನು ಕೊಂದು ತಿಂದುಬಿಟ್ಟನು. ಒಂದು ಸಲ ಈತ ಕಾಮಕೇಳಿಯಲ್ಲಿ ನಿರತರಾದ ಬ್ರಾಹ್ಮಣದಂಪತಿಗಳನ್ನು ಕಂಡನು. ಈತನು ಗಂಡನನ್ನು ತಿಂದನು. ಆಗ ಆ ಹೆಣ್ಣು, 'ನೀನು ಹೆಣ್ಣನ್ನು ಕೂಡಿಕೊಂಡೊಡನೆ ನಿನಗೆ ಸಾವು ಬರಲಿ' ಎಂದು ಶಾಪವಿತ್ತಳು. 'ಅವಳು ಸತಿಹೋದಬಳಿಕ ಮೈಮೇಲೆ ಗಂಗೆಯ ಹನಿ ಬೀಳುತ್ತಲೇ ನೀನು ಶಾಪ ಮುಕ್ತನಾಗುವೆ' ಎಂದು ವಸಿಷ್ಠನು ಅವನಿಗೆ ಉಃಶಾಪವಿತ್ತನು. ಆದರೆ ಆ ಬ್ರಾಹ್ಮಣಿ ಮಾತ್ರ ಈತನಿಗೆ ಯಾವಾಗಲೂ ರಾಕ್ಷಸನಾಗಿಯೇ ಇರಲು ಶಾಪವಿತ್ತಳು. ಸೌದಾಸನೂ ಕೂಡ ಅವಳಿಗೆ 'ನೀನು ಮಗನೊಂದಿಗೆ ಪಿಶಾಚಿಯಾಗು' ಎಂದು ಮರುಶಾಪವಿತ್ತನು. ಗರ್ಗಮುನಿಯು ಗಂಗೋದಕವನ್ನು ಕೊಂಡುಹೋಗುವಾಗ ಕೆಲವು ಹನಿಗಳು ಇಬ್ಬರ ಮೈಮೇಲೂ ಬಿದ್ದು ಇವರಿಬ್ಬರೂ ಶಾಪಮುಕ್ತರಾದರು.

ಸೌದಾಸನ ರಾಕ್ಷಸತ್ವ ಮುಗಿದ ತರುವಾಯ ವಸಿಷ್ಠನು ಅವನಿಗೆ ಪಟ್ಟಾಭಿಷೇಕವನ್ನು ಮಾಡಿದನು. ಪತಿವ್ರತೆಯ ಶಾಪದಿಂದಾಗಿ ಅವನಿಗೆ ಮಕ್ಕಳಾಗದಂತಾಯಿತು. ಆಗ ಇವನು ವಸಿಷ್ಠನಿಗೆ ಮದಯಂತಿಯಿಂದ ಮಕ್ಕಳನ್ನು ಹೆತ್ತುಕೊಡಲು ಹೇಳಿದನು. ವಸಿಷ್ಠನಿಂದ ಅವಳಿಗಾದ ಮಗನ ಹೆಸರು ಅಶ್ಮಕ. ಮಹಾಭಾರತದ ಆಶ್ವಮೇಧಿಕಪರ್ವದಲ್ಲಿ ತುಸು ಬೇರೆ ಕಥೆಯಿದೆ. ಗುರುಪತ್ನಿಯಾದ ಅಹಲ್ಯೆಯು ಗುರುದಕ್ಷಿಣೆಯಾಗಿ ಮದಯಂತಿಯ ರತ್ನಕುಂಡಲಗಳನ್ನು ತಂದುಕೊಡೆಂದು ಗೌತಮನ ಶಿಷ್ಯನಾದ ಉತ್ತಂಕನಿಗೆ ಹೇಳಿದಳು. ರಾಕ್ಷಸನಾಗಿದ್ದ ಸೌದಾಸನು ಅವನನ್ನು ತಿನ್ನಲು ಹವಣಿಸಿದನು. ಆದರೆ ಉತ್ತಂಕನು ಅವನಿಗೆ 'ನನ್ನ ಕೆಲಸವಾಗುತ್ತಲೇ ನಾನು ತಪ್ಪದೆ ನಿನ್ನ ಬಳಿಗೆ ಬರುವೆ' ಎಂದು ಮಾತು ಕೊಟ್ಟನು. ರಾಕ್ಷಸ ಸೌದಾಸನು ಕುಂಡಲಗಳನ್ನು ಕೇಳಲೆಂದು ಅವನನ್ನು ಮದಯಂತಿಯ ಬಳಿಗೆ ಕಳಿಸಿದನು. ಕುಂಡಲಗಳನ್ನು ಕೊಡಬೇಕಿದ್ದರೆ ತನ್ನ ಗಂಡನ ಕುರುಹುಗಳನ್ನೇ ನಾದರೂ ತಾಯೆಂದು ಅವಳು ಹೇಳಿದಳು. ಅವಳಿಗೆ ಮನದಟ್ಟಾದಬಳಿಕ ಅವನಿಗೆ ತನ್ನ ಕುಂಡಲಗಳನ್ನು ಕೊಟ್ಟಳು. ಅವುಗಳನ್ನು ಎಚ್ಚರದಿಂದ ಕಾಪಾಡಿಕೊಂಡು ಹೋಗೆಂದು ಅವನಿಗೆ ಹೇಳಿದಳು. ಕೊಟ್ಟ ಮಾತಿನಂತೆ ಉತ್ತಂಕನು ಸೌದಾಸನಲ್ಲಿಗೆ ಹೋದನು. ಆದರೆ ಅವನು ಉತ್ತಂಕನನ್ನು ತಿನ್ನದೆ ಹಾಗೆಯೇ ಬಿಟ್ಟುಕೊಟ್ಟನು.

**ಸ್ಥೂಣಾಕರ್ಣ:** ಕುಬೇರನ ಸಂಗಡಿಗನಾದ ಒಬ್ಬ ಯಕ್ಷ. ಈತನಲ್ಲಿ ವರ ಕೊಡುವ ಸಾಮರ್ಥ್ಯ ಇತ್ತು. ತನ್ನ ತಂದೆಯ ಮೇಲೆ ಬಾದೆರಗಿದ ಸಂಕಟವನ್ನು ಪರಿಹರಿಸಲೆಂದು ಶಿಖಂಡಿನಿಗೆ ಕೆಲಕಾಲಕ್ಕಾಗಿ ಗಂಡುತನ ಬೇಕಿತ್ತು. ಅವಳು ಸ್ಥೂಣಾ ಕರ್ಣನ ಬಳಿ ಬೇಡಿದಳು. ಆಗ ಅವನು ಹೆಣ್ಣುತನವನ್ನು ಅವಳು ಹಿಂತಿರುಗಿ ಪಡೆಯುವ ಮಾತಿನ ಮೇಲೆ ಕೆಲಕಾಲದವರೆಗೆ ತನ್ನ ಗಂಡುತನವನ್ನು ಕೊಡಲೊಪ್ಪಿದನು. ಕುಬೇರನಿಗೆ ಈ ವಿನಿಮಯ ಹಿಡಿಸಲಿಲ್ಲ. ಕುಬೇರನು ಸ್ಥೂಣಾಕರ್ಣನಿಗೆ ಶಾಪವಿತ್ತು ಅವನ ಹೆಣ್ಣು ತನವನ್ನು ಸ್ಥಿರಗೊಳಿಸಿಬಿಟ್ಟನು. ಹೀಗಾಗಿ ಶಿಖಂಡಿನಿ ಕೊನೆಯವರೆಗೂ ಗಂಡುತನವನ್ನು ಹೊಂದಬೇಕಾಯಿತು.

**ಸ್ಥೂಲಶಿರ :** ಯುಧಿಷ್ಠಿರನ ಓಲಗದ ಒಬ್ಬ ಋಷಿ. ಹಿಂದಕ್ಕೆ ಮೇರುಪರ್ವತದ ಪೂರ್ವೋತ್ತರದ ಬದಿಯಲ್ಲಿ ತಪಸ್ಸುಗೈಯುತ್ತಿದ್ದನು. ಈತನು ಮರಗಳಿಗೆ ಶಾಪ ವಿತ್ತನು. ಶರಪಂಜರದ ಮೇಲಿದ್ದ ಭೀಷ್ಮನ ಭೆಟ್ಟಿಗೆಂದು ಹೋಗಿದ್ದನು. ವಾಲ್ಮೀಕಿ ರಾಮಾಯಣದಲ್ಲಿ ಈತನ ತಂದೆಯ ಹೆಸರು ಅಶ್ವಶಿರ ಎಂದಾಗಿದೆ. ಈತನ ಶಾಪದಿಂದಾಗಿ ವಿಶ್ವಾವಸು ಗಂಧರ್ವನಿಗೆ ರಾಕ್ಷಸಯೋನಿ ಬಂದಿತು. ಅದರಿಂದಾಗಿ ಅವನು 'ಕಬಂಧ' ನಾದನೆಂದು ಹೇಳಲಾಗಿದೆ.

**ಹನುಮಂತ :** ಏಳು ಚಿರಂಜೀವಿಗಳಲ್ಲಿ ಒಬ್ಬ. ಸುಮೇರುವಿನ ದೊರೆ ಕೇಸರಿಗೆ ಅಂಜನಿಯೆಂಬ ಮಡದಿಯಿಂದ ಹುಟ್ಟಿದ ಮಗನು. ಈತನ ಹುಟ್ಟಿನ ಕಥೆಗಳು ಬೇರೆ ಬೇರೆ ಹೊತ್ತಗೆಗಳಲ್ಲಿ ಬೇರೆಬೇರೆಯಾಗಿವೆ. ಈತ ವಜ್ರಪ್ರಹಾರದಿಂದ ಮೂರ್ಛಿತನಾದಾಗ ವಾಯುವು ತನ್ನ ಸಂಚಾರವನ್ನು ನಿಲ್ಲಿಸಿದನು. ಅದರಿಂದಾಗಿ ಎಲ್ಲ ಲೋಕಗಳು ಸಂಕಟ ಕ್ಕೀಡಾದವು. ಬ್ರಹ್ಮದೇವನ ಕೋರಿಕೆಯ ಮೇರೆಗೆ ವಾಯುವು ವಿರೋಧವನ್ನು ಕೈಬಿಟ್ಟನು. ಆಗ ಬ್ರಹ್ಮದೇವನು ಹನುಮಂತನಿಗೆ ಬ್ರಹ್ಮದಂಡದಿಂದ ಅವಧ್ಯತ್ವದ ವರ ವನ್ನಿತ್ತನು. ಉಳಿದ ದೇವತೆಗಳೂ ವರವನ್ನೀಯಲು ಹೇಳಿದರು. ಇಂದ್ರನು ವಜ್ರದಿಂದ ಅವಧ್ಯತ್ವವನ್ನು, ಸೂರ್ಯನು ತನ್ನ ತೇಜಸ್ಸಿನ ನೂರರಲ್ಲಿ ಒಂದು ಪಾಲನ್ನು, ಶಾಸ್ತ್ರಾ ಧ್ಯಾಯನದ ಕಾಲಕ್ಕೆ ಶಾಸ್ತ್ರಗಳ ಜ್ಞಾನವನ್ನು, ವರಣನು ವರುಣಪಾಶವನ್ನು, ಇಲ್ಲವೆ ಉದಕದಿಂದ ಅವಧ್ಯತ್ವವನ್ನು, ಯಮನು ಯಮದಂಡದಿಂದ ಅವಧ್ಯತ್ವವನ್ನು,ಆರೋಗ್ಯ, ಸಂಗ್ರಾಮದಲ್ಲಿ ದಣಿವಾಗದಿರುವಿಕೆಯನ್ನು, ಶಂಕರನು ದೀರ್ಘಾಯುಷ್ಯವನ್ನು ಹಾಗೂ ತನ್ನ ಆಯುಧದಿಂದ ಅವಧ್ಯತ್ವವನ್ನು, ಕುಬೇರನು ತನ್ನ ಗದೆಯಿಂದ ಅವಧ್ಯತ್ವವನ್ನು, ವಿಶ್ವಕರ್ಮನು ದಿವ್ಯಶಸ್ತ್ರಗಳನ್ನು ಹಾಗೂ ಅವುಗಳಿಂದ ಚಿರಂಜೀವಿತ್ವವನ್ನು ಎಂದು ಮೊದಲಾಗಿ ಹಲವರು ಹಲವಾರು ವರಗಳನ್ನು ಈತನಿಗೆ ಕೊಟ್ಟರು. ಇದಲ್ಲದೆ ಬ್ರಹ್ಮ ದೇವನು ಬೇರೆ ವರಗಳನ್ನಿತ್ತು ಭಯೋತ್ಪಾದಕತ್ವ, ಮಿತ್ರಭಯನಾಶಕತ್ವ, ಯಥೇಷ್ಟ ಗಮನ, ಕಾಮರೂಪಧಾರಿತ್ವ ಹಾಗೂ ಬ್ರಹ್ಮಾಸ್ತ್ರದಿಂದ ಬಂಧನವಾದರೆ ಅದರಿಂದ ಬಿಡುಗಡೆಯಾಗುವುದು ಮೊದಲಾದ ಸಾಮರ್ಥ್ಯಗಳನ್ನು ಅವನಿಗಿತ್ತನು. ವರಪ್ರಾಪ್ತಿ ಯಿಂದಾಗಿ ಹನುಮಂತ ಇನ್ನಷ್ಟು ಬಲವಂತನಾದನು. ಹೀಗಾಗಿ ಈತನ ಲಂಕೆಯ ಪಯಣ ಸರಾಗವೂ ನಿರ್ಭಯವೂ ಆಯಿತು. ವರಪ್ರಾಪ್ತಿಯ ತರುವಾಯ ಭೃಗು ಹಾಗೂ ಅಂಗಿರಸ ಗೋತ್ರದ ಋಷಿಗಳಿಗೆ ಈತನು ಪೀಡೆಯನ್ನಿತ್ತನು. 'ನಿನಗೆ ನಿನ್ನ ಬಲ ನೆನಪಾಗದಿರಲಿ' ಎಂಬ ಶಾಪ ಅವರಿಂದ ಬಂದಿತು.

ಹನುಮಂತ ಬಲ ಬುದ್ಧಿವಂತನಾಗಿದ್ದನು. ಈತನಿಗೆ ವ್ಯಾಕರಣ, ಸೂತ್ರ, ಸೂತ್ರವೃತ್ತಿ, ಭಾಷ್ಯ, ಸಂಗ್ರಹ ಮೊದಲಾದ ಸಂಗತಿಗಳು ಚೆನ್ನಾಗಿ ತಿಳಿದಿದ್ದವು. ಈತ ವಾಕ್ಪಟುವಾಗಿದ್ದನು. ಈತ ಕಾರ್ಯದಲ್ಲಿ ನಿಪುಣ. ಲಂಕೆಯ ಬಗೆಗಿನ ಇಡಿಯ ಮಾಹಿತಿಯನ್ನು ಈತನೇ ದೊರಕಿಸಬಲ್ಲವನಾಗಿದ್ದನು. ಶ್ರೀರಾಮನ ನಿಸ್ಸೀಮಭಕ್ತ. ಸುಗ್ರೀವ ಹಾಗೂ ಶ್ರೀರಾಮರಲ್ಲಿ ಸ್ನೇಹವನ್ನು ಉಂಟುಮಾಡಿದವನು ಈತನೇ. ಅದನ್ನು ಉಳಿಸಿಕೊಳ್ಳಲು ಸುಗ್ರೀವನಿಗೆ ಸರಿಯಾದ ಸಲಹೆಗಳನ್ನಿತ್ತನು. ಈತನು ಹಲವು ಜನ ರಾಕ್ಷಸರನ್ನು ಕೊಂದನು. ಲಂಕಾನಗರವನ್ನು ಸುಟ್ಟನು. ಇಂದ್ರಜಿತನು

ಈತನನ್ನು ಬ್ರಹ್ಮಾಸ್ತ್ರದಿಂದ ಬಂಧಿಸಿದನು. ಆಗ ಈತ ಮೂರ್ಛೆಹೋದನು. ರಾಕ್ಷಸರು ಈತನನ್ನು ಕಟ್ಟಿಹಾಕಿದರು. ಆದರೆ ಮುಂದೆ ತಾನು ತಾನಾಗಿಯೇ ಬ್ರಹ್ಮಾಸ್ತ್ರದಿಂದ ಬಿಡುಗಡೆಹೊಂದಿದನು. ಮರಣಹೊಂದಿದ ವಾನರವೀರರನ್ನು ಬದುಕಿಸಲು ಹಾಗೂ ಮೂರ್ಛೆಹೋದ ಲಕ್ಷ್ಮಣನಿಗಾಗಿ ದ್ರೋಣಗಿರಿಯನ್ನೇ ಎತ್ತಿತಂದು ಸಂಜೀವಿನಿಯನ್ನು ಪೂರೈಸಿದನು. 'ಈ ಭೂತಲದ ಮೇಲೆ ನನ್ನ ಕಥೆಯು ಪ್ರಚಲಿತವಾಗಿರುವವರೆಗೆ ನೀನು ನನ್ನ ಅಪ್ಪಣೆಯನ್ನು ಪಾಲಿಸುತ್ತ ಸಂಪ್ರಸನ್ನವಾದ ಮನದಿಂದ ಸ್ವಸ್ಥನಾಗಿ ಇಲ್ಲಿರು' ಎಂದು ಶ್ರೀರಾಮನು ಈತನನ್ನು ಹರಸಿದನು.

**ಹಿಡಿಂಬ :** ಶಾಲವೃಕ್ಷದ ಮೇಲಿರುವ ಒಬ್ಬ ನರಮಾಂಸಭಕ್ಷಕನಾದ ರಾಕ್ಷಸ. ನಿದ್ರೆಹೋಗಿದ್ದ ಪಾಂಡವರನ್ನು ಕಂಡು ಬಲು ಹರುಷಗೊಂಡನು. ಅವರನ್ನು ಕೊಲ್ಲಲೆಂದು ತನ್ನ ತಂಗಿ ಹಿಡಿಂಬೆಯನ್ನು ಕಳಿಸಿದನು. ಭೀಮನನ್ನು ಕಂಡು ಈಕೆ ಮರುಳಾದಳು. ಹೀಗಾಗಿ ಈತನಿಗೆ ಸಿಟ್ಟು ಬಂದಿತು. ಈತನು ಪಾಂಡವರ ಮೇಲೆ ದಾಳಿಯಿಟ್ಟನು. ಭೀಮನಿಂದ ಕೊಲ್ಲಲ್ಪಟ್ಟನು.

**ಹಿಡಿಂಬೆ :** ಹಿಡಿಂಬ ರಾಕ್ಷಸನ ತಂಗಿ. ಭೀಮನ ಮಡದಿ. ಘಟೋತ್ಕಚನ ತಾಯಿ. ಹಿಡಿಂಬನು ಪಾಂಡವರನ್ನು ಕೊಲ್ಲಲೆಂದು ಇವಳನ್ನು ಕಳಿಸಿದ್ದನು. ಭೀಮನನ್ನು ಕಂಡು ಮರುಳಾದಳು. ಭೀಮನನ್ನು ಮದುವೆಯಾಗೆಂದು ಕೋರಿದಳು. ಮೊದಲು ಅವನು ಒಪ್ಪಿಕೊಳ್ಳಲಿಲ್ಲ. ಕುಂತಿಗೆ ಈಕೆ ತನ್ನ ಮಾನಸಿಕ ಹಾಗೂ ದೈಹಿಕ ವ್ಯಥೆಗಳನ್ನು ತೋಡಿಕೊಂಡಳು. ಕುಂತಿಯ ಹೇಳಿಕೆಯ ಮೇರೆಗೆ ಭೀಮನು ಶರತ್ತಿನೊಂದಿಗೆ ಇವಳನ್ನು ಮದುವೆಯಾಗಲು ಒಪ್ಪಿದನು. ಒಬ್ಬ ಮಗನಾಗುವವರೆಗೆ ಮಾತ್ರ ಅವಳ ಬಳಿಯಿರಲು ಒಪ್ಪಿದನು. ಅವಳೂ ಆಗಲೆಂದಳು. ಇವಳು ಬಲು ಅಂದವಾದ ರೂಪವನ್ನು ತೊಟ್ಟು ಭೀಮನೊಡನೆ ಬಲು ರಮಣೀಯವಾದೆಡೆಗಳಲ್ಲಿ ಕಾಲಕಳೆದಳು. ಇವಳು ಭೂತ ಭವಿಷ್ಯಗಳನ್ನು ಬಲ್ಲವಳಾಗಿದ್ದಳು. ಈಕೆ ಪಾಂಡವರ ಬದಿಗೆ ಹೋದ ಕಾರಣ ಹಿಡಿಂಬನು ಇವಳನ್ನು ಕೊಲ್ಲಲು ಏರಿಹೋಗಿದ್ದನು.

**ಹಿರಣ್ಯಕಶಿಪು :** ಕಶ್ಯಪ ಹಾಗೂ ದಿತಿಯರ ಮಗ. ಕಶ್ಯಪನು ಮಾಡಿದ ಅಶ್ವಮೇಧಯಜ್ಞದಲ್ಲಿ ಹೋತೃವಿನ ಸುವರ್ಣ ಆಸನದ ಮೇಲೆ ಈತ ಹುಟ್ಟಿದ್ದರಿಂದ 'ಹಿರಣ್ಯಕಶಿಪು' ಎಂಬ ಹೆಸರು ಬಂದಿತು ಈತನು ಬಲು ಉಗ್ರವಾದ ತಪಗೈದು ಸೀಮಿತವಾದ ಅಮರತ್ವವನ್ನು ಪಡೆದು ಮನಬಂದಂತೆ ನಡೆದುಕೊಳ್ಳಲು ಆರಂಭಿಸಿದನು. ಕಯಾದು, ಕಲ್ಯಾಣ ಹಾಗೂ ಕೀರ್ತಿಯರು ಈತನ ಮಡದಿಯರು. ಕಯಾದು ಬಸಿರಾಗಿದ್ದಾಗ ನಾರದನು ಅವಳಿಗೆ ಇತ್ತ ಉಪದೇಶ ಅವಳ ಬಸಿರಲ್ಲಿದ್ದ ಮಗನಿಗೂ ತಲುಪಿ ಪ್ರಹ್ಲಾದ ವಿಷ್ಣುಭಕ್ತನೂ ಸುಸ್ವಭಾವಿಯೂ ಆದನು. ಈತ ವಿಷ್ಣುವಿನ ಕಡುಹಗೆ. ಈತ ದೈತ್ಯಕುಲದ ಮುಖ್ಯಸ್ಥನು. ಪೃಥ್ವಿಯ ಮೇಲೆಲ್ಲ ಈತನದೇ ಸತ್ತೆಯಿತ್ತು. ವಿಷ್ಣುವು ನರಸಿಂಹರೂಪದಿಂದ ಬಂದು ಈತನನ್ನು ಕೊಂದುಬಿಟ್ಟನು.

# ಪರಿಶಿಷ್ಟ : ಒಂದು

## ಸ್ಥಲವಿಶೇಷ

**ಅಂಗ :** ಬಿಹಾರ ರಾಜ್ಯದ ಪೂರ್ವಭಾಗದಲ್ಲಿರುವ ಮೋಂಘೀರ ಹಾಗೂ ಭಾಗಲಪುರ ಜಿಲ್ಲೆಗಳಲ್ಲಿ ಹರಿಯುವ ಶರಯು ಹಾಗೂ ಕೌಶಿಕಿ ಹೊಳೆಗಳ ಮಧ್ಯದ ಗಂಗೆಯ ದಡದ ನಾಡು. ಪ್ರಾಚೀನ ಕಾಲದಲ್ಲಿ ಇದಕ್ಕೆ ಅಂಗದೇಶ ಎನ್ನುತ್ತಿದ್ದರು. ಸಂಥಾಲ ಪರಗಣೆಯ ಕೆಲಭಾಗ ಈ ದೇಶಕ್ಕೆ ಒಳಪಟ್ಟಿತ್ತು. ಕೆಲವು ಪ್ರಸ್ತಾಪಗಳಿಂದ ಈ ದೇಶ ಭುವನೇಶ್ವರದ ವರೆಗೂ ಚಾಚಿರುವುದು ಕಂಡುಬರುತ್ತದೆ. ದೀರ್ಘತಮ ಋಷಿಯಿಂದ ಬಲಿರಾಜನ ಮಡದಿಗೆ ಅಂಗ, ವಂಗ, ಕಲಿಂಗ, ಪುಂಡ್ರ ಹಾಗೂ ಸುಧ್ಮರೆಂಬ ಐವರು ಗಂಡುಮಕ್ಕಳಾದರು. ಆಯಾ ರಾಜ್ಯಗಳಿಗೆ ಇವರ ಹೆಸರುಗಳೇ ದೊರೆತವು. ಮಹಾಭಾರತಕಾಲದಲ್ಲಿ ಈ ದೇಶಕ್ಕೆ ಪ್ರತಿಷ್ಠೆ ಪ್ರಾಪ್ತವಾಗಿತ್ತು. ದುರ್ಯೋಧನನು ಕರ್ಣನಿಗೆ ಈ ದೇಶದ ರಾಜ್ಯವನ್ನು ಕೊಟ್ಟು ಅವನನ್ನು ಅಂಗರಾಜನನ್ನಾಗಿ ಮಾಡಿದನು. ಇಂದಿನ ಭಾಗಲಪುರ ನಗರವು ಪ್ರಾಚೀನ ಕಾಲದಲ್ಲಿ ಚಂಪಾ, ಚಂಪಾವತಿ, ಚಂಪಕಾವತಿ ಮೊದಲಾದ ಹೆಸರುಗಳಿಂದ ಗುರುತಿಸಲ್ಪಡುತ್ತಿತ್ತು. ಇದು ಈ ದೇಶದ ರಾಜಧಾನಿಯಾಗಿತ್ತು. ವೈರೋಚನ, ಬೃಹದಶ್ವ, ದಶರಥನ ಗೆಳೆಯ ಲೋಮಪಾದರು ಕೆಲಕಾಲ ಅಂಗರಾಜರಾಗಿದ್ದರು. ಶ್ರೀಕೃಷ್ಣ ಹಾಗೂ ಪರಶುರಾಮರಿಂದ ಈ ದೇಶದ ಹಲವಾರು ಜನ ಕ್ಷತ್ರಿಯರು ಸಂಹರಿಸಲ್ಪಟ್ಟರು.

**ಅಶೋಕವನ :** ಲಂಕೆಯ ಸ್ಥಾನದ ಬಗೆಗೆ ಬಹಳಷ್ಟು ಭಿನ್ನಾಭಿಪ್ರಾಯಗಳಿದ್ದ ಕಾರಣ ಅಶೋಕವನ ಎಲ್ಲಿತ್ತೆಂದು ನಿಖರವಾಗಿ ಹೇಳಲಾಗದೆಂದು ಶ್ರೀರಾಮಕೋಶಕಾರರು (ಖಂಡ ೨. ಭಾಗ ೩ : ೧, ಪುಟ ೬೭) ನಮೂದಿಸಿದ್ದಾರೆ. ರಾವಣನು ಸೀತೆ ಲಂಕೆಯಲ್ಲಿದ್ದಾಗ ಇದೇ ವನದಲ್ಲಿ ಅವಳನ್ನು ಬಂಧಿಸಿಟ್ಟಿದ್ದನು.

**ಆರಟ್ಟ :** ಪ್ರಾಚೀನ ಕಾಲದಲ್ಲಿ ಭಾರತದ ವಾಯವ್ಯ ದಿಕ್ಕಿನಲ್ಲಿ ವಾಹಿಕ, ಮದ್ರ, ಗಾಂಧಾರ ಎಂಬ ಹೆಸರಿನ ರಾಜ್ಯಗಳಿದ್ದವು. ಅವುಗಳಲ್ಲಿ ಒಂದು ಈ ಆರಟ್ಟದೇಶ. ಈ ನಾಡಿನ ಜನ ಕೆಟ್ಟ ನಡತೆಯವರು, ಮಂದಮತಿಗಳು ಹಾಗೂ ಧರ್ಮವನ್ನು ಪಾಲಿಸದವರಾಗಿದ್ದರೆಂಬುದು ಕರ್ಣನ ಅಭಿಪ್ರಾಯ. ಕೆಲವು ಕಳ್ಳಕಾಕರು ಕೂಡಿ ಆರಟ್ಟ ದೇಶದ ಒಬ್ಬಳು ಸಾಧ್ವಿಯ ಮೇಲೆ ಅತ್ಯಾಚಾರವನ್ನು ಎಸಗಿದರು. ಅವಳು ಅವರಿಗೆ ಶಾಪ ವಿತ್ತಳು (ಶಾಪ, ಕ್ರ. ೯೧). ಈ ದೇಶ ಶ್ರೇಷ್ಠಮಟ್ಟದ ಕುದುರೆಗಳನ್ನು ಒದಗಿಸುವಲ್ಲಿ ಹೆಸರಾಗಿತ್ತು.

**ಉದಪಾನ :** ಸರಸ್ವತಿ ನದಿಯಲ್ಲಿದ್ದ ಒಂದು ಪ್ರಾಚೀನ ತೀರ್ಥ.

**ಕದಲೀವನ :** ಕುಬೇರ ಪುಷ್ಕರಿಣಿಯ ದಡದಲ್ಲಿ ಸುಗಂಧದ ಕಮಲಗಳಿಂದ ಕೂಡಿದ ಒಂದು ಉಪವನ. ಇದು ಹನುಮಂತನ ವಾಸಸ್ಥಾನವಾಗಿತ್ತು.

**ಕೈಲಾಸ :** ಪ್ರಾಚೀನ ಭಾರತದ ಒಂದು ಹೆಸರಾದ ಪರ್ವತ. ಹಿಮಾಲಯದಲ್ಲಿ ಉತ್ತರಕ್ಕೆ ಇರುವ ಕುಮಾಂವು ಹಾಗೂ ಗಢವಾಲ ನಾಡಿನಲ್ಲಿದ್ದ ಲಡಾಖ ಪರ್ವತದ ಸಾಲುಗಳ ಉತ್ತರಕ್ಕೆ ಹಾಗೂ ಮೇರುಪರ್ವತದ ದಕ್ಷಿಣಕ್ಕಿರುವ ಪರ್ವತದ ಸಾಲಿಗೆ ಕೈಲಾಸಪರ್ವತ ಎಂದೆನ್ನಲಾಗುತ್ತದೆ. ಕೈಲಾಸವು ಹೇಮಕೂಟ ಪರ್ವತದ ಸಾಲಿನ ಮಧ್ಯದಲ್ಲಿದ್ದ ಶಿಖರವಾಗಿದ್ದು ಕುಬೇರನ ಅಲಕಾಪುರಿ ಎಂದರೆ ಇದೇ. ಈ ಪರ್ವತ ಶಿವನ ವಾಸಸ್ಥಾನ. ಶ್ವೇತಕಿಯು ಶಂಕರನನ್ನು ಒಲಿಸಿಕೊಳ್ಳಲೆಂದು ಇಲ್ಲಿಯೇ ಕಠೋರ ತಪಸ್ಸನ್ನು ಆಚರಿಸಿದಳು. ಇದೊಂದು ತೀರ್ಥಸ್ಥಾನ. ವಿಷ್ಣುವಿನ ವೃಷಭಧ್ವಜ ಎಂಬ ವಾಸಸ್ಥಾನ ಇಲ್ಲಿತ್ತು. ಅಲಕನಂದಾ, ಗಂಗಾ, ಯಮುನಾ ನದಿಗಳು ಕೈಲಾಸ ಪರ್ವತದಲ್ಲಿ ಉಗಮಹೊಂದಿವೆ. ಈ ಶಿಖರದ ಎತ್ತರ ಆರು ಯೋಜನಗಳು. ಇಲ್ಲಿ ದೇವತೆಗಳು ವಾಸವಾಗಿರುವರೆಂಬ ನಂಬಿಕೆ ಇದೆ. ಸೌಗಂಧಿಕ ಸರೋವರ, ಬದರೀತೀರ್ಥ ಇಲ್ಲಿಯೇ ಇವೆ. ಭೀಮ ಹಾಗೂ ಉಳಿದ ಪಾಂಡವರೆಲ್ಲ ಕೈಲಾಸಪರ್ವತದ ಮೇಲೆ ಹೋಗಿದ್ದರು. ಕುಬೇರನಿಗೆ ಯಕ್ಷ, ರಾಕ್ಷಸರ ರಾಜ್ಯಪದ ದೊರೆತದ್ದು ಇಲ್ಲಿಯೇ. ಕುಬೇರಭವನದಲ್ಲಿ ಅಷ್ಟಾವಕ್ರನನ್ನು ಸ್ವಾಗತಿಸಲಾಗಿತ್ತು. ಮಾನಸ ಸರೋವರದಿಂದ ಕೈಲಾಸಕ್ಕೆ ಹೋಗಲು ದಾರಿಯಿದೆ. ಹಿಂದುಗಳು ಹಾಗೂ ಟಿಬೆಟ್ಟಿನವರು ಕೈಲಾಸವನ್ನು ಪವಿತ್ರವಾದ ಸ್ಥಳವೆಂದು ಮನ್ನಿಸುತ್ತಾರೆ. ರಾಕ್ಷಸರು ಮೈನಾಕ ಪರ್ವತದ ಮೇಲೆ ಯಜ್ಞಮಾಡುವುದೆಂದು ನಿರ್ಧರಿಸಿದಾಗ ಮಯಾಸುರನು ಒಂದು ಬಲು ರಮಣೀಯ ವಾದ ಮಣಿಮಯ ಪಾತ್ರೆಯನ್ನು ತಯಾರಿಸಿದ್ದನು.

**ಕೋಲಾಹಲ :** ಪ್ರಾಚೀನಕಾಲದ ಒಂದು ಸಚೇತನವಾದ ಪರ್ವತ. ದಿವ್ಯರೂಪ ವನ್ನು ಧರಿಸಬಲ್ಲ ಶುಕ್ತಿಮತಿ ಹೊಳೆಯು ಅಂದಕ್ಕೆ ಈ ಪರ್ವತ ಮರುಳಾಯಿತು. ಅದು ಈ ಹೊಳೆಯನ್ನು ತಡೆಗಟ್ಟಿತು. ಆದರೆ ಉಪರಿಚರವಸುಗಳ ಒದೆತದಿಂದಾಗಿ ಪರ್ವತ ದಲ್ಲಿ ಕೊರಕಲು ಉಂಟಾಯಿತು. ಹೊಳೆ ಈ ಕೊರಕಲಿನ ಮೂಲಕ ಹರಿಯಹತ್ತಿತು. ಪರ್ವತದ ಸಂಪರ್ಕದಲ್ಲಿದ್ದ ಕಾರಣ ಶುಕ್ತಿಮತಿ ಬಸಿರಾಯಿತು. ಅವಳಿಂದ ಮುಂದೆ ಒಂದು ಅವಳಿ ಜೊತೆ ಹುಟ್ಟಿಬಂದಿತು. ಅವುಗಳಲ್ಲಿಯ ಹೆಣ್ಣನ್ನು ಉಪರಿಚರವಸುವು ಮಡದಿಯನ್ನಾಗಿ ಸ್ವೀಕರಿಸಿದನು. ಗಂಡುಮಗುವಿಗೆ ಮುಂದೆ ದುಡನಾಯಕ ಪದ ದೊರಕಿತು.

**ಖಾಂಡವವನ :** ಯಮುನಾ ನದಿಯ ದಡದ ಮೇಲಿರುವ ಒಂದು ದಟ್ಟವಾದ ಕಾಡು. ಇಂದ್ರನ ಗೆಳೆಯ ತಕ್ಷಕ ಮೊದಲು ಖಾಂಡವವನದಲ್ಲಿಯೇ ವಾಸವಾಗಿದ್ದನು. ಅಗ್ನಿಯು ಅದನ್ನು ಸುಡಲು ಏಳು ಸಲ ವ್ಯರ್ಥವಾಗಿ ಯತ್ನಿಸಿತು. ಬ್ರಹ್ಮದೇವನು ಶ್ರೀಕೃಷ್ಣ ಹಾಗೂ ಅರ್ಜುನರ ನೆರವನ್ನು ಪಡೆಯುವಂತೆ ಅಗ್ನಿಗೆ ಸೂಚಿಸಿದನು. ಅಮೇಲೆ ಅದನ್ನು ಸುಡಲು ಸಾಧ್ಯವಾಯಿತು. ಖಾಂಡವ ವನವನ್ನು ಸುಡುವಾಗ ಶ್ರೀಕೃಷ್ಣ ಹಾಗೂ ಅರ್ಜುನರು ಓಡಿಹೋಗುವವರನ್ನೆಲ್ಲ ತಡೆಹಿಡಿದರು. ಆದರೆ ತಕ್ಷಕನ ಮಗ ಅಶ್ವಸೇನ ಹಾಗೂ ಮಯಾಸುರರು ತಪ್ಪಿಸಿಕೊಂಡರು. ಧೃತರಾಷ್ಟ್ರನು ಪಾಂಡವರನ್ನು ಕೌರವರಿಂದ ಬೇರ್ಪಡಿಸಲೆಂದು ಅವರಿಗೆ ಖಾಂಡವವನಕ್ಕೆ ಹೋಗಲು ಹೇಳಿದನು. ಪಾಂಡವರು ಅದನ್ನು ವಸತಿಗಾಗಿ ಸರಿಯಾಗುವಂತೆ ಮಾರ್ಪಡಿಸಿ 'ಇಂದ್ರ

ಪ್ರಸ್ಥ'ವೆಂಬ ಐಶ್ವರ್ಯಸಂಪನ್ನವಾದ ನಗರವನ್ನು, ರಾಜಧಾನಿಯನ್ನಾಗಿ ಸಿದ್ಧಪಡಿಸಿದರು. ಮಯಾಸುರನು ಶ್ರೀಕೃಷ್ಣನ ಹೇಳಿಕೆಯಂತೆ ಪಾಂಡವರಿಗಾಗಿ ಒಂದು ಉತ್ಕೃಷ್ಟವಾದ ಮಯಸಭೆಯನ್ನು ನಿರ್ಮಿಸಿಕೊಟ್ಟನು. ಹಿಂದಕ್ಕೆ ಈ ಅಡವಿಯನ್ನು ಅಗ್ನಿಗೆ ಭಕ್ಷ್ಯವೆಂದು ಕೊಡಲಾಗಿತ್ತು. ಅಗ್ನಿಯು ಸೂರ್ಯನ ಪ್ರತೀಕವಾದುದರಿಂದ ಅಲ್ಲಿ ಸೂರ್ಯತೀರ್ಥ ಇತ್ತು. ದಿಲ್ಲಿಯಿಂದ ೭೦ ಕಿಲೋಮೀಟರು ಅಂತರದಲ್ಲಿರುವ ಮೀರತ ನಗರವೇ ಹಿಂದಿನ ಖಾಂಡವಪ್ರಸ್ಥ.

**ಗಂಗೆ:** ಭಾರತದ ಏಳು ಶ್ರೇಷ್ಠವಾದ ನದಿಗಳಲ್ಲಿ ಒಂದು. 'ಗಮಯಂತಿ ಭಗವತ್ಪದಮಿತಿ ಗಂಗಾ'—ಮೀಯುವವನನ್ನು ಭಗವತ್ಪಾದಕ್ಕೆ ತಲುಪಿಸುವವಳೇ ಗಂಗೆ. 'ಗಮ್ಯತೇ ಪ್ರಾಪ್ಯತೇ ಮೋಕ್ಷಾರ್ಥಿಭಿರೀತಿ ಗಂಗಾ'—ಮುಮುಕ್ಷುಗಳು ಯಾವಳ ಬಳಿಗೆ ಹೋಗುವರೋ ಅವಳೇ ಗಂಗೆ. ಇವು ಗಂಗೆ ಪದದ ವ್ಯುತ್ಪತ್ತಿಗಳು. ವಿಷ್ಣುಪದಿ, ಜಾಹ್ನವಿ, ಭಾಗೀರಥಿ, ತ್ರಿಪಥಗಾ ಎಂಬ ಬೇರೆ ಹೆಸರುಗಳೂ ಈ ಹೊಳೆಗೆ ಉಂಟು.

ಈ ಹೊಳೆಯು ಉಗಮ ಉತ್ತರ ಪ್ರದೇಶದ ಟೆಹರೀ ಗಢವಾಲ ಪ್ರದೇಶದಲ್ಲಿರುವ ಗಂಗೋತ್ರಿಯಲ್ಲಿದೆ. ಇದರ ಎತ್ತರ ಸಮುದ್ರಪಾತಳಿಯಿಂದ ೪೨೦೦ ಮೀಟರುಗಳು. ಹೃಷಿಕೇಶದ ಬಳಿ ಸಮತಟ್ಟಾದ ನಾಡಿನಲ್ಲಿ ಹರಿಯಲು ಆರಂಭ. ಗಂಗೆ-ಯಮುನೆಯರ ಸಂಗಮದವರೆಗಿನ ಮಧ್ಯಭಾಗಕ್ಕೆ ಅಂತರ್ವೇದಿ ಎನ್ನುತ್ತಾರೆ. ಯಮುನಾ, ಬ್ರಹ್ಮಪುತ್ರಾ, ಮೇಘನಾದಿ ಹಲವು ಹಿರಿಕಿರಿಯ ಹೊಳೆಗಳು ಹರಿದುಬಂದು ಗಂಗೆಯನ್ನು ಕೂಡಿಕೊಳ್ಳುತ್ತವೆ. ಈಕೆ ಗಂಗಾಸಾಗರದ ಬಳಿ ಸಹಸ್ರಮುಖಗಳಿಂದ ಕಡಲನ್ನು ಸೇರುತ್ತಾಳೆ. ಈ ಹೊಳೆಯು ಮುಖದ ಬಳಿ ಇರುವ ಸಾಗರ ದ್ವೀಪದಲ್ಲಿ ಕಪಿಲಮುನಿಗಳ ಆಶ್ರಮ ಇತ್ತು. ಆರೋಗ್ಯಕ್ಕೆ ಗಂಗಾ ನೀರು ಬಲು ಶುದ್ಧವಾದುದೂ, ರೋಗ ನಿವಾರಕವೂ, ಶಕ್ತಿದಾಯಕವೂ ಆಗಿದೆ. ಹಲವಾರು ಜನ ಸಾಧುಸಂತರು, ಮಹಾಪುರುಷರು ಇವಳ ಪಾವಿತ್ರ್ಯವನ್ನು ಕೊಂಡಾಡಿರುವರು. ಇದರ ದಡದಲ್ಲಿ ಮೂರೂವರೆ ಕೋಟಿ ತೀರ್ಥಗಳಿವೆಯೆಂದು ಒಂದು ಧಾರ್ಮಿಕ ನಂಬಿಕೆ.

ಗಂಗೆಯು ಮಹಾಸಾಗರನ ಮಡದಿ. ವೇದದ ಬಲಬದಿಯಾಗಿದ್ದಾಳೆ. ಇವಳು ಅಗ್ನಿಯ ಸಂಪರ್ಕದಿಂದ ಸ್ಕಂದನಿಗೆ ಜನ್ಮಕೊಟ್ಟಳು. ಇವಳೊಬ್ಬ ಸ್ವರ್ಗೀಯ ದೇವತೆ. ಪುರಾಣಗಳಲ್ಲಿ ಇವಳ ಮಹಾತ್ಮೆಯನ್ನು ಸವಿಸ್ತರವಾಗಿ ಬಣ್ಣಿಸಲಾಗಿದೆ. ಋಗ್ವೇದದಲ್ಲೂ ಇವಳ ಹೆಸರಿನ ಉಲ್ಲೇಖವಿದೆ.

**ಗಂಧಮಾದನ:** ಹಿಮಾಲಯದ ಉತ್ತರಕ್ಕೆ ಬದರಿಕಾಶ್ರಮದ ಹತ್ತಿರವಿರುವ ಒಂದು ಪರ್ವತರಾಜಿಯು ಗಂಧಮಾದನ ಎಂಬ ಹೆಸರಿನಿಂದ ಗುರುತಿಸಲ್ಪಡುತ್ತಿತ್ತು. ಶ್ರೀಕೃಷ್ಣನು ಯತ್ರಸಾಯಂಗೃಹಮುನಿಯಾಗಿ ಈ ಪರ್ವತದಮೇಲೆ ಹತ್ತುಸಾವಿರ ವರ್ಷ ಕಾಲ ವಾಸವಾಗಿದ್ದನೆಂದು ನಂಬಲಾಗಿದೆ. ನರ-ನಾರಾಯಣ, ಕಶ್ಯಪ ಹಾಗೂ ಶೇಷರು ಈ ಪರ್ವತದ ಮೇಲೆ ತಪಸ್ಸನ್ನು ಆಚರಿಸಿದರು. ಪಾಂಡುವು ತನ್ನ ಇಬ್ಬರು ಮಡದಿಯರೊಡನೆ ಇಲ್ಲಿಗೆ ಬಂದಿದ್ದನು. ಅರ್ಜುನನು ತಪಸ್ಸಿಗೆಂದು ಹೊರಟಾಗ ಗಂಧಮಾದನ ಪರ್ವತವನ್ನು ದಾಟಿದ್ದನು. ಯುಧಿಷ್ಠಿರನು ತನ್ನ ತಮ್ಮಂದಿರೊಂದಿಗೆ ಅರ್ಜುನನನ್ನು ಹುಡುಕುತ್ತ ಇಲ್ಲಿಗೆ ಬಂದಿದ್ದನು. ಬದರಿ ಹಾಗೂ ನರ-ನಾರಾಯಣ ಕ್ಷೇತ್ರದಲ್ಲಿ

ಯಕ್ಷರು ವಾಸವಾಗಿದ್ದಕಾರಣ ಅಲ್ಲಿಗೆ ಹೋಗುವುದು ಕಷ್ಟದ್ದು. ಮನಸ್ಸಿನ ಮೇಲೆ ಹಿಡಿತವನ್ನಿಟ್ಟುಕೊಂಡೇ ಅಲ್ಲಿಗೆ ಹೋಗಲು ಸಾಧ್ಯ. ಕಾಡುಪ್ರಾಣಿಗಳು ಹಾಗೂ ವಿಷದ ಹಾವುಗಳ ಭಯ ಇದ್ದೇ ಇರುತ್ತದೆ. ತಪೋಬಲದಿಂದಲೇ ಅಲ್ಲಿಗೆ ಹೋಗಿ ತಲಪಲು ಸಾಧ್ಯ ಎಂದು ಲೋಮಶನು ಹೇಳುತ್ತಾನೆ. ಘಟೋತ್ಕಚನ ನೆರವಿನಿಂದಾಗಿಯೇ ಪಾಂಡವರು ಅಲ್ಲಿಗೆ ಹೋಗಿ ತಲಪಲು ಸಾಧ್ಯವಾಯಿತು. ಭೀಮ–ಹನುಮಂರ ಭೆಟ್ಟಿಯಾದದ್ದು ಇಲ್ಲಿಯೇ. ಅರ್ಜುನ ಇಂದ್ರಲೋಕದಿಂದ ಇಲ್ಲಿಗೇನೆ ಬಂದನು. ಭೀಮನು ಮಣಿಮಾನನನ್ನು ಕೊಂದುದು ಇದೇ ಪರ್ವತದ ಮೇಲೆ. ಈ ಪರ್ವತದ ಮೇಲೆ ಕುಬೇರನ ರಾಜ್ಯವಿದ್ದು ಅಲ್ಲಿ ಋಷಿಗಳು, ಗಂಧರ್ವರು, ಕಿನ್ನರರು, ಅಪ್ಸರೆಯರು ಎಲ್ಲ ವಾಸವಾಗಿದ್ದಾರೆ.

**ಗಾಂಧಾರ :** ಅಫಗಾನಿಸ್ತಾನದ ಕಂದಹಾರ ಪ್ರದೇಶವನ್ನು ಪ್ರಾಚೀನಕಾಲದಲ್ಲಿ ಗಾಂಧಾರ ಎಂದು ಗುರುತಿಸಲಾಗುತ್ತಿತ್ತು. ಕಾಬೂಲ ನದಿಯ ಕಣಿವೆಯ ಕೆಲಭಾಗ, ಪೇಶಾವರ ಹಾಗೂ ರಾವಳಪಿಂಡಿಯ ಹತ್ತಿರದ ಭೂಭಾಗವು ಈ ರಾಜ್ಯದಲ್ಲಿತ್ತು. ಪಡುವಣಕ್ಕೆ ಜಲಾಲಾಬಾದ, ಉತ್ತರಕ್ಕೆ ಈ ಹೊಳೆಯ ಕಣಿವೆ, ಮೂಡಣಕ್ಕೆ ಸಿಂಧೂ ನದಿ ಹಾಗೂ ದಕ್ಷಿಣದಲ್ಲಿ ಕೋಹಾತ ಪರ್ವತ ಈ ನಾಡಿನ ನಾಲ್ದೆಸೆಯ ಗಡಿಗಳಾಗಿದ್ದವು. ತಕ್ಷನು ಸ್ಥಾಪಿಸಿದ ತಕ್ಷಶಿಲೆಯು ಗಾಂಧಾರ ದೇಶದ ರಾಜಧಾನಿಯಾಗಿತ್ತು. ಅಷ್ಟಾಧ್ಯಾಯಿಯ ಕರ್ತೃ ಪಾಣಿನಿ ಹಾಗೂ ಚಂದ್ರಗುಪ್ತ ಮೌರ್ಯರು ಓದು ಕಲಿತದ್ದು ತಕ್ಷಶಿಲಾ ವಿಶ್ವವಿದ್ಯಾನಿಲಯದಲ್ಲಿ. ಗಾಂಧಾರದೇಶದ ರಾಜನಾದ ಸುಬಲನ ಮಗಳು ಗಾಂಧಾರಿಯು ಧೃತರಾಷ್ಟ್ರನ ಮಡದಿ. ಕೌರವರ ರಾಜಕೀಯದ ಒಬ್ಬ ಮುಖ್ಯನಾದ ವ್ಯಕ್ತಿಯಾದ ಶಕುನಿಯು ಗಾಂಧಾರಿಯ ಸೋದರ.

**ತಪೋವನ :** ನರ್ಮದಾ ನದಿಯ ದಡದಲ್ಲಿರುವ ಒಂದು ವನ.

**ದಂಡಕಾರಣ್ಯ :** ಪ್ರಾಚೀನ ಸಂಸ್ಕೃತ ಸಾಹಿತ್ಯದಲ್ಲಿ ವಿಂಧ್ಯಪರ್ವತದ ದಕ್ಷಿಣಕ್ಕೆ ಇರುವ ನಾಡನ್ನೆಲ್ಲ ದಕ್ಷಿಣಾಪಥ ಎಂದು ಕರೆಯಲಾಗುತ್ತಿತ್ತು. ದಂಡಕ ದೇಶದ ರಾಜ ದಂಡಕನು ಗುರುಕನ್ಯೆಯಾದ ಅರಜಾ—ಭೃಗುಋಷಿಯ ಮಗಳು—ಇವಳ ಮೇಲೆ ಅತ್ಯಾಚಾರವನ್ನೆಸಗಿದನು. ಋಷಿಯು ಅವನಿಗೆ ಶಾಪವಿತ್ತನು. ಅದರ ಬಿಸಿ ದಂಡಕಾರಣ್ಯಕ್ಕೂ ತಗಲಿ ಅದು ಸುಟ್ಟುಹೋಯಿತು. ಇಂದ್ರನ ಧೂಳಿವೃಷ್ಟಿಯಿಂದಾಗಿ ಸ್ಥಾವರ–ಜಂಗಮಾದಿ ಜೀವನವೆಲ್ಲ ಅಸ್ತವ್ಯಸ್ತಹೊಂದಿತು. ಮುಂದೆ ಇಲ್ಲಿ ಬೆಳೆದ ಕಾಡೇ ದಂಡಕಾರಣ್ಯವೆಂದು ಹೆಸರಾಯಿತು. ಈ ಅಡವಿಯಲ್ಲಿ ಅನೇಕ ತಪಸ್ವಿಗಳು ವಾಸವಾಗಿದ್ದರು. ಹೀಗಾಗಿ ಅದು ಜನಸ್ಥಾನ ಎನ್ನಿಸಿತು. ರಾಮಾಯಣ ಕಾಲಕ್ಕೆ ಈ ನಾಡಿನಲ್ಲಿ ರಾಕ್ಷಸರು ಹಾಗೂ ವಾನರರು ವಾಸವಾಗಿದ್ದರು. ಮಹಾಭಾರತಕಾಲದ ವಿದರ್ಭ, ಅಶ್ಮಕ, ಮೂಲಕ, ಕುಂತಲ, ಗೋಪರಾಷ್ಟ್ರ, ಮಲ್ಲರಾಷ್ಟ್ರ ಮೊದಲಾದ ಭಾಗಗಳು ಈ ನಾಡಿನಲ್ಲಿದ್ದಿರಬಹುದಾಗಿದೆ. ಯಾದವರ ವಂಶವೂ ಇದೇ ನಾಡಿನಲ್ಲಿತ್ತು.

ಈ ನಾಡಿನ ಹರಹು ನರ್ಮದೆಯಿಂದ ಗೋದಾವರಿಯವರೆಗಿದೆ. ಶ್ರೀರಾಮ ಹತ್ತು ವರ್ಷಕಾಲ ದಂಡಕಾರಣ್ಯದಲ್ಲಿ ವಾಸವಾಗಿದ್ದನು.

**ದ್ವಾರಕೆ :** ದ್ವಾರವತಿ ಎಂದು ಹೆಸರಾಗಿದ್ದ ರಾಜಧಾನಿಯ ನಗರ. ವೃಷ್ಣಿಗಳ ಊರು ದ್ವಾರಾವತಿ, ಕುಶಸ್ಥಲಿ, ದ್ವಾರಕಿ ಎಂಬ ಹೆಸರುಗಳಿಂದ ಗುರುತಿಸಲ್ಪಡುತ್ತದೆ. ಪೂರ್ವದಲ್ಲಿ ರೈವತಕ ಪರ್ವತ, ದಕ್ಷಿಣದಲ್ಲಿ ಲತಾವೇಷ್ಟ, ಪಶ್ಚಿಮಕ್ಕೆ ಸಂಕಕ್ಷ ಪರ್ವತ ಹಾಗೂ ಉತ್ತರಕ್ಕೆ ವೇಣುಮಂತ ಪರ್ವತ ಎಂಬುದಾಗಿ ಈ ನಗರದ ಮೇರೆಯಿದ್ದಿತು. ಭಾರತದ ನಾಲ್ಕು ಧಾಮಗಳಲ್ಲಿ ಒಂದು. ಏಳು ಮೋಕ್ಷಪುರಿಗಳಲ್ಲಿ ತೀರ್ಥಕ್ಷೇತ್ರವೆಂದು ದ್ವಾರಕೆಯ ಹಿರಿಮೆ ಅನನ್ಯಸಾಧಾರಣ. ಮಥುರೆಯಲ್ಲಿ ವಾಸವಾಗಿದ್ದ ಯಾದವರು ಜರಾಸಂಧನೊಡನೆ ಹಗೆತನ ಹುಟ್ಟಿದ ತರುವಾಯ ದ್ವಾರಕೆಗೆ ಬಂದು ನೆಲೆಸಿದರು. ಶ್ರೀಕೃಷ್ಣನ ವಾಸ್ತವ್ಯದಿಂದಾಗಿ ಈ ನಗರಕ್ಕೆ ಎಲ್ಲಿಲ್ಲದ ಮಹತ್ವ ಪ್ರಾಪ್ತವಾಯಿತು. ಈ ನಗರವು ಅಮರಾವತಿಗಿಂತಲೂ ಹೆಚ್ಚು ರಮಣೀಯವೂ, ಸುವರ್ಣಮಯವೂ ಆಗಿತ್ತು. ಈ ನಗರದಲ್ಲಿ ಒಂದು ವಿಶಾಲವಾದ ಪುಷ್ಕರಿಣಿ ಹಾಗೂ ಹಲವಾರು ಸುಂದರವಾದ ಸೌಧಗಳಿದ್ದವು. ಶ್ರೀಕೃಷ್ಣನು ಜನ್ಮದ ದ್ವಾರಕೆಯನ್ನು ಕಡಲಲ್ಲಿ ಮುಳುಗಿಸಿದನು. ಈಗಿದ್ದ ದ್ವಾರಕೆಯನ್ನು ಸ್ಥಾಪಿಸಿದವನು ಶ್ರೀಕೃಷ್ಣನ ಮೊಮ್ಮಗ ವಜ್ರನಾಭನು. ಪಿಂಡಾರಕ ತೀರ್ಥವು ಇಲ್ಲಿಯೇ ಇದ್ದಿತು. ಅದರಲ್ಲಿ ಸ್ನಾನಮಾಡಿದವರಿಗೆ ಸುವರ್ಣಪ್ರಾಪ್ತಿಯಾಗುವುದೆಂದು ತಿಳಿಯಲಾಗುತ್ತಿತ್ತು. ಈ ನಗರದಲ್ಲಿಯೇ ನೃಗರಾಜನ ಉದ್ಧಾರವಾಯಿತು.

ಶ್ರೀಮತ್ ಶಂಕರಾಚಾರ್ಯರ ನಾಲ್ಕು ಪೀಠಗಳಲ್ಲಿ ಒಂದಾದ ಶಾರದಾ ಪೀಠ ಇಲ್ಲಿದೆ.

**ನೈಮಿಷಾರಣ್ಯ :** ಗೋಮತಿ ನದಿಯ ಬಳಿಯಿದ್ದ ಪುಣ್ಯದಾಯಕವಾದ ಒಂದು ಕಾಡು. ವೈದಿಕಸನಾತನಧರ್ಮದ ಕೇಂದ್ರಸ್ಥಾನ. ಇಲ್ಲಿ ಅಸಂಖ್ಯಾತ ಋಷಿಗಳು ವಾಸವಾಗಿದ್ದರು. ಸೌತಿಯು ಮಹಾಭಾರತವನ್ನು ಹೇಳಿದುದು ಇಲ್ಲಿಯೇ.

ಇಂದಿನ ಸೀತಾಪುರ ಜಿಲ್ಲೆಯಲ್ಲಿರುವ ಒಂದು ಕಾಡು ಇದು. ಶೌನಕನು ಹನ್ನೆರಡು ವರ್ಷಗಳ ಒಂದು ಯಜ್ಞವನ್ನು ಇಲ್ಲಿ ಹೂಡಿದ್ದನು. ಅರ್ಜುನನಿಗೆ ಗೋಮತಿಯ ದರ್ಶನವಾದುದು ಇಲ್ಲಿಯೇ. ಇಲ್ಲಿ ಸ್ನಾನಮಾಡಿದರೆ ಗೋಮೇಧಯಜ್ಞವನ್ನು ಮಾಡಿದುದರ ಫಲ ದೊರಕುತ್ತದೆ ಎಂದು ನಂಬಲಾಗಿದೆ. ಇಲ್ಲಿ ಸೂರ್ಯನ ಯಜ್ಞಪಾತ್ರವಿದೆ. ಇದು ಸಿದ್ಧಸೇವಿತವಾದ ಪುಣ್ಯಕ್ಷೇತ್ರ. ದೇವತೆಗಳೂ ಕೂಡ ಇಲ್ಲಿ ಯಜ್ಞಗಳನ್ನು ಮಾಡಿದ್ದಾರೆ. ಯುಧಿಷ್ಠಿರನು ಪಾಂಡವರೆಲ್ಲರೊಡನೆ ಇಲ್ಲಿಗೆ ಬಂದಿದ್ದನು. ಅವನು ಸ್ನಾನ ಮಾಡಿ ಗೋದಾನ ಹಾಗೂ ಬೇರೆ ಬಗೆಯ ದಾನಗಳನ್ನಿತ್ತನು. ಬಲರಾಮನು ಮುನಿಗಳ ದರ್ಶನಕ್ಕೆಂದು ಇಲ್ಲಿಗೆ ಬಂದಿದ್ದನು. ಇಲ್ಲಿಯ ಪೂರ್ವಗಾಮಿಯಾದ ಸರಸ್ವತಿಯ ಪುಣ್ಯದರ್ಶನದಿಂದಾಗಿ ಆಶ್ಚರ್ಯಚಕಿತನಾದನು. ಸತ್ಯಯುಗದಲ್ಲಿ ಹನ್ನೆರಡು ವರ್ಷಗಳ ಯಜ್ಞಗಳನ್ನು ಮಾಡಲೆಂದು ಇಲ್ಲಿಗೆ ಬಂದ ಋಷಿಮುನಿಗಳೆಲ್ಲ ಇಲ್ಲಿಯೇ ಉಳಿದುಕೊಂಡರು. ಇವರ ಸಂಖ್ಯೆ ಅದೆಷ್ಟು ಹೆಚ್ಚಿತ್ತೆಂದರೆ ಹಲವು ಹಳ್ಳಿಗಳಿಗೆ ಪಟ್ಟಣಗಳ ಸ್ವರೂಪ ಬಂದಿತ್ತು. ವಾಲಖಿಲ್ಯ, ಅಶ್ಮಕುಟ್ಟ, ದಂತೋಲೂಖಲಿ, ಪ್ರಸಂಖ್ಯಾತ ಮೊದಲಾದ ಹಲವು ಜನ ಹಿರಿಯ ಋಷಿಗಳು ಈ ಸಮುದಾಯದಲ್ಲಿದ್ದರು. ಋಷಿಗಳ ಸಮಾಧಾನಕ್ಕೆಂದು ಸರಸ್ವತಿಯು ಪ್ರಕಟಳಾಗಿ ಪೂರ್ವದತ್ತ ಹರಿಯತೊಡಗಿದಳು. ಈ ನಾಡಿನಲ್ಲಿ ಇವಳನ್ನು ಕಾಂಚನಾಕ್ಷಿ ಎಂದು ಗುರುತಿಸಲಾಗುತ್ತದೆ.

**ಪ್ರಭಾಸ :** ಸೌರಾಷ್ಟ್ರದ ಪಡುವಣ ಕಡಲತೀರದ ಒಂದು ಪವಿತ್ರವಾದ ತೀರ್ಥ ಕ್ಷೇತ್ರ. ಇದು ಸೋಮತೀರ್ಥ ಎಂತಲೂ ಹೆಸರಾದುದು. ಹನ್ನೆರಡು ಜ್ಯೋತಿರ್ಲಿಂಗ ಗಳಲ್ಲಿ ಒಂದು. ಶ್ರೀಕೃಷ್ಣನು ಒಂದು ಸಾವಿರ ವರ್ಷಗಳ ಕಾಲ ಈ ದಿವ್ಯವಾದ ಕ್ಷೇತ್ರದಲ್ಲಿ ಒಂಟಿಗಾಲಿನ ಮೇಲೆ ನಿಂತು ತಪಸ್ಸನ್ನು ಆಚರಿಸಿದ್ದನೆಂದು ವನಪರ್ವದಲ್ಲಿ ಹೇಳಲಾಗಿದೆ. ಇದು ಅಗ್ನಿದೇವನ ನಿವಾಸಸ್ಥಾನವಾಗಿದೆ. ಈ ತೀರ್ಥದಲ್ಲಿ ಮಿಂದುಬಂದರೆ ಅತಿರಾತ್ರ ಹಾಗೂ ಅಗ್ನಿಹೋತ್ರ ಯಜ್ಞಗಳ ಫಲ ಹಾಗೂ ಸ್ವರ್ಗಗಳು ಸಿಗುತ್ತವೆಯೆಂದು ನಂಬಲಾಗಿದೆ. ಇದು ಇಂದ್ರನ ಬಲು ಅಕ್ಕರೆಯ ತಾಣ. ತೀರ್ಥಕ್ಷೇತ್ರಗಳ ಯಾತ್ರೆಯ ಕಾಲಕ್ಕೆ ಯುಧಿಷ್ಠಿರ ಇಲ್ಲಿಗೆ ಬಂದಿದ್ದನು. ತೀರ್ಥಕ್ಷೇತ್ರಗಳನ್ನು ಸುತ್ತುತ್ತಲಿದ್ದ ಅರ್ಜುನ ಪ್ರಭಾಸಕ್ಷೇತ್ರದಲ್ಲಿ ಶ್ರೀಕೃಷ್ಣನನ್ನು ಭೆಟ್ಟಿಯಾದನು. ಯದುವಂಶ ಲಯಹೊಂದಿದ್ದು ಇಲ್ಲಿಯೇ.

**ಮಣಿಪುರ :** ಧರ್ಮಪರಾಯಣನಾದ ಚಿತ್ರವಾಹನ ರಾಜನ ರಾಜಧಾನಿ. ತೀರ್ಥ ಯಾತ್ರೆಗೈಯುತ್ತ ಅರ್ಜುನ ಇಲ್ಲಿಗೆ ಬಂದನು. ಆವನು ಕುವರಿ ಚಿತ್ರಾಂಗದೆಯ ಅಂದಕ್ಕೆ ಮರುಳಾಗಿ ಅವಳನ್ನು ಮದುವೆಯಾದನು. ಇಲ್ಲಿ ಮೂರು ವರ್ಷಗಳ ಕಾಲ ವಾಸ ವಾಗಿದ್ದನು. ಅಶ್ವಮೇಧಯಜ್ಞದ ಕಾಲಕ್ಕೆ ಇನ್ನೊಮ್ಮೆ ಮಣಿಪುರಕ್ಕೆ ಬಂದಿದ್ದನು. ಆಗ ತನ್ನ ಮಗ ಬಭ್ರುವಾಹನನೊಂದಿಗೆ ಕಾಳಗವಾಯಿತು. ಆಸಾಮದ ಬಳಿಯ ಮಣಿಪುರ ಹಾಗೂ ಮಹಾಭಾರತದ ಮಣಿಪುರ ಒಂದೇ ಅಲ್ಲವೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಪ್ರಾಚೀನಕಾಲದಲ್ಲಿ ಅಲ್ಲಿ ಕಡಲು ಇತ್ತಂತೆ. ದೇವತೆಗಳು ಮಣ್ಣು ಹಾಕಿ ಅದನ್ನು ಸಮತಟ್ಟಾದ ನೆಲವನ್ನಾಗಿ ಮಾಡಿದರಂತೆ. ಶಂಕರನ ನೆರವಿನಿಂದಾಗಿ ಈ ನಾಡು ಪ್ರಜೆಗಳ ವಾಸಕ್ಕೆ ಅನುಕೂಲದ್ದಾಯಿತಂತೆ.

**ಮದ್ರ :** ಒಂದು ಪ್ರಾಚೀನ ಜನಪದ. ಸತಲಜ-ರಾವಿ ಇಲ್ಲವೆ ರಾವಿ-ಚಿನಾಬ ನದಿ ಗಳ ನಡುವಿನ ಭೂಭಾಗ. ಇಂದಿನ ಸಿಯಾಲಕೋಟ್ ಬಳಿಯ ನಾಡು. ಪ್ರಾಚೀನಕಾಲದಲ್ಲಿ ಮದ್ರದೇಶ ಎಂದು ಗುರುತಿಸಲ್ಪಡುತ್ತಿತ್ತು. ಶಿಬಿ-ಔಶೀನರರ ಮಗನಾದ ಮದ್ರಕನು ಈ ನಾಡನ್ನು ಸ್ಥಾಪಿಸಿದ್ದರಿಂದ ಮದ್ರದೇಶ ಎಂದು ಹೆಸರುಬಂದಿತು. ಪಾಂಡುವಿನ ಮಡದಿಯಾದ ಮಾದ್ರಿ ಹಾಗೂ ಸಹದೇವನ ಮಡದಿ ವಿಜಯಾ ಇವರು ಮದ್ರದೇಶದ ಅರಸುಗುವರಿಯರು. ಶಲ್ಯ ಮದ್ರದೇಶದ ದೊರೆ. ನಕುಲ-ಸಹದೇವರ ಸೋದರ ಮಾವನಾಗಿದ್ದನು. ಈ ನಾಡು ಹಾಗೂ ಸುತ್ತಲಿನ ರಾಜ್ಯಗಳ ಜನ ಬಲು ದುರಾಚಾರಿ ಗಳಾಗಿದ್ದರೆಂದು ಕರ್ಣನು ಹೇಳಿರುವನಲ್ಲದೆ ಶಲ್ಯನೆದುರು ಅವರನ್ನೆಲ್ಲ ಟೀಕಿಸಿರುವನು.

**ಮರು :** ಇಂದಿನ ರಾಜಸ್ಥಾನದಲ್ಲಿಯ ಒಂದು ಭೂಭಾಗ. ಈ ನಾಡಿನ ಉತ್ತರಕ್ಕೆ ತೃಣಬಿಂದು ಸರೋವರ ಇರುವ ಕಾಮ್ಯಕವನ ಇದೆ. ಉತ್ತಂಕ ಮುನಿ ಹಾಗೂ ಶ್ರೀಕೃಷ್ಣರು ಇಲ್ಲಿ ಒಬ್ಬರಿಗೊಬ್ಬರು ಭೆಟ್ಟಿಯಾದರು. ಶ್ರೀಕೃಷ್ಣನು ಮುನಿಗೆ ವಿಶ್ವರೂಪ ದರ್ಶನವನ್ನು ಮಾಡಿಸಿದನು.

**ಮೇರು :** ಜಂಬುದ್ವೀಪದಲ್ಲಿರುವ ಏಳು ಕುಲಪರ್ವತಗಳಲ್ಲಿ ಒಂದನೆಯದಾದ ಪರ್ವತ. ಇದು ಸುದರ್ಶನ, ಮಹಾಮೇರು, ಸುಮೇರು ಎಂಬ ಹೆಸರುಗಳಿಂದ ಪ್ರಸಿದ್ಧ.

ಇದು ಸುವರ್ಣಮಯವಾದುದು. ಇದು ಪುಣ್ಯವಂತರ ವಿಹಾರಸ್ಥಾನವಾಗಿತ್ತು. ಈ ಪರ್ವತದ ಮೂಡಣಕ್ಕೆ ಮಂದರ ಹಾಗೂ ದಕ್ಷಿಣಕ್ಕೆ ಗಂಧಮಾದನ ಪರ್ವತಗಳಿವೆ. ಇದರ ಆಕಾರ ಗಂಟೆಯಂತಿದ್ದು ಎತ್ತರ ಎಂಬತ್ನಾಲ್ಕು ಯೋಜನಗಳು. ನೆಲದಲ್ಲಿ ಹದಿನಾರುಸಾವಿರ ಯೋಜನಗಳ ಆಳಕ್ಕಿಳಿದಿದೆಯೆಂದು ನಂಬಲಾಗಿದೆ. ಈ ಪರ್ವತವೆಂದರೆ ಒಂದು ವಿಸ್ತೀರ್ಣವಾದ ತಪ್ಪಲಾಗಿದ್ದು ಅದರ ಸೀಮೆಯ ಬಳಿಯಲ್ಲಿ ಎತ್ತರೆತ್ತರದ ಬೆಟ್ಟಗಳಿವೆ. ಇದರ ಸುತ್ತಲಿನ ನಾಲ್ಕು ಶಿಖರಗಳು ನಾಲ್ಕು ಬಣ್ಣಗಳವಿದ್ದು ಅವು ಇದರ ಪೋರೆಗಳೆಂದು ತಿಳಿಯಲ್ಪಡುತ್ತವೆ. ಇವುಗಳ ಮೂರು ಶಿಖರಗಳ ಮೇಲೆ ಬ್ರಹ್ಮ, ವಿಷ್ಣು ಹಾಗೂ ಮಹೇಶ್ವರರ ನಗರಗಳಿದ್ದು ಎಂಟು ದಿಕ್ಕುಗಳಲ್ಲಿ ದಿಕ್ಪಾಲಕರ ಪುರಗಳಿವೆ. ಭಾಗೀರಥಿಯ ಉಗಮಸ್ಥಾನ ಇದೇ ಪರ್ವತದಲ್ಲಿದೆ. ಮೇರುಪರ್ವತದ ಸ್ಥಾನದ ಬಗೆಗೆ ಮಾತ್ರ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ.

**ಮಾರ್ತಿಕಾವತಕ :** ಭರತವರ್ಷದಲ್ಲಿರುವ ಒಂದು ನಾಡಿನ ಹೆಸರು.

**ಯಮುನೆ :** ಶ್ರೀಕೃಷ್ಣನ ಸಾಹಚರ್ಯದಿಂದ ಪುನೀತವಾದ ಒಂದು ಹೆಸರಾದ ಹೊಳೆ. ಹಿಮಾಲಯದ ಬಂದರಪುಚ್ಛ ಶಿಖರದ ವಾಯುವ್ಯದ ಬದಿಗಿದ್ದ ಕಲಿಂದ ಪರ್ವತದಲ್ಲಿ ಇದರ ಉಗಮಸ್ಥಾನವಾದ ಯಮುನೋತ್ರಿಯಿದೆ. ಹೀಗಾಗಿ ಕಾಲಿಂದಿ ಎಂದೂ ಈ ಹೊಳೆಗೆ ಹೆಸರು. ಸೂರ್ಯ ಹಾಗೂ ಸಂಜ್ಞಾ ಇವರ ಅವಳಿಮಕ್ಕಳಲ್ಲಿ ಇವಳೊಬ್ಬಳಾದ್ದರಿಂದ 'ಯಮುನೆ' ಎಂಬುದಾಗಿ ಹೆಸರುಬಂದಿರಲು ಸಾಕು. ಯಮನು ಈಕೆಯ ಸೋದರ. ಶತ್ರುಘ್ನನು ಈ ಹೊಳೆಯ ದಡದಲ್ಲಿ ಮಥುರಾ ನಗರವನ್ನು ಸ್ಥಾಪಿಸಿದನು. ಇಂದಿಗೂ ಹಲವಾರು ಹೆಸರಾಂತ ನಗರಗಳು ಈ ಹೊಳೆಯ ದಡದಲ್ಲಿವೆ. ಭರತನು ಇವಳಿಗಾಗಿ ಅಶ್ವಮೇಧಯಜ್ಞವನ್ನು ಮಾಡಿದನು. ವೈವಸ್ವತನು ಗಂಡುಮಕ್ಕಳಿಗಾಗಿ ತಪಸ್ಸನ್ನು ಆಚರಿಸಿದನು. ಶ್ರೀಕೃಷ್ಣನ ರಾಸಕ್ರೀಡೆ, ಕಾಲಿಯಾಮರ್ದನಗಳಿಂದಾಗಿ ಈಕೆ ಐಶ್ವರ್ಯ ಸಂಪನ್ನಳಾದಳು. ಪಾಂಡವರು ಖಾಂಡವ ವನವನ್ನು ಸುಟ್ಟು ಈ ಹೊಳೆಯ ದಡದ ಮೇಲೆಯೇ ಇಂದ್ರಪ್ರಸ್ಥವನ್ನು ಸ್ಥಾಪಿಸಿದರು. ಈ ಹೊಳೆಯು ಹಲವಾರು ಪೌರಾಣಿಕ ಹಾಗೂ ಐತಿಹಾಸಿಕ ಘಟನಗಳಿಗೆ ಸಾಕ್ಷಿಯಾಗಿದೆ. ವೈಭವದಂತೆಯೇ ವಿನಾಶ, ಯುದ್ಧಗಳು, ಸಂಹಾರಾದಿಗಳನ್ನೂ ಅನುಭವಿಸಿದೆ.

**ಲಂಕೆ :** ದಕ್ಷಿಣಸಾಗರದ ತೀರದಲ್ಲಿ ಭಾರತದಿಂದ ನೂರು ಯೋಜನಗಳ ಅಂತರದಲ್ಲಿರುವ ಒಂದು ದ್ವೀಪ. ವಿಶ್ವಕರ್ಮನು ನಿರ್ಮಿಸಿದ ನಗರವು ಹತ್ತು ಯೋಜನ ಅಗಲ ಹಾಗೂ ಇಪ್ಪತ್ತು ಯೋಜನ ಉದ್ದ, ಕೋಟೆಕೊತ್ತಲಗಳಿಂದ ಸುತ್ತುವರಿದ ಸುವರ್ಣಮಯವಾದ ನಗರ ಎನ್ನಿಸಿತ್ತು. ಲಂಕೆಯ ಭೌಗೋಲಿಕವಾದ ಸ್ಥಾನದ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಕೆಲವು ಸಂಶೋಧಕರ ಅಭಿಪ್ರಾಯದ ಮೇರೆಗೆ ಲಂಕೆ ಎಂದರೆ ಜಾವಾ, ಮಾಲದೀವ ದ್ವೀಪಗಳು. ಕೆಲವರ ಅಭಿಪ್ರಾಯದ ಮೇರೆಗೆ ಇದು ಮಧ್ಯಭಾರತದಲ್ಲಿ ವಿಂಧ್ಯಪರ್ವತದ ಬಳಿಯಿದೆ. ಮುಂಬಯಿಯ ಹತ್ತಿರದ ಬೋರಿವಲಿಯ ಪಕ್ಕದಲ್ಲಿ ಲಂಕೆ ಇತ್ತೆಂಬ ಒಂದು ಅಭಿಪ್ರಾಯವೂ ಇದೆ. ಏನಿದ್ದರೂ ಸಿಂಹಲದ್ವೀಪವೇ (ಶ್ರೀಲಂಕಾ) ಲಂಕಾದ್ವೀಪವೆಂದು ಮೊದಲಿನಿಂದಲೂ ನಂಬಲಾಗಿದೆ. ಈ ಅಭಿಪ್ರಾಯ

ವನ್ನು ಪುಷ್ಟೀಕರಿಸುವ ಹಲವಾರು ಉಲ್ಲೇಖಗಳು ರಾಮಾಯಣದಲ್ಲಿವೆ. ಶ್ರೀರಾಮಕೋಶದಲ್ಲಿ (ಖಂಡ ೨, ಭಾಗ ೩/೧, ಪರಿಶಿಷ್ಟ, ಪು. ೭೬–೮೬) ಎಲ್ಲ ಬಗೆಯ ಅಭಿಪ್ರಾಯಗಳನ್ನೂ ವಿವರವಾಗಿ ಪರಿಶೀಲಿಸಲಾಗಿದೆ. ರಾವಣನ ಲಂಕೆಯೆಂದರೆ ಇಂದಿನ ಶ್ರೀಲಂಕೆ (ಸಿಲೋನ್)ಯೇ ಸರಿ. ಲಂಕೆ ನೀರಲ್ಲಿ ಮುಳುಗಿತೆಂಬ ಒಂದು ತರ್ಕವಿದೆ. ವಿಶ್ವಕರ್ಮನು ಸುಕೇಶನ ಮಕ್ಕಳ ತಪಶ್ಚರ್ಯೆಯಿಂದ ಸಂತುಷ್ಟನಾಗಿ ಲಂಕಾನಗರಿಯನ್ನು ಅವರಿಗೆ ಕೊಟ್ಟನು. ದೇವತೆಗಳಿಂದ ಮಾಲಿಯು ಕೊಲೆಯಾದ ತರುವಾಯ ಮಾಲ್ಯವಾನನು ತನ್ನ ಸೋದರರೊಂದಿಗೆ, ಬಳಗದವರೊಂದಿಗೆ ಇಲ್ಲಿ ಇರಹತ್ತಿದನು. ಆದರೆ ಈತನಿಂದ ದೇವತೆಗಳಿಗೆ ಪೀಡೆಯಾಗತೊಡಗಿತು. ಆಗ ವಿಷ್ಣುವು ಈತನನ್ನು ಕೊಂದುಬಿಟ್ಟನು. ವೈಶ್ರವಣ ಕುಬೇರನು ತನಗಾಗಿ ಲಂಕೆಯನ್ನು ತನ್ನ ತಂದೆಯಿಂದ ಕೇಳಿ ಪಡೆದನು. ರಾವಣನು ಈತನನ್ನು ಸೋಲಿಸಿ ಇದನ್ನು ವಶಪಡಿಸಿಕೊಂಡನಲ್ಲದೆ ಈತನನ್ನು ಹೊರದೂಡಿದನು. ರಾವಣನ ವಧೆಯ ಬಳಿಕ ಶ್ರೀರಾಮನು ವಿಭೀಷಣನನ್ನು ಪಟ್ಟದ ಮೇಲೆ ಕುಳ್ಳಿರಿಸಿದನು. ಗುಪ್ತ ಹಾಗೂ ಮೌರ್ಯ ದೊರೆಗಳು ಲಂಕೆಯೊಡನೆ ಸಂಬಂಧಗಳನ್ನು ಹೊಂದಿದ್ದ ಬಗೆಗೆ ಉಲ್ಲೇಖಗಳು ದೊರಕುತ್ತವೆ. ಈ ದೇಶವು ಕೆಲಕಾಲದವರೆಗೆ ವಿಜಯನಗರದ ದೇವರಾಯನ ಆಳ್ವಿಕೆಗೆ ಒಳಪಟ್ಟಿತ್ತು. ಇದೇ ರೀತಿಯಾಗಿ ಪೋರ್ತುಗೀಜ್, ಡಚ್ ಹಾಗೂ ಆಂಗ್ಲರು ಕೂಡ ಇಲ್ಲಿ ತಮ್ಮ ಅಧಿಕಾರವನ್ನು ಚಲಾಯಿಸಿದರು. ಇಂದು ಶ್ರೀಲಂಕೆ ಒಂದು ಸ್ವತಂತ್ರ, ಸಾರ್ವಭೌಮ ರಾಷ್ಟ್ರವೆನ್ನಿಸಿದೆ.

**ವಿಂಧ್ಯ :** ಮಧ್ಯಭಾರತದ ಒಂದು ಹೆಸರಾಂತ ಪರ್ವತ. ಇದರಿಂದಾಗಿ ಭಾರತದಲ್ಲಿ ಉತ್ತರ, ದಕ್ಷಿಣ ಎಂದು ಎರಡು ಭಾಗಗಳಾಗಿವೆ. ಈ ಪರ್ವತ ಗುಜರಾತ್, ಮಧ್ಯಪ್ರದೇಶ ಹಾಗೂ ಬಿಹಾರ ರಾಜ್ಯಗಳಲ್ಲಿ ಚಾಚಿಕೊಂಡಿದೆ. ತಾನು ಮೇರುವಿಗಿಂತ ಎತ್ತರವಾಗಿ ಬೆಳೆಯಬೇಕೆಂದು ಬಯಸಿತ್ತು. ಅಂಥ ಯತ್ನಗಳೂ ಸಾಗಿದ್ದವು. ಅಗಸ್ತ್ಯನ ದರ್ಶನದಿಂದಾಗಿ ಈ ಪರ್ವತ ನಮ್ರವಾಗಿ ಸ್ಥಿರಗೊಂಡಿತೆಂದು ಮತ್ಸ್ಯ, ಪದ್ಮ ಹಾಗೂ ವಾಯು ಪುರಾಣಗಳಲ್ಲಿ ಹೇಳಲಾಗಿದೆ. ಸಪ್ತಕುಲಪರ್ವತಗಳಲ್ಲಿ ಇದಕ್ಕೂ ಒಂದು ಸ್ಥಾನವಿದೆ. ಬಲುಪ್ರಾಚೀನವಾದುದೆಂದು ತಿಳಿಯಲಾಗುತ್ತದೆ. ಇದನ್ನು ದಕ್ಷಿಣಗಿರಿ ಎಂದು ಕೂಡ ಗುರುತಿಸಲಾಗುತ್ತದೆ. ಕಡಲ ಮಟ್ಟದಿಂದ ೨೫೦೦ ಅಡಿಗಳ ಎತ್ತರ. ಉದ್ದಳತೆ ೭೦೦ ಮೈಲುಗಳು. ತಾಪಿ, ನರ್ಮದೆ, ಶೋಣ, ಮಹಾನದಿ ಮೊದಲಾದವುಗಳ ಉಗಮಸ್ಥಾನ. ಋಕ್ಷವಾನ ಹಾಗೂ ಪರಿಯಾತ್ರ ಇವು ಇದೇ ಪರ್ವತದ ಭಾಗಗಳು. ಪ್ರಾಚೀನಕಾಲದಲ್ಲಿ ದಶಾರ್ಣ, ಭೋಜ, ಕೋಸಲಾದಿ ಹಲವಾರು ಜನಪದಗಳು ಇಲ್ಲಿ ಇದ್ದವು. ಇಲ್ಲಿ ಅರಣ್ಯಜನಾಂಗದವರ ವಸತಿಯಿತ್ತು.

**ಶುಕ್ತಿಮತಿ :** ಉಪರಿಚರ ವಸುವಿನ ರಾಜಧಾನಿಯ ಬಳಿಯಲ್ಲಿ ಹರಿಯುವ ಹಾಗೂ ಚೇದಿ ದೇಶದ ಹೆಸರಾದ ನದಿ. ಇವಳ ಅಂದಕ್ಕೆ ಕೋಲಾಹಲಪರ್ವತ ಕಾಮವಶನಾದನು. ಅವನಿಂದ ಇವಳಿಗೆ ಬಸಿರು, ಅವಳಿಗಳ ಹುಟ್ಟು. ಹೆಣ್ಣುಮಗುವನ್ನು ಉಪರಿಚರ ವಸುವು ಮುಂದೆ ತನ್ನ ಮಡದಿಯನ್ನಾಗಿ ಮಾಡಿಕೊಂಡನು. ಮಗುವಿಗೆ ದಂಡನಾಯಕನ ಪದವನ್ನಿತ್ತನು.

**ಸರಸ್ವತಿ :** ಪ್ರಾಚೀನ ಭಾರತದ ಒಂದು ಪವಿತ್ರವಾದ ನದಿ. ಗಂಗೆಯ ಹಲವಾರು ಧಾರಾಪ್ರವಾಹಗಳಿಂದ ಹುಟ್ಟಿದ ಹೊಳೆಗಳಲ್ಲಿ ಒಂದು. ಈಕೆ ಋಷಿಗಳಿಗಾಗಿ ತನ್ನ ಪ್ರವಾಹದ ದಿಕ್ಕುಗಳನ್ನು ಬದಲಾಯಿಸುತ್ತ ಹಲವಾರು ತೀರ್ಥಕುಂಡಗಳನ್ನು ನಿರ್ಮಿಸಿದಳು. ಯಜ್ಞದ ಕಾಲಕ್ಕೆ ಇವಳನ್ನು ಸ್ಮರಿಸಲಾಗುತ್ತಲೇ ಈಕೆ ಬೇರೆ ಬೇರೆ ಹೆಸರುಗಳನ್ನು ತೊಟ್ಟು ಏಳು ಧಾರೆಗಳಾಗಿ ಪ್ರಕಟಹೊಂದಿದಳು. ಮಂಕಣಕನ ವೀರ್ಯ ಇವಳ ನೀರಿನಲ್ಲಿ ಬಿದ್ದಿತು. ಅದರಿಂದ ಏಳು ಜನ ಋಷಿಗಳು ಹುಟ್ಟಿಬಂದರು. ಈಕೆಯು ಯಯಾತಿಯ ಯಜ್ಞಕ್ಕಾಗಿ ಹಾಲು, ತುಪ್ಪಗಳನ್ನು ಪೂರೈಸಿಸಿದಳು. ವಸಿಷ್ಠನು ಇವಳನ್ನು ಸ್ತುತಿಸಿದ್ದಾನೆ. ವಿಶ್ವಾಮಿತ್ರನು ಇವಳನ್ನು ಶಪಿಸಿದ್ದಾನೆ. ಅದರಿಂದಾಗಿ ಇವಳ ನೀರು ರಕ್ತಲಾಂಛಿತವಾಯಿತು. ಇವಳು ಉತಥ್ಯನ ಆದೇಶದ ಮೇರೆಗೆ ಗುಪ್ತಳಾಗಿ ಬಿಟ್ಟಳು. ಮರುಪ್ರದೇಶಕ್ಕೆ ಹೋದಳು. ದಧೀಚಿಯ ಆಶ್ರಮ ಇವಳ ದಡದಲ್ಲಿತ್ತು. ಈಕೆ ಯಕ್ಷ, ಗಂಧರ್ವ ಹಾಗೂ ಋಷಿಗಳಿಗೆಲ್ಲ ಬೇಕಾದವಳು. ವಾಲಖಿಲ್ಯ ಹಾಗೂ ಶ್ರೀಕೃಷ್ಣನು ಇವಳ ದಡದಲ್ಲಿಯೇ ಯಜ್ಞಗಳನ್ನು ಮಾಡಿದ್ದರು. ಬಲರಾಮ ಇವಳ ದಡದ ಮೇಲಿನ ತೀರ್ಥಗಳಿಗೆ ಬಂದಿದ್ದನು. ಶ್ರೀಕೃಷ್ಣನ ೧೬೦೦೦ ಜನ ಮಡದಿಯರು ಸರಸ್ವತಿಯಲ್ಲಿಯೇ ದೇಹಾರ್ಪಣ ಮಾಡಿದರು. ಪ್ಲಕ್ಷ ಇವಳ ತಂದೆ. ಮತಿನಾರನು ಇವಳ ಗಂಡನು. ಹೆಸರಾದ ಕಾಮ್ಯಕ ವನವು ಸರಸ್ವತಿಯ ದಡದಲ್ಲಿತ್ತು.

**ಸಿಂಧು-ಸೌವೀರ :** ಪ್ರಾಚೀನ ಭಾರತದಲ್ಲಿ 'ಸಿಂಧು' ಎಂಬ ಹೆಸರಿನ ಎರಡು ದೇಶಗಳಿದ್ದವು. ಮಹಾಭಾರತದಲ್ಲೂ 'ಸಿಂಧು' ಹೆಸರಿನ ಎರಡು ಜನಪದಗಳಿರುವುದಾಗಿ ಭೀಷ್ಮಪರ್ವದಲ್ಲಿ ಬಣ್ಣಿಸಲಾಗಿದೆ. ಅವುಗಳ ಹೆಸರುಗಳು 'ಸಿಂಧು-ಪುಲಿಂದ' ಹಾಗೂ 'ಸಿಂಧು-ಸೌವೀರ' ಎಂದಿದೆ. ಪಾಕಿಸ್ತಾನದ ಸಿಂಧ ಪ್ರಾಂತ್ಯವಿದ್ದ ಸಿಂಧು ಹೊಳೆಯ ಸುತ್ತಲ ನಾಡನ್ನು 'ಸಿಂಧುದೇಶ' ಎಂದು ಗುರುತಿಸಲಾಗುತ್ತಿತ್ತು. ಹಾಗೆಯೇ ಬ್ರಹ್ಮದೇಶದ ಸೀಮೆಗೆ ಅಂಟಿಕೊಂಡು ಇರುವ ಪ್ರಾಗ್‌ಜ್ಯೋತಿಷಪುರ ಹಾಗೂ ಮಣಿಪುರ ಇವುಗಳ ಸುತ್ತಲ ಭೂಭಾಗವನ್ನೂ 'ಸಿಂಧುರಾಜ್ಯ' ಎಂದು ಕರೆಯಲಾಗುತ್ತಿತ್ತು. ಸಿಂಧು ಹಾಗೂ ಸೌವೀರಗಳು ಎರಡು ಭಿನ್ನವಾದ ನಾಡುಗಳಾಗಿದ್ದೂ ಅವುಗಳನ್ನು ಒಟ್ಟಾಗಿ ಹೇಳಲಾಗುತ್ತದೆ. ಇದಕ್ಕೆ ಬಹಳಷ್ಟು ಮಟ್ಟಿಗೆ ಜಯದ್ರಥನು ಕಾರಣವೆಂದು ತೋರುತ್ತದೆ. ಅವನು 'ಸಿಂಧುರಾಜ'ನಾಗಿದ್ದಂತೆಯೇ ಸೌವೀರದೇಶಕ್ಕೂ ದೊರೆಯಾಗಿದ್ದನು. ಈ ಬಗೆಗೆ ಖಚಿತವಾದ ಹಲವು ಉಲ್ಲೇಖಗಳು ಮಹಾಭಾರತದಲ್ಲಿವೆ. ಸೌವೀರದೇಶವು ಭರತವರ್ಷದ ವಾಯವ್ಯದ ಬದಿಗಿದ್ದ ಸಿಂಧುದೇಶದ ಪೂರ್ವಕ್ಕೆ ಇದ್ದಿತು.

**ಸ್ಥಾಣುತೀರ್ಥ :** ಸ್ಥಾಣು, ಸ್ಥಾಣೇಶ್ವರ ಎಂದರೆ ಶಿವ, ಹಾಗೂ ಅವನ ಪ್ರಾಚೀನ ಮಂದಿರವಿದ್ದ ಒಂದು ಪವಿತ್ರವಾದ ತೀರ್ಥಕ್ಷೇತ್ರ. ಪಂಜಾಬ ರಾಜ್ಯದ ಕರ್ನಾಲ ಜಿಲ್ಲೆಯಲ್ಲಿ ಅಂಬಾಲಾದ ದಕ್ಷಿಣಕ್ಕೆ ಸರಸ್ವತಿ ನದಿಯ ದಂಡೆಯ ಮೇಲೆ ಈ ತೀರ್ಥವಿದೆ. ಅಲ್ಲೊಂದು ಪವಿತ್ರವಾದ ಸರೋವರವಿದ್ದು ಅದರ ನೀರು ರೋಗ ನಿವಾರಕವಾದುದು ಎಂಬ ನಂಬಿಕೆಯಿದೆ. ಈ ಸರೋವರದ ನೀರಿನ ಹನಿಗಳ ಸ್ಪರ್ಶದಿಂದ ವನರಾಜನ ಕುಷ್ಠರೋಗ ಗುಣವಾಯಿತೆಂಬ ಆಖ್ಯಾಯಿಕೆ ಇದೆ. ಇಲ್ಲಿ ಸಹಸ್ರ ಶಿವಲಿಂಗಗಳಿದ್ದು ವಸಿಷ್ಠ ಹಾಗೂ ವಿಶ್ವಾಮಿತ್ರರ ಆಶ್ರಮಗಳು ಪಕ್ಕದಲ್ಲಿಯೇ ಇದ್ದವು.

**ಹಸ್ತಿನಾಪುರ :** ಕುರುವಂಶದ ಹಸ್ತಿನುರಾಜನು ಸ್ಥಾಪಿಸಿದ ನಗರ. ಹಸ್ತಿನಾಪುರ ವೆಂದು ಹೆಸರಾದ ನಗರ. ಕುರುದೇಶದ ರಾಜಧಾನಿಯಾಗಿತ್ತು. ಕೌರವ-ಪಾಂಡವರ ಕಾಲದ ಪ್ರಾಚೀನ ನಗರ. ಉತ್ತರಪ್ರದೇಶದ ಮೇರಠ ಜಿಲ್ಲೆಯಲ್ಲಿ ಗಂಗೆಯು ದಕ್ಷಿಣ ದಡದಲ್ಲಿ ಮೀರಠಿನಿಂದ ೨೨ ಮೈಲುಗಳ ಅಂತರದಲ್ಲಿ ಆಗ್ನೇಯ ದಿಕ್ಕಿಗೆ ಇತ್ತು. ಗಂಗೆಯು ಬದಲಾಗುವ ಪ್ರವಾಹದಿಂದಾಗಿ ಈ ನಗರ ನಾಶಹೊಂದಿತು. ಸಂಶೋಧಕರು ಪಳೆಯುಳಿಕೆಗಳನ್ನು ಕಂಡುಹಿಡಿಯುವಲ್ಲಿ ಯಶ ಪಡೆದಿದ್ದಾರೆ. ಭಾರತಾಚಾರ್ಯರಾದ ಚಿಂತಾಮಣರಾವ್ ವೈದ್ಯ ಇವರ ಅಭಿಪ್ರಾಯದಂತೆ ಕುರುರಾಜ್ಯದ ವಿಸ್ತಾರ ಸರಸ್ವತಿ ಹೊಳೆಯಿಂದ ಗಂಗೆಯವರೆಗಿತ್ತು. ಈ ನಗರ ದಿಲ್ಲಿಯಿಂದ ೧೦೦ ಮೈಲುಗಳ ಅಂತರದಲ್ಲಿತ್ತು. ಐತಿಹಾಸಿಕ ಪುರಾವೆಗಳಿಂದ ತಿಳಿದುಬರುವ ಸಂಗತಿ ಎಂದರೆ ಈ ನಗರವು ಹಲವು ಬಾರಿ ಹಾಳಾಗಿ ಮತ್ತೆ ವೈಭವಕ್ಕೇರಿದ್ದುದು. ಈ ನಗರದ ಸ್ಥಾಪನೆ ಕ್ರಿಸ್ತಶಕ ಪೂರ್ವ ೩೪೦೦ರ ಸುಮಾರಿನದು. ಕುರುರಾಜ್ಯ ಎರಡು ಹೋಳುಗಳಾದ ತರುವಾಯ ಕೌರವರ ರಾಜಧಾನಿ ಹಸ್ತಿನಾಪುರ ಹಾಗೂ ಪಾಂಡವರದು ಇಂದ್ರಪ್ರಸ್ಥವಾಯಿತು. ಇಲ್ಲಿ ಶಂತನುವೂ ಅಭಿಮನ್ಯುವಿನ ಮಗ ಪರೀಕ್ಷಿತನೂ ಕೆಲಕಾಲ ರಾಜ್ಯವಾಳಿದರು.

**ಹಿಮವತ್ :** ಭಾರತದ ಉತ್ತರ ಗಡಿಯಲ್ಲಿರುವ ವಿಶ್ವವಿಖ್ಯಾತವಾದ ಪರ್ವತರಾಜಿ. ಪೌರಾಣಿಕ ಕಾಲದಲ್ಲಿ ಹಿಮವಾನ್ ಎಂಬ ಹೆಸರಿನಿಂದ ಕರೆಯಲ್ಪಡುತ್ತಿದ್ದಿತು. ಹಿಮಾಚಲ, ಹಿಮವತ್, ಹಿಮಾದ್ರಿ, ಹೈಮವತ ಎಂಬ ಕೆಲವು ಹೆಸರುಗಳೂ ಬೇರೆ ಬೇರೆ ಗ್ರಂಥಗಳಲ್ಲಿ ಕಂಡುಬರುತ್ತವೆ. ಇದರ ಎತ್ತರ ಹತ್ತುಸಾವಿರ ಯೋಜನಗಳು. ಇಲಾವೃತ್ತದ ದಕ್ಷಿಣಕ್ಕೆ ಪೂರ್ವ-ಪಶ್ಚಿಮವಾಗಿ ಚಾಚಿದೆ. ಮಾರ್ಕಂಡೇಯ ಪುರಾಣದಲ್ಲಿ ಇದರ ಹರಹು ಪೂರ್ವಸಮುದ್ರದಿಂದ ಹಿಡಿದು ಪಶ್ಚಿಮಸಮುದ್ರದವರೆಗಿತ್ತು ಎಂದು ಬಣ್ಣಿಸಲಾಗಿದೆ. ಕೂರ್ಮಪುರಾಣದಲ್ಲಿ ಇದರ ಉದ್ದಳತೆ ಒಂದು ಸಾವಿರ ಯೋಜನಗಳೆಂದು ಹೇಳಲಾಗಿದೆ. ಋಗ್ವೇದ, ಅಥರ್ವವೇದ, ಐತರೇಯಬ್ರಾಹ್ಮಣ, ತೈತ್ತಿರೀಯ, ಶತಪಥಬ್ರಾಹ್ಮಣ, ಪಾಣಿನಿಯ ಅಷ್ಟಾಧ್ಯಾಯಿ ಮೊದಲಾದ ಹಲವು ಗ್ರಂಥಗಳಲ್ಲಿ ಈ ಬಗೆಗೆ ಉಲ್ಲೇಖಗಳಿವೆ. ಶ್ರೀಮದ್ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ತನ್ನ ಬಗೆಗೆ 'ಸ್ಥಾವರಾಣಾಂ ಹಿಮಾಲಯಃ' ಎಂದುಕೊಂಡಿದ್ದಾನೆ. ಕಾಲಿದಾಸನು ರಘುವಂಶದಲ್ಲಿ ಹಿಮಾಲಯವನ್ನು ಕುರಿತು ಅಂದವಾಗಿ ಬಣ್ಣಿಸಿದ್ದಾನೆ. ಈ ಪರ್ವತದ ಮೇಲೆ ಹಲವಾರು ಜನ ಋಷಿಗಳ ಆಶ್ರಮಗಳು ಇದ್ದವು. ಗೌರೀಶಂಕರ, ಕಾಂಚನಗಂಗಾ, ಧವಳಗಿರಿಗಳು ಇದರ ಉತ್ತುಂಗವಾದ ಶಿಖರಗಳು. ಗಂಗೆ, ಯಮುನೆ, ಕಾಲಿ, ಘಾಗ್ರಾ, ಗಂಡಕ, ಕೋಸೀ, ಬ್ರಹ್ಮಪುತ್ರಾ, ಶರಯೂ, ಝೀಲಂ ಮೊದಲಾದ ಅವೆಷ್ಟೋ ಹೊಳೆಗಳು ಈ ಪರ್ವತದಲ್ಲಿ ಉಗಮಹೊಂದುತ್ತವೆ. ಈ ಪರ್ವತದ ಮೇಲೆ ಅದೆಷ್ಟೋ ಔಷಧ ವನಸ್ಪತಿಗಳು ಹುಟ್ಟಿ ಬೆಳೆಯುತ್ತವೆ. ಕೇದಾರನಾಥ, ಬದರೀನಾಥ, ಪಶುಪತಿನಾಥ ಮೊದಲಾದ ಪಾವನ ತೀರ್ಥಗಳಿವೆ. ಹಿಂದುಗಳಂತೆಯೇ ಬೌದ್ಧಧರ್ಮೀಯರೂ ಇದನ್ನು ಪವಿತ್ರವಾದ, ಪೂಜ್ಯವಾದ ಪರ್ವತ ಎಂದೂ ತಿಳಿಯುತ್ತಾರೆ. ಬೌದ್ಧರ ಪವಿತ್ರ ತೀರ್ಥಕ್ಷೇತ್ರಗಳು ಇಲ್ಲಿವೆ. ಧರ್ಮ, ಸಂಸ್ಕೃತಿ, ಕಲೆ, ಸಾಹಿತ್ಯ, ದೇವತೆಗಳು ಮೊದಲಾದ ಹಲವು ದೃಷ್ಟಿಗಳಿಂದಲೂ ಈ ಪರ್ವತದ ಹಿರಿಮೆ ಅನನ್ಯಸಾಧಾರಣವಾದುದು.

# ಪರಿಶಿಷ್ಟ : ಎರಡು

## ಮಹಾಭಾರತದಲ್ಲಿಯ ಶಾಪಿತರು

ಮಹಾಭಾರತದಲ್ಲಿಯ ಒಟ್ಟು ಒಂದುನೂರಾ ನಾಲ್ವತ್ತೇಳು ಶಾಪಗಳ ಬಿಸಿ ತಗಲಿದುದು ಒಟ್ಟು ಒಂದುನೂರಾ ಇಪ್ಪತ್ತೊಂಭತ್ತು ಚರಾಚರರಿಗೆ ತಗಲಿತು. ಸಾಮಾನ್ಯವಾಗಿ ಪ್ರತಿಯೊಬ್ಬ ಮುಖ್ಯ ವ್ಯಕ್ತಿಗೆ ಒಂದಾದರೂ ಶಾಪ ತಟ್ಟದೇ ಇಲ್ಲ. ಕೆಲವರಿಗಂತೂ ಒಂದಕ್ಕಿಂತಲೂ ಹೆಚ್ಚು ಶಾಪಗಳು ತಟ್ಟಿವೆ. ಭೀಷ್ಮನಂತಹ ಶ್ರೇಷ್ಠ ವ್ಯಕ್ತಿಗೆ ಒಂದೂ ಶಾಪವಿಲ್ಲ; ಆದರೆ ಅವನು ಹುಟ್ಟಿದುದೇ ಶಾಪದಿಂದಾಗಿ. ಈತನ ತಂದೆ ಈತನಿಗಿತ್ತ 'ಇಚ್ಛಾ ಮರಣ'ದ ವರವೂ ಈತನಿಗೊಂದು ಶಾಪದಂತಾಯಿತು, ಧೃತರಾಷ್ಟ್ರ, ದುಶ್ಶಾಸನ, ಶಕುನಿಗಳು ಶಾಪವಿರಹಿತರಾಗಿದ್ದರೂ ಎಲ್ಲರೂ ಅವರ ಹೆಸರಿನಿಂದ ಬೆರಳುಮುರಿಯುತ್ತಿದ್ದರು. ಗಾಂಧಾರಿ ಹಾಗೂ ದ್ರೌಪದಿಯರಿಗೆ ಯಾರೂ ಶಾಪವನ್ನೀಯಲು ಸಾಹಸಮಾಡದಿದ್ದರೂ ಅವರು ಬಾಳಿಡೀ ಶಾಪಿತರಿಗಿಂತಲೂ ದಾರುಣವಾದ ಯಾತನೆಗಳನ್ನು ಅನುಭವಿಸಿದರು. ಕೆಲವು ಶಾಪಗಳನ್ನು ಉಚ್ಚರಿಸಲಾಗದ್ದರಿಂದ ಶಾಪಿತರು ಪ್ರತ್ಯಕ್ಷದಲ್ಲಿ ತೊಂದರೆಗೀಡಾಗಿಲ್ಲ. ಆದರೂ ಶಾಪಕ್ಕೀಡಾಗುವ ಸಾಧ್ಯತೆ ಹಾಗೂ ಹೆದರಿಕೆಗಳು ಅವರನ್ನು ಒಂದೇ ಸಮನೆ ಪೀಡಿಸುತ್ತಲಿದ್ದವು.

**ದೇವರುಗಳು :** ಅಗ್ನಿ, ಅಷ್ಟವಸು, ಇಂದ್ರ, ಕಲಿ, ದೇವ, ಯಮ (ಕ್ರೋಧ), ಧರ್ಮ ಹಾಗೂ ಸೋಮ.

**ದೇವತೆಗಳು :** ಗಂಗೆ, ದೇವಕನ್ಯೆ, ಮೃತ್ಯುದೇವಿ ಹಾಗೂ ಸರಸ್ವತಿ.

**ಅಪ್ಸರೆಯರು :** ಅದ್ರಿಕೆ, ಬುದ್‌ಬುದಾ, ರಂಭಾ, ಲತಾ, ವರ್ಗಾ, ಸಮೀಚಿ ಹಾಗೂ ಸೌರಮೇಯಿ.

**ದೇವರ್ಷಿಗಳು :** ನಾರದ ಹಾಗೂ ಪರ್ವತ

**ಬ್ರಹ್ಮರ್ಷಿಗಳು :** ಅಷ್ಟಾವಕ್ರ, ಉತ್ತಂಕ, ಏಕತ, ಕಚ, ಗೃತ್ಸಮದ, ಗೌತಮ, (ಅಸಿತ) ದೇವಲ, ದ್ವಿತ, ನಚಿಕೇತ, ಭೃಗು, ಮತಂಗ, ಮೇಧಾವಿ, ರುಮಣ್ವಾನ, ರೈಭ್ಯ, ವಸಿಷ್ಠ, ವಸು, ವಾಲ್ಮೀಕಿ, ವಿಪುಲ, ವಿಭಾವಸು, ವಿಶ್ವಾಮಿತ್ರ ಹಾಗೂ ಅವನ ಮಕ್ಕಳು, ವಿಶ್ವಾವಸು, ವ್ಯಾಸ, ಸಹಸ್ರಪಾತ, ಸುಪ್ರತೀಕ ಹಾಗೂ ಸುಷೇಣ.

**ರಾಜರುಗಳು :** ಅರ್ಜುನ, ಇಕ್ಷ್ವಾಕು, ಉಪರಿಚರ ವಸು, ಕರ್ಣ, ಕಾರ್ತವೀರ್ಯ (ಅರ್ಜುನ), ಕುಶಿಕ.

**ಅರಸುಗುವರರು :** ಕೌರವರು, ಗಾಧಿ, ಜನಮೇಜಯ, ದುರ್ಯೋಧನ, ನಲ, ನಹುಷ, ನಿಮಿ. ಪಾಂಡು, ಪರೀಕ್ಷಿತ.

**ರಾಜರ್ಷಿಗಳು :** ಪುರೂರವ, ಪೃಥ್ವೀಪತಿ, ಪೌಷ್ಯ, ಭೀಮ, ಮರುತ್ತ, ಮಹಾಭಿಷ, ಯಯಾತಿ, ಯುಧಿಷ್ಠಿರ, ವೃಷದರ್ಭ, ವೃಷ್ಣಿವೀರ, ಶ್ರೀಕೃಷ್ಣ, ಸಗರಪುತ್ರ ಹಾಗೂ ಸೌದಾಸ.

**ಬೇರೆ ವ್ಯಕ್ತಿಗಳು :** ಅನು, ಅಲರ್ಕ, ಅಶ್ವತ್ಥಾಮ, ಕಳ್ಳ, ತುರ್ವಸು, ದ್ರುಹ್ಯು, ನಾಗರಿಕ, ಯದು, ವ್ಯಾಧ, ಸಮಸ್ತರು, ಬ್ರಾಹ್ಮಣವರ್ಗ ಹಾಗೂ ಸಾರಥಿ.

**ಸ್ತ್ರೀಯರು :** ಅದಿತಿ, ಅಂಬೆ. ದೇವಯಾನಿ, ಕುಂತಿ, ಪುಷ್ಪಧಾರಿಣಿ, ರೇಣುಕಾ, ರೈಭ್ಯನ ಸೊಸೆ, ವಿನತೆ, ವೇಶ್ಯೆ, ಸತ್ಯವತಿ, ಸುಜಾತಾ, ಸುಶೋಭನಾ ಹಾಗೂ ಹೆಣ್ಣು ಜಾತಿ.

**ಯಕ್ಷರು, ರಾಕ್ಷಸರು :** ಅಲರ್ಕ (ದಂಶ), ಕುಬೇರ, ಮಣಿಮಾನ, ರಾಕ್ಷಸ, ರಾವಣ, ಸುಂದೋಪಸುಂದರು, ಸ್ಥೂಣಾಕರ್ಣ ಹಾಗೂ ಹಿರಣ್ಯಕಶಿಪು.

**ಪಶುಪಕ್ಷಿಗಳು :** ಕರ್ಕೋಟಕ, ನಾಗ, ಬೆಳ್ಳಕ್ಕಿಗಳು, ಕಪ್ಪೆ, ಮೀನು, ರಾಜಧರ್ಮ (ಬಕಪಕ್ಷಿ), ಮಾಸುಕಿ, ಶರಭ, ಶುಕ, ಹಾವು ಹಾಗೂ ಸುರಭಿ.

**ಸ್ಥಾವರಗಳು :** ನೀರು, ಹೊಳೆಗಳು, ಮರಗಳು, ಕಡಲು ಹಾಗೂ ಹಿಮವತ್.

# ಪರಿಶಿಷ್ಟ : ಮೂರು

## ಶಾಪ: ಕೆಲವು ಗ್ರಹಿಕೆಗಳು

ಭಾರತೀಯ ಸಂಸ್ಕೃತಿಯು ಅತಿಥಿಯನ್ನು ದೇವರೆಂದೇ ತಿಳಿದಿದೆ. ಅವನು ಪೂಜ್ಯನಾದುದರಿಂದ ಅವನ ಮಾತುಗಳಿಗೆ ಒಂದು ಪ್ರತಿಷ್ಠೆ ಇದೆ. ಅವನು ಸಂತುಷ್ಟನಾಗಿರತಕ್ಕದ್ದು. ಅವನತ್ತ ಅಲಕ್ಷ್ಯ ಸಲ್ಲದು. ಮನೆಯ ಒಡೆಯನಾದವನು ಇವೆಲ್ಲ ಸಂಗತಿಗಳತ್ತ ಗಮನವೀಯಬೇಕಿದೆ. ಕೆರಳಿದ ಅತಿಥಿಯ ಶಾಪ ಮನೆಯನ್ನೇ ಸುಟ್ಟು ಬೂದಿ ಮಾಡಬಲ್ಲದು. ಅವನ ನುಡಿಗಳಿಗೆ, ಪದಗಳಿಗೆ ಹೆಚ್ಚಿನ ತೀಕ್ಷ್ಣತೆ ಇರುತ್ತದೆ. ಅವನ ಶಾಪವಾಣಿ ದಾಹಕವಾದುದು. ಸಹಜವಾಗಿ ಬಂದ ಅತಿಥಿಯ ಸಾಮರ್ಥ್ಯವನ್ನು ದುರ್ಯೋಧನನೂ ಸರಿಯಾಗಿ ಅರಿತವನೇ. ಹೀಗಾಗಿ ದುರ್ವಾಸರ ಆತಿಥ್ಯದಲ್ಲಿ ಯಾವುದೇ ಬಗೆಯ ಕುಂದುಕೊರತೆಗಳು ಉಳಿಯದಂತೆ ಅವನು ಎಚ್ಚರವಹಿಸುತ್ತಿದ್ದನು. ಚ್ಯವನಭಾರ್ಗವನಂತೂ ಕುಶಿಕನಿಗೆ ಶಾಪವನ್ನೀಯಲೆಂದೇ ಅವನಲ್ಲಿಗೆ ಬಂದಿದ್ದನು. ಅವನು ಕುಶಿಕ ದಂಪತಿಗಳನ್ನು ಮನಬಂದಂತೆ ಪೀಡಿಸಿದನು. ದೈಹಿಕವಾಗಿ ಹಿಂಸಿಸಿದನು. ಇಷ್ಟಾಗಿಯೂ ಅವರಿಬ್ಬರೂ ಬಂದ ಅತಿಥಿಗೆ ಯಾವುದೇ ಕೊರತೆಯಾಗದ ಹಾಗೆ ನೋಡಿಕೊಂಡರು. ಹೀಗಾಗಿ ಆತನ ಇಚ್ಛೆ ಕೈಗೂಡಲಿಲ್ಲ (ಶಾಪ, ಕ್ರ. ೧೨೯). ಪೌಷ್ಯರಾಜನ ನಡತೆ ಉತ್ತಂಕನೊಂದಿಗೆ ಸರಿಯಾದುದಲ್ಲ.

ಶಾಪಗಳ ಪರಿಣಾಮಗಳು ತತ್ಕಾಲಕ್ಕೆ ಉಂಟಾಗುವವೆಂಬ ಗ್ರಹಿಕೆ ಕೆಲವುಟ್ಟಿಗೆ ನಿಜವಾದುದು. ಯಾವತ್ತೂ ಹೀಗೆಯೇ ಎಂದೇನೂ ಅಲ್ಲ. ಮೈತ್ರೇಯನು ದುರ್ಯೋಧನನಿಗೆ ಹಾಗೂ ಗಾಂಧಾರಿಯು ಶ್ರೀಕೃಷ್ಣನಿಗೆ ಇತ್ತ ಶಾಪಗಳು ಕಾಲಾಂತರದಲ್ಲಿ ಪರಿಣಾಮ ಬೀರಿದವು. ಬ್ರಹ್ಮದೇವನು ಮಹಾಭಿಷನಿಗೆ ಹಾಗೂ ವಸಿಷ್ಠನು ದ್ಯೌ ಇವನಿಗಿತ್ತ ಶಾಪಗಳ ಪರಿಣಾಮಗಳು ಮುಂದಿನ ಜನ್ಮದಲ್ಲಿ ಅನುಭವಿಸಬೇಕಾದವುಗಳು. ಯಯಾತಿಯ ಶಾಪದಿಂದ ಯದು ಹಾಗೂ ದ್ರುಹ್ಯು ಇವರಿಗೆ ಹಾಗೂ ಇವರ ವಂಶಜರಿಗೆ ರಾಜ್ಯಸುಖಕ್ಕೆ ಎರವಾಗಬೇಕಾಯಿತು. ತುರ್ವಸುವಂತೂ ನಿರ್ವಂಶನಾಗಬೇಕಾಯಿತು. ಶಾಪಗಳ ಪರಿಣಾಮಗಳು ಅಮೋಘವಾದವುಗಳು. ಶಾಪದ ಉಚ್ಚಾರಣೆ ಉದ್ದೇಶಪೂರಿತವೋ, ಉದ್ದೇಶವಿಲ್ಲದ್ದೋ, ಯೋಜನಾಬದ್ಧವೋ, ಹಾಗಲ್ಲದ್ದೋ ಎಂಬುದಕ್ಕೂ ಆದರಿಂದ ಉಂಟಾಗುವ ಪರಿಣಾಮಕ್ಕೂ ಆದಾವ ನಂಟೂ ಇರದು. The word once uttered is irrevocable ಎಂದು ಬೈಬಲ್ಲಿನ ಹಳೆಯ ಒಡಂಬಡಿಕೆಯಲ್ಲಿ ಖಚಿತವಾಗಿ ನಮೂದಿಸಲಾಗಿದೆ.

ಶಾಪವನ್ನೀಯುವ ವ್ಯಕ್ತಿಯು ಅದನ್ನು ಪಡೆವ ವ್ಯಕ್ತಿಗಿಂತ ಯಾವುದಾದರೂ ಬಗೆಯಲ್ಲಿ ಶ್ರೇಷ್ಠವಾದುದು. ಮಹಾಭಾರತದಲ್ಲಿ ಈ ಗ್ರಹಿಕೆಗೂ ಅಪವಾದಗಳಿಲ್ಲದಿಲ್ಲ. ಋಷಿಗಳು ದೇವತೆಗಳನ್ನು ಶಪಿಸುತ್ತಾರೆ. ಗೌತಮ ಹಾಗೂ ವಿಪುಲನು ಇಂದ್ರನಿಗೆ, ಆಗಸ್ತ್ಯನು ಕುಬೇರನಿಗೆ, ಅಣಿಮಾಂಡವ್ಯನು ಯಮಧರ್ಮನಿಗೆ, ಹಾಗೂ ಅಶ್ವತ್ಥಾಮನು

ಶ್ರೀಕೃಷ್ಣನಿಗೆ ಶಾಪಗಳನ್ನು ಇತ್ತಿದ್ದಾರೆ. ವಿದ್ವಾಂಸರ ಶಾಪ ಎಂದಿಗೂ ಗುರಿ ತಪ್ಪದು. ಮರಣೋನ್ಮುಖನಾದ ವ್ಯಕ್ತಿಯ ಶಾಪಗಳು ಹೆಚ್ಚು ಪರಿಣಾಮಕಾರಿ. ಸೂರ್ಯೋದಯದ ತರುವಾಯ ಮೂರು ಗಂಟೆಗಳಾದಬಳಿಕ ಇತ್ತ ಶಾಪವು ಹೆಚ್ಚು ಪ್ರಭಾವಿಯಾದುದು ಎಂಬ ಗ್ರಹಿಕೆಯಿದೆ. ಯೂರೋಪಿನ ಹಾಗೂ ಅಮೇರಿಕದ ಪ್ರಜೆಗಳಲ್ಲಿ ಒಂದು ಗ್ರಹಿಕೆಯಿದೆ. ಅದೆಂದರೆ ಮಾಟಗಾತಿಯು ಬಾಯಿಯಿಂದ ಶಾಪವನ್ನು ನುಡಿಯದೆ ತನ್ನ ಮನದಲ್ಲಿಯೇ ಇನ್ನೊಬ್ಬರಿಗೆ ಅಕಲ್ಯಾಣವನ್ನು ಬಯಸಿದರೆ, ಆಮೇಲೆ ನೆಲಕ್ಕೆ ಉಗುಳಿದರೆ ಸಾಕು, ಶಾಪದ ತಾನು ಬಯಸಿದ ಪರಿಣಾಮ ಖಂಡಿತವಾಗಿಯೂ ಉಂಟಾಗಿಯೇ ತೀರುವುದೆಂದು. ಎಸ್ಕಿಮೋ ಜನರಲ್ಲೂ ಇದೇ ಬಗೆಯ ಗ್ರಹಿಕೆಯಿದೆ.

ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಕಾಲಗಳಲ್ಲಿ ಶಾಪಗಳನ್ನು ಕುರಿತಾದ ಕಲ್ಪನೆಗಳು ಕೇವಲ ಭಿನ್ನಭಿನ್ನವಾಗಿರದೆ ಇಂದು ವಿಚಿತ್ರವಾಗಿ ಕಾಣುವಂಥವುಗಳೂ ಆಗಿರುತ್ತವೆ. ಮೊರೊಕ್ಕೋ ದೇಶದ ಅರಬರು ಕಾಳುಕಡಿಗಳಲ್ಲೂ ಶಾಪವನ್ನೀಯುವ ಸಾಮರ್ಥ್ಯ ಇದೆಯೆಂದು ನಂಬುತ್ತಾರೆ. ಹೀಗಾಗಿ ಅವರ ಅಭಿಪ್ರಾಯದಂತೆ ತಾಯಿ ತಂದೆಗಳನ್ನು ಶಪಿಸುವವರು, ಅವ್ಯೆಥವಾಗಿ ನರಸಂಹಾರ ಮಾಡುವವರು ಹಾಗೂ ದವಸಧಾನ್ಯಗಳನ್ನು ಸುಟ್ಟುಬಿಡುವವರೆಲ್ಲರಿಗೆ ನರಕ ತಪ್ಪಿದ್ದಲ್ಲ. ಏಶಿಯಾ ಮೈನರ್ ಹಾಗೂ ಉತ್ತರ ಯೂರೋಪಿನ ಪ್ರಾಚೀನ ಗೋರಿಗಳ ಮೇಲೆ ಮುಂದಿನಂತೆ ಕೆತ್ತನೆ ಬರಹಗಳನ್ನು ಕಾಣಬಹುದು :

Good friend, for Jesus' sake forbear
To dig the dust enclosed here
Blest be the man that spares these stones
And curst be he that moves my bones.

ಇದೊಂದು ಬಗೆಯ ಶಾಪವೇ ಆಗಿದೆ. ಗೋರಿಯನ್ನು ಯಾರೂ ಕೀಳದಿರಲೆಂದು ಮಹಿಸಲಾದ ಎಚ್ಚರ ಇದು. ತನ್ನ ಹಗೆಗೆ ಸಾವು ಬರಲಿ, ಅವನಿಗೆ ಅಹಿತವಾಗಲಿ, ಎಂಬ ಉದ್ದೇಶಗಳಿಗಾಗಿ ಗಾಜಿನ ತುಣುಕಿನ ಮೇಲೆ ಬರೆದ ಮಾಹಿತಿಯನ್ನು ನೆಲದಲ್ಲಿ ಇಲ್ಲವೆ ಗೋರಿಯಲ್ಲಿ ಹೂಗಿದಿಡುವುದನ್ನೂ ಕಾಣಬಹುದು. ಇಂಥ ಸ್ಥಳ ಇಲ್ಲವೆ ಗೋರಿಯು, ಅಕಲ್ಯಾಣ ಮೊದಲಾದವುಗಳನ್ನು ಒಳಗೊಂಡುದೆಂದು ಭಾವಿಸಲಾಗುತ್ತದೆ.

ಬಹಳಷ್ಟು ಶಾಪಗಳ ಮುಖ್ಯ ಗುರಿ ಶಾಪಿತನನ್ನು ಶಿಕ್ಷಿಸುವುದು, ಅವನು ತನ್ನ ತಪ್ಪುಗಳನ್ನು ತಿದ್ದಿಕೊಳ್ಳಲಿ ಎಂಬುದೇ ಆಗಿರುತ್ತದೆ. ಅವನು ಪೂರ್ತಿ ನಾಶಹೊಂದಲಿ ಎಂದಾಗಲಿ ಇಲ್ಲವೆ ಅವನಿಗೆ ಕಾಯಂ ಆಗಿ ದುಃಖವಾಗಲಿ ಎಂದಾಗಲಿ ನಿರೀಕ್ಷೆಯಿರದು. Cursing need not always be malevolent. ಶಾಪಗಳೆಲ್ಲವೂ ಬರಿ ಹೊಟ್ಟೆಕಿಚ್ಚಿನಿಂದಲೇ ನೀಡಿದವುಗಳು ಎಂದಲ್ಲ. ಕಳವು, ಕಳ್ಳರನ್ನು ಕಂಡುಹಿಡಿಯಲೆಂದು ಶಾಪಗಳನ್ನು ಬಳಸಲಾಗುತ್ತಿತ್ತು. ಗ್ರೀಸ್ ದೇಶದಲ್ಲಿ ಅಧಿಕೃತವಾದ ಶಾಪ (official) ಎಂಬ ಒಂದು ಬಗೆಯ ಶಾಪ ಇರುವುದು ಕಂಡುಬರುತ್ತದೆ. ದೇಶದ ಶತ್ರುಗಳಿಗೆ ಇಲ್ಲವೆ ಧರ್ಮದ ನಿಯಮಗಳನ್ನು ಮೀರುವವರಿಗೆ ಹೆದರಿಕೆ ಉಂಟಾಗಲೆಂದು ದಂಡಾಧಿಕಾರಿ ಇಲ್ಲವೆ ಧರ್ಮಗುರುಗಳಿಗೆ ಇಂಥ ಅಧಿಕಾರ ಇರುತ್ತಿತ್ತು. ಏಸು ಕ್ರಿಸ್ತನ ಈ

ನುಡಿಗಳು ತುಂಬ ಮಹಾರ್ಮಿಕವಾದವುಗಳು : 'Whatever you bind on earth shall be bound in heaven and whatever you lose on earth shall be loosed in heaven.' ಧಾರ್ಮಿಕ ಬಹಿಷ್ಕಾರದ ಒಂದು ಮೋಜಿನ ಬಗೆಯು bell, book and candle ಎಂಬ ಹೆಸರಿನಿಂದ ಜನಪ್ರಿಯವಾಗಿದೆ. ಇದೂ ಕೂಡ ಅಧಿಕೃತ (official) ಶಾಪದ ಒಂದು ಪದ್ಧತಿಯಾಗಿದೆ. ಧರ್ಮಗುರುವು ಶಾಪಿತನಾಗಬೇಕಿದ್ದ ವ್ಯಕ್ತಿಗೆ (ಪವಿತ್ರ) ಹೊತ್ತಗೆಯಲ್ಲಿಯ ಶಾಪವನ್ನು ಓದಿ ತೋರಿಸುತ್ತಾನೆ. ತರುವಾಯ ಆ ಪುಸ್ತಕವನ್ನು ಮುಚ್ಚಿ ಇಡುತ್ತಾನೆ. ಗಂಟೆಯನ್ನು ನುಡಿಸಲಾಗಿ ಮೇಣದ ಬತ್ತಿಗಳನ್ನು ನಂದಿಸಲಾಗುತ್ತದೆ. ಇದೆಲ್ಲ ಸೂಚಕವಾದುದು. ಆ ವ್ಯಕ್ತಿಯು ದೇವನ ಕೃಪೆಗೆ ಹೊರಗಾದನೆಂದು ಇದರ ಅರ್ಥ.

ಶರತ್ತಿನ ಶಾಪಕ್ಕೆ ಹತ್ತಿರದ್ದು ಎನ್ನಬಹುದಾದ ಒಂದು ಬಗೆಯ ಶಾಪವು ಅರೆಬರಲ್ಲಿ ರೂಢಿಯಲ್ಲಿತ್ತು. ಇದು ಕಳ್ಳಕಾಕರಲ್ಲಿ ಭಯ ಹುಟ್ಟಿಸಲೆಂದು ಇದ್ದುದು. ಯಾರ ಮನೆಯಲ್ಲಿ ಕಳವು ಆಗಿರುತ್ತಿತ್ತೋ ಅಂಥವನು ಧರ್ಮಗುರುವಿಗೆ ದಕ್ಷಿಣೆಯನ್ನಿತ್ತು ಆ ಕಳ್ಳನಿಗೆ ಶಾಪವೀಯಲು ಹಚ್ಚುತ್ತಿದ್ದನು. ಧರ್ಮಗುರುವಿನ ಶಾಪದಿಂದ ಸಾವು, ಬೇನೆ, ಮೊದಲಾದ ಸಂಕಟಗಳು ಬಂದೆರಗುತ್ತವೆಂದು ಶ್ರದ್ಧೆಯಿತ್ತು. ಅಲ್ಲದೆ ಕಳ್ಳರು ಅದಕ್ಕೆ ಹೆದರುತ್ತಿದ್ದರು. ಹೀಗಾಗಿ ಕಳವಿನ ಮಾಲು ಆ ಧರ್ಮಗುರುವಿನ ಬಾಗಿಲಿಗೆ ಬರುತ್ತಿತ್ತು. ಇಲ್ಲವೆ ಅದರ ಬೆಲೆಯಷ್ಟು ದುಡ್ಡನ್ನಾದರೂ ತಂದು ಇರಿಸಲಾಗುತ್ತಿತ್ತು. ಅದನ್ನು ಅದರ ಒಡೆಯನಿಗೆ ಒಪ್ಪಿಸಲಾಗುತ್ತಿತ್ತು. ಆಗ ಕಳ್ಳನು ಶಾಪದ ಪರಿಣಾಮಗಳಿಂದ ಬಿಡುಗಡೆ ಹೊಂದುತ್ತಿದ್ದನು.

# ಪರಿಶಿಷ್ಟ : ನಾಲ್ಕು

## ಶಾಪಗಳಿಗೆ ಕಾರಣಗಳು

| ಕ್ರ. | ಶಾಪಗಳ ಕಾರಣಗಳು | ಶಾಪಗಳ ಕ್ರಮಾಂಕಗಳು* | ಒಟ್ಟು |
|---|---|---|---|
| ೧ | ರತಿಕ್ರೀಡೆ, ಮಕ್ಕಳನ್ನು ಪಡೆಯುವಲ್ಲಿ ತಡೆಯುಂಟುಮಾಡಿದ್ದಕ್ಕಾಗಿ | ೩೮, ೪೨, ೧೩೨. | ೩ |
| ೨ | ಸಮಾಗಮ, ಮದುವೆ ಮುಂತಾದವುಗಳನ್ನು ನಿರಾಕರಿಸಲಾಗಿ | ೩೧, ೩೯, ೪೫, ೫೧, ೫೮, ೭೬, ೧೧೬, ೧೨೦, ೧೨೭. | ೯ |
| ೩ | ಅತಿಪ್ರಸಂಗ, ಅಪಹರಣ, ಬಲಾತ್ಕಾರ, ಅಭಿಲಾಷೆ, ಮುಂ. | ೩೭, ೪೭, ೭೪, ೯೧, ೧೦೦, ೧೦೯. | ೬ |
| ೪ | ಗರ್ಭಪಾತ | ೨, ೩. | ೨ |
| ೫ | ತಪೋಭಂಗ, ಪ್ರತಿಜ್ಞಾಭಂಗ, ವಚನಭಂಗ, ಮುಂ. | ೭, ೧೩, ೨೯, ೧೦೬, ೧೧೮, ೧೪೪. | ೬ |
| ೬ | ಆಜ್ಞಾಭಂಗ, ನಿಯಮಭಂಗ, ಮುಂ. | ೧೭, ೩೩, ೩೪, ೩೫, ೩೬, ೫೪, ೬೦, ೧೦೪, ೧೦೭, ೧೧೩, ೧೧೫, ೧೧೭, ೧೩೭. | ೧೩ |
| ೭ | ಹೆದರಿಸುವಿಕೆ, ಕುಚೋದ್ಯ, ಅವಮಾನ, ಅಗೌರವ, ಮುಂ. | ೫, ೧೬, ೨೧, ೫೭, ೬೧, ೬೨, ೬೩, ೬೭, ೭೫, ೮೧, ೧೧೨†. | ೧೧ |
| ೮ | ಚಾಡಿಕೋರತನ | ೧೪, ೬೫, ೭೦, ೧೩೩, ೧೩೪, ೧೩೫. | ೬ |
| ೯ | ಕೊಲೆ, ಸಾವು | ೧, ೬, ೫೯, ೬೯, ೮೦, ೯೦, ೯೬, ೯೭, ೧೦೨, ೧೪೬. | ೧೦ |
| ೧೦ | ಬೆಂಕಿಯಿಕ್ಕುವುದು | ೧೦೧. | ೧ |
| ೧೧ | ತಪ್ಪು ತೋರಿಸುವುದು, ಸುಳ್ಳು ಆಡುವುದು, ಮುಂ. | ೫೫, ೧೨೮. | ೨ |
| ೧೨ | ಮೋಸ, ಕಳವು, ಮುಂ. | ೨೬, ೪೪, ೪೮, ೬೪, ೭೭, ೯೫. | ೬ |
| ೧೩ | ಅಲಕ್ಷ್ಯ, ಅವಹೇಳನೆ, ಹೊಟ್ಟೆಕಿಚ್ಚು, ಕರ್ತವ್ಯಚ್ಯುತಿ, ಮುಂ. | ೮, ೧೧, ೨೮, ೪೧, ೭೯, ೮೨, ೮೩, ೮೪, ೮೫, ೮೬, ೮೭, ೯೨, ೯೮, ೧೦೩, ೧೦೫. | ೧೫ |
| ೧೪ | ಹೊಡೆತ–ಬಡಿತ, ಹಿಂಸಿಸುವುದು, ಮುಂ. | ೯, ೨೪, ೪೦, ೪೩, ೪೯, ೫೦, ೬೬, ೧೨೯, ೧೩೦. | ೯ |
| ೧೫ | ಶಾಪ, ಶಾಪಕ್ಕೀಡಾಗುವ ಹೆದರಿಕೆ, ಮುಂ. | ೪, ೧೨, ೧೫, ೨೦, ೩೨, ೫೩, ೭೮, ೮೯, ೯೪. | ೯ |
| ೧೬ | ಶೋಕ, ಕ್ರೋಧ, ಮುಂ. | ೧೮, ೪೬, ೭೧, ೮೮, ೧೨೩, ೧೨೫, ೧೩೧, ೧೩೯, ೧೪೦, ೧೪೧, ೧೪೫. | ೧೧ |
| ೧೭ | ಹಣದಾಸೆ, ರಾಜ್ಯದಾಸೆ, ಮುಂ. | ೧೯, ೭೨, ೯೩. | ೩ |
| ೧೮ | ಬೇರೆ ಕಾರಣಗಳು | ೨೩, ೩೦, ೯೯, ೧೦೮, ೧೧೧, ೧೧೪, ೧೩೬, ೧೪೩, ೧೪೭. | ೯ |
| ೧೯ | ಖಚಿತವಿಲ್ಲದ ಕಾರಣಗಳು | ೧೦, ೨೨, ೨೫, ೨೭, ೫೨, ೫೬, ೬೮, ೭೩, ೧೧೦, ೧೧೯, ೧೨೧, ೧೨೨, ೧೨೪, ೧೨೬, ೧೩೮, ೧೪೨. | ೧೬ |
| | | ಒಟ್ಟು | ೧೪೭ |

* ಈ ಕ್ರಮಾಂಕಗಳು ಇದೇ ಕೃತಿಯ ಸಂಪುಟ ಒಂದರ ಕ್ರಮಾಂಕಗಳು.

† ನೋಡಿ—ಸಂಪುಟ ಎರಡು : ಪುಟ 277.

# ಪರಿಶಿಷ್ಟ : ಐದು
## ಶಾಪಗಳ ಪರಿಣಾಮಗಳು

| ಕ್ರ. | ಶಾಪಗಳ ಪರಿಣಾಮಗಳು | ಶಾಪಗಳ ಕ್ರಮಾಂಕಗಳು* | ಒಟ್ಟು |
|---|---|---|---|
| ೧ | ದೇಹದ ವಿಕೃತಿಗಳು | ೧೧, ೨೯, ೩೬, ೩೮, ೪೫, ೫೪, ೫೫, ೮೧, ೯೨, ೧೦೧, ೧೦೯, ೧೧೦, ೧೧೧, ೧೩೩, ೧೩೪, ೧೩೫. | ೧೬ |
| ೨ | ಕೀಳು ಹುಟ್ಟು, ಕೀಳವಸ್ಥೆ. | ೩, ೬, ೭, ೧೬, ೧೮, ೧೯, ೨೦, ೨೫, ೨೬, ೩೭, ೪೦, ೪೧, ೬೩, ೬೯, ೭೩, ೯೩, ೧೦೦, ೧೦೨, ೧೦೩, ೧೦೫, ೧೦೮, ೧೦೭, ೧೧೮, ೧೨೨, ೧೪೨, ೧೪೭. | ೨೬ |
| ೩ | ಸಾವು, ಕೊಲೆ, ಮುಂ. | ೧, ೫, ೮, ೧೭, ೨೧, ೨೩, ೨೮, ೪೨, ೪೩, ೪೭, ೫೭, ೫೯, ೬೧, ೬೨, ೬೭, ೬೮, ೭೦, ೭೪, ೭೬, ೭೮, ೮೦, ೮೨, ೮೩, ೮೪, ೮೫, ೯೮, ೧೦೪, ೧೧೨,† ೧೩೧, ೧೪೧, ೧೪೩, ೧೪೮. | ೩೨ |
| ೪ | ವಿದ್ಯೆ, ಅಸ್ತ್ರ, ಮುಂ. ಹಾಳಾಗುವುದು. | ೩೧, ೭೨, ೭೭, ೧೪೦. | ೪ |
| ೫ | ದುಃಖ, ಶಾಪ, ಅಧರ್ಮ, ಮುಂ. | ೫೦, ೮೭, ೧೦೬, ೧೦೭, ೧೧೩, ೧೨೩, ೧೨೫. | ೭ |
| ೬ | ಅತೃಪ್ತವಾದ ಕಾಮವಾಸನೆ | ೩೨. | ೧ |
| ೭ | ಮಕ್ಕಳಾಗದಿರುವಿಕೆ, ನಿರ್ವಂಶತ್ವ, ಮುಂ. | ೧೨, ೩೪, ೯೧, ೯೬, ೧೩೨. | ೫ |
| ೮ | ಸ್ವರ್ಗಚ್ಯುತಿ, ಸ್ವರ್ಗಪ್ರಾಪ್ತಿಗೆ ಅಡೆತಡೆ, ಮುಂ. | ೮೮, ೮೯, ೧೨೨. | ೩ |
| ೯ | ರಾಜ್ಯವನ್ನು ಕಳೆದುಕೊಳ್ಳುವುದು, ರಾಜ್ಯ ದೊರಕದಿರುವುದು, ಮುಂ. | ೩೩, ೩೫. | ೨ |
| ೧೦ | ಬಂಧನಗಳು | ೩೦. | ೧ |
| ೧೧ | ಅವಮಾನ | ೧೨೭, ೧೨೮. | ೨ |
| ೧೨ | ವಿಘ್ನಗಳು | ೯, ೯೦. | ೨ |
| ೧೩ | ಬೇರೆ ಪರಿಣಾಮಗಳು | ೧೪, ೪೪, ೪೬, ೪೮, ೬೪, ೯೫, ೯೯, ೧೧೪, ೧೧೫, ೧೧೬, ೧೩೯. | ೧೧ |
| ೧೪ | ಖಚಿತವಾಗಿರದ ಪರಿಣಾಮಗಳು | ೨, ೪, ೧೦, ೧೩, ೧೫, ೨೨, ೨೪, ೨೭, ೩೯, ೪೯, ೫೧, ೫೨, ೫೩, ೫೬, ೫೮, ೬೦, ೬೫, ೬೬, ೭೧, ೭೫, ೭೯, ೮೬, ೯೪, ೯೭, ೧೧೯, ೧೨೦, ೧೨೪, ೧೨೬, ೧೨೯, ೧೩೦, ೧೩೬, ೧೩೭, ೧೩೮, ೧೪೫, ೧೪೬. | ೩೫ |
| | | ಒಟ್ಟು | ೧೪೭ |

* ಈ ಕ್ರಮಾಂಕಗಳು ಇದೇ ಕೃತಿಯ ಸಂಪುಟದ ಒಂದರ ಕ್ರಮಾಂಕಗಳು.

† ನೋಡಿ—ಸಂಪುಟ ಎರಡು : ಪುಟ 277.

# ಪರಿಶಿಷ್ಟ : ಆರು

## ಉಃಶಾಪ, ಮರುಶಾಪ, ಮುಂತಾದವುಗಳು

| ಕ್ರ. | ಉಃಶಾಪ, ಮರುಶಾಪ, ಮುಂ. | ಶಾಪ ಕ್ರಮಾಂಕಗಳು* | ಒಟ್ಟು |
|---|---|---|---|
| ೧ | ಶರತ್ತಿನ ಶಾಪಗಳು | ೨೩, ೫೮, ೬೦, ೬೫, ೭೬, ೮೦, ೮೨, ೮೩, ೮೪, ೮೫, ೮೬, ೮೭, ೯೪, ೧೦೬, ೧೦೭, ೧೨೦, ೧೨೬, ೧೩೦. ೧೪೩, ೧೪೪. | ೨೦ |
| ೨ | ಮರುಶಾಪಗಳು | ೪, ೧೨, ೨೦, ೩೨, ೭೮, ೮೯, ೧೧೯. | ೭ |
| ೩ | ಅಸಫಲವಾದ ಶಾಪಗಳು | ೪೩, ೫೭, ೮೦, ೧೨೯. | ೪ |
| ೪ | ಶರತ್ತಿನ ಉಃಶಾಪಗಳು | ೮, ೧೮, ೨೯, ೩೭, ೯೨. | ೫ |
| ೫ | ಯಾಚಿತ ಉಃಶಾಪಗಳು | ೭, ೮, ೧೧, ೧೬, ೨೬, ೩೯, ೪೫, ೬೩, ೬೯, ೮೧, ೯೨, ೧೦೦. | ೧೨ |
| ೬ | ಅಯಾಚಿತ ಉಃಶಾಪಗಳು | ೧೮, ೩೭, ೪೮, ೬೧, ೧೦೪. | ೫ |
| ೭ | ಅನುಚ್ಚಾರಿತ ಮರುಶಾಪಗಳು | ೧೫. | ೧ |
| ೮ | ಅನುಚ್ಚಾರಿತ ಶಾಪಗಳು | ೧೩, ೧೫, ೨೨, ೩೯, ೪೯, ೫೧, ೫೩, ೫೬, ೫೮, ೬೦, ೬೫, ೬೬, ೭೧, ೭೫, ೭೬, ೭೯, ೮೨, ೮೩, ೮೪, ೮೫, ೮೬, ೮೭, ೯೪, ೯೭, ೧೦೬, ೧೦೭, ೧೨೦, ೧೨೪, ೧೨೬, ೧೨೯, ೧೩೦, ೧೩೬, ೧೩೭, ೧೪೩, ೧೪೪, ೧೪೫, ೧೪೬. | ೩೭ |
| | | ಒಟ್ಟು | ೯೧ |

* ಈ ಕ್ರಮಾಂಕಗಳು ಇದೇ ಕೃತಿಯ ಸಂಪುಟ ಒಂದರ ಕ್ರಮಾಂಕಗಳು.

# ಪರಿಶಿಷ್ಟ : ಏಳು*

## ಶಾಪಸೂಚಿ

| ಶಾಪದ | ಶಾಪಿತ | ಶಾಪ ಕ್ರ.* | ಪುಟ* | ಶಾಪದ | ಶಾಪಿತ | ಶಾಪ ಕ್ರ.* | ಪುಟ* |
|---|---|---|---|---|---|---|---|
| ಅಗಸ್ತ್ಯ | ಕುಬೇರ | ೬೧ | 177 | ಕಚ | ದೇವಯಾನಿ | ೩೨ | 148 |
| | ನಹುಷ | ೬೩ | 180 | ಕದ್ರು | ಹಾವುಗಳು | ೧೭ | 120 |
| | ಪೃಥ್ವೀಪತಿ | ೫೧ | 169 | ಕಪಿಲ | ಸಗರಪುತ್ರರು | ೧೪೧ | 260 |
| | ರಾಕ್ಷಸ | ೬೨ | 179 | ಕಲಿ | ನಲರಾಜ | ೪೬ | 164 |
| ಅಗ್ನಿ | ಕಪ್ಪೆ | ೧೩೩ | 256 | ಕಹೋಡ | (ಬಸಿರಲ್ಲಿದ್ದ) | ೫೫ | 172 |
| | ಭೃಗು | ೧೫ | 120 | | ಅಷ್ಟಾವಕ್ರ | | |
| | ಮೀನುಗಳು | ೭೦ | 191 | ಕಿಂದಮ | ಪಾಂಡು | ೧ | 95 |
| | ಶುಕ (ಗಿಳಿ) | ೧೩೫ | 257 | ಕುಬೇರ | ರಾವಣ | ೭೨ | 192 |
| | ಆನೆ | ೧೩೪ | 256 | | ಸ್ಥೂಣಾಕರ್ಣ | ೮೧ | 204 |
| ಅಣಿಮಾಂಡವ್ಯ | ಯಮಧರ್ಮ | ೬ | 105 | ಕೃಪ | ಯುಧಿಷ್ಠಿರ | ೮೪ | 208 |
| ಅರುಣ | ವಿನತಾ | ೧೮ | 192 | ಕೌಶಿಕ | ಇಕ್ಷ್ವಾಕು | ೧೦೬ | 236 |
| ಅರ್ಜುನ(ಅಗ್ನಿ, | ಅಶ್ವಸೇನ | ೪೪ | 161 | | ಇಂದ್ರ | ೧೧೦ | 239 |
| ಶ್ರೀಕೃಷ್ಣ) | | | | | (ಹೆಣ್ಣು) ಬೆಳ್ಳಕ್ಕಿ | ೬೭ | 188 |
| ಅಶ್ವತ್ಥಾಮ | ವ್ಯಾಸ | ೪ | 100 | ಖಗಮ ಋಷಿ | ಸಹಸ್ರಪಾತ | ೧೬ | 120 |
| | ಶ್ರೀಕೃಷ್ಣ | ೯೬ | 224 | ಗಂಗೆ | ಅಂಬೆ | ೮೦ | 203 |
| ಅಷ್ಟಾವಕ್ರ | ಸುಜಾತಾ | ೫೬ | 173 | ಗಾಂಧಾರಿ | ಯುಧಿಷ್ಠಿರ | ೯೭ | 225 |
| ಅಂಗಿರ | ಅಗ್ನಿ | ೧೪೦ | 260 | | ಶ್ರೀಕೃಷ್ಣ | ೯೮ | 226 |
| ಆಯು | ಸಂಶೋಭನೆ | ೬೪ | 188 | ಗುರು | ಮತಂಗ | ೨೭ | 142 |
| ಆಸ್ತಿಕ | ನಾಗ | ೨೩ | 135 | ಗುರುಪತ್ನಿ | ಉತ್ತಂಕ | ೧೩ | 114 |
| ಇಂದ್ರ | ಅಸಿತ ದೇವಲ | ೧೨೪ | 246 | ಗೌತಮ | ಇಂದ್ರ | ೧೦೯ | 238 |
| ಇಂದ್ರೋತ | ಜನಮೇಜಯ | ೧೦೩ | 232 | ಚ್ಯವನ | ಕುಶಿಕ | ೧೨೯ | 251 |
| ಉತ್ತಂಕ | ಪೌಷ್ಯ | ೧೧ | 113 | (ಭಾರ್ಗವ) | | | |
| | ಶ್ರೀಕೃಷ್ಣ | ೧೪೫ | 264 | | ನಾಗರಿಕ | ೧೩೦ | 253 |
| ಉದ್ದಾಲಕ | ನಚಿಕೇತ | ೧೩೧ | 253 | ಜಮದಗ್ನಿ | ರುಮಣ್ವಾನ್, | ೫೪ | 171 |
| ಉಮಾ | ದೇವತೆಗಳು | ೧೩೨ | 254 | | ಸುಷೇಣ, ವಸು, | | |
| ಊರ್ವಶಿ | ಅರ್ಜುನ | ೪೫ | 162 | | ವಿಶ್ವಾವಸು | | |
| ಋಚೀಕ | ಗಾಧಿ | ೧೨೦ | 244 | | ರೇಣುಕಾ | ೧೩೭ | 258 |
| ಋಷಿ | ಬ್ರಾಹ್ಮಣ | ೬೯ | 190 | ಜಮದಗ್ನಿಯ | ಕ್ರೋಧ | ೧೪೭ | 267 |
| | ಸುಂದೋಪ- | ೪೩ | 160 | ಪಿತೃಗಳು | (ಧರ್ಮ) | | |
| | ಸುಂದ | | | ಜರತ್ಕಾರು | ವಾಸುಕಿ | ೨೨ | 135 |
| ಋಷ್ಯಶೃಂಗ | ಸೂಳೆ | ೫೩ | 171 | ತ್ರಿತ | ಏಕತ, ದ್ವಿತ | ೯೩ | 220 |

* ಈ ಪರಿಶಿಷ್ಟದ ಶಾಪ ಕ್ರಮಾಂಕ ಮತ್ತು ಪುಟ–ಕಲಮುಗಳಲ್ಲಿನ ಸಂಖ್ಯೆಗಳು ಇದೇ ಗ್ರಂಥದ ಪ್ರಥಮ ಸಂಪುಟದ ಶಾಪ ಕ್ರಮಾಂಕ ಮತ್ತು ಪುಟ ಸಂಖ್ಯೆಗಳನ್ನು ಸೂಚಿಸುತ್ತವೆ.

| ಶಾಪದ | ಶಾಪಿತ | ಶಾಪ ಕ್ರ.* | ಪುಟ* |
|---|---|---|---|
| ದಕ್ಷ | ಸೋಮ(ಚಂದ್ರ) | ೯೨ | 217 |
| ದಮಯಂತಿ | ಕಲಿ | ೫೦ | 168 |
| | ಬೇಡರವ | ೪೭ | 165 |
| ದುರ್ವಾಸ | ದುರ್ಯೋಧನ | ೭೧ | 192 |
| ದೇವ (ಗಣ) | ಗೌತಮ | ೧೦೫ | 235 |
| ದೇವಯಾನಿ | ಕಚ | ೩೧ | 147 |
| ದೇವಶರ್ಮ | ವಿಪುಲ | ೧೨೬ | 248 |
| ದ್ರೋಣ | ಯುಧಿಷ್ಠಿರ | ೮೩ | 207 |
| ದ್ರೌಪದಿ | ಕೌರವರು | ೨೪ | 136 |
| ಧನುಷಾಕ್ಷ | ಮೇಧಾವಿ | ೫೭ | 174 |
| ನಲ | ಕಲಿ | ೪೯ | 167 |
| ನಲಕೂಬರ | ರಾವಣ | ೭೪ | 194 |
| ನಾರದ | ಕರ್ಕೋಟಕ | ೪೮ | 166 |
| | ಪರ್ವತ (ಋಷಿ) | ೮೯ | 213 |
| ನಿಮಿ | ವಸಿಷ್ಠ | ೭೮ | 201 |
| ಪರಶುರಾಮ | ಕರ್ಣ | ೭೭ | 198 |
| | ಭೀಷ್ಮ | ೭೯ | 202 |
| ಪರಾಶರ | ಸತ್ಯವತಿ | ೩೯ | 155 |
| ಪರ್ವತ(ಋಷಿ) | ನಾರದ | ೮೮ | 211 |
| ಪೌಷ್ಯ | ಉತ್ತಂಕ | ೧೨ | 114 |
| ಬುಧ | ಅದಿತಿ | ೧೧೩ | 240 |
| ಬೃಹಸ್ಪತಿ | (ಬಸಿರಲ್ಲಿರುವ) ಉತಥ್ಯಪುತ್ರ | ೩೮ | 153 |
| | ಜಲ | ೧೧೧ | 239 |
| ಬ್ರಹ್ಮದೇವ | ಅದ್ರಿಕಾ | ೨೫ | 137 |
| | (ದೇವಕನ್ಯೆ) ಮೃಗಿ | ೫೨ | 170 |
| | ಮಹಾಭಿಷ | ೩೭ | 152 |
| | ಮೃತ್ಯುದೇವಿ | ೮೭ | 209 |
| | ರಾಜಧರ್ಮ (ನೀರುಗೋಳಿ) | ೧೦೪ | 234 |
| ಬ್ರಾಹ್ಮಣ | ಉಪರಿಚರವಸು | ೧೦೮ | 237 |
| | ಕರ್ಣ | ೯೦ | 214 |
| | ಕಲ್ಮಾಷಪಾದ | ೪೧ | 158 |
| | ಪೃಥಾ (ಕುಂತಿ) | ೭೫ | 195 |
| | ನಿಮಿ | ೧೩೬ | 257 |
| | ಐವರು ಅಪ್ಸರೆಯರು | ೭ | 108 |
| | ವೃಷದರ್ಭ | ೬೬ | 187 |
| | ಕಡಲು | ೧೩೯ | 259 |
| ಬ್ರಾಹ್ಮಣಸ್ತ್ರೀ | ಕಲ್ಮಾಷಪಾದ | ೪೨ | 159 |
| ಭರದ್ವಾಜ | ರೈಭ್ಯ | ೫೯ | 175 |
| ಭೀಷ್ಮ | ಅರ್ಜುನ | ೮೬ | 209 |
| | ಯುಧಿಷ್ಠಿರ | ೮೨ | 104 |
| ಭೃಗು | ಅಗ್ನಿ | ೧೪ | 116 |
| | ದಂಶ | ೧೦೦ | 228 |
| | ಹಿಮವತ್ | ೧೧೬ | 240 |
| ಮಹರ್ಷಿ | ಪುರೂರವ | ೨೮ | 143 |
| ಮಾನವ ದಂಪತಿಗಳ ಅಣೆಗಳು | — | ೧೨೮ | 250 |
| ಮುನಿ | ವಾಲ್ಮೀಕಿ | ೧೨೩ | 246 |
| | ಶರಭ | ೧೦೨ | 231 |
| ಮೈತ್ರೇಯ | ದುರ್ಯೋಧನ | ೮ | 110 |
| ಯಯಾತಿ | ಅನು | ೩೬ | 151 |
| | ತುರ್ವಸು | ೩೪ | 150 |
| | ದ್ರುಹ್ಯು | ೩೫ | 151 |
| | ಯದು | ೩೩ | 149 |
| ಯವಕ್ರೀತ | ರೈಭ್ಯನ ಸೊಸೆ | ೫೮ | 175 |
| ಯುಧಿಷ್ಠಿರ | ಹೆಣ್ಣುಜಾತಿ | ೯೯ | 227 |
| ವಡವಾಮುಖಿ | ಕಡಲು | ೧೧೫ | 240 |
| ವರಿಷ್ಠ | ಗೃತ್ಸಮದ | ೧೨೫ | 247 |
| ವಸಿಷ್ಠ | ಅರ್ಜುನ (ಕಾರ್ತವೀರ್ಯ) | ೧೦೧ | 230 |
| | ಅಷ್ಟವಸು | ೨೬ | 138 |
| | ಸರಸ್ವತಿ | ೯೪ | 222 |
| | ಸೌದಾಸ | ೧೨೧ | 245 |
| | ಹಿರಣ್ಯಕಶಿಪು | ೧೧೨ | † |
| ವಸಿಷ್ಠರ ಮಕ್ಕಳು | ವಿಶ್ವಾಮಿತ್ರ | ೧೧೯ | 243 |
| ವಸು | ಅರ್ಜುನ | ೧೪೬ | 266 |

* ಈ ಪರಿಶಿಷ್ಟದ ಶಾಪ ಕ್ರಮಾಂಕ ಮತ್ತು ಪುಟ–ಕಲಮುಗಳಲ್ಲಿನ ಸಂಖ್ಯೆಗಳು ಇದೇ ಗ್ರಂಥದ ಪ್ರಥಮ ಸಂಪುಟದ ಶಾಪ ಕ್ರಮಾಂಕ ಮತ್ತು ಪುಟ ಸಂಖ್ಯೆಗಳನ್ನು ಸೂಚಿಸುತ್ತವೆ.

† ನೋಡಿ—ಸಂಪುಟ : ಎರಡು, ಪುಟ 277.

